# ಪ್ರಸ್ತಾವನೆ.

---

ಈ ಭಾಗಕ್ಕೆ ಸೃಷ್ಟಿಖಂಡವೆಂದು ಹೆಸರು ಬರಲು ಅನೇಕಕಾರಣಗಳಿದ್ದರೂ ಬ್ರಹ್ಮನು ತಾನು ಸೃಷ್ಟಿಯನ್ನು ಯಾವರೀತಿಯಾಗಿಮಾಡುತ್ತಾನೆ ಮತ್ತೂ ಮಾಡಿಸುತ್ತಾನೆ ಎಂಬುದು ಇದರಲ್ಲಿ ವರ್ಣಿತವಾಗಿರುವುದು ಮುಖ್ಯಕಾರಣವಾಗಿದೆ. ಅಲ್ಲದೆ ಸ ಸಿ ಹಿನ ಪ್ರಜೆಗಳನ್ನುದ್ದೇಶಿಸಿ ಅವರಿಗೆ ಧರ್ಮಗಳೂ ಕರ್ತವ್ಯಗಳೂ ಬೇರೆಬೇರೆಯಾಗಿ ಉಕ್ತವಾಗಿ ನಿಯಮಿತವಾಗಿವೆ. ಇದರಲ್ಲಿ ಕಾಲಕ್ಕೆತಕ್ಕ ನಡತೆಗಳು ಎಲ್ಲರಲ್ಲಿಯೂ ಇವೆ ಎಂಬುದನ್ನು ತಿಳಿಸಲು ಬ್ರಹ್ಮನ ಯಾಗವೆಂಬ ಉಪಾಖ್ಯಾನವನ್ನು ಮೊದಲುಮಾಡಿ ಇದರಲ್ಲಿ ಗಾಯತ್ರೀಸರಸ್ವತಿಯರಿಗೆ ವ್ಯಾಜ್ಯವು ಬಂದು ಅವರಿಂದ ಅವರವರಿಗೂ ದೇವತೆಗಳಿಗೂ ಬಂದ ಶಾಪವು ವಿವರಿಸಲ್ಪಟ್ಟಿದೆ. ಇದರಿಂದ ನಮ್ಮ ಸಂಸಾರಗಳಲ್ಲಿರುವ ಹುಳುಕು ಅನಾದಿಯಾದುದೆಂದು ಹೇಳಬೇಕಾದುದಿಲ್ಲ. ಆದರೆ ಈ ಬ್ರಹ್ಮನ ಸಂಸಾರದ ತೊಂದರೆಯು ಪ್ರಪಂಚಕ್ಕೆ ಸೇರಿದ ಶಾಪಾನುಗ್ರಹರೂಪವಾದುದು. ಈ ಸೃಷ್ಟಿಯ ವಿಷಯದಲ್ಲಿ ಹೆಚ್ಚಿನ ಪಾತ್ರವು ಶ್ರೀ ವಿಷ್ಣುವಿಗೆ ಸೇರಿದೆ. ಈತನಿಗೆ ಅನೇಕವಾದ ಶಾಪಗಳು ಬಂದು ಅನೇಕಜನ್ಮಗಳನ್ನೆತ್ತಿ ದುಷ್ಟನಿಗ್ರಹ ಶಿಷ್ಟಪರಿಪಾಲನವನ್ನೂ ಮಾಡುತ್ತಾನೆ. ಇವನ ಉಪಾಖ್ಯಾನವಲ್ಲಿಯಂತು ಗಂಡಸು ಹೆಂಗಸಾಗುವುದು ಮಹಾ ಆಶ್ಚರ್ಯಕರವಾದ ವಿಷಯವಾಗಿ ಅದರಿಂದ ಮಹತ್ತರವಾದ ವಂಶಗಳು ಬೆಳೆದಿರುವ ವಿಷಯಗಳು ತಿಳಿದುಬರುತ್ತವೆ. ಇವೆಲ್ಲವನ್ನು ವಿವರಿಸುತ್ತ ಹುಟ್ಟಿದ ಮನುಷ್ಯನು ಮೋಕ್ಷವನ್ನು ಪಡೆಯಲು ಸಾಧನಗಳಾದ ಕ್ಷೇತ್ರಗಳನ್ನೂ, ತೀರ್ಥಗಳನ್ನೂ ಸೃಷ್ಟಿಸಿದ್ದಾನೆ. ಮತ್ತು ಇಂತಹ ತೀರ್ಥಕ್ಷೇತ್ರಗಳಿಗೆ ಹೋಗಲಾರದವರು ವ್ರತವನ್ನುಮಾಡಿ ಕುಳಿತಲ್ಲಿಯೇ ಮೋಕ್ಷಸಂಪಾದಿಸಲು ಆ ಸ್ವಾಮಿಯು ಅವನ್ನು ಹೇಳಿರುವನು. ಹಿಂದಿನವರ ಚರಿತ್ರೆಯೆಲ್ಲವನ್ನೂ ವರ್ಣಿಸಿ ಅವರಿದ್ದ ರೀತಿಯಲ್ಲಿ ನಾವಿರಬೇಕೆಂದೂ, ಅವರಂತೆ ನಾವೂ ಧರ್ಮಾನುಷ್ಠಾನ ಮಾಡಬೇಕೆಂದೂ ಹೇಳಿ, ಮನುಷ್ಯನು ಜನ್ಮಸಾರ್ಥಕ್ಯವನ್ನು ಹೊಂದಲು ನಾನಾರೀತಿಗಳನ್ನು ಹೇಳಿರುವನು. ಕೊನೆಕೊನೆಗಂತೂ ಯಾವ ವ್ರತವಾಗಲಿ, ತೀರ್ಥಕ್ಷೇತ್ರಗಳಾಗಲಿ ಬೇಕಿರುವುದೇ ಇಲ್ಲ. ಕರ್ತವ್ಯ ಧರ್ಮರೀತಿಗಳೆರಡರಿಂದಲೂ ತಾಯಿತಂದೆಗಳ ಶುಶ್ರೂಷೆಯೇ ಸಾಕೆಂದು ಹೇಳಿ, ಅದನ್ನು ಬಹುವಾಗಿ ವರ್ಣಿಸಿರುವುದರಿಂದ ಇದು ಮೋಕ್ಷಕ್ಕೆ ಸುಲಭೋಪಾಯವಾಗಿರುವುದು. ಇದಕ್ಕೋಸ್ಕರವೇ ಅನೇಕ ಉಪಾಖ್ಯಾನಗಳೂ ಹೃದಯಂಗಮವಾದ ರೀತಿಯಲ್ಲಿ ವರ್ಣಿತವಾಗಿವೆ. ಈರೀತಿ ವರ್ಣನೆಯೆಲ್ಲವೂ

ಕೂಡ ಹುಟ್ಟಿದ ಪ್ರಾಣಿಯು ತನ್ನ ಬುದ್ಧಿಗನುಗುಣವಾಗಿ ಧರ್ಮವನ್ನಾಚರಿಸಿ ಮೋಕ್ಷ ಹೊಂದಲೆಂಬುದೇ ಈ ಪುರಾಣದ ಪರಮೋದ್ದೇಶವಾಗಿರುವುದು.

ಈ ಖಂಡವು ಬಹು ದೊಡ್ಡಭಾಗವಾಗಿರುವುದರಿಂದ ವಾಚಕರ ಅನುಕೂಲ ಕ್ಕೋಸ್ಕರ ಐದು ಭಾಗಗಳನ್ನಾಗಿ ವಿಂಗಡಿಸಿದೆ. ಮೊದಲನೆಯದಾದ ಈ ಭಾಗದಲ್ಲಿ, ಮೊದಲು ಪುರಾಣದ ಸ್ವರೂಪವನ್ನು ವರ್ಣಿಸಲಾಗಿದೆ. ಕಾಲದ ಪರಿಮಾಣವನ್ನು ವಿಂಗಡಿಸಿ ಬ್ರಹ್ಮನಿಂದ ಸೃಷ್ಟವಾದ ಭಾಗಗಳನ್ನೂ, ಅವುಗಳಕಾರ್ಯವನ್ನೂ ವರ್ಣಿಸಿದೆ. ಭೃಗುಶಾಪದಿಂದ ವಿಷ್ಣುವು ಅವತರಿಸುವುದು, ಅವನು ಮಾಡಿದ ಅವತಾರಗಳು ವರ್ಣಿತವಾಗಿವೆ. ದಕ್ಷನು ಯಜ್ಞಮಾಡುವುದು, ಅದರಲ್ಲಿ ನಡೆದ ಅನಾಹುತಗಳು, ಅದಕ್ಕೆ ಸಮಾಧಾನಗಳು ಹೇಳಲ್ಪಟ್ಟಿವೆ. ಈ ದೇವತೆಗಳಮೇಲಿನ ಅಸೂಯೆಯಿಂದ ದಿತಿಯು ಗರ್ಭವನ್ನು ಧರಿಸಿ ಇಂದ್ರನಿಂದ ಅದರ ನಾಶವಾದ ವಿಷಯವು ಸಂಗ್ರಹಿಸ ಲ್ಪಟ್ಟಿದೆ. ಪೃಥು-ಇಲರ ಚರಿತ್ರೆಗಳು ಹೃದಯಂಗಮವಾಗಿವೆ. ಸೋಮನು ಹುಟ್ಟಿ ದುದು, ಸ್ಯಮಂತಕೋಪಾಖ್ಯಾನ, ಕುಂತಿ ಹುಟ್ಟಿದುದು ಇವು ಪ್ರಸಂಗವಶದಿಂದ ಬಂದಿದ್ದರೂ ರಮ್ಯವಾಗಿವೆ. ಬ್ರಹ್ಮನು ಯಜ್ಞದಲ್ಲಿ ಗೋಪಕನ್ಯೆಯನ್ನು ಪ್ರತಿಗ್ರಹಿಸಿ ಆಕೆಯೊಡನಿರಲು ಸಾವಿತ್ರಿಯು ಅಸೂಯೆಪಡುವ ವಿಚಾರವು ಹೆಂಗಸರ ಸಾಧಾರಣ ಜಗಳವನ್ನು ಸಮದೂಗಲಿರಲಾರದು. ಅರ್ಜುನನ ಉತ್ಪತ್ತಿಯ ವಿಷಯವು ಬಹು ಸ್ವಾರಸ್ಯವಾಗಿದೆ. ಬ್ರಾಹ್ಮಣ ಕ್ಷತ್ರಿಯಾದಿಗಳ ಲಕ್ಷಣವು ವಿಶದವಾಗಿ ವರ್ಣಿತವಾಗಿದೆ.

ಅನಾದಿಗಳಾದ ಪುರಾಣಗಳನ್ನು ದೇಶಭಾಷೆಗೆ ಪರಿವರ್ತಿಸಲು ಪ್ರೋತ್ಸಾಹಿಸು ತ್ತಿರುವ ನಮ್ಮನ್ನಾಳುವ ಮಹಾಸ್ವಾಮಿಯವರಾದ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಜಿ. ಸಿ. ಎಸ್. ಐ. ರವರಿಗೆ** ಸರ್ವೇಶ್ವರನು ಸಕಲ ಸೌಭಾಗ್ಯಗಳನ್ನು ಕೊಟ್ಟು ಕಾಪಾಡಲೆಂದು ಪ್ರಾರ್ಥಿಸುತ್ತೇನೆ.

ಅನುವಾದಕ,
**ಬಿ. ಎಸ್. ಸೂರ್ಯನಾರಾಯಣಶಾಸ್ತ್ರೀ,**
ಸಾಹಿತ್ಯ ವಿದ್ವಾನ್
ಕನ್ನಡ ಪಂಡಿತ (ಮೈಸೂರು) ಕನ್ನಡ ವಿದ್ವಾನ್ (ಮದರಾಸ್)



ಪದ್ಮಪುರಾಣದ

# ವಿಷಯಾನುಕ್ರಮಣಿಕೆ.

ಪುಟಸಂಖ್ಯೆ

॥ ಶ್ರೀಃ ॥

ಮಹಾಮುನಿವ್ಯಾಸಪ್ರಣೀತಂ

# ಪದ್ಮಪುರಾಣಂ

## ತತ್ರ ಪಂಚಮಂ ಕ್ರಿಯಾಖಂಡಾಪರನಾಮಧೇಯಂ ಸೃಷ್ಟಿಖಂಡಂ

## ಪ್ರಥಮೋಽಧ್ಯಾಯಃ

**ಸ್ವಚ್ಛಂ ಚಂದ್ರಾವದಾತಂ ಕರಿಕರಮಕರಕ್ಷೋಭಸಂಜಾತಫೇನಂ
ಬ್ರಹ್ಮೋದ್ಭೂತಿಪ್ರಸಕ್ತೈರ್ವ್ರತನಿಯಮಪರೈಸ್ಸೇವಿತಂ ವಿಪ್ರಮುಖ್ಯೈಃ
ಓಂಕಾರಾಲಂಕೃತೇನ ತ್ರಿಭುವನಗುರುಣಾ ಬ್ರಹ್ಮಣಾ ದೃಷ್ಟಿಪೂತಂ
ಸಂಭೋಗಾಭೋಗರಮ್ಯಂ ಜಲಮಶುಭಹರಂ ಪೌಷ್ಕರಂ ನಃ ಪುನಾತು ॥೧॥**

**ಸೂತಮೇಕಾನ್ತಮಾಸೀನಂ ವ್ಯಾಸಶಿಷ್ಯೋ ಮಹಾಮತಿಃ ।
ಲೋಮಹರ್ಷಣನಾಮಾ ವೈ ಉಗ್ರಶ್ರವಸಮಾಹ ತತ್ ॥ ೨ ॥**

### ಮೊದಲನೆಯ ಅಧ್ಯಾಯವು.

೧. ನಿರ್ಮಲವಾಗಿಯೂ, ಚಂದ್ರನಂತೆ ಬೆಳ್ಳಗೂ ಇರುವ, ಆನೆಯ ಸೊಂಡಿಲಿಂಬ ಮೊಸಳೆಯ ಓಡಿಯಾಡುವಿಕೆಯಿಂದ ನೊರೆಯಾಗಿರುವ, ಬ್ರಹ್ಮನನ್ನು ಕಂಡು ಹಿಡಿಯುವುದರಲ್ಲಿ ಆಸಕ್ತರಾಗಿ ವ್ರತ, ನಿಯಮಗಳನ್ನು ಹೊಂದಿರುವ ಬ್ರಾಹ್ಮಣರಿಂದ ಸೇವಿತವಾದ, ಓಂಕಾರವನ್ನು ಜಪಿಸುತ್ತ ಮೂರು ಲೋಕಕ್ಕೂ ಗುರುವಾದ ಬ್ರಹ್ಮನ ನೋಡುವಿಕೆಯಿಂದ ಪರಿಶುದ್ಧವಾದ, ಪರಿಪೂರ್ಣವಾಗಿ ಭೋಗವನ್ನು ಹೊಂದಿರುವುದರಿಂದ ಮನೋಹರವಾದ, ಅಶುಭಗಳನ್ನು ನಾಶಮಾಡುವ ಸೊಂಡಲಿನ ತುದಿಯ ನೀರು ನಮ್ಮನ್ನು ಪವಿತ್ರವನ್ನಾಗಿಮಾಡಲಿ.

೨. ವ್ಯಾಸನ ಶಿಷ್ಯನೂ, ಬಹು ಬುದ್ಧಿವಂತನೂ ಆದ ಲೋಮಹರ್ಷಣನು ಸೂತನಾದ ಉಗ್ರಶ್ರವಸನು ವಿಜನಪ್ರದೇಶದಲ್ಲಿರುವುದನ್ನು ನೋಡಿ ಇಂತೆಂದನು.

ಋಷೀಣಾಮಾಶ್ರಮಾಂಸ್ತ್ವಾತ ಸರ್ವಧರ್ಮಾನ್ಸಮಾಸತಃ ।
ಪೃಚ್ಛತಾಂ ವಿಸ್ತರಾದ್ಬ್ರೂಹಿ ಯನ್ಮತ್ತಃ ಶ್ರುತವಾನಸಿ ॥ ೩ ॥

ವೇದವ್ಯಾಸಾನ್ಮಯಾ ಪುತ್ರ ಪುರಾಣಾನ್ಯಖಿಲಾನಿ ಚ ।
ತವಾಖ್ಯಾತಾನಿ ಪ್ರಾಪ್ತಾನಿ ಮುನಿಭ್ಯೋ ವದ ವಿಸ್ತರಾತ್ ॥ ೪ ॥

ಪ್ರಯಾಗೇ ಷಟ್ಕುಲೀಯೈಶ್ಚ ಯಥಾ ಪೃಷ್ಟಸ್ತ್ವಯಂ ಪ್ರಭುಃ ।
ಪೃಷ್ಟೇನ ಚಾರು ಶಾಸ್ತ್ರಾಸ್ತೇ ಮುನಯೋ ಧರ್ಮಕಾಂಕ್ಷಿಣಃ ॥ ೫ ॥

ದೇಶಂ ಪುಣ್ಯಮಭೀಪ್ಸಂತೋ ವಿಭುನಾ ಚ ಹಿತೈಷಿಣಾ ।
ಸುನಾಭಂ ದಿವ್ಯರೂಪಂ ಚ ಸತ್ಯಗಂ ಶುಭವಿಕ್ರಮಂ ॥ ೬ ॥

ಅನೌಪಮ್ಯಮಿದಂ ಚಕ್ರಂ ವರ್ತಮಾನಮತಂದ್ರಿತಾಃ ।
ಪೃಷ್ಠತೋ ಯಾತ ನಿಯಮಾತ್ಪದಂ ಪ್ರಾಪ್ಸ್ಯಥ ಯದ್ಧಿತಂ ॥ ೭ ॥

೩. ಎಲೈ -ಉಗ್ರಶ್ರವಸನೇ! ಋಷಿಗಳ ಆಶ್ರಮಗಳಿಗೆ ಹೋಗಿ ನನ್ನಿಂದ ನೀನು ತಿಳಿದುಕೊಂಡಿರುವ ಧರ್ಮಗಳನ್ನು ಸಂಗ್ರಹವಾಗಿ ಕೇಳಿದವರಿಗೆ ನೀನು ವಿಸ್ತಾರವಾಗಿ ತಿಳಿಸು.

೪. ವೇದವ್ಯಾಸಮಹರ್ಷಿಯಿಂದ ನಾನು ಎಲ್ಲಾ ಪುರಾಣಗಳನ್ನೂ ತಿಳಿದು ಕೊಂಡು ನಿನಗೆ ಹೇಳಿದ್ದೇನೆ. ನೀನು ಅವೆಲ್ಲವನ್ನೂ ಋಷಿಗಳಿಗೆ ವಿಸ್ತಾರವಾಗಿ ಹೇಳು.

೫. ಪ್ರಯಾಗದಲ್ಲಿ ಷಟ್ಕುಲೀಯರು ಆ ಪ್ರಭುವಾದ ಬೃಹಸ್ಪತಿಯನ್ನು ಕೇಳಿದರು. ಆತನು ಧರ್ಮದಲ್ಲಿ ಅಪೇಕ್ಷೆಯುಳ್ಳ ಅವರಿಗೆ ಹೀಗೆ ವಿವರಿಸಿ ತಿಳಿಸಿದನು.

೬-೭. ಆ ಋಷಿಗಳು ಅತಿ ಪುಣ್ಯದಿಂದ ಕೂಡಿದ ದೇಶವನ್ನೂ ಕೇಳಲು ಆಗ ಆ ಹಿತೈಷಿಯಾದ ಬೃಹಸ್ಪತಿಯು, ಗಟ್ಟಿಯಾದ ಅಚ್ಚುಳ್ಳ, ಚೆನ್ನಾಗಿರುವ, ಸತ್ಯದಿಂದ ನಡೆಯುವ, ಒಳ್ಳೆಯ ಬಲವಿರುವ, ಅತ್ಯುತ್ತಮವಾದ ಇಲ್ಲಿರುವ ಈ ಚಕ್ರವನ್ನು ಜಾಗರೂಕತೆಯಿಂದ ಅನುಸರಿಸುತ್ತ ಹಿಂದೆಯೇ ಹೋದರೆ ನಿಮಗೆ ಬೇಕಾದುದು ಸಿಕ್ಕುತ್ತದೆ ಎಂದನು.

**ಗಚ್ಛತೋ ಧರ್ಮಚಕ್ರಸ್ಯ ಯತ್ರ ನೇಮಿರಶೀರ್ಯತ ।**
**ಪುಣ್ಯಸ್ಸ ದೇಶೋ ಮಂತವ್ಯ ಇತ್ಯುವಾಚ ಬೃಹಸ್ಪತಿಃ ॥ ೮ ॥**

**ಉಕ್ತ್ವಾ ಚೈವಮೃಷೀನ್ಸರ್ವಾನದೃಶ್ಯತ್ವಮುಗಾತ್ಮನಃ ।**
**ಗಂಗಾವರ್ತಸಮಾಹಾರೋ ನೇಮಿರ್ಯತ್ರ ವ್ಯಶೀರ್ಯತ ॥ ೯ ॥**

**ಈಜಿರೇ ದೀರ್ಘಸತ್ರೇಣ ಋಷಯೋ ನೈಮಿಷೇ ತದಾ ।**
**ತತ್ರ ಗತ್ವಾ ತು ತಾನ್ಬ್ರೂಹಿ ಪೃಚ್ಛತೋ ಧರ್ಮಸಂಶಯಾನ್ ॥ ೧೦ ॥**

**ಉಗ್ರಶ್ರವಾಸ್ತತೋ ಗತ್ವಾ ಜ್ಞಾನವಿನ್ಮುನಿಪುಂಗವಾನ್ ।**
**ಅಭಿಗಮ್ಯೋಪಸಂಗೃಹ್ಯ ನಮಸ್ಕೃತ್ವಾ ಕೃತಾಂಜಲಿಃ ॥ ೧೧ ॥**

**ತೋಷಯಾಮಾಸ ಮೇಧಾವೀ ಪ್ರಣಿಪಾತೇನ ತಾನೃಷೀನ್ ।**
**ತೇ ಚಾಪಿ ಸತ್ರಿಣಃ ಪ್ರೀತಾಸ್ಸಸದಸ್ಯಾ ಮಹಾಮುನೇ ।**
**ತಸ್ಮೈ ಸಮೇತ್ಯ ಪೂಜಾಂ ಚ ಯಥಾವತ್ಪ್ರತಿಪೇದಿರೇ ॥ ೧೨ ॥**

---

೮. ಹೋಗುತ್ತಿರುವಾಗ ಆ ಧರ್ಮಚಕ್ರದ ಅಂಚು ಎಲ್ಲಿ ಹೂಳಿಕೊಳ್ಳುತ್ತದೆಯೋ ಆ ದೇಶವು ಪುಣ್ಯದೇಶವೆಂದು ತಿಳಿದುಕೊಳ್ಳಿರಿ ಎಂದು ಆ ಬೃಹಸ್ಪತಿಯು ಹೇಳಿದನು.

೯-೧೦. ಹೀಗೆಂದು ಋಷಿಗಳಿಗೆ ಹೇಳಿ ಆ ಬೃಹಸ್ಪತಿಯು ಹೊರಟು ಹೋದನು. ಗಂಗೆಯನ್ನೇ ಅನುಸರಿಸಿ ಬರುತ್ತ ಆ ಚಕ್ರದ ಅಂಚು ಅಲ್ಲೊಂದೆಡೆಯಲ್ಲಿ ಹೂತುಕೊಂಡಿತು. ಅದೇ ನೈಮಿಷಾರಣ್ಯವು. ಆ ನೈಮಿಷಾರಣ್ಯದಲ್ಲಿ ಆ ಋಷಿಗಳು ಬಹು ವರ್ಷಗಳು ನಡೆಯತಕ್ಕ ಯಾಗವನ್ನು ಮಾಡುತ್ತಿರುವರು. ಅಲ್ಲಿಗೆ ಹೋಗಿ ಅವರು ಕೇಳುವ ಧರ್ಮಸಂಶಯಗಳನ್ನು ನಿವಾರಿಸು ಎಂದು ರೋಮಹರ್ಷಣನು ಎಂದನು.

೧೧. ಜ್ಞಾನಿಯಾದ ಆ ಉಗ್ರಶ್ರವನು ಆ ಋಷಿಶ್ರೇಷ್ಠರುಗಳಲ್ಲಿಗೆ ಹೋಗಿ ಅವರಿಗೆ ನಮಸ್ಕರಿಸಿ, ಕೈಮುಗಿದುಕೊಂಡು ದೀರ್ಘದಂಡ ನಮಸ್ಕಾರಗಳಿಂದ ಅವರನ್ನು ಸಂತೋಷಪಡಿಸಿದನು.

೧೨. ಎಲೈ ಋಷಿಯೇ! ಯಾಗವನ್ನು ಆರಂಭಿಸಿರುವ ಆ ಋಷಿಗಳೆಲ್ಲರೂ ಸದಸ್ಯರೊಡನೆ ಕೂಡಿಕೊಂಡು ಸಂತೋಷದಿಂದ ಅವನನ್ನು ಪೂಜಿಸಿ ಗೌರವಿಸಿದರು.

॥ ಋಷಯ ಊಚುಃ ॥

ಕುತಸ್ತ್ವಮಾಗತಸ್ಸೂತ ಕಸ್ಮಾದ್ದೇಶಾದಿಹಾಗತಃ ।
ಕಾರಣಂ ಚಾಗಮೇ ಬ್ರೂಹಿ ವೃಂದಾರಕಸಮದ್ಯುತೇ ॥ ೧೩ ॥

॥ ಸೂತ ಉವಾಚ ॥

ಪಿತ್ರಾಹಂ ತು ಸಮಾದಿಷ್ಟೋ ವ್ಯಾಸಶಿಷ್ಯೇಣ ಧೀಮತಾ ।
ಶುಶ್ರೂಷಸ್ವ ಮುನೀನ್ಗತ್ವಾ ಯತ್ತು ಪೃಚ್ಛಂತಿ ತದ್ವದ ॥ ೧೪ ॥

ವದಂತು ಭಗವಂತೋ ಮಾಂ ಕಥಯಾಮಿ ಕಥಾಂ ತು ಯಾಂ ।
ಪುರಾಣಂ ಚೇತಿಹಾಸಂ ವಾ ಧರ್ಮಾನಥ ಪೃಥಗ್ವಿಧಾನ್ ॥ ೧೫ ॥

ತಾಂ ಗಿರಂ ಮಧುರಾಂ ತಸ್ಯ ಶ್ರುತ್ವಾ ತು ಮುನಿಸತ್ತಮಾಃ ।
ಅಥ ತೇಷಾಂ ಪುರಾಣಸ್ಯ ಶುಶ್ರೂಷಾ ಸಮಪದ್ಯತ ॥ ೧೬ ॥

ದೃಷ್ಟ್ವಾ ತಮತಿವಿಶ್ವಸ್ತಂ ವಿದ್ವಾಂಸಂ ಲೌಮಹರ್ಷಣಿಂ ।
ತಸ್ಮಿನ್ಸತ್ರೇ ಗೃಹಪತಿಃ ಸರ್ವಶಾಸ್ತ್ರವಿಶಾರದಃ ॥ ೧೭ ॥

---

೧೩. ಋಷಿಗಳು ಹೇಳಿದರು :—ಎಲೈ ಸೂತನೇ ನೀನೇಕೆ ಬಂದೆ? ಯಾವ ದೇಶದಿಂದ ಬಂದೆ? ದೇವತೆಗಳಿಗೆ ಸಮವಾದ ಕಾಂತಿಯುಳ್ಳ ನೀನು ಇಲ್ಲಿಗೆ ಬರಲು ಕಾರಣವೇನು? ಹೇಳು.

೧೪. ಸೂತನು ಹೇಳಿದನು :—ಋಷಿಗಳ ಬಳಿಗೆ ಹೋಗಿ ಅವರು ಕೇಳಿದು ದನ್ನು ಹೇಳು ಎಂಬುದಾಗಿ ವ್ಯಾಸಶಿಷ್ಯನಾದ ನನ್ನ ತಂದೆಯು ನನಗೆ ಅಪ್ಪಣೆ ಮಾಡಿರುವನು.

೧೫. ನಿಮ್ಮಗಳಿಗೆ ಬಗೆಬಗೆಯಾದ ಪುರಾಣವನ್ನಾಗಲಿ ಇತಿಹಾಸವನ್ನಾಗಲೀ ಯಾವ ರೀತಿಯಾದ ಕಥೆಯನ್ನಾಗಲಿ ಹೇಳಬೇಕು? ತಾವು ನನಗೆ ಹೇಳಿರಿ.

೧೬. ಎಲೈ ಋಷಿಗಳಿರಾ, ಆ ಸೂತನ ಇಂಪಾದ ಮಾತನ್ನು ಕೇಳಿ ಅವರಿಗೆ ಆ ವಿಷಯಗಳನ್ನು ಕೇಳಬೇಕೆಂಬ ಇಚ್ಛೆಯು ಹುಟ್ಟಿತು.

೧೭-೧೮. ಬಹು ವಿಶ್ವಾಸವನ್ನು ಹೊಂದಿರುವ ಆ ಲೋಮಹರ್ಷಣನ ಮಗ ನಾದ ಸೂತನನ್ನು ನೋಡಿ ಆ ಯಜ್ಞಕ್ಕೆ ಯಜಮಾನನೂ ಎಲ್ಲಾ ಶಾಸ್ತ್ರಗಳಲ್ಲಿಯೂ

ಶೌನಕೋ ನಾಮ ಮೇಧಾವೀ ವಿಜ್ಞಾನಾರಣ್ಯಕೇ ಗುರುಃ ।
ಇತ್ಥಂ ತೈರ್ಭಾವಮಾಲಂಬ್ಯ ಧರ್ಮಾನ್ ಶುಶ್ರೂಷುರಾಹ ತಂ ॥ ೧೮ ॥

॥ ಶೌನಕ ಉವಾಚ ॥

ತ್ವಯಾ ಸೂತ ಮಹಾಬುದ್ಧೇ ಭಗವಾನ್ಬ್ರಹ್ಮಸತ್ತಮಃ ।
ಇತಿಹಾಸಪುರಾಣಾರ್ಥಂ ವ್ಯಾಸಸ್ಸಮ್ಯಗುಪಾಸಿತಃ ॥ ೧೯ ॥

ದುದೋಹಿಥ ಮತಿಂ ತಸ್ಯ ತ್ವಂ ಪುರಾಣಾಶ್ರಯಾಂ ಶುಭಾಂ ।
ಅಮೀಷಾಂ ವಿಪ್ರಮುಖ್ಯಾನಾಂ ಪುರಾಣಂ ಪ್ರತಿ ಯಾ ಮತಿಃ ॥ ೨೦ ॥

ಶುಶ್ರೂಷಾಸ್ತೇ ಮಹಾಬುದ್ಧೇ ತಚ್ಛ್ರಾವಯಿತುಮರ್ಹಸಿ ।
ಸರ್ವೇ ಹೀಮೇ ಮಹಾತ್ಮಾನೋ ನಾನಾಗೋತ್ರಾಸ್ಸಮಾಗತಾಃ ॥ ೨೧ ॥

---

ಪಂಡಿತನೂ, ಬುದ್ಧಿವಂತನೂ, ಜ್ಞಾನವಿಜ್ಞಾನಗಳಲ್ಲಿ ಅತಿ ನಿಪುಣನೂ ಆದ ಶೌನಕ ನೆಂಬುವನು ಆ ಋಷಿಗಳ ಅಭಿಪ್ರಾಯವನ್ನು ತಿಳಿದು ಧರ್ಮಗಳನ್ನು ಕೇಳಬೇಕೆಂಬ ಇಚ್ಛೆಯಿಂದ ಅವರನ್ನು ಕುರಿತು ಇಂತೆಂದನು.

೧೯. ಶೌನಕನು ಹೇಳಿದನು:—ಮಹಾಬುದ್ಧಿಯುಳ್ಳ ಸೂತನೇ, ಬ್ರಹ್ಮವನ್ನು ತಿಳಿದವನೂ, ಪೂಜ್ಯನೂ ಆದ ವ್ಯಾಸಋಷಿಯನ್ನು, ಇತಿಹಾಸ ಪುರಾಣಗಳಿಗೋಸ್ಕರ ನೀನು ಚೆನ್ನಾಗಿ ಶುಶ್ರೂಷೆಮಾಡಿದ್ದೀಯೆ.

೨೦. ನೀನು ಆ ವ್ಯಾಸನಿಂದ ಪುರಾಣೇತಿಹಾಸಗಳಲ್ಲಿನ ವಿಷಯಗಳನ್ನು ಬಹುವಾಗಿ ಹೊಂದಿದೆ. ಇಲ್ಲಿರುವ ಬ್ರಾಹ್ಮಣಶ್ರೇಷ್ಠರಿಗೆ ಪುರಾಣವನ್ನು ಕೇಳಲು ಬಹು ಇಚ್ಛೆ ಇದೆ. ಬುದ್ಧಿವಂತನಾದ ಸೂತನೇ, ನೀನು ಅದನ್ನು ಹೇಳಲು ಯೋಗ್ಯ ನಾಗಿದ್ದೀಯೆ. ಹೇಳು.

೨೧. ಇವರೆಲ್ಲರೂ ಮಹಿಮೆಯುಳ್ಳವರು. ನಾನಾಗೋತ್ರದವರೂ ಇಲ್ಲಿ ಸೇರಿ ದ್ದಾರೆ. ಪುರಾಣದಲ್ಲಿ ಹೇಳಿರುವ ತಮ್ಮ ತಮ್ಮ ವಿಷಯಗಳನ್ನು ಈ ಬ್ರಹ್ಮವಾದಿ ಗಳು ಕೇಳಲಿ.

ಸ್ವಾನ್ಸ್ವಾನಂಶಾನ್ಪುರಾಣೋಕ್ತಾಂಚ್ಛೃಣ್ವಂಸ್ತು ಬ್ರಹ್ಮವಾದಿನಃ ।
ಸಂಪೂರ್ಣೇ ದೀರ್ಘಸತ್ರೇಽಸ್ಮಿಂಸ್ತಾಂಸ್ತ್ವಂ ಶ್ರಾವಯ ವೈ ಮುನೀನ್ ॥

ಪಾದ್ಮಂ ಪುರಾಣಂ ಸರ್ವೇಷಾಂ ಕಥಯಸ್ವ ಮಹಾಮತೇ ।
ಕಥಂ ಪದ್ಮಂ ಸಮುದ್ಭೂತಂ ಬ್ರಹ್ಮಾ ತತ್ರ ಕಥಂ ಭವೇತ್ ॥ ೨೩ ॥

ಪ್ರೋದ್ಭೂತೇನ ಕಥಂ ಸೃಷ್ಟಿಃ ಕೃತಾ ತಾಂ ತು ತಥಾ ವದ ।
ಏವಂ ಪೃಷ್ಟಸ್ತತಸ್ತಾಂಸ್ತು ಪ್ರತ್ಯುವಾಚ ಶುಭಾಂ ಗಿರಂ ॥ ೨೪ ॥

ಸೂಕ್ಷ್ಮಂ ಚ ನ್ಯಾಯಸಂಯುಕ್ತಂ ಪ್ರಾಬ್ರವೀದ್ರೋಮಹರ್ಷಣಿಃ ।
ಪ್ರೀತೋಽಸ್ಮ್ಯನುಗೃಹೀತೋಽಸ್ಮಿ ಭವದ್ಭಿಸ್ತ್ವತ್ಪ್ರಚೋದನಾತ್ ॥ ೨೫ ॥

ಪುರಾಣಾರ್ಥಂ ಪುರಾಣಜ್ಞೈಃ ಸರ್ವಧರ್ಮಪರಾಯಣೈಃ ।
ಯಥಾಶ್ರುತಂ ಸುವಿಖ್ಯಾತಂ ತತ್ಸರ್ವಂ ಕಥಯಾಮಿ ವಃ ॥ ೨೬ ॥

---

೨೨. ಈ ಬಹುಕಾಲ ಹಿಡಿಯುವ ಯಾಗವು ಸಂಪೂರ್ಣವಾಗುವವರೆಗೂ ಅವರಿಗೆ ತಿಳಿಯಲಿ. ನೀನು ಹೇಳು.

೨೩. ಮಹಾಬುದ್ಧಿಯುಳ್ಳ ಸೂತನೇ, ಪದ್ಮಪುರಾಣವನ್ನು ಎಲ್ಲರಿಗೂ ಹೇಳು. ಪದ್ಮವು ಹೇಗೆ ಹುಟ್ಟಿತು? ಅದರಲ್ಲಿ ಬ್ರಹ್ಮನು ಹೇಗೆ ಉಂಟಾದನು? ಅದರಲ್ಲಿ ಹುಟ್ಟಿದ ಆ ಬ್ರಹ್ಮನು ಸೃಷ್ಟಿಯನ್ನು ಹೇಗೆ ಮಾಡಿದನು? ಇದೆಲ್ಲವನ್ನೂ ನೀನು ಕೇಳಿದ್ದಂತೆ ಹೇಳು.

೨೪. ಶೌನಕನು ಹೀಗೆ ಹೇಳಿದುದನ್ನು ಕೇಳಿ, ಸೂತನು ಸೂಕ್ಷ್ಮವೂ ನ್ಯಾಯವೂ ಆದ ಮಾತನ್ನು ಅವರಿಗೆ ಹೇಳಿದನು.

೨೫. ಸಂತೋಷವಾಯಿತು. ತಾವು ಇದನ್ನು ಹೇಳಬೇಕೆಂದು ಪ್ರೇರಿಸಿದುದರಿಂದ ನನಗೆ ಅನುಗ್ರಹಮಾಡಿದಂತಾಯಿತು.

೨೬. ಎಲ್ಲಾ ಧರ್ಮಗಳನ್ನೂ ಬಲ್ಲ ಮತ್ತು ಆಚರಿಸುತ್ತಿರುವ, ಪುರಾಣವನ್ನು ಬಲ್ಲವರಿಂದ ಪುರಾಣದ ಅರ್ಥವು ಹೇಗೆ ತಿಳಿಯಲ್ಪಟ್ಟಿದೆಯೋ ಮತ್ತು ಪ್ರಸಿದ್ಧವಾಗಿದೆಯೋ ಅದೆಲ್ಲವನ್ನೂ ನಿಮಗೆ ಹೇಳುತ್ತೇನೆ.

ಏಷ ಧರ್ಮಃ ಸ್ವಸೂತಸ್ಯ ಸದ್ಭಿರ್ದೃಷ್ಟಸ್ಸನಾತನಃ।
ದೇವತಾನಾಮೃಷೀಣಾಂ ಚ ರಾಜ್ಞಾಮಮಿತತೇಜಸಾಂ ॥ ೨೭ ॥

ತದ್ವಂಶಕಾರಣಂ ಕಾರ್ಯಂ ಸ್ತುತೀನಾಂ ಚ ಮಹಾತ್ಮನಾಂ ।
ಇತಿಹಾಸಪುರಾಣೇಷು ದೃಷ್ಟ್ವಾ ಯೇ ಬ್ರಹ್ಮವಾದಿನಃ ॥ ೨೮ ॥

ನ ಹಿ ವೇದೇಷ್ವಧಿಕಾರಃ ಕಶ್ಚಿತ್ಸೂತಸ್ಯ ದೃಶ್ಯತೇ ।
ವೈನ್ಯಸ್ಯ ಹಿ ಪೃಥೋರ್ಯಜ್ಞೇ ವರ್ತಮಾನೇ ಮಹಾತ್ಮನಃ ॥ ೨೯ ॥

ಮಾಗಧಶ್ಚೈವ ಸೂತಶ್ಚ ಸ್ತುವಂತೌ ತಂ ನರೇಶ್ವರಂ ।
ತುಷ್ಟೇನಾಥ ತಯೋರ್ದತ್ತೋ ವರೋ ರಾಜ್ಞಾ ಮಹಾತ್ಮನಾ ॥ ೩೦ ॥

ಸೂತಾಯ ಸೂತವಿಷಯಂ ಮಗಧಂ ಮಾಗಧಾಯ ಚ ।
ತತ್ರ ಸೂತ್ಯಾಂ ಸಮುತ್ಪನ್ನಃ ಸೂತೋ ನಾಮೇಹ ಜಾಯತೇ ॥ ೩೧ ॥

ಐಂದ್ರೇ ಸತ್ರೇ ಪ್ರವೃತ್ತೇ ತು ಗ್ರಹಯುಕ್ತಂ ಬೃಹಸ್ಪತಿಂ ।
ತಮಿವೇಂದ್ರಂ ಬಾರ್ಹಸ್ಪತ್ಯೇ ತತ್ರ ಸೂತೋ ವ್ಯಜಾಯತ ॥ ೩೨ ॥

---

೨೭-೨೮. ದೇವತೆಗಳು, ಋಷಿಗಳು, ಶೂರರಾದ ರಾಜರು, ಇತಿಹಾಸ ಪುರಾಣಗಳಲ್ಲಿ ಪ್ರಸಿದ್ಧರಾಗಿರುವ ಬ್ರಹ್ಮವಾದಿಗಳು, ಇವರ ವಂಶವನ್ನು ಹೊಗಳುತ್ತ ಇವರನ್ನೂ ಹೊಗಳತಕ್ಕದ್ದೇ ಸೂತನಿಗೆ ಹೇಳಿರುವ ಸನಾತನ ಧರ್ಮವೆಂದು ಸತ್ಪುರುಷರು ಹೇಳುತ್ತಾರೆ.

೨೯-೩೦. ಸೂತನಿಗೆ ವೇದದಲ್ಲಿ ಯಾವ ಅಧಿಕಾರವೂ ಕಾಣುವುದಿಲ್ಲ. ವೇನನ ಮಗನಾದ ಪೃಥುವಿನ ಯಜ್ಞದಲ್ಲಿ ಮಾಗಧನೂ, ಸೂತನೂ ಆ ಪೃಥುವನ್ನು ಹೊಗಳಿದರು. ಸಂತೋಷಪಟ್ಟ ಆ ಪೃಥುವು ಅವರಿಗೆ ವರವನ್ನು ಕೊಟ್ಟನು.

೩೧. ಸೂತನಿಗೆ ಸೂತದೇಶವನ್ನೂ ಮಾಗಧನಿಗೆ ಮಗಧದೇಶವನ್ನೂ ಕೊಟ್ಟನು. ಅದರಲ್ಲಿ ಸೂತಿಯಲ್ಲಿ ಹುಟ್ಟಿದವನನ್ನು ಸೂತನೆಂದೆನ್ನುತ್ತಾರೆ.

೩೨. ಇಂದ್ರನು ಯಾಗಮಾಡುತ್ತಿದ್ದಾಗ ಗ್ರಹಗಳಿಂದ ಕೂಡಿದ ಬೃಹಸ್ಪತಿಯನ್ನೂ, ಇಂದ್ರನನ್ನೂ ಹೊಗಳಿದರು. ಆಗ ಸೂತನು ಹುಟ್ಟಿದನು. (ಸೂತನು ಪ್ರಸಿದ್ಧನಾದನು)

ಶಿಷ್ಯಹಸ್ತೇನ ಯತ್ಪೃಕ್ತಮಭಿಭೂತಂ ಗುರೋರ್ಹವಿಃ ।
ಅಧರೋತ್ತರಧಾರೇಣ ಜಜ್ಞೇ ತದ್ವರ್ಣಸಂಕರಂ ॥ ೩೩ ॥

ಯಶ್ಚ ಕ್ಷೇತ್ರಾತ್ಸಮಭವದ್ಬ್ರಾಹ್ಮಣ್ಯಾಸ್ಸ ಚ ಯೋನಿತಃ ।
ಪೂರ್ವೇಣೈವ ತು ಸಾಧರ್ಮ್ಯಾದ್ವೇ ಧರ್ಮಾಸ್ತೇ ಪ್ರಕೀರ್ತಿತಾಃ ॥ ೩೪ ॥

ಮಧ್ಯಮೋ ಹ್ಯೇಷ ಸೂತಸ್ಯ ಧರ್ಮಃ ಕ್ಷೇತ್ರೋಪಜೀವಿನಃ ।
ಪುರಾಣೇಷ್ವಧಿಕಾರೋ ಮೇ ವಿಹಿತೋ ಬ್ರಾಹ್ಮಣೈರಿಹ ॥ ೩೫ ॥

ದ್ರಷ್ಟುಂ ಧರ್ಮಮಹಂ ಪೃಷ್ಟೋ ಭವದ್ಭಿರ್ಬ್ರಹ್ಮವಾದಿಭಿಃ ।
ತಸ್ಮಾತ್ಸಮ್ಯಗ್ಭುವಿ ಬ್ರೂಯಾಂ ಪುರಾಣಮೃಷಿಪೂಜಿತಂ ॥ ೩೬ ॥

---

೩೩. ಆ ಯಜ್ಞದಲ್ಲಿ ಗುರುವಿನಿಂದ ತಿರಸ್ಕೃತವಾದ ಹವಿಸ್ಸನ್ನೂ ಶಿಷ್ಯನು ಪ್ರೋಕ್ಷಿಸಿ ಸರಿಮಾಡಿದನು. ಲೋಕದಲ್ಲಿ ಶಿಷ್ಯನು ಕೆಡಿಸಿದುದನ್ನು ಗುರುವು ಸರಿ ಮಾಡುವುದುಂಟು. ಈ ಯಾಗದಲ್ಲಿ ಗುರುವು ಕೆಡಿಸಿದುದನ್ನು ಶಿಷ್ಯನು ಸರಿಮಾಡಿದನು. ಈ ಹೆಚ್ಚು ಕಡಿಮೆಯಿಂದ ವರ್ಣಸಾಂಕರ್ಯವು ಬಂದಿತು. (ಮೇಲುಕೀಳು)

೩೪. ಕ್ಷತ್ರಿಯನಿಂದ ಬ್ರಾಹ್ಮಣನು ಉತ್ಪನ್ನವಾದನು. ಆದರೆ ಕ್ಷೇತ್ರವು ಬ್ರಾಹ್ಮಣನದೇ ಆದುದರಿಂದ ಬ್ರಾಹ್ಮಣಸಾಧರ್ಮ್ಯವಿದ್ದಂತೆಯೇ ಆಯಿತು. ಆದರಿಂದ ಬ್ರಾಹ್ಮಣಧರ್ಮವೂ ಉಕ್ತವಾಗಿದೆ.

೩೫. ಈ ಸೂತನು ಕ್ಷೇತ್ರದಿಂದ ಮಾತ್ರ ಬ್ರಾಹ್ಮಣನಾಗಿ, ಬೀಜದಿಂದ ಕ್ಷತ್ರಿಯನಾದುದರಿಂದ ಮಧ್ಯಸ್ಥವಾದ ಧರ್ಮದವನಾದನು. ಆಗ ಬ್ರಾಹ್ಮಣರು ಇವನಿಗೆ ಪುರಾಣದಲ್ಲಿ ಮಾತ್ರ ಅಧಿಕಾರವೆಂದು ನಿರ್ಣಯಿಸಿ ಆ ಅಧಿಕಾರವನ್ನು ಕೊಟ್ಟರು.

೩೬. ಬ್ರಹ್ಮವಾದಿಗಳಿಂದ ತಾವು ಧರ್ಮವನ್ನು ತಿಳಿಯಲು ಕೇಳಿದುದರಿಂದ ಈ ಭೂಮಿಯಲ್ಲಿ ಋಷಿಗಳಿಂದ ಗೌರವಿಸಲ್ಪಟ್ಟ ಪುರಾಣವನ್ನು ಚೆನ್ನಾಗಿ ಹೇಳುತ್ತೇನೆ.

**ಪಿತೄಣಾಂ ಮಾನಸೀ ಕನ್ಯಾ ವಾಸವಂ ಸಮುಪದ್ಯತ ।**
**ಅಪಿ ಧ್ಯಾತಾ ಚ ಪಿತೃಭಿರ್ಮತ್ಸ್ಯಗರ್ಭೇ ಬಭೂವ ಸಾ ॥ ೩೭ ॥**

**ಅರಣೀವ ಹುತಾಶಸ್ಯ ನಿಮಿತ್ತಂ ಪುಣ್ಯಜನ್ಮನಃ ।**
**ತಸ್ಯಾಂ ಬಭೂವ ಭೂತಾತ್ಮಾ ಮಹರ್ಷಿಸ್ತು ಪರಾಶರಾತ್ ॥ ೩೮ ॥**

**ತಸ್ಮೈ ಭಗವತೇ ಕೃತ್ವಾ ನಮಸ್ಸತ್ಯಾಯ ವೇಧಸೇ ।**
**ಪುರುಷಾಯ ಪುರಾಣಾಯ ಬ್ರಹ್ಮವಾಕ್ಯಾನುವರ್ತಿನೇ ॥ ೩೯ ॥**

**ಮಾಧವಬ್ರಹ್ಮರೂಪಾಯ ವಿಷ್ಣವೇ ಶಂಸಿತಾತ್ಮನೇ ।**
**ಜಾತಮಾತ್ರಂ ಚ ಯಂ ವೇದ ಉಪತಸ್ಥೇ ಸಸಂಗ್ರಹಃ ॥ ೪೦ ॥**

**ಮತಿಮಂಥಾನಮಾವಿಧ್ಯ ಯೇನಾಸ್ಮಾಚ್ಛ್ರುತಿಸಾಗರಾತ್ ।**
**ಪ್ರಕಾಶೋ ಜನಿತೋ ಲೋಕೇ ಮಹಾಭಾರತಚಂದ್ರಮಾಃ ॥ ೪೧ ॥**

೩೭. ಪಿತೃದೇವತೆಗಳ ಮನಸ್ಸಿನಿಂದ ಹುಟ್ಟಿದ ಕನ್ಯೆಯು ಇಂದ್ರನನ್ನು ಅಪೇಕ್ಷಿಸಿ ಹೋಗುತ್ತಿರಲು, ಪಿತೃಗಳು ಧ್ಯಾನಿಸಿದುದರಿಂದ ಶಪಿಸಲು, ಮೀನಿನ ಹೊಟ್ಟೆಯಲ್ಲಿ ಹುಟ್ಟಿದಳು.

೩೮. ಅಗ್ನಿಗೆ ಅರಣಿ ಎಂಬುದು ಕಡೆಯುವ ಮರವು ಹೇಗೆ ನಿಮಿತ್ತವೋ ಹಾಗೆ ಆ ಮಹಾನುಭಾವನಾದ ವ್ಯಾಸನಿಗೆ ನಿಮಿತ್ತಮಾತ್ರಳಾದಳು. ಆಕೆಯಲ್ಲಿ ಪರಾಶರನಿಂದ ಈ ವ್ಯಾಸರು ಹುಟ್ಟಿದರು.

೩೯. ಆ ಸತ್ಯರೂಪನಾದ, ಬ್ರಹ್ಮರೂಪನಾದ, ಪುರಾಣಪುರುಷನಾದ ಬ್ರಹ್ಮನ ಮಾತನ್ನು ಅನುಸರಿಸುವ, ವಿಷ್ಣುರೂಪನಾದ, ಹೊಗಳಿಸಿಕೊಳ್ಳಲು ಯೋಗ್ಯನಾದ ಆ ವ್ಯಾಸನಿಗೆ ನಮಸ್ಕಾರವು.

೪೦. ಅವನು ಹುಟ್ಟಿದ ಒಡನೆಯೇ ಅವನನ್ನು ವೇದಗಳೆಲ್ಲವೂ ಸಾಂಗವಾಗಿ ಹೊಂದಿದವು.

೪೧. ಯಾವ ವ್ಯಾಸನು ತನ್ನ ಬುದ್ಧಿಯನ್ನೇ ಕಡೆಗೋಲನ್ನಾಗಿ ಮಾಡಿಕೊಂಡು ವೇದಗಳೆಂಬ ಸಮುದ್ರವನ್ನು ಕಡೆದು ಮಹಾಭಾರತವೆಂಬ ಚಂದ್ರನನ್ನು ಪ್ರಕಾಶಪಡಿಸಿದನೋ ಅಂತಹವನಿಗೆ ನಮಸ್ಕಾರವು.

ಭಾರತಂ ಭಾನುಮಾನಿಂದುರ್ಯದಿ ನಸ್ಸ್ಯುರಮೀ ತ್ರಯಃ ।
ತತೋಽಜ್ಞಾನತಮೋಂಧಸ್ಯ ಕಾವಸ್ಥಾ ಜಗತೋ ಭವೇತ್ ॥ ೪೨ ॥

ಕೃಷ್ಣದ್ವೈಪಾಯನಂ ವ್ಯಾಸಂ ವಿದ್ಧಿ ನಾರಾಯಣಂ ಪ್ರಭುಂ ।
ಕೋ ಹ್ಯನ್ಯಃ ಪುಂಡರೀಕಾಕ್ಷಾನ್ಮಹಾಭಾರತಕೃದ್ಭವೇತ್ ॥ ೪೩ ॥

ತಸ್ಮಾದಹಮುಪಶ್ರುತ್ಯ ಪುರಾಣಂ ಬ್ರಹ್ಮವಾದಿನಂ ।
ಸರ್ವಜ್ಞಂ ಸರ್ವಲೋಕೇಷು ಪೂಜಿತಂ ದೀಪ್ತತೇಜಸಂ ॥ ೪೪ ॥

ಪುರಾಣಂ ಸರ್ವಶಾಸ್ತ್ರಾಣಾಂ ಪ್ರಥಮಂ ಬ್ರಹ್ಮಣಾ ಸ್ಮೃತಂ ।
ತ್ರಿವರ್ಗಸಾಧನಂ ಪುಣ್ಯಂ ಶತಕೋಟಿಪ್ರವಿಸ್ತರಂ ॥ ೪೫ ॥

ನಿಶ್ಶೇಷೇಷು ಚ ಲೋಕೇಷು ವಾಜಿರೂಪೇಣ ಕೇಶವಃ ।
ಬ್ರಹ್ಮಣಸ್ತು ಸಮಾದೇಶಾದ್ವೇದಾನಾಹೃತವಾನಸೌ ॥ ೪೬ ॥

---

೪೨. ಭಾರತ, ಸೂರ್ಯ, ಚಂದ್ರ ಈ ಮೂವರೂ ಇಲ್ಲದಿದ್ದರೆ ಆಗ ಈ ಅಜ್ಞಾನವೆಂಬ ಕತ್ತಲೆಯಲ್ಲಿ ಬಿದ್ದಿರುವ ಪ್ರಪಂಚದ ಸ್ಥಿತಿ ಹೇಗಿರುತ್ತಿತ್ತು?

೪೩. ಕೃಷ್ಣದ್ವೈಪಾಯನನಾದ ವ್ಯಾಸನನ್ನು ಸ್ವಾಮಿಯಾದ ನಾರಾಯಣ ನೆಂದೇ ತಿಳಿ. ಆ ನಾರಾಯಣನಿಗಿಂತಲೂ ಬೇರೆಯಾದವನು ಭಾರತವನ್ನು ಬರೆಯಲು ಸಮರ್ಥನಾಗುತ್ತಾನೆಯೇ?

೪೪. ಯಾವಾಗಲೂ ಬ್ರಹ್ಮನ ವಿಷಯವನ್ನೇ ಹೇಳುವ, ಎಲ್ಲಾ ವಿಷಯಗಳೂ ಅಡಕವಾಗಿರುವ, ಎಲ್ಲಾ ಲೋಕದಲ್ಲಿಯೂ ಪೂಜಿತನಾದ, ಕಾಂತಿಯೊಡನೆ ಕೂಡಿರುವ ಪುರಾಣವನ್ನು ಆ ವ್ಯಾಸನಿಂದ ಕೇಳಿರುವೆನು.

೪೫. ಪುರಾಣವು ಎಲ್ಲಾ ಶಾಸ್ತ್ರಗಳಿಗೂ ಮೊದಲನೆಯದು ಎಂದು ತಿಳಿಯ ಲ್ಪಟ್ಟಿದೆ. ಧರ್ಮಕಾಮಾರ್ಥಗಳಿಗೆ ಕಾರಣವಾಗಿದೆ. ಪುಣ್ಯಪ್ರದವಾದುದು. ನೂರು ಕೋಟಿ ಗ್ರಂಥಗಳುಳ್ಳದು.

೪೬. ಪ್ರಳಯಕಾಲದಲ್ಲಿ ಲೋಕವೆಲ್ಲವೂ ನಾಶವಾದಾಗ ಬ್ರಹ್ಮನ ಮಾತಿ ನಂತೆ ವಿಷ್ಣುವು ಕುದುರೆಯ ರೂಪದಿಂದ ವೇದಗಳನ್ನು ತಂದನು.

ಅಂಗಾನಿ ಚತುರೋ ವೇದಾನ್ಪುರಾಣಾನಿ ಚ ಸರ್ವಶಃ ।
ಮತ್ಸ್ಯರೂಪೇಣಾಜಹಾರ ಕಲ್ಪಾದಾವುದಕಾರ್ಣವೇ ॥ ೪೭ ॥

ಅಶೇಷಮೇತತ್ಕಥಿತಮುದಕಾಂತರ್ಗತೋ ವಿಭುಃ ।
ಶ್ರುತ್ವಾ ಜಗಾದ ಚ ಮುನಿಂ ಪ್ರತಿ ವೇದಾಂಶ್ಚತುರ್ಮುಖಃ ॥ ೪೮ ॥

ಪ್ರವೃತ್ತಿಸ್ಸರ್ವಶಾಸ್ತ್ರಾಣಾಂ ಪುರಾಣಸ್ಯಾಭವತ್ತದಾ ।
ಕಾಲೇನಾಗ್ರಹಣಂ ದೃಷ್ಟ್ವಾ ಪುರಾಣಸ್ಯ ತದಾ ವಿಭುಃ ॥ ೪೯ ॥

ವ್ಯಾಸರೂಪಸ್ತದಾ ಬ್ರಹ್ಮಾ ಸಂಗ್ರಹಾರ್ಥಂ ಯುಗೇ ಯುಗೇ ।
ಚತುರ್ಲಕ್ಷಪ್ರಮಾಣೇನ ದ್ವಾಪರೇ ದ್ವಾಪರೇ ವಿಭುಃ ॥ ೫೦ ॥

ತದಾಷ್ಟಾದಶಧಾ ಕೃತ್ವಾ ಭೂರ್ಲೋಕೇಽಸ್ಮಿನ್ಪ್ರಕಾಶತೇ ।
ಅದ್ಯಾಪಿ ದೇವಲೋಕೇಷು ಶತಕೋಟಿಪ್ರವಿಸ್ತರಂ ॥ ೫೧ ॥

---

೪೭. ವೇದಗಳು, ವೇದಾಂಗಗಳು, ಪುರಾಣಗಳು ಇವುಗಳನ್ನು ಮೀನಿನ ಅವತಾರದಿಂದ ಕಲ್ಪದ ಆದಿಯಲ್ಲಿ ಸಮುದ್ರದಿಂದ ಆ ವಿಷ್ಣುವೇ ತಂದನು.

೪೮. ಆ ವಿಷ್ಣುವು ಸಮುದ್ರದಲ್ಲಿಯೇ ಇದ್ದುಕೊಂಡು ಚತುರ್ಮುಖ ಬ್ರಹ್ಮನಿಗೆ ವೇದಗಳೆಲ್ಲವನ್ನೂ ಹೇಳಿದನು. ಆ ಬ್ರಹ್ಮನು ಋಷಿಗಳಿಗೆಲ್ಲವನ್ನೂ ಹೇಳಿದನು.

೪೯. ಕಾಲವು ಕಳೆದಂತೆಲ್ಲಾ ವೇದವು ತಿಳಿಯಲಸಾಧ್ಯವಾಗಲು, ಅವನ್ನು ಸ್ವಾಮಿಯು ಪುರಾಣರೂಪದಿಂದ ಹೇಳಿದನು. ಆಗ ಆ ಪುರಾಣದಲ್ಲಿ ಎಲ್ಲರಿಗೂ ಆಸಕ್ತಿಯುಂಟಾಗಿ ಧರ್ಮಗಳು ಸುಲಭವಾಗಿ ತಿಳಿಯುತ್ತ ಬಂದುವು ಆ ಬ್ರಹ್ಮನೇ ವ್ಯಾಸನ ರೂಪದಿಂದ ಪ್ರತಿಯುಗದಲ್ಲಿಯೂ ಆ ಪುರಾಣಗಳನ್ನು ಸಂಗ್ರಹಿಸುತ್ತಾನೆ.

೫೦. ದ್ವಾಪರಯುಗವು ಬಂದಾಗಲೆಲ್ಲಾ ನಾಲ್ಕು ಲಕ್ಷ ಗ್ರಂಥ ಪ್ರಮಾಣವುಳ್ಳದ್ದಾಗಿ ಆ ಪುರಾಣವಿರುತ್ತದೆ.

೫೧. ಆ ನಾಲ್ಕು ಲಕ್ಷ ಗ್ರಂಥಗಳನ್ನು ಹದಿನೆಂಟು ಭಾಗವಾಗಿ ಮಾಡಿ ಭೂಲೋಕದಲ್ಲಿ ಪ್ರಕಾಶಪಡಿಸಿದ್ದಾನೆ. ಈ ಪುರಾಣವು ದೇವಲೋಕದಲ್ಲಿ ನೂರು ಕೋಟಿ ಗ್ರಂಥಗಳುಳ್ಳದ್ದಾಗಿದೆ.

ಚತುರ್ಲಕ್ಷಪ್ರಮಾಣೇನ ಭೂಲೋಕೇಽತ್ರ ನಿವೇಶಿತಂ ।
ಬ್ರಹ್ಮಣಾಭಿಹಿತಂ ಪೂರ್ವಂ ಯಾವನ್ಮಾತ್ರಂ ಮರೀಚಯೇ ॥ ೫೨ ॥

ಏತದೇವ ಚ ವೈ ಬ್ರಹ್ಮಾ ಪಾದ್ಮಂ ಲೋಕೇ ಜಗಾದ ವೈ ।
ಸರ್ವಭೂತಾಶ್ರಯಂ ತಚ್ಚ ಪಾದ್ಮಮಿತ್ಯುಚ್ಯತೇ ಬುಧೈಃ ॥ ೫೩ ॥

ಪಾದ್ಮಂ ತತ್ಪಂಚ ಪಂಚಾಶತ್ಸಹಸ್ರಾಣೀಹ ಪಠ್ಯತೇ ।
ಪಂಚಭಿಃ ಪರ್ವಭಿಃ ಪ್ರೋಕ್ತಂ ಸಂಕ್ಷೇಪಾದ್ವ್ಯಾಸಕಾರಣಾತ್ ॥ ೫೪ ॥

ಪೌಷ್ಕರಂ ಪ್ರಥಮಂ ಪರ್ವ ಯತ್ರೋತ್ಪನ್ನಸ್ಸ್ವಯಂ ವಿರಾಟ್ ।
ದ್ವಿತೀಯಂ ತೀರ್ಥಪರ್ವ ಸ್ಯಾತ್ಸರ್ವಗ್ರಹಗಣಾಶ್ರಯಂ ॥ ೫೫ ॥

ತೃತೀಯಪರ್ವಗ್ರಹಣೇ ರಾಜಾನೋ ಭೂರಿದಕ್ಷಿಣಾಃ ।
ವಂಶಾನುಚರಿತಂ ಚೈವ ಚತುರ್ಥೇ ಪರಿಕೀರ್ತಿತಂ ॥ ೫೬ ॥

ಪಂಚಮಂ ಮೋಕ್ಷತತ್ತ್ವಂ ಚ ಸರ್ವಜ್ಞತ್ತ್ವಂ ನಿಗದ್ಯತೇ ।
ಪೌಷ್ಕರೇ ನವಧಾ ಸೃಷ್ಟಿಃ ಸರ್ವೇಷಾಂ ಬ್ರಹ್ಮಕಾರಿಕಾ ॥ ೫೭ ॥

---

೫೨. ಈ ಭೂಲೋಕದಲ್ಲಿ ನಾಲ್ಕು ಲಕ್ಷ ಪ್ರಮಾಣದ ಗ್ರಂಥವನ್ನು ಪ್ರಚಾರ ಮಾಡಿದ್ದಾನೆ. ಆ ನಾಲ್ಕು ಲಕ್ಷವನ್ನು ಬ್ರಹ್ಮನು ಮರೀಚಿಋಷಿಗೆ ಉಪದೇಶಿಸಿದನು.

೫೩. ಈ ಪಾದ್ಮವನ್ನೂ ಬ್ರಹ್ಮನೇ ಹೇಳಿದನು. ಈ ಪಾದ್ಮಪುರಾಣವು ಎಲ್ಲಾ ಪ್ರಾಣಿಗಳಿಗೂ ಆಶ್ರಯವಾದುದು ಎಂದು ಹೇಳುತ್ತಾರೆ.

೫೪. ಈ ಪಾದ್ಮಪುರಾಣವು ಐವತ್ತೈದು ಸಾವಿರ ಗ್ರಂಥಗಳನ್ನೊಳಗೊಂಡಿದೆ. ಅವನ್ನು ಸಂಕ್ಷೇಪಿಸಿ ಬಿಡಿಸಿ ಬಿಡಿಸಿ ಐದು ಭಾಗಗಳನ್ನಾಗಿ ಭಾಗಿಸಿದ್ದಾರೆ.

೫೫-೫೬. ಅವುಗಳಲ್ಲಿ ಮೊದಲನೆಯದು ಪೌಷ್ಕರಪರ್ವವು. ಅದರಲ್ಲಿ ವಿರಾಟ್ಸ್ವರೂಪನಾದ ಭಗವಂತನ ಉತ್ಪತ್ತಿಯನ್ನು ಹೇಳುತ್ತಾನೆ. ಎರಡನೆಯದು ತೀರ್ಥಪರ್ವವು. ಅದರಲ್ಲಿ ಗ್ರಹಗಳ ವಿಷಯವನ್ನು ಹೇಳಿದೆ. ಮೂರನೆಯ ಪರ್ವದಲ್ಲಿ ಸಮರ್ಥರಾದ ರಾಜರುಗಳ ವಿಷಯವನ್ನು ಹೇಳಿದ್ದಾನೆ. ನಾಲ್ಕನೆಯ ಪರ್ವದಲ್ಲಿ ವಂಶ ಚರಿತ್ರೆ ಅವಕ್ಕೆ ಸಂಬಂಧಪಟ್ಟುದನ್ನೆಲ್ಲಾ ಹೇಳಿದ್ದಾನೆ. ಐದನೆಯ ಪರ್ವದಲ್ಲಿ ಮೋಕ್ಷಕ್ಕೆ ಬೇಕಾದ ತತ್ವಜ್ಞಾನದ ವಿಷಯಗಳನ್ನು ಹೇಳಿದೆ.

೫೭. ಪೌಷ್ಕರ ಪರ್ವದಲ್ಲಿ ಬ್ರಹ್ಮನು ಮಾಡಿದ ಒಂಭತ್ತು ಬಗೆಯ ಸೃಷ್ಟಿಗಳನ್ನೂ ವರ್ಣಿಸುತ್ತಾನೆ. ಮತ್ತು ದೇವತೆಗಳು, ಮುನಿಗಳು, ಪಿತೃಗಳು ಇವರುಗಳ ಸೃಷ್ಟಿಯನ್ನೂ ಹೇಳಿದೆ,

ದೇವತಾನಾಂ ಮುನೀನಾಂ ಚ ಪಿತೃವರ್ಗಸ್ತಥಾಪರಃ ।
ದ್ವಿತೀಯೇ ಪರ್ವತಾನಾಂ ಚ ದ್ವೀಪಾಸ್ಸಪ್ತ ಚ ಸಾಗರಾಃ ॥ ೫೮ ॥

ತೃತೀಯೇ ರುದ್ರಸರ್ಗಸ್ತು ದಕ್ಷಶಾಪಸ್ತಥೈವ ಚ ।
ಚತುರ್ಥೇ ಸಂಭವೋ ರಾಜ್ಞಾಂ ಸರ್ವವಂಶಾನುಕೀರ್ತನಂ ॥೫೯ ॥

ಅಪವರ್ಗಸ್ಯ ಸಂಸ್ಥಾನಂ ಮೋಕ್ಷಶಾಸ್ತ್ರಾನುಕೀರ್ತನಂ ।
ಸರ್ವಮೇತತ್ಪುರಾಣೇಽಸ್ಮಿನ್ಕಥಯಿಷ್ಯಾಮಿ ವೋ ದ್ವಿಜಾಃ ॥ ೬೦ ॥

ಇದಂ ಪವಿತ್ರಂ ಯಶಸೋ ನಿಧಾನ-
ಮಿದಂ ಪಿತೄಣಾಮತಿವಲ್ಲಭಂ ಸ್ಯಾತ್ ।
ಇದಂ ಚ ದೇವಸ್ಯ ಸುಖಾಯ ನಿತ್ಯ-
ಮಿದಂ ಮಹಾಪಾತಕಭಿಚ್ಚ ಪುಂಸಾಂ ॥ ೬೧ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಂಚಮೇ ಕ್ರಿಯಾಖಂಡಾಪರ
ನಾಮಧೇಯೇ ಸೃಷ್ಟಿಖಂಡೇ ಪುರಾಣಾವತಾರೇ
ಪ್ರಥಮೋಽಧ್ಯಾಯಃ.

---

೫೮. ಎರಡನೆಯ ಪರ್ವದಲ್ಲಿ ಪರ್ವತಗಳು, ದ್ವೀಪಗಳು, ಸಪ್ತ ಸಾಗರಗಳು ಇವುಗಳ ವಿಷಯವನ್ನು ವರ್ಣಿಸಿದೆ.

೫೯-೬೦ ಮೂರನೆಯದರಲ್ಲಿ ರುದ್ರರ ಸೃಷ್ಟಿ, ದಕ್ಷನ ಶಾಪವನ್ನು ಹೇಳಿದ್ದಾನೆ. ನಾಲ್ಕನೆಯದರಲ್ಲಿ ರಾಜರುಗಳ ಉತ್ಪತ್ತಿ, ವಂಶಗಳ ವಿಷಯವನ್ನು ವರ್ಣಿಸಿದ್ದಾನೆ. ಐದನೆಯದರಲ್ಲಿ ಮೋಕ್ಷವಿರುವ ಸ್ಥಳ, ಅದನ್ನು ಹೊಂದುವ ರೀತಿ, ಇವನ್ನು ಹೇಳಿದೆ. ಹೀಗೆ ಈ ಪುರಾಣದಲ್ಲಿ, ಎಲೈ ಬ್ರಾಹ್ಮಣರೇ, ನಿಮಗೆ ಎಲ್ಲವನ್ನೂ ಹೇಳುತ್ತೇನೆ.

೬೧. ಇದು ಪವಿತ್ರವಾದುದು. ಯಶಸ್ಸಿಗೆ ಕಾರಣವಾದುದು. ಪಿತೃಗಳಿಗೆ ಬಹು ಪ್ರಿಯವಾದುದು. ಇದು ಸ್ವಾಮಿಗೆ ಹಿತವನ್ನುಂಟುಮಾಡುತ್ತದೆ. ಇದೇನೆ ಮಹಾಪಾಪಗಳನ್ನು ನಾಶಮಾಡುತ್ತಿದೆ.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದಲ್ಲಿ ಐದನೆಯ ಖಂಡವಾದ ಕ್ರಿಯಾಖಂಡವೆಂದು ಮತ್ತೊಂದು ಹೆಸರುಳ್ಳ ಸೃಷ್ಟಿಖಂಡದಲ್ಲಿ ಪುರಾಣ ಪ್ರಸ್ತಾಪನವೆಂಬ ಮೊದಲನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## ದ್ವಿತೀಯೋಽಧ್ಯಾಯಃ

॥ ಸೂತ ಉವಾಚ ॥

ನಮಸ್ಯೇ ಸರ್ವಭೂತಾನಾಂ ವಿಶ್ವಸ್ಯ ಜಗತಃ ಪತಿಂ ।
ಯ ಇಮಂ ಪಶ್ಯತೇ ಭಾವಂ ಸೃಷ್ಟಿರೂಪಪ್ರಧಾನವಿತ್ ॥ ೧ ॥

ಲೋಕಕೃಲ್ಲೋಕತತ್ತ್ವಜ್ಞೋ ಯೋಗಮಾಸ್ಥಾಯ ಯೋಗವಿತ್ ।
ಅಸೃಜತ್ಸರ್ವಭೂತಾನಿ ಸ್ಥಾವರಾಣಿ ಚರಾಣಿ ಚ ॥ ೨ ॥

ತಮಜಂ ವಿಶ್ವಕರ್ಮಾಣಂ ಚಿತ್ಪತಿಂ ಲೋಕಸಾಕ್ಷಿಣಂ ।
ಪುರಾಣಾಖ್ಯಾನಜಿಜ್ಞಾಸುರ್ವ್ರಜಾಮಿ ಶರಣಂ ವಿಭುಂ ॥ ೩ ॥

## ಎರಡನೆಯ ಅಧ್ಯಾಯವು.

೧. ಸೂತನು ಹೇಳಿದನು :—ಪ್ರಪಂಚಗಳನ್ನು ಸೃಷ್ಟಿಸಿ, ಅದರ ರೀತಿಗಳನ್ನು ನೋಡುತ್ತಿರುವ, ಎಲ್ಲಾ ಪ್ರಾಣಿಗಳಿಗೂ ಪ್ರಪಂಚಕ್ಕೂ ಒಡೆಯನಾದ ಸ್ವಾಮಿಯನ್ನು ನಮಸ್ಕರಿಸುತ್ತೇನೆ.

೨. ಲೋಕವನ್ನು ಸೃಷ್ಟಿಮಾಡಿದ, ಲೋಕದ ತತ್ವಗಳನ್ನುಬಲ್ಲ, ಯೋಗವನು ಬಲ್ಲ ಆ ಸ್ವಾಮಿಯು ಯೋಗವನ್ನು ಹೊಂದಿ ಚರಾಚರಗಳಾದ ಎಲ್ಲಾ ಪ್ರಾಣಿಗಳನ್ನೂ ಸೃಷ್ಟಿಸಿದನು. ಅಂತಹವನನ್ನು ನಮಸ್ಕರಿಸುತ್ತೇನೆ.

೩. ಉತ್ಪತ್ತಿರಹಿತನಾದ, ಪ್ರಪಂಚಕ್ಕೆ ಸೃಷ್ಟಿಕರ್ತನಾದ, ಜ್ಞಾನಕ್ಕೆ ಒಡೆಯನಾದ, ಲೋಕಸಾಕ್ಷಿಯಾದ ಆ ವಿಭುವನ್ನು, ಪುರಾಣಗಳ ಕಥೆಗಳನ್ನು ತಿಳಿಯಲಿಚ್ಛಿಸಿ ಶರಣುಹೊಂದುತ್ತೇನೆ.

ಬ್ರಹ್ಮವಿಷ್ಣುಗಿರೀಶೇಭ್ಯೋ ನಮಃ ಕೃತ್ವಾ ಸಮಾಹಿತಃ ।
ಇಂದ್ರಾಯ ಲೋಕಪಾಲೇಭ್ಯಃ ಸವಿತ್ರೇ ಚ ಸಮಾಧಿನಾ ॥ ೪ ॥

ಮುನೀನಾಂ ಚ ವರಿಷ್ಠಾಯ ವಸಿಷ್ಠಾಯ ಮಹಾತ್ಮನೇ ।
ತಸ್ಮೈ ಭಗವತೇ ನತ್ವಾ ವೇದವ್ಯಾಸಾಯ ವೇಧಸೇ ॥ ೫ ॥

ಪುರುಷಾಯ ಪುರಾಣಾಯ ಭೃಗುವಾಕ್ಯಾನುವರ್ತಿನೇ ।
ತಸ್ಮಾದಹಮುಪಾಶ್ರಿತ್ಯ ಪುರಾಣಂ ಬ್ರಹ್ಮವಾದಿನಃ ॥ ೬ ॥

ಸರ್ವಜ್ಞಾತ್ಸರ್ವಲೋಕೇಷು ಪೂಜಿತಾದ್ದೀಪ್ತತೇಜಸಃ ।
ಅವ್ಯಕ್ತಂ ಕಾರಣಂ ಯತ್ತನ್ನಿತ್ಯಂ ಸದಸದಾತ್ಮಕಂ ॥ ೭ ॥

ಮಹದಾದಿವಿಶೇಷಾಂತಂ ಸೃಜತೀತಿ ವಿನಿಶ್ಚಯಃ ।
ಅಂಡೇ ಹಿರಣ್ಮಯೇ ಪೂರ್ವಂ ಬ್ರಹ್ಮಣಸ್ಸೃತಿಮುತ್ತಮಾಂ ॥ ೮ ॥

---

೪. ಬ್ರಹ್ಮ, ವಿಷ್ಣು, ಶಿವರಿಗೂ, ಇಂದ್ರನೇ ಮುಂತಾದ ಲೋಕಪಾಲಕರಿಗೂ, ಸೂರ್ಯನಿಗೂ ಒಂದೇಮನಸ್ಸಿನಿಂದ ನಮಸ್ಕರಿಸುತ್ತೇನೆ.

೫. ಮುನಿಗಳಲ್ಲಿ ಮೊದಲನೆಯವನಾದ ವಸಿಷ್ಠನಿಗೂ, ಬ್ರಹ್ಮರೂಪನಾದ ವೇದವ್ಯಾಸನಿಗೂ ನಮಸ್ಕರಿಸುತ್ತೇನೆ

೬. ಪುರಾಣಪುರುಷನೂ, ಭೃಗುವಿನ ಮಾತಿನಂತೆ ನಡೆವವನೂ ಆದ ವೇದ ವ್ಯಾಸನನ್ನು ನಮಸ್ಕರಿಸುತ್ತೇನೆ. ನಾನು ಯಾವ ಬ್ರಹ್ಮವಾದಿಯಿಂದ ಈ ಪುರಾಣ ಗಳನ್ನು ಕೇಳಿದೆನೋ ಅವನಿಗೆ ನಮಸ್ಕಾರವು.

೭. ಸರ್ವಜ್ಞನೂ, ಎಲ್ಲಾ ಜನಗಳಿಂದಲೂ ಪೂಜಿತನೂ ಆದ, ತೇಜಸ್ವಿಯಾದ ಆ ಸ್ವಾಮಿಯಾದ ವ್ಯಾಸನನ್ನು ನಮಸ್ಕರಿಸುತ್ತೇನೆ. ಮುಖ್ಯಕಾರಣವಲ್ಲದ, ನಿತ್ಯವಾದ. ಸತ್ಯಮಾಯಾರೂಪನಾದ, ಮಹತ್ತಿನಿಂದ ಮೊದಲುಗೊಂಡು ವಿಶೇಷವೇ ಕೊನೆಯಾದ ಪದಾರ್ಥಗಳನ್ನು ಆ ಸ್ವಾಮಿಯು ಸೃಷ್ಟಿಸುತ್ತಾನೆಂಬುದು ನಿಶ್ಚಯವು.

೮. ಆ ಪ್ರಪಂಚಗಳನ್ನು ಸುವರ್ಣವಿಕಾರವಾದ ಬ್ರಹ್ಮಾಂಡದಲ್ಲಿ (ಮೊಟ್ಟೆ) ಸುವ್ಯವಸ್ಥಿತವಾದ ಸೃಷ್ಟಿಯನ್ನು ಮಾಡಿದನು.

ಅಂಡಸ್ಯಾವರಣಂ ಚಾಭ್ಭಿರಪಾಮಪಿ ಚ ತೇಜಸಾ ।
ವಾಯುನಾ ತಸ್ಯ ವಾಯೋಃ ಖಂ ತದ್ಭೂತಾದಿಭಿರಾವೃತಂ ॥ ೯ ॥

ಭೂತಾದಿರ್ಮಹತಾ ವಾಪಿ ಅವ್ಯಕ್ತೇನಾವೃತೋ ಮಹಾನ್ ।
ಪ್ರಾದುರ್ಭಾವಶ್ಚ ಲೋಕಾನಾಮಂಡಮೇವೋಪವರ್ಣಿತಂ ॥ ೧೦ ॥

ನದೀನಾಂ ಪರ್ವತಾನಾಂ ಚ ಪ್ರಾದುರ್ಭಾವೋಽನುವರ್ಣ್ಯತೇ ।
ಮನ್ವಂತರಾಣಾಂ ಸಂಕ್ಷೇಪಾತ್ಕಲ್ಪಾನಾಂ ಚೋಪವರ್ಣನಂ ॥ ೧೧ ॥

ಬ್ರಹ್ಮಪದ್ಮಸ್ಯ ಯೋ ಬ್ರಹ್ಮಾ ಪ್ರಜಾಸರ್ಗೋಪವರ್ಣನಂ ।
ಕಲ್ಪಾನಾಂ ಸಂಚರಶ್ಚೈವ ಜಗತಸ್ಸ್ಥಾಪನಂ ತಥಾ ॥ ೧೨ ॥

ಶಯನಂ ಚ ಹರೇರಪ್ಸು ಪೃಥಿವ್ಯುದ್ಧರಣಂ ಪುನಃ ।
ದಶಧಾ ಜನ್ಮಸಂಚಾರೋ ಭೃಗುಶಾಪೇನ ಕೇಶವೇ ॥ ೧೩ ॥

---

೯. ಆ ಬ್ರಹ್ಮಾಂಡವನ್ನು ನೀರಿನಿಂದ ಮುಚ್ಚಿದನು. ಆ ನೀರಿನಮೇಲೆ ಸುತ್ತಲೂ ತೇಜಸ್ಸನ್ನು ನಿರ್ಮಿಸಿ ಹೊದಿಸಿದನು. ಆ ತೇಜಸ್ಸಿನಮೇಲೆ ಗಾಳಿಯನ್ನು ಮುಚ್ಚಿದನು. ಆ ಗಾಳಿಯಮೇಲೆ ಆಕಾಶವನ್ನು ನಿರ್ಮಿಸಿದನು. ಅದನ್ನು ಭೂತಗಳಿಂದ ಮುಚ್ಚಿದನು.

೧೦. ಆ ಭೂತಾದಿಗಳನ್ನು ಮಹತ್ತಿನಿಂದಲೂ, ಆ ಮಹತ್ತನ್ನು ಅವ್ಯಕ್ತದಿಂದಲೂ ಮುಚ್ಚಿದ್ದಾನೆ. ಲೋಕಗಳು ಹುಟ್ಟಿ ಪ್ರಕಾಶಿಸುವುದು ಅಂಡದಲ್ಲಿಯೇ ಎಂದು ಹೇಳಿದೆ.

೧೧–೧೨. ನದೀಪರ್ವತಾದಿಗಳ ಉತ್ಪತ್ತಿ, ಮನ್ವಂತರ ಮತ್ತು ಕಲ್ಪಗಳ ಸಂಕ್ಷೇಪವರ್ಣನೆಯೂ ಮತ್ತು ಬ್ರಹ್ಮಪದ್ಮಕ್ಕೆ ಯಾವನು ಬ್ರಹ್ಮನೋ ಅವನ ವರ್ಣನೆಯೂ, ಪ್ರಜೆಗಳ ಸೃಷ್ಟಿಕ್ರಮವರ್ಣನೆಯೂ, ಕಲ್ಪಗಳ ವ್ಯತ್ಯಾಸವೂ, ಜಗತ್ತಿನ ಸೃಷ್ಟಿಸ್ಥಿತಿಗಳೂ ಇಲ್ಲಿ ಹೇಳಲ್ಪಟ್ಟಿವೆ.

೧೩. ಹರಿಯು ಕ್ಷೀರಸಮುದ್ರದಲ್ಲಿ ಮಲಗಿರುವುದೂ, ಆತನು ಭೂಮಿಯನ್ನು ಎತ್ತಿದುದೂ, ಭೃಗುವಿನ ಶಾಪದಿಂದ ಆ ಹರಿಯು ದಶಾವತಾರವನ್ನು ಮಾಡಿದುದೂ ವರ್ಣಿತವಾಗಿವೆ.

ಸನ್ನಿವೇಶೋ ಯುಗಾದೀನಾಂ ಸರ್ವಾಶ್ರಯವಿಭಾಜನಂ ।
ಸ್ವರ್ಗಸ್ಥಾನವಿಭಾಗಶ್ಚ ಮರ್ತ್ಯಾನಾಂ ಸ್ವರ್ಗಚಾರಿಣಾಂ ॥ ೧೪ ॥

ಪಶೂನಾಂ ಪಕ್ಷಿಣಾಂ ಚೈವ ಸಂಭವಃ ಪರಿಕೀರ್ತಿತಃ ।
ತಥಾ ನಿರ್ವಚನಂ ಕಲ್ಪಂ ಸ್ವಾಧ್ಯಾಯಸ್ಯ ಪರಿಗ್ರಹಂ ॥ ೧೫ ॥

ಪ್ರತಿಸರ್ಗಾಃ ಪುನಃ ಪ್ರೋಕ್ತಾ ಬ್ರಹ್ಮಣಾ ಬುದ್ಧಿಪೂರ್ವಕಂ ।
ತ್ರಯೋಽನ್ಯೇ ಬುದ್ಧಿಪೂರ್ವಾಸ್ತೇ ತಥಾ ಲೋಕಾನಕಲ್ಪಯತ್ ॥ ೧೬ ॥

ಬ್ರಹ್ಮಣೋ ವದನೇಭ್ಯಶ್ಚ ಭೃಗ್ವಾದೀನಾಂ ಸಮುದ್ಭವಃ ।
ಕಲ್ಪಯೋರಂತರಂ ಪ್ರೋಕ್ತಂ ಪ್ರತಿಸಂಧಿಶ್ಚ ಸರ್ಗಯೋಃ ॥ ೧೭ ॥

ಭೃಗ್ವಾದೀನಾಮೃಷೀಣಾಂ ಚ ಪ್ರಜಾಸರ್ಗೋಪವರ್ಣನಂ ।
ವಸಿಷ್ಠಸ್ಯ ಚ ಬ್ರಹ್ಮರ್ಷೇರ್ಬ್ರಹ್ಮತ್ವಂ ಪರಿಕೀರ್ತಿತಂ ॥ ೧೮ ॥

---

೧೪-೧೫ ಯುಗವೇ ಮುಂತಾದುವುಗಳನ್ನು ಕಲ್ಪಿಸಿರುವಿಕೆ, ಬ್ರಹ್ಮಚಾರಿ, ಗೃಹಸ್ಥ ವಾನಪ್ರಸ್ಥ, ಸನ್ಯಾಸಿಗಳ ಆಶ್ರಮದ ವಿಭಾಗಗಳು, ಮನುಷ್ಯರು, ದೇವತೆಗಳು ಇವರೇ ಮುಂತಾದವರಿಗೆ ಸ್ವರ್ಗಾದಿ ಸ್ಥಾನವಿಭಾಗಗಳು, ಪಶುಗಳು, ಪಕ್ಷಿಗಳು, ಇವುಗಳ ಉತ್ಪತ್ತಿ ಇವನ್ನು ವರ್ಣಿಸಿದೆ. ಮತ್ತು ಕಲ್ಪಗಳ ವಿವರಣೆ, ಅಧ್ಯಯನದ ಸ್ವೀಕಾರಗಳನ್ನು ವರ್ಣಿಸಿದೆ.

೧೬. ಅನಂತರ ಬ್ರಹ್ಮನ ಪ್ರತಿಸೃಷ್ಟಿಯನ್ನೂ ತಿಳಿದು ಹೇಳಿದ್ದಾನೆ. ಕಲ್ಪ, ಅಧ್ಯಯನ, ಪ್ರತಿಸರ್ಗ ಈ ಮೂರನ್ನೂ ಬುದ್ಧಿಪೂರ್ವಕವಾಗಿಯೇ ಹೇಳಿದ್ದಾನೆ. ಹೀಗೆ ಲೋಕಗಳನ್ನೂ ಸೃಷ್ಟಿಮಾಡಿದನು.

೧೭. ಬ್ರಹ್ಮನ ಮುಖದಿಂದ ಭೃಗು ಮುಂತಾದ ಋಷಿಗಳು ಹುಟ್ಟಿದುದನ್ನೂ. ಕಲ್ಪಗಳ ವ್ಯತ್ಯಾಸವನ್ನೂ, ಅವಾಂತರ ಸೃಷ್ಟಿಯ ಕ್ರಮವನ್ನೂ ಹೇಳಿದ್ದಾನೆ.

೧೮. ಭೃಗುವೇ ಮುಂತಾದ ಋಷಿಗಳು ಪ್ರಜೆಗಳನ್ನು ಸೃಷ್ಟಿಸಿದುದೂ. ವಸಿಷ್ಠಋಷಿಯು ಬ್ರಾಹ್ಮಣಿಕೆಯನ್ನು ಹೊಂದಿದುದೂ ಹೇಳಲ್ಪಟ್ಟಿದೆ.

ಸ್ವಾಯಂಭುವಸ್ಯ ಚ ಮನೋರ್ವಂಶಸ್ಯಾಪ್ಯನುಕೀರ್ತನಂ ।
ಉಕ್ತೋ ನಾಭೇರತಿಸರ್ಗಶ್ಚ ರಜಸಶ್ಚ ಮಹಾತ್ಮನಃ ॥ ೧೯ ॥

ದ್ವೀಪಾನಾಂ ಚ ಸಮುದ್ರಾಣಾಂ ಪರ್ವತಾನಾಂ ಚ ಕೀರ್ತನಂ ।
ದ್ವೀಪಭೇದಸಮುದ್ರಾಣಾಮಂತರ್ಭಾವಶ್ಚ ಸಪ್ತಸು ॥ ೨೦ ॥

ಕೀರ್ತ್ಯನ್ತೇ ಯೇ ಜನಾಗ್ರೇಣ ಯೇ ಚ ತತ್ರ ನಿವಾಸಿನಃ ।
ಭಾರತಾದೀನಿ ವರ್ಷಾಣಿ ನದೀಭಿಃ ಪರ್ವತೈಸ್ಸಹ ॥ ೨೧ ॥

ಜಂಬೂದ್ವೀಪಾದಯೋ ದ್ವೀಪಾಃ ಸಮುದ್ರೈಸ್ಸಪ್ತಭಿರ್ವೃತಾಃ ।
ಅಂಡಸ್ಯಾನ್ತಸ್ತ್ವಮೀ ಲೋಕಾಃ ಸಪ್ತದ್ವೀಪಾ ಚ ಮೇದಿನೀ ॥ ೨೨ ॥

ಸೂರ್ಯಾಚಂದ್ರಮಸೋಶ್ಚಾರೋ ಗ್ರಹಾಣಾಂ ಜ್ಯೋತಿಷಾಂ ತಥಾ ।
ಕೀರ್ತ್ಯತೇ ಧ್ರುವಸಾಮರ್ಥ್ಯಾತ್ಪ್ರಜಾನಾಂ ಚ ಶುಭಾಶುಭಂ ॥ ೨೩ ॥

---

೧೯. ಸ್ವಯಂಭೂಮನುವಿನ ವಂಶವನ್ನು ವರ್ಣಿಸಿದ್ದಾನೆ. ನಾಭಿಯು ಮತ್ತು ಮಹಾತ್ಮನಾದ ರಜಸ್ಸ್ವಾಯಂಭುವನ ಸೃಷ್ಟಿಯ ವಿಷಯವನ್ನೂ ಹೇಳಿದೆ.

೨೦. ದ್ವೀಪಗಳು, ಸಮುದ್ರಗಳು, ಪರ್ವತಗಳು, ಇವುಗಳ ವಿಷಯವನ್ನೂ. ಆ ದ್ವೀಪಗಳ ಭೇದ ಮತ್ತು ಸಮುದ್ರಗಳ ಭೇದಗಳನ್ನೂ ಹೇಳಿದ್ದಾನೆ ಮತ್ತು ಆ ದ್ವೀಪ ಸಮುದ್ರಗಳು ಅನೇಕವಾಗಿದ್ದರೂ ಅವುಗಳನ್ನು ಏಳು ಎಂದೇ ಸಂಗ್ರಹಿಸಿದ್ದಾನೆ.

೨೧. ಜನಗಳು ಯಾವುವನ್ನು ಹೊಗಳುತ್ತಾರೆಯೋ ಅಂತಹ ಭಾರತವೇ ಮುಂತಾದ ವರ್ಷಗಳನ್ನು (ದೇಶ) ನದಿ ಪರ್ವತಗಳೊಡನೆ ವರ್ಣಿಸಿದ್ದಾನೆ.

೨೨. ಜಂಬೂದ್ವೀಪವೇ ಮುಂತಾದ ದ್ವೀಪಗಳು ಏಳು ಸಮುದ್ರಗಳಿಂದ ಸುತ್ತುವರಿಯಲ್ಪಟ್ಟಿವೆ. ಈ ಲೋಕಗಳು ಆ ಬ್ರಹ್ಮಾಂಡದೊಳಗಿರುವುವು. ಈ ಭೂಮಿಯಲ್ಲಿ ಏಳು ದ್ವೀಪಗಳಿವೆ.

೨೩. ಸೂರ್ಯ ಚಂದ್ರ ಮುಂತಾದ ಗ್ರಹಗಳೂ, ಜ್ಯೋತೀರೂಪವಾದ ನಕ್ಷತ್ರಗಳು ಇವು ಧ್ರುವನಕ್ಷತ್ರದ ಬಲದಿಂದ ಸುತ್ತುತ್ತಿರುವುದನ್ನೂ ಹೇಳಿದೆ. ಇವರಿಂದ ಪ್ರಜೆಗಳಿಗೆ ಉಂಟಾಗುವ ಶುಭಾಶುಭಗಳನ್ನೂ ಹೇಳಿದೆ.

**ಬ್ರಹ್ಮಣಾ ನಿರ್ಮಿತಸ್ಸೌರಃ ಸ್ಯಂದನೋಽರ್ಥವಶಾತ್ಸ್ವಯಂ ।**
**ಕಲ್ಪಿತೋ ಭಗವಾಂಸ್ತೇನ ಪ್ರಸರ್ಪತಿ ದಿವಾಕರಃ ॥ ೨೪ ॥**

**ಸೂರ್ಯಾದೀನಾಂ ಸ್ಯಂದನಾನಾಂ ಧ್ರುವಾದೇವ ಪ್ರವರ್ತನಂ ।**
**ಕೀರ್ತ್ಯತೇ ಶಿಶುಮಾರಶ್ಚ ಯಸ್ಯ ಪುಚ್ಛೇ ಧ್ರುವಃ ಸ್ಥಿತಃ ॥ ೨೫ ॥**

**ಸಂಭವಾಂತೇ ಚ ಸಂಹಾರಃ ಸಂಹಾರಾಂತೇ ಚ ಸಂಭವಃ ।**
**ದೇವತಾನಾಮೃಷೀಣಾಂ ಚ ಮನೋಃ ಪಿತೃಗಣಸ್ಯ ಚ ॥ ೨೬ ॥**

**ನ ಶಕ್ಯಂ ವಿಸ್ತಾರಾದ್ವಕ್ತುಮಿತ್ಯುಕ್ತಂ ತು ಸಮಾಸತಃ ।**
**ಅತೀತಾನಾಗತಾನಾಂ ವೈ ಸ್ವಯಂ ಸ್ವಾಯಂಭುವೇನ ತು ॥ ೨೭ ॥**

**ಮನ್ವಂತರೇಷು ದೇವಾನಾಂ ಪ್ರಜೇಶಾನಾಂ ಚ ಕೀರ್ತನಂ ।**
**ನೈಮಿತ್ತಿಕಃ ಪ್ರಾಕೃತಿಕಸ್ತಥೈವೋತ್ಪತ್ತಿಕಃ ಸ್ಮೃತಃ ॥ ೨೮ ॥**

---

೨೪. ಬ್ರಹ್ಮನು ಸೂರ್ಯನ ರಥವನ್ನು ವಸ್ತುಗಳಿಗನುಕೂಲವಾಗಿ ತಿರುಗುವ ರೀತಿಯಲ್ಲಿ ನಿರ್ಮಿಸಿದನು. ಅವರಂತೆ ಸೂರ್ಯನು ಅದರಲ್ಲಿ ಕುಳಿತುಕೊಂಡು ತಿರುಗುತ್ತಿರುತ್ತಾನೆ.

೨೫. ಸೂರ್ಯ, ಚಂದ್ರ, ಇವರ ರಥಗಳೂ, ಧ್ರುವನಿಗೆ ಅಧೀನವಾಗಿ ಕೆಳೆಯು ಸ್ಪಟ್ಟು ಸುತ್ತುತ್ತಿವೆ. ಶಿಶುಮಾರನೆಂಬ ದೊಡ್ಡ ಮೀನನ್ನು ವರ್ಣಿಸಿದ್ದಾನೆ. ಅದರ ಬಾಲವಲ್ಲಿಯೇ ಪ್ರಸಿದ್ಧವಾದ ಧ್ರುವನಿರುವುದು.

೨೬. ಹುಟ್ಟಿದಮೇಲೆ ನಾಶ, ನಾಶದಮೇಲೆ ಸೃಷ್ಟಿ ಮತ್ತು ದೇವತೆಗಳು, ಋಷಿಗಳು, ಮನು, ಪಿತೃಗಣಗಳು, ಇವರುಗಳ ಉತ್ಪತ್ತಿಯನ್ನೂ ಹೇಳಿದ್ದಾನೆ.

೨೭. ವಿಸ್ತಾರವಾಗಿ ಹೇಳಲು ಸಾಧ್ಯವಿಲ್ಲ. ಆದ್ದರಿಂದ ಸಂಗ್ರಹವಾಗಿ ಹೇಳಿದ್ದಾನೆ. ಹಿಂದಿನದು ಮುಂದಿನವುಗಳ ವಿಷಯವನ್ನು ಬ್ರಹ್ಮನು ತಾನೇ ಹೇಳಿದ್ದಾನೆ

೨೮. ಮನ್ವಂತರಗಳಲ್ಲಿ ದೇವತೆಗಳ ಮತ್ತು ರಾಜರ ಸ್ಥಿತಿಗಳನ್ನು ಕಾರಣದಿಂದ ಕೂಡಿದುದು ಸ್ವಭಾವವಾದುದು. ಉತ್ಪತ್ತಿಯಿಂದ ಬಂದುದು ಎಂದೂ ವಿವರಿಸಿದ್ದಾನೆ. ಕಾರಣದಿಂದ ಬಂದುದು, ಸ್ವಾಭಾವಿಕವಾದುದು, ಉತ್ಪತ್ತಿಯಾದುದೆಂದು ಮೂರು ವಿಧವಾಗಿ ಪ್ರಾಣಿಗಳ ಸೃಷ್ಟಿಸ್ಥಿತಿನಾಶಗಳನ್ನು ಹೇಳಿದ್ದಾನೆ.

ತ್ರಿವಿಧಃ ಸರ್ವಭೂತಾನಾಂ ಕೀರ್ತ್ಯತೇ ಪ್ರತಿಸಂಚರಃ ।
ಅನಾವೃಷ್ಟಿರ್ಭಾಸ್ಕರಾಚ್ಚ ಘೋರಸ್ಸಂವರ್ತಕಾನಲಃ ॥ ೨೯ ॥

ಮೇಘಾಶ್ಚೈಕಾರ್ಣವಾ ಯೇಷು ತಥಾ ರಾತ್ರಿರ್ಮಹಾತ್ಮನಃ ।
ಸಂಧ್ಯಾಲಕ್ಷಣಮುದ್ದಿಷ್ಟಂ ತಥಾ ಬ್ರಾಹ್ಮಂ ವಿಶೇಷತಃ ॥ ೩೦ ॥

ಭೂತಾನಾಂ ಚಾಪಿ ಲೋಕಾನಾಂ ಸಪ್ತಾನಾಮನುವರ್ಣನಂ ।
ಸಂಕೀರ್ತ್ಯಂತೇ ಮಯಾ ಚಾತ್ರ ಪಾಪಾನಾಂ ರೌರವಾದಯಃ ॥ ೩೧ ॥

ಸರ್ವೇಷಾಮೇವ ಸತ್ತ್ವಾನಾಂ ಪರಿಣಾಮವಿನಿರ್ಣಯಃ ।
ಬ್ರಹ್ಮಣಃ ಪ್ರತಿಸರ್ಗಶ್ಚ ಸರ್ವಸಂಹಾರವರ್ಣನಂ ॥ ೩೨ ॥

ಕಲ್ಪೇ ಕಲ್ಪೇ ಚ ಭೂತಾನಾಂ ಮಹತಾಮಪಿ ಸಂಕ್ಷಯಃ ।
ಸುಸಂಖ್ಯಾಯ ಚ ಬುದ್ಧ್ವಾ ವೈ ಬ್ರಹ್ಮಣಶ್ಚಾಪ್ಯನಿತ್ಯತಾಂ ॥ ೩೩ ॥

ದೌರಾತ್ಮ್ಯಂ ಚೈವ ಭೋಗಾನಾಂ ಸಂಸಾರಸ್ಯ ಚ ಕಷ್ಟತಾಂ ।
ದುರ್ಲಭತ್ವಂ ಚ ಮೋಕ್ಷಸ್ಯ ವೈರಾಗ್ಯಾದ್ದೋಷದರ್ಶನಂ ॥ ೩೪ ॥

---

೨೯-೩೦. ಅನಾವೃಷ್ಟಿ, ಸೂರ್ಯನಿಂದ ತಾಪ, ಪ್ರಳಯಕಾಲದ ಬೆಂಕಿ, ಸಮುದ್ರಗಳೆಲ್ಲವೂ ಒಂದಾಗುವಂತೆ ಮೇಘಗಳು ಮಳೆಸುರಿಯುವುದು, ಸಂಧ್ಯಾಕಾಲದ ಲಕ್ಷಣ, ಬ್ರಾಹ್ಮಮುಹೂರ್ತದ ವಿಷಯ ಇವೆಲ್ಲವನ್ನೂ ವರ್ಣಿಸಿದೆ.

೩೧. ಭೂತಗಳ ವರ್ಣನೆ, ಏಳು ಲೋಕಗಳ ವರ್ಣನೆ, ಪಾಪಗಳ ಮತ್ತು ರೌರವಾದಿ ನರಕಗಳ ವಿಷಯವನ್ನು ನಾನು ಹೇಳುತ್ತೇನೆಂದು ಹೇಳಿದ್ದಾನೆ.

೩೨. ಎಲ್ಲಾ ಪ್ರಾಣಿಗಳಿಗೂ ಕೊನೆಗೆ ಉಂಟಾಗುವ ಸ್ಥಿತಿ, ಬ್ರಹ್ಮನ ಉತ್ಪತ್ತಿಯ ವಿಷಯ, ಎಲ್ಲದರ ನಾಶ ಇವೇ ಮುಂತಾದುವುಗಳನ್ನೂ ಹೇಳಿದ್ದಾನೆ.

೩೩-೩೪. ಪ್ರತಿಯೊಂದು ಕಲ್ಪದಲ್ಲಿಯೂ ಮಹಾಭೂತಗಳೂ ನಾಶವಾಗುತ್ತವೆ ಎಂಬುದನ್ನು ಯೋಚಿಸಿ, ಬ್ರಹ್ಮನೂ ಕೂಡ ಶಾಶ್ವತನಲ್ಲವೆಂಬುದನ್ನು ತಿಳಿದು, ಭೋಗಗಳ ದುಷ್ಟತನವನ್ನು ನೋಡಿ ಸಂಸಾರವು ಕಷ್ಟವೆಂಬುದನ್ನು ಮನನಮಾಡಿಕೊಂಡು ವೈರಾಗ್ಯವನ್ನು ಹೊಂದಿ, ಎಲ್ಲದರಲ್ಲಿಯೂ ದೋಷವನ್ನು ತಿಳಿಯಬೇಕು.

ವ್ಯಕ್ತಾವ್ಯಕ್ತಂ ಪರಿತ್ಯಜ್ಯ ಸತ್ತ್ವಂ ಬ್ರಹ್ಮಣಿ ಸಂಸ್ಥಿತಃ ।
ನಾನಾತ್ವದರ್ಶನಾತ್ಸ್ವಸ್ಥಸ್ತತಸ್ತದಭಿವರ್ತತೇ ॥ ೩೫ ॥

ತತಸ್ತಾಪತ್ರಯಾತೀತೋ ವಿರೂಪಾಕ್ಷೋ ನಿರಂಜನಃ ।
ಆನಂದಂ ಬ್ರಹ್ಮಣಃ ಪ್ರಾಪ್ತೋ ನ ಬಿಭೇತಿ ಕುತಶ್ಚನ ॥ ೩೬ ॥

ಇತಿ ಕೃತ್ಯಸಮುದ್ದೇಶಃ ಪ್ರಮಾಣಸ್ಯೋಪವರ್ಣಿತಃ ।
ಕೀರ್ತ್ಯಂತೇ ಜಗತೋ ಯತ್ರ ಸರ್ಗಪ್ರಳಯವಿಕ್ರಿಯಾಃ ॥ ೩೭ ॥

ಪ್ರವೃತ್ತಿಶ್ಚಾಪಿ ಭೂತಾನಾಂ ನಿವೃತ್ತೀನಾಂ ಫಲಾನಿ ಚ ।
ಪ್ರಾದುರ್ಭಾವೋ ವಸಿಷ್ಠಸ್ಯ ಶಕ್ತೇರ್ಜನ್ಮ ತಥೈವ ಚ ॥ ೩೮ ॥

ಸೌದಾಮಿನ್ಯಾಶ್ಚ ಹಸ್ತಸ್ಯ ವಿಶ್ವಾಮಿತ್ರಕೃತೇನ ಚ ।
ಪರಾಶರಸ್ಯ ಚೋತ್ಪತ್ತಿರದೃಶ್ಯಂತಾಂ ಯಥಾ ವಿಭೋಃ ॥ ೩೯ ॥

---

೩೫. ಇಂದ್ರಿಯಗಳಿಗೆ ಗೋಚರವಾಗುವುದು ಮತ್ತು ಗೋಚರವಾಗದಿದ್ದು ವುಗಳನ್ನೂ ಅನಶ್ವರವೆಂದು ಬಿಟ್ಟು ಬ್ರಹ್ಮಸ್ವರೂಪದಲ್ಲಿರುವ ಶಾಶ್ವತವಾದ ವಿಷಯ ವನ್ನು ನಾನಾ ವಿಷಯಗಳಿಂದ ಸಿದ್ಧಾಂತಪಡಿಸಿಕೊಂಡು, ಸುಖವನ್ನು ತಿಳಿದವನಾಗಿ ಆಮೇಲೆ ಅದನ್ನು ಅನುಸರಿಸಬೇಕು.

೩೬. ಆಧ್ಯಾತ್ಮಿಕ, ಆದಿಭೌತಿಕ, ಅಧಿದೈವಿಕವೆಂಬ ತಾಪತ್ರಯಗಳನ್ನು ಕಳೆದು ಕೊಂಡು ಯಾವುದನ್ನೂ ಹಚ್ಚಿಸಿಕೊಳ್ಳದೆ ಬ್ರಹ್ಮಾನಂದವನ್ನು ಪಡೆದ ಯಾವನೂ ಹೆದರುವುದಿಲ್ಲ.

೩೭-೪೦. ಈರೀತಿ ಕೆಲಸಕ್ಕೆ ಹೊರಟು ಎಂದರೆ ಪ್ರಾಣ ಹೇಳುವುದರ ಉದ್ದೇಶವು ಪ್ರಮಾಣದ ಸ್ಥಿತಿಯೂ ವರ್ಣಿತವಾದುದು ಮತ್ತು ಸೃಷ್ಟಿ, ನಾಶ, ವಿಕಾರ, ಪ್ರಾಣಿಗಳ ಪ್ರವೃತ್ತಿ, ಅವುಗಳ ನಿವೃತ್ತಿ, ಅದರ ಫಲಗಳನ್ನೂ ಹೇಳಿದೆ. ವಸಿಷ್ಠನ ಉತ್ಪತ್ತಿ, ಶಕ್ತಿಯ ಉತ್ಪತ್ತಿ, ವಿಶ್ವಾಮಿತ್ರನು ಕೊಟ್ಟ ತೊಂದರೆಯಿಂದ ಸೌದಾಮಿನಿ.

ಜಜ್ಞೇ ಪಿತೄಣಾಂ ಕನ್ಯಾಯಾಂ ವ್ಯಾಸಶ್ಚಾಪಿ ಯಥಾ ಮುನಿಃ ।
ಶುಕ್ರಸ್ಯ ಚ ಯಥಾ ಜನ್ಮ ಪುತ್ರಸ್ಯ ಸಹಧೀಮತಃ ॥ ೪೦ ॥

ಪರಾಶರಸ್ಯ ವಿದ್ವೇಷೋ ವಿಶ್ವಾಮಿತ್ರಕೃತೋ ಯಥಾ ।
ವಸಿಷ್ಠಸಂಭೃತಶ್ಚಾಗ್ನಿರ್ವಿಶ್ವಾಮಿತ್ರಜಿಘಾಂಸಯಾ ॥ ೪೧ ॥

ಸಂಧಾನಹೇತೋರ್ವಿಭುನಾ ಜೀರ್ಣಃ ಕಣ್ವೇನ ಧೀಮತಾ ।
ದೇವೇನ ವಿಪ್ರಾ ವಿಪ್ರಾಣಾಂ ವಿಶ್ವಾಮಿತ್ರಹಿತೈಷಿಣಾ ॥ ೪೨ ॥

ತಸ್ಯ ಶಿಷ್ಯಪ್ರಶಿಷ್ಯೈಶ್ಚ ಶಾಖಾಭೇದಾಃ ಪುನಃ ಕೃತಾಃ ।
ಪ್ರಯಾಗೇ ಷಟ್ಕುಲೀಯೈಶ್ಚ ಯಥಾ ಪೃಷ್ಟಃ ಸ್ವಯಂಪ್ರಭುಃ ॥ ೪೩ ॥

ಏಕಂ ವೇದಂ ಚತುಷ್ಪಾದಂ ಚತುರ್ಧಾ ಪುನರೀಶ್ವರಃ ।
ಯಥಾ ಚ ವೇದ ಭಗವಾನ್ ವ್ಯಾಸಃ ಶರ್ವಾದನುಗ್ರಹಾತ್ ॥ ೪೪ ॥

---

ಮತ್ತು ಹಸ್ತಿನ ತೊಂದರೆಗಳು, ಪರಾಶರನ ಉತ್ಪತ್ತಿ, ಒಬ್ಬರಿಗೂ ತಿಳಿಯದಂತೆ ವ್ಯಾಸರ ಉತ್ಪತ್ತಿ, ಅನಂತರ ಬುದ್ಧಿವಂತನಾದ ಶುಕ್ರನ ಉತ್ಪತ್ತಿಗಳನ್ನೂ ವರ್ಣಿಸಿದೆ.

೪೧-೪೨. ಪರಾಶರರಿಗೂ, ವಿಶ್ವಾಮಿತ್ರರಿಗೂ, ಉಂಟಾದ ವೈರ, ಅನಂತರ, ವಿಶ್ವಾಮಿತ್ರನನ್ನು ಕೊಲ್ಲಬೇಕೆಂದು ವಸಿಷ್ಠನು ಹೋಮಾದಿಗಳನ್ನು ಮಾಡಿದುದು ಕಣ್ವಋಷಿಯು ಅವರಿಬ್ಬರಿಗೂ ಸಮಾಧಾನಮಾಡಿ ಆ ಅಗ್ನಿಯನ್ನು ಶಮನಮಾಡಿದುದು, ಮತ್ತು ದೇವತೆಗಳು ಕೂಡ ಬ್ರಾಹ್ಮಣರ ಹಿತಾಪೇಕ್ಷೆಯಿಂದ ಅವರನ್ನು ಸೇರಿಸಿದದು, ಇವೆಲ್ಲವೂ ಹೇಳಲ್ಪಟ್ಟಿದೆ.

೪೩-೪೪. ಒಂದೇ ವೇದವನ್ನು ಸ್ವಾಮಿಯು ನಾಲ್ಕುಭಾಗವಾಗಿ ಮಾಡಿದುದು, ಅದನ್ನು ಈಶ್ವರನ ಅನುಗ್ರಹದಿಂದ ವ್ಯಾಸನು ತಿಳಿದುಕೊಂಡುದೂ ವರ್ಣಿತವಾಗಿದೆ ಆ ವ್ಯಾಸನ ಶಿಷ್ಯರು, ಅವರ ಶಿಷ್ಯರು ಇವರುಗಳಿಂದ ಅನೇಕಬಗೆಯಾಗಿ ಶಾಖೆಗಳನ್ನು ವಿಂಗಡಿಸಿದುದು ಪ್ರಯಾಗದಲ್ಲಿ ಷಟ್ಕುಲದವರು ವ್ಯಾಸನನ್ನು ಪ್ರಶ್ನೆಮಾಡಿದುದು ವರ್ಣಿತವಾಗಿದೆ.

**ಕೃಷ್ಣೇನ ಚಾನುಶಾಸ್ತಾಸ್ತೇ ಮುನಯೋ ಧರ್ಮಕಾಂಕ್ಷಿಣಃ ।**
**ಏತತ್ಸರ್ವಂ ಯಥಾತತ್ತ್ವಮಾಖ್ಯಾತಂ ದ್ವಿಜಸತ್ತಮಾಃ ॥ ೪೫ ॥**

**ಮುನೀನಾಂ ಧರ್ಮನಿತ್ಯಾನಾಂ ಲೋಕೋತ್ತರಮನುತ್ತಮಂ ।**
**ಬ್ರಹ್ಮಣಾ ಯತ್ಪುರಾ ಪ್ರೋಕ್ತಂ ಪುಲಸ್ತ್ಯಾಯ ಮಹಾತ್ಮನೇ ॥ ೪೬ ॥**

**ಪುಲಸ್ತ್ಯೇನಾಥ ಭೀಷ್ಮಾಯ ಗಂಗಾದ್ವಾರೇ ಪ್ರಭಾಷಿತಂ ।**
**ಧನ್ಯಂ ಯಶಸ್ಯಮಾಯುಷ್ಯಂ ಸರ್ವಪಾಪಪ್ರಣಾಶನಂ ॥ ೪೭ ॥**

**ಕೀರ್ತನಂ ಶ್ರವಣಂ ಚಾಸ್ಯ ಧಾರಣಂ ಚ ವಿಶೇಷತಃ ।**
**ಸೂತೇನಾನುಕ್ರಮಣೇದಂ ಪುರಾಣಂ ಸಂಪ್ರಕಾಶಿತಂ ॥ ೪೮ ॥**

**ಬ್ರಾಹ್ಮಣೇಷು ಪುರಾ ಯಚ್ಚ ಬ್ರಹ್ಮಣೋಕ್ತಂ ಸುವಿಸ್ತರಂ ।**
**ಪಾದಮಸ್ಯ ವಿದನ್ಸಮ್ಯಗ್ಯೋಽಧೀಯೀತ ಜಿತೇಂದ್ರಿಯಃ ॥ ೪೯ ॥**

**ತೇನಾಧೀತಂ ಪುರಾಣಂ ಸ್ಯಾತ್ಸರ್ವಂ ನಾಸ್ತ್ಯತ್ರ ಸಂಶಯಃ ।**
**ಯೋ ವಿದ್ಯಾಚ್ಚತುರೋ ವೇದಾನ್ಸಾಂಗೋಪನಿಷದೋ ದ್ವಿಜಃ ॥ ೫೦ ॥**

---

೪೫. ಧರ್ಮಕಾಂಕ್ಷಿಗಳಾದ ಋಷಿಗಳಿಗೆ ಕೃಷ್ಣನು ಹೇಳಿದ ವಿಷಯ ಇವೆಲ್ಲವನ್ನೂ ಕೂಡ ನಡೆದಂತೆ ಹೇಳಿದೆ.

೪೬–೪೭. ಧರ್ಮವನ್ನೇ ಅನುಸರಿಸುತ್ತಿರುವ ಮುನಿಗಳಿಗೆ ಲೋಕದಲ್ಲಿ ಶ್ರೇಷ್ಠವಾದ ಈ ಪದ್ಮಪುರಾಣವು ಪ್ರಕಾಶಿತವಾಯಿತು. ಮೊದಲು ಬ್ರಹ್ಮನು ಮಹಾತ್ಮನಾದ ಪುಲಸ್ತ್ಯನಿಗೆ ಹೇಳಿದನು. ಆ ಪುಲಸ್ತ್ಯನು ಭೀಷ್ಮನಿಗೆ ಗಂಗಾದ್ವಾರದಲ್ಲಿ ಹೇಳಿದನು. ಇದು ಧನವನ್ನು ಕೊಡುವುದು, ಯಶಸ್ಸನ್ನು ಕೊಡುವುದು. ಆಯುಸ್ಸನ್ನು ವೃದ್ಧಿಪಡಿಸಿ ಪಾಪಗಳೆಲ್ಲವನ್ನೂ ನಾಶಮಾಡುವುದು. ಹೇಳುವುದು, ಕೇಳುವುದು, ಜ್ಞಾಪಕದಲ್ಲಿಟ್ಟುಕೊಳ್ಳುವುದು ಇವೂ ಕೂಡ ಪಾಪನಾಶಕಗಳು.

೪೮. ಬರುಬರುತ್ತ ಈ ಸೂತನು ಎಲ್ಲಕಡೆಯಲ್ಲಿಯೂ ಪ್ರಕಾಶಪಡಿಸಿದನು.

೪೯. ಈ ಪುರಾಣವನ್ನು ಪೂರ್ವದಲ್ಲಿ ಬ್ರಹ್ಮನು ಬ್ರಾಹ್ಮಣರಿಗೆ ಹೇಳಿದನು. ಇದರಲ್ಲಿ ಒಂದು ಪಾದವನ್ನಾದರೂ ಚೆನ್ನಾಗಿ ತಿಳಿದುಕೊಂಡು ನಿಯಮದಿಂದ ಓದಿದರೆ ಅವನು ಪುರಾಣವೆಲ್ಲವನ್ನೂ ಓದಿದಂತಾಗುತ್ತದೆ, ಸಂಶಯವಿಲ್ಲ.

೫೦. ಯಾವನು ವೇದಗಳನ್ನೂ, ಉಪನಿಷತ್ತುಗಳನ್ನೂ, ಅಂಗಗಳನ್ನೂ ಓದುತ್ತಾನೆಯೋ ಅವನೇ ಬುದ್ಧಿವಂತನು.

**ಪುರಾಣಂ ಚ ವಿಜಾನಾತಿ ಯಸ್ಸ ತಸ್ಮಾದ್ವಿಚಕ್ಷಣಃ ।**
**ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್ ॥ ೫೧ ॥**

**ಬಿಭೇತ್ಯಲ್ಪಶ್ರುತಾದ್ವೇದೋ ಮಾಮಯಂ ಪ್ರಹರಿಷ್ಯತಿ ।**
**ಅಧೀತ್ಯ ಚೇಮಮಧ್ಯಾಯಂ ಸ್ವಯಂ ಪ್ರೋಕ್ತಂ ಸ್ವಯಂಭುವಾ ॥ ೫೨ ॥**

**ಆಪದಃ ಪ್ರಾಪ್ಯ ಮುಚ್ಯೇತ ಯಥೇಷ್ಟಾಂ ಪ್ರಾಪ್ನುಯಾದ್ಗತಿಂ ।**
**ಪುರಾಪರಂಪರಾಂ ವಷ್ಟಿ ಪುರಾಣಂ ತೇನ ವೈ ಸ್ಮೃತಂ ॥ ೫೩ ॥**

**ನಿರುಕ್ತಮಸ್ಯ ಯೋ ವೇದ ಸರ್ವಪಾಪೈಃ ಪ್ರಮುಚ್ಯತೇ ।**
**ಋಷಯೋಽಪ್ಯಬ್ರುವನ್ಸೂತಂ ಕಥಂ ಭೀಷ್ಮೇಣ ಧೀಮತಾ ॥ ೫೪ ॥**

**ಬ್ರಹ್ಮಣೋ ಮಾನಸಃ ಪುತ್ರಃ ಪುಲಸ್ತ್ಯೋ ಭಗವಾನೃಷಿಃ ।**
**ದುರ್ಲಭಂ ದರ್ಶನಂ ಯಸ್ಯ ಸರ್ವೈಃ ಪಾಪಸಮನ್ವಿತೈಃ ॥ ೫೫ ॥**

೫೧. ಇತಿಹಾಸ ಪುರಾಣಗಳಿಂದ ವೇದವನ್ನು ಪೋಷಿಸಬೇಕು. ವಿಸ್ತರಿಸಬೇಕು. ಎಂದರೆ ವೇದಗಳ ರಹಸ್ಯಾರ್ಥವನ್ನು ತಿಳಿಯಬೇಕು.

೫೨. ಸ್ವಲ್ಪ ವಿದ್ಯಾಭ್ಯಾಸಮಾಡಿದವನನ್ನು ನೋಡಿ ನನ್ನನ್ನು ಅಪಾರ್ಥದಿಂದ ನಾಶಮಾಡುವನೆಂದು ವೇದಗಳು ಹೆದರುತ್ತವೆ.

೫೩. ಈ ಅಧ್ಯಾಯವನ್ನು ಬ್ರಹ್ಮನು ತಾನಾಗಿಯೇ ಹೇಳಿದುದಾದುದರಿಂದ ಇದನ್ನು ಓದಿದರೆ ಆಪತ್ತುಗಳು ಬಂದಿದ್ದರೆ ಅವುಗಳು ಪರಿಹಾರವಾಗುತ್ತವೆ. ಇಷ್ಟವಾದ ಗತಿಯನ್ನು ಹೊಂದುತ್ತಾನೆ.

೫೪. ಪೂರ್ವದ ಪರಂಪರೆ (ವಂಶಾವಳಿ) ಯನ್ನು ಹೇಳುವುದರಿಂದ ಪುರಾಣವೆಂದು ಹೆಸರು ಬಂದಿತು. ಈ ಪುರಾಣದ ಪದದ ಅರ್ಥವನ್ನು ತಿಳಿದವನೂ ಕೂಡ ಎಲ್ಲಾ ಪಾಪವನ್ನೂ ಕಳೆದುಕೊಳ್ಳುತ್ತಾನೆ.

೫೫-೫೬. ಬ್ರಹ್ಮಮಾನಸ ಪುತ್ರನಾದ ಪುಲಸ್ತ್ಯಋಷಿಯ ದರ್ಶನವು ಪಾಪಿಗಳಾದ ಮನುಷ್ಯರಿಗೆ ಹೊಂದಲಸಾಧ್ಯವಾದುದಷ್ಟೆ. ಎಲೈ ಸೂತನೇ, ಭೀಷ್ಮನಿಗೆ ಆ ಋಷಿಯು ದರ್ಶನಕೊಟ್ಟುದು ಹೇಗೆ? ಅಂತಹ ಉತ್ತಮ ಮನುಷ್ಯನನ್ನು ಆ

ಅತ್ಯಾಶ್ಚರ್ಯಮಿದಂ ಸೂತ ಕ್ಷತ್ರಿಯೇಣ ಕಥಂ ಮುನಿಃ ।
ಆರಾಧಿತೋ ಬೃಹದ್ಭೂತಸ್ತನ್ನೋ ವದ ಮಹಾಮುನೇ ॥ ೫೬ ॥

ಕೀದೃಶಂ ವಾ ತಪಸ್ತೇನ ಕೋ ವಾನ್ಯೋ ನಿಯಮಃ ಕೃತಃ ।
ಯೇನ ತುಷ್ಟೋ ಮುನಿರ್ಬ್ರಹ್ಮಸ್ತಥಾ ತೇನ ಪ್ರಭಾಷತೇ ॥ ೫೭ ॥

ಪರ್ವಂ ವಾಪ್ಯರ್ಧಪರ್ವಂ ವಾ ಸಮಗ್ರಂ ವಾ ಪ್ರಭಾಷಿತಂ ।
ಯಸ್ಮಿನ್ಸ್ಥಾನೇ ಯಥಾ ಪೃಷ್ಟಃ ಪುಲಸ್ತ್ಯೋ ಭಗವಾನೃಷಿಃ ।
ತನ್ನೋ ವದ ಮಹಾಭಾಗ ಕಲಾಸ್ಸ್ಮ ಶ್ರವಣೇ ವಯಂ ॥ ೫೮ ॥

॥ ಸೂತ ಉವಾಚ ॥

ಯತ್ರ ಗಂಗಾ ಮಹಾಭಾಗಾ ಸಾಧೂನಾಂ ಹಿತಕಾರಿಣೀ ।
ನಿಭಿದ್ಯ ಪರ್ವತಂ ವೇಗಾನ್ನಿಸ್ಸೃತಾ ಲೋಕಪಾವನೀ ॥ ೫೯ ॥

ಗಂಗಾದ್ವಾರೇ ಮಹಾತೀರ್ಥೇ ಭೀಷ್ಮಃ ಪಿತೃಪರಾಯಣಃ ।
ಶುಶ್ರೂಷುಸ್ಸುಚಿರಂ ಕಾಲಂ ಮಹತಾಂ ನಿಯಮೇ ಸ್ಥಿತಃ ॥ ೬೦ ॥

---

ಭೀಷ್ಮನು ತಾನೆ ಪೂಜಿಸಿದುದು ಹೇಗೆ? ಇದು ಆಶ್ಚರ್ಯವಾಗಿದೆ ಅದನ್ನು ದಯವಿಟ್ಟು ನಮಗೆ ಹೇಳು.

೫೭. ಆ ಬ್ರಹ್ಮಮಾನಸ ಪುತ್ರನಾದ ಪುಲಸ್ತ್ಯನು ಸಂತೋಷಪಟ್ಟು ಆ ಭೀಷ್ಮನೊಡನೆ ಮಾತನಾಡುವಷ್ಟು ತಪಸ್ಸನ್ನಾಗಲಿ ವ್ರತಗಳನ್ನಾಗಲಿ ಯಾವುದನ್ನು ತಾನೆ ಮಾಡಿದ್ದನು?

೫೮. ಆ ಪುಲಸ್ತ್ಯನು ಒಂದು ಪರ್ವವನ್ನು ಹೇಳಿದನೇ? ಅರ್ಧಪರ್ವವನ್ನು ಹೇಳಿದನೆ? ಅಥವಾ ಪೂರ್ಣವಾಗಿ ಪುರಾಣವನ್ನೇ ಹೇಳಿದನೆ? ಆ ಭೀಷ್ಮನು ಕೇಳಿದುದೆಲ್ಲಿ? ಹೇಗೆ ಕೇಳಿದನು? ಅದನ್ನು ನಮಗೆ ಹೇಳು. ಅದನ್ನು ಕೇಳುವುದರಲ್ಲಿ ಬಹು ಆಸಕ್ತರಾಗಿದ್ದೇವೆ.

೫೯-೬೦. ಸೂತನು ಹೇಳಿದನು:—ಮಹಾಮಹಿಮಳಾದ ಸಾಧುಗಳಿಗೆ ಹಿತವನ್ನುಂಟುಮಾಡುವ ಗಂಗೆಯು ವೇಗದಿಂದ ಬೆಟ್ಟವನ್ನು ಎಲ್ಲಿ ಕೊರೆದು ಹೊರಟಿದ್ದಾಳೋ ಅಂತಹ ಮಹಾತೀರ್ಥವಾದ ಗಂಗಾದ್ವಾರದಲ್ಲಿ ಭೀಷ್ಮನು ಪಿತೃಗಳ ಕಾರ್ಯದಲ್ಲಿ ಆಸಕ್ತನಾಗಿ ಆ ತೀರ್ಥವನ್ನು ಸೇವಿಸಲು ಬಹುಕಾಲದವರೆಗೆ ಉತ್ತಮವಾದ ನಿಯಮದಲ್ಲಿದ್ದನು.

ಯಾವದ್ವರ್ಷಶತಂ ಸಾಗ್ರಂ ಪರಮೇಣ ಸಮಾಧಿನಾ ।
ಧ್ಯಾಯಮಾನಃ ಪರಂ ಬ್ರಹ್ಮ ತ್ರಿಕಾಲಂ ಸ್ನಾನಮಾಚರರ್ ॥ ೬೧ ॥

ಪಿತೄನ್ ದೇವಾಂಸ್ತರ್ಪಯತಃ ಸ್ವಾಧ್ಯಾಯೇನ ಮಹಾತ್ಮನಃ ।
ಆತ್ಮಾನಂ ಕರ್ಷತಶ್ಚಾಸ್ಯ ತುಷ್ಟೋ ದೇವಃ ಪಿತಾಮಹಃ ।
ಉವಾಚ ತನಯಂ ಬ್ರಹ್ಮಾ ಪುಲಸ್ತ್ಯಮೃಷಿಸತ್ತಮಂ ॥ ೬೨ ॥

॥ ಬ್ರಹ್ಮೋವಾಚ ॥

ಸ ತ್ವಂ ದೇವವ್ರತಂ ಭೀಷ್ಮಂ ವೀರಂ ಕುರುಕುಲೋದ್ವಹಂ ।
ತಪಸಸ್ಸನ್ನಿವರ್ತಸ್ವ ಕಾರಣಂ ಚಾಸ್ಯ ಕೀರ್ತಯ ॥ ೬೩ ॥

ಪಿತೃಭಕ್ತ್ಯಾ ಮಹಾಭಾಗೋ ಧ್ಯಾಯಮಾನಸ್ತಮಾಸ್ಥಿತಃ ।
ಯೋ ಹ್ಯಸ್ಯ ಮನಸಃ ಕಾಮಸ್ತಂ ಸಂಪಾದಯ ಮಾ ಚಿರಂ ॥ ೬೪ ॥

ಪಿತಾಮಹವಚಶ್ಶ್ರುತ್ವಾ ಪುಲಸ್ತ್ಯೋ ಮುನಿಸತ್ತಮಃ ।
ಗಂಗಾದ್ವಾರಮಥಾಗತ್ಯ ಭೀಷ್ಮಂ ವಚನಮಬ್ರವೀತ್ ॥ ೬೫ ॥

---

೬೧-೬೨. ಆ ಭೀಷ್ಮನು ನೂರು ವರ್ಷಗಳವರೆಗೂ ಉತ್ತಮವಾದ ಸಮಾಧಿಯಲ್ಲಿದ್ದುಕೊಂಡು, ಮೂರುಹೊತ್ತೂ ಸ್ನಾನಮಾಡುತ್ತ ಪರಬ್ರಹ್ಮನನ್ನು ಧ್ಯಾನಿಸುತ್ತ, ಪಿತೃಗಳಿಗೂ, ದೇವತೆಗಳಿಗೂ ತರ್ಪಣವನ್ನು ಮಾಡುತ್ತಾ, ಅಧ್ಯಯನಮಾಡುತ್ತಾ ದೇಹವನ್ನು ಶೋಷಿಸುತ್ತಾ ವ್ರತಪರನಾಗಿದ್ದನು. ಇದನ್ನು ನೋಡಿ ಬ್ರಹ್ಮನು ಪ್ರಸನ್ನನಾದನು. ಆಗ ಬ್ರಹ್ಮನು ಮಗನಾದ ಪುಲಸ್ತ್ಯನನ್ನು ಕುರಿತು ಇಂತೆಂದನು.

೬೩. ಬ್ರಹ್ಮನು ಹೇಳಿದನು :—ನೀನು ವೀರನೂ, ಕುರುಕುಲದಲ್ಲಿ ಹುಟ್ಟಿದವನೂ, ದೇವವ್ರತನೂ ಆದ ಭೀಷ್ಮನ ಬಳಿಗೆ ಹೋಗಿ ಅವನ ತಪಸ್ಸನ್ನು ನಿಲ್ಲಿಸು. ಕಾರಣವನ್ನು ಹೇಳು.

೬೪. ಆ ಮಹಾನುಭಾವನು ಪಿತೃಗಳಲ್ಲಿರುವ ಭಕ್ತಿಯಿಂದ ತಪಸ್ಸನ್ನು ಮಾಡುತ್ತಲಿದ್ದಾನೆ. ಅವನ ಮನಸ್ಸಿನಲ್ಲಿರುವುದನ್ನು ಬೇಗ ಪೂರ್ತಿಮಾಡು ಎಂದನು.

೬೫. ಬ್ರಹ್ಮನ ಮಾತನ್ನು ಕೇಳಿ ಪುಲಸ್ತ್ಯನು ಗಂಗಾದ್ವಾರಕ್ಕೆ ಬಂದು ಭೀಷ್ಮನನ್ನು ಕುರಿತು ಇಂತೆಂದನು.

॥ ಪುಲಸ್ತ್ಯ ಉವಾಚ ॥
ವರಂ ವರಯ ಭದ್ರಂ ತೇ ಯತ್ತೇ ಮನಸಿ ವರ್ತತೇ ।
ತುಷ್ಟಸ್ತೇ ತಪಸಾ ವೀರ ಸಾಕ್ಷಾದ್ದೇವಃ ಪಿತಾಮಹಃ ॥ ೬೬ ॥

ಬ್ರಹ್ಮಣಾ ಪ್ರೇಷಿತಸ್ತ್ವೇಽಹಂ ವರಾನ್ದಾಸ್ಯಾಮಿ ಕಾಂಕ್ಷಿತಾನ್ ॥ ೬೭ ॥

ಭೀಷ್ಮೋಽಪಿ ತದ್ವಚಶ್ಶ್ರುತ್ವಾ ಮನಶ್ಶ್ರೋತ್ರಸುಖಾವಹಂ ।
ಉನ್ಮೀಲ್ಯ ನಯನೇ ದೃಷ್ಟ್ವಾ ಪುಲಸ್ತ್ಯಂ ಪುರತಃ ಸ್ಥಿತಂ ॥ ೬೮ ॥

ಅಷ್ಟಾಂಗಪ್ರಣಿಪಾತೇನ ನತ್ವಾ ತಂ ಮುನಿಸತ್ತಮಂ ।
ಉವಾಚ ಪ್ರಣತೋ ಭೂತ್ವಾ ಸರ್ವಾಂಗಾಲಿಂಗಿತಾವನಿಃ ॥ ೬೯ ॥

॥ ಭೀಷ್ಮ ಉವಾಚ ॥
ಅದ್ಯ ಮೇ ಸಫಲಂ ಜನ್ಮ ದಿನಂ ಚೇದಂ ಸುಶೋಭನಂ ।
ಭವತಶ್ಚರಣೌ ದೃಷ್ಟ್ವಾ ಜಗದ್ವಂದ್ಯೌ ಮಯಾ ತ್ವಿಹ ॥ ೭೦ ॥

ತಪಸಶ್ಚ ಫಲಂ ಸರ್ವಂ ಯದ್ದೃಷ್ಟೋ ಭಗವಾನ್ಮಯಾ ।
ವರಪ್ರದೋ ವಿಶೇಷೇಣ ಸಂಪ್ರಾಪ್ತಶ್ಚ ನದೀತಟೇ ॥ ೭೧ ॥

---

೬೬-೬೭. ಪುಲಸ್ತ್ಯನು ಹೇಳಿದನು:—ನಿನ್ನ ತಪಸ್ಸಿನಿಂದ ದೇವದೇವನಾದ ಬ್ರಹ್ಮನು ಸಂತೋಷಪಟ್ಟಿದ್ದಾನೆ. ಆ ಬ್ರಹ್ಮನು ನನ್ನನ್ನು ಕಳುಹಿಸಿದ್ದಾನೆ ನಿನಗೆ ಬೇಕಾದ ವರಗಳನ್ನು ಕೊಡುತ್ತೇನೆ. ನಿನ್ನ ಮನಸ್ಸಿನಲ್ಲಿರುವುದನ್ನು ಕೇಳಿಕೋ.

೬೮-೬೯. ಭೀಷ್ಮನು ಕಿವಿಗೂ, ಮನಸ್ಸಿಗೂ ಸುಖವನ್ನುಂಟುಮಾಡುವ ಆ ಮಾತನ್ನು ಕೇಳಿ ಕಣ್ಣುಗಳನ್ನು ಬಿಟ್ಟು ಎದುರಿಗಿರುವ ಪುಲಸ್ತ್ಯಋಷಿಯನ್ನು ನೋಡಿ ಸಾಷ್ಟಾಂಗನಮಸ್ಕಾರಮಾಡಿ ಏಳುವುದಕ್ಕೆ ಮುಂಚೆಯೇ ಇಂತೆಂದನು.

೭೦. ಭೀಷ್ಮನು ಹೇಳಿದನು:—ಪ್ರಪಂಚಕ್ಕೆ ನಮಸ್ಕರಿಸಲು ಯೋಗ್ಯವಾದ ನಿನ್ನ ಪಾದಗಳನ್ನು ನಮಸ್ಕರಿಸಿದೆನಾದ ಕಾರಣ ನನ್ನ ಜನ್ಮವು ಸಾರ್ಥಕವಾಯಿತು. ಈ ದಿನವೇ ಸುದಿನವು.

೭೧. ಪೂಜ್ಯನಾದ ನಿನ್ನನ್ನು ನೋಡಿದುದು ನನ್ನ ಎಲ್ಲಾ ತಪಸ್ಸುಗಳ ಫಲ ವೆಂದೇ ತಿಳಿಯುತ್ತೇನೆ. ಅದೂ ಅಲ್ಲದೆ ಈ ನದಿಯ ದಡದಲ್ಲಿ ನೀನು ವರವನ್ನು ಕೊಡಲು ಬಂದುದರಿಂದ ನನ್ನ ತಪಸ್ಸು ಬಹು ವಿಶೇಷವಾದುದೆಂದು ಹೇಳುತ್ತೇನೆ.

ಇಯಂ ವೃಷೀ ಮಯಾ ಕ್ಲೃಪ್ತಾ ಆಸ್ಯತಾಂ ಸುಖದಾ ಕೃತಾ ।
ಅರ್ಘಃ ಪಾತ್ರೇ ತು ಪಾಲಾಶೆ ದೂರ್ವಾಕ್ಷತಸುಮೈಃ ಕುಶೈಃ ॥ ೨೨ ॥

ಸರ್ಷಪೈಶ್ಚ ದಧಿಕ್ಷೌದ್ರೈರ್ಯವೈಶ್ಚ ಪಯಸಾ ಸಹ ।
ಅಷ್ಟಾಂಗೋ ಹ್ಯೇಷ ನಿರ್ದಿಷ್ಟೋ ಹ್ಯರ್ಘೋ ಹಿ ಮುನಿಭಿಃ ಪುರಾ ॥ ೨೩ ॥

ಶುತ್ವೈತದ್ವಚನಂ ತಸ್ಯ ಭೀಷ್ಮಸ್ಯಾಮಿತತೇಜಸಃ ।
ಉಪವಿಷ್ಟೋ ಬ್ರಹ್ಮಸುತಃ ಪುಲಸ್ತ್ಯೋ ಭಗವಾನೃಷಿಃ ॥ ೨೪ ॥

ನಿಷ್ಟರಂ ಸಹ ಪಾದ್ಯೇನ ಅರ್ಘಪಾತ್ರಂ ಮುದಾನ್ವಿತಃ ।
ತುತೋಷ ಭಗವಾನ್ಪ್ರೀತಃ ಸದಾಚಾರೇಣ ತೇನ ತು ॥ ೨೫ ॥

॥ ಪುಲಸ್ತ್ಯ ಉವಾಚ ॥

ಸತ್ಯವಾನ್ದಾನಶೀಲೋಽಸಿ ಸತ್ಯಸಂಧಿರ್ನರೇಶ್ವರಃ ।
ಹ್ರೀಮಾನ್ಮೈತ್ರಃ ಕ್ಷಮಾಶೀಲೋ ವಿಕ್ರಾಂತಶ್ಶತ್ರುಶಾಸನೇ ॥ ೨೬ ॥

---

೨೨. ಯತಿಗಳಿಗೆ ಕೊಡುವ ಈ ಆಸನವನ್ನು ಹಾಕಿದ್ದೇನೆ. ಚೆನ್ನಾಗಿಯೂ ಇದೆ. ಕುಳಿತುಕೊ. ಮುತ್ತುಗದ ದೊನ್ನೆಯಲ್ಲಿ ನೀರನ್ನು ಹಾಕಿ ಅದರಲ್ಲಿ ಗರಿಕೆ, ಅಕ್ಷತೆ, ಹೂ ದರ್ಭೆ ಮುಂತಾದುವುಗಳನ್ನು ಹಾಕಿದ್ದೇನೆ. ಇವರಲ್ಲಿ ಕೈಕಾಲುಗಳನ್ನು ತೊಳೆದುಕೊಳ್ಳಿರಿ.

೨೩. ಮೋಟಾಗದ ಗರಿಕೆ, ಹೂವು, ದರ್ಭೆ, ಬಿಳಿಸಾಸುವೆ. ಮೊಸರು, ಜೇನು, ಯವ, ಹಾಲು, ಈ ಎಂಟನ್ನೂ ಸೇರಿಸಿದರೆ ಅರ್ಘ (ಕೈಗೆ ನೀರು) ಆಗುವು ದೆಂದು ಮುನಿಗಳು ಹೇಳಿದ್ದಾರೆ.

೨೪. ಶೂರನಾದ ಭೀಷ್ಮನು ಹೇಳಿದ ಈ ಮಾತುಗಳನ್ನು ಬ್ರಹ್ಮನ ಮಗನಾದ ಪುಲಸ್ತ್ಯನು ಕೇಳಿ ಹಾಗೆಯೇ ಆಗಲೆಂದು ಕುಳಿತುಕೊಂಡನು.

೨೫. ಆ ಋಷಿಯು ಪ್ರೀತಿಯಿಂದ ಆಸನದಲ್ಲಿ ಕುಳಿತು, ಕೈಕಾಲುಗಳಿಗೆ ನೀರನ್ನು ತೆಗೆದುಕೊಂಡು ಆ ಭೀಷ್ಮನ ಸದಾಚಾರದಿಂದ ಸಂತೋಷಪಟ್ಟನು.

೨೬-೨೭. ಪುಲಸ್ತ್ಯನು ಹೇಳಿದನು :—ಎಲೈ ಭೀಷ್ಮನೇ, ನೀನು ಸತ್ಯವಂತನು, ದಾನಶೀಲನು, ಸತ್ಯವನ್ನೇ ಯೋಚಿಸುವವನು, ನಾಚಿಕೆಯುಳ್ಳವನು, ಸ್ನೇಹವುಳ್ಳವನು, ಕ್ಷಮಿಸುವ ಸ್ವಭಾವವುಳ್ಳವನು, ಶತ್ರುಗಳನ್ನು ನಿಗ್ರಹಮಾಡಿದವನು,

ಧರ್ಮಜ್ಞಸ್ತ್ವಂ ಕೃತಜ್ಞಸ್ತ್ವಂ ದಯಾವಾನ್ಪ್ರಿಯಭಾಷಿತಾ ।
ಮಾನ್ಯಮಾನಯಿತಾ ವಿಜ್ಞೋ ಬ್ರಹ್ಮಣ್ಯಸ್ಸಾಧುವತ್ಸಲಃ ॥ ೨೭ ॥

ತುಷ್ಟಸ್ತೇಽಹಂ ಸದಾ ವತ್ಸ ಪ್ರಣಿಪಾತಪರಸ್ಯ ತೇ ।
ಪ್ರಬ್ರೂಹಿ ತ್ವಂ ಮಹಾಭಾಗ ಕಥನಂ ತೇ ವದಾಮ್ಯಹಂ ॥ ೨೮ ॥

॥ ಭೀಷ್ಮ ಉವಾಚ ॥

ಭಗವನ್ಭಗವಾನ್ಬ್ರಹ್ಮಾ ಕಸ್ಮಿನ್ಸ್ಥಾನೇ ಸ್ಥಿತೋ ವಿಭುಃ ।
ಸೃಷ್ಟಿಂ ಚಕಾರ ವೈ ಪೂರ್ವಂ ದೇವಾದೀನಾಂ ವದಸ್ವ ಮೇ ॥ ೨೯ ॥

ಕಥಂ ವಾ ಭಗವಾನ್ವಿಷ್ಣುಃ ಕಥಂ ರುದ್ರಸ್ಸಮಾನಿ ಚ ।
ಕಥಂ ವಾ ಪರ್ವತಾಂಶ್ಚೋಗ್ರಾನರಣ್ಯಾನಿ ಪುರಾಣಿ ಚ ॥ ೩೦ ॥

ಮುನೀನ್ಪ್ರಜಾಪತೀಂಶ್ಚೈವ ಸಪ್ತರ್ಷೀನ್ಪ್ರವರಾನಪಿ ।
ವರ್ಣಾನ್ವಾಯುಂ ಪುರಾ ಸ್ಥಾನಂ ಗಂಧರ್ವಾನ್ಯಕ್ಷರಾಕ್ಷಸಾನ್ । ॥ ೩೧ ॥

---

ಧರ್ಮವನ್ನು ಬಲ್ಲವನು, ಉಪಕಾರಸ್ಮರಣೆಯುಳ್ಳವನು, ದಯಾವಂತನು, ಪ್ರಿಯವಾದ ಮಾತನ್ನಾಡುವವನು, ಗೌರವಕ್ಕೆ ಅರ್ಹನು, ಗೌರವವನ್ನು ಕೊಡತಕ್ಕವನು, ಹೆಚ್ಚು ವಿನಯವನ್ನು ತಿಳಿದವನು, ಬ್ರಹ್ಮಜ್ಞಾನವುಳ್ಳವನು, ಸತ್ಪುರುಷರಲ್ಲಿ ಪ್ರೀತಿಯುಳ್ಳವನೂ ಆಗಿರುವ ರಾಜನಾಗಿದ್ದೀಯೆ.

೨೮. ನಮಸ್ಕರಿಸುತ್ತಿರುವ ನಿನಗೆ ನಾನು ಯಾವಾಗಲೂ ಪ್ರೀತಿಯುಳ್ಳವನಾಗಿದ್ದೇನೆ. ಎಲೈ ವತ್ಸನೇ, ನಿನಗೆ ಏನು ಬೇಕೆಂಬುದನ್ನು ಕೇಳು, ನಾನು ಹೇಳುತ್ತೇನೆ.

೨೯. ಭೀಷ್ಮನು ಹೇಳಿದನು :—ಎಲೈ ಪೂಜ್ಯನೇ, ಪೂಜ್ಯನಾದ ಬ್ರಹ್ಮನು ಯಾವ ಜಾಗದಲ್ಲಿದ್ದಾನೆ? ಅವನು ದೇವತೆಗಳೇ ಮೊದಲಾದವರ ಸೃಷ್ಟಿಯನ್ನು ಮಾಡಿದನಲ್ಲಾ, ಅದನ್ನು ನನಗೆ ಹೇಳು.

೩೦-೩೧. ಎಲೈ ಪೂಜ್ಯನೇ! ವಿಷ್ಣುವೂ, ರುದ್ರನೂ ಶಿವನೆಂಬುದು ಹೇಗೆ? ದೊಡ್ಡದಾದ ಪರ್ವತಗಳು, ಹೊಗಳಲಸದಳವಾದ ಕಾಡುಗಳು, ಪಟ್ಟಣಗಳು, ಮುನಿಗಳು, ಪ್ರಜಾಪತಿಗಳು, ಶ್ರೇಷ್ಠರಾದ ಸಪ್ತರ್ಷಿಗಳೂ, ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರ ವರ್ಣಗಳೂ, ವಾಯು, ಹಿಂದೆ ಇದ್ದ ಪದಾರ್ಥಗಳು, ಗಂಧರ್ವರು, ಯಕ್ಷರು, ತೀರ್ಥ

ತೀರ್ಥಾನಿ ಸರಿತೋ ವಾಥ ಸೂರ್ಯಾದೀನ್ಗ್ರಹತಾರಕಾನ್ ।
ಯಥಾ ಸಸರ್ಜ ಭಗವಾಂಸ್ತಥಾ ಮೇ ತ್ವಂ ವದಸ್ವ ಹ ॥ ೮೨ ॥

॥ ಪುಲಸ್ತ್ಯ ಉವಾಚ ॥

ಪರಃ ಪರಾಣಾಂ ಪರಮಃ ಪರಮಾತ್ಮಾ ಪಿತಾಮಹಃ ।
ರೂಪವರ್ಣಾದಿರಹಿತೋ ವಿಶೇಷೇಣ ವಿವರ್ಜಿತಃ ॥ ೮೩ ॥

ಅಪಿ ವೃದ್ಧಿವಿನಾಶಾಭ್ಯಾಂ ಪರಿಣಾಮವಿಜನ್ಮಭಿಃ ।
ಗುಣೈರ್ವಿವರ್ಜಿತಸ್ಸರ್ವೈಃ ಸ ಭಾತೀತಿ ಹಿ ಕೇವಲಂ ॥ ೮೪ ॥

ಸರ್ವತ್ರಾಸೌ ಸಮಶ್ಚಾಪಿ ವಸನ್ನನುಯಮೋ ಮತಃ ।
ಭಾವಯನ್ಬ್ರಹ್ಮರೂಪೇಣ ವಿದ್ವದ್ಭಿಃ ಪರಿಪಠ್ಯತೇ ॥ ೮೫ ॥

ತಂ ಗುಹ್ಯಂ ಪರಮಂ ನಿತ್ಯಮಜಮುಕ್ಷಯಮವ್ಯಯಂ ।
ತಥಾ ಪುರುಷರೂಪೇಣ ಕಾಲರೂಪೇಣ ಸಂಸ್ಥಿತಂ ॥ ೮೬ ॥

---

ಗಳು, ನದಿಗಳು, ಸೂರ್ಯನೇ ಮೊದಲಾದ ಗ್ರಹಗಳು, ನಕ್ಷತ್ರಗಳು ಇವುಗಳನ್ನು ಆ ಪೂಜ್ಯನಾದ ಬ್ರಹ್ಮನು ಹೇಗೆ ಸೃಷ್ಟಿಮಾಡಿದನು? ಅವನ್ನು ನೀನು ನನಗೆ ಹೇಳು.

೮೩-೮೪. ಪುಲಸ್ತ್ಯನು ಹೇಳಿದನು:—ಆ ಬ್ರಹ್ಮನು ಉತ್ತಮನು, ಉತ್ತಮರುಗಳೊಳಗೂ ಉತ್ತಮನು, ಪರಮಾತ್ಮನು, ಎಲ್ಲರಿಗೂ ಮೊದಲನೆಯವನು, ಆಕಾರ ಬಣ್ಣಗಳವನಿಗೆ ಇಲ್ಲ. ಮಿಕ್ಕವರಿಗಿಂತ ಯಾವದೊಂದು ಹೆಚ್ಚಾಗುವಿಕೆಯೂ ಇಲ್ಲದವನು. ಹೆಚ್ಚುವುದಾಗಲಿ, ಸಣ್ಣನಾಗುವುದಾಗಲಿ ಇಲ್ಲ. ಇದರಿಂದ ಸಾವಿಗೂ ಆಗುವ ವ್ಯತ್ಯಾಸವೂ ಅವನಿಗಿಲ್ಲ, ಜನ್ಮಗಳಿಲ್ಲ, ಯಾವ ಗುಣವೂ ಅವನಿಗಿಲ್ಲ, ಅವನು ಬರೀ ಪ್ರಕಾಶ ಮಾತ್ರ.

೮೫. ಎಲ್ಲರಲ್ಲಿಯೂ ಒಂದೇ ರೀತಿಯಾಗಿದ್ದಾನೆ. ಮತ್ತು ಎಲ್ಲರಲ್ಲಿಯೂ ಆ ಪ್ರಾಣಿಯು ಸಾಯುವವರೆಗೂ ವಾಸಿಸುತ್ತಾನೆ. ವಿದ್ವಾಂಸರು ಅವನನ್ನು ಬ್ರಹ್ಮನೆಂದು ಭಾವಿಸಿ ಬ್ರಹ್ಮನೆಂದೇ ಹೇಳುತ್ತಾರೆ.

೮೬. ಒಬ್ಬರಿಗೂ ತಿಳಿಯದವನು, ಉಚ್ಚಸ್ಥಾನದಲ್ಲಿರುವವನು, ಯಾವಾಗಲೂ ಇರುವವನು, ಹುಟ್ಟುವಿಕೆಯಿಲ್ಲದವನು, ನಾಶವಿಲ್ಲದವನು, ಕ್ಷಯಿಸದವನು, ಅವರೂ ಪುರುಷನಂತೆಯೂ, ಕಾಲದ ರೂಪನಾಗಿಯೂ ಇರುವವನು, ಅಂತಹ ಬ್ರಹ್ಮನನ್ನು ನಮಸ್ಕರಿಸಿ, ಅವನು ಹೇಗೆ ಸೃಷ್ಟಿಸಿದನೆಂಬುದನ್ನು ಹೇಳುತ್ತೇನೆ.

ತಂ ನತ್ವಾಽಹಂ ಪ್ರವಕ್ಷ್ಯಾಮಿ ಯಥಾ ಸೃಷ್ಟಿಂ ಚಕಾರ ಹ ।
ಪೂರ್ವಂ ತು ಪದ್ಮಶಯ ನಾದುತ್ಥಾಯ ಜಗತಃ ಪ್ರಭುಃ ॥ ೮೭ ॥

ಗುಣವ್ಯಂಜನಸಂಭೂತಃ ಸರ್ಗಕಾಲೇ ನರಾಧಿಪ ।
ಸಾತ್ತ್ವಿಕೋ ರಾಜಸಶ್ಚೈವ ತಾಮಸಶ್ಚ ತ್ರಿಧಾ ಮಹತ್ ॥ ೮೮ ॥

ಪ್ರಧಾನತತ್ತ್ವೇನ ಸಮಂ ತಥಾ ಬೀಜಾದಿಭಿರ್ವೃತಂ ।
ವೈಕಾರಿಕಸ್ತೈಜಸಶ್ಚ ಭೂತಾದಿಶ್ಚೈವ ತಾಮಸಃ ॥ ೮೯ ॥

ತ್ರಿವಿಧೋಽಯಮಹಂಕಾರೋ ಮಹತ್ತತ್ತ್ವಾದಜಾಯತ ।
ಭೂತೇಂದ್ರಿಯಾಣಾಂ ಪಂಚಾನಾಂ ತಥಾ ಕರ್ಮೇಂದ್ರಿಯೈಸ್ಸಹ ॥ ೯೦ ॥

ಪೃಥಿವ್ಯಾಪಸ್ತಥಾ ತೇಜೋ ವಾಯುರಾಕಾಶಮೇವ ಚ ।
ಏಕೈಕಸ್ಯ ಸ್ವರೂಪೇಣ ಕಥಯಾಮಿ ಯಥೋತ್ತರಂ ॥ ೯೧ ॥

ಶಬ್ದಮಾತ್ರಂ ತಥಾಕಾಶಂ ಭೂತಾದಿಸ್ಸ ಸಮಾವೃಣೋತ್ ।
ಬಲವಾನೇವ ವೈ ವಾಯುಸ್ತಸ್ಯ ಸ್ಪರ್ಶೋ ಗುಣೋಮತಃ ॥ ೯೨ ॥

---

೮೭. ಎಲೈ ರಾಜನೇ, ಪ್ರಪಂಚಕ್ಕೆ ಒಡೆಯನಾದ ಆ ಸ್ವಾಮಿಯು ಮೊದಲು ಪದ್ಮದಿಂದ ಎದ್ದು ಸೃಷ್ಟಿಮಾಡುವ ಕಾಲದಲ್ಲಿ ಗುಣಗಳಿಂದಲೂ ಆಕಾರದಿಂದಲೂ ಇರುವವನಾಗಿ ಕಾಣಿಸಿಕೊಂಡನು.

೮೮. ಮಹತ್ತತ್ವವು ಸಾತ್ವಿಕ, ರಾಜಸ, ತಾಮಸವೆಂದು ಮೂರು ಬಗೆಯಾಯಿತು. ಆ ರಾಜಸ ತಾಮಸ ಸಾತ್ವಿಕಗಳು ಪ್ರಧಾನತತ್ವದೊಡನೆಯೂ ಬೀಜಗಳಿಂದಲೂ ಕೂಡಿಕೊಂಡವು.

೮೯. ವೈಕಾರಿಕ, ತೈಜಸ, ಭೂತಾದಿರೂಪವಾದ ತಾಮಸವೆಂದು ಈ ಮೂರು ಬಗೆಯಾದ ಅಹಂಕಾರಗಳು ಮಹತ್ತತ್ವದಿಂದ ಹುಟ್ಟಿದುವು.

೯೦-೯೧. ಪಂಚಭೂತಗಳೂ, ಪಂಚಕರ್ಮೇಂದ್ರಿಯ. ಗಳೂ ಆ ತತ್ವ ದಿಂದಲೇ ಉಂಟಾದುವು. ಭೂಮಿ, ನೀರು, ತೇಜಸ್ಸು, ಗಾಳಿ, ಆಕಾಶ ಇವು ಐದು ಪಂಚಭೂತಗಳು. ಇವುಗಳ ಒಂದೊಂದು ಸ್ವರೂಪವನ್ನೂ ಕ್ರಮವಾಗಿ ಹೇಳುತ್ತೇನೆ.

೯೨. ಶಬ್ದಗಳನ್ನು ಗುಣವಾಗಿ ಉಳ್ಳುದು ಆಕಾಶ. ಅದು ಭೂತಗಳಲ್ಲಿ ಮೊದಲನೆಯದು. ಅದು ಎಲ್ಲವನ್ನೂ ಆವರಿಸಿತು. ಬಲಿಷ್ಠವಾದ ವಾಯುವು ಉತ್ಪನ್ನವಾಯಿತು. ಅದರ ಗುಣವು ಸ್ಪರ್ಶವು.

ತತೋ ವಾಯುರ್ವಿಕುರ್ವಾಣೋ ರೂಪಮಾತ್ರಂ ಸಸರ್ಜ ಹ ।
ಜ್ಯೋತಿರೂಪೇಣ ತದ್ವಾಯೋಸ್ತದ್ರೂಪಗುಣಮುಚ್ಯತೇ ॥ ೯೩ ॥

ಸ್ಪರ್ಶರೂಪಸ್ತು ವೈ ವಾಯೂ ರೂಪಮಾತ್ರಂ ಸಮಾವೃಣೋತ್ ।
ಜ್ಯೋತಿಶ್ಚಾಪಿ ವಿಕುರ್ವಾಣಂ ರಸಮಾತ್ರಂ ಸಸರ್ಜ ಹ ॥ ೯೪ ॥

ಸಂಭವಂತಿ ತತೋಂಭಾಂಸಿ ರೂಪಭಾವಂ ಸಮಾವೃಣೋತ್ ।
ವಿಕುರ್ವಾಣಾನಿ ಚಾಂಭಾಂಸಿ ಗಂಧಮಾತ್ರಂ ಸಸರ್ಜಿರೇ ॥ ೯೫ ॥

ಸಂಘಾತೋ ಜಾಯತೇ ತಸ್ಮಾತ್ತಸ್ಯ ಗಂಧೋ ಮತೋ ಗುಣಃ ।
ತೈಜಸಾನೀಂದ್ರಿಯಾಣ್ಯಾಹುರ್ದೇವಾ ವೈಕಾರಿಕಾ ದಶ ॥ ೯೬ ॥

ಏಕಾದಶಂ ಮನಶ್ಚಾತ್ರ ದೇವಾ ವೈಕಾರಿಕಾಃ ಸ್ಮೃತಾಃ ।
ತ್ವಕ್ಚಕ್ಷುರ್ನಾಸಿಕಾ ಜಿಹ್ವಾ ಶ್ರೋತ್ರಮತ್ರ ಚ ಪಂಚಮಂ ॥ ೯೭ ॥

---

೯೩. ಆಮೇಲೆ ಆ ವಾಯುವು ವ್ಯತ್ಯಾಸ ಹೊಂದಿ ರೂಪವನ್ನು ಸೃಷ್ಟಿಸಿತು. ಎಂದರೆ ವಾಯುತತ್ವದಿಂದ ರೂಪವು ಉಂಟಾಯಿತು. ಆ ರೂಪವನ್ನು ವಾಯುವಿಗೆ ರೂಪಗುಣವೆಂದೂ ಹೇಳುತ್ತಾರೆ.

೯೪. ಸ್ಪರ್ಶಗುಣವುಳ್ಳ ವಾಯುವು ರೂಪದೊಡನೆ ಸೇರಿತು. ಅನಂತರ ಆ ಜ್ಯೋತಿಸ್ಸನ್ನು ವ್ಯತ್ಯಾಸಮಾಡುತ್ತ ಅದರಿಂದ ರಸವನ್ನು ಉತ್ಪತ್ತಿಮಾಡಿತು.

೯೫. ಅದರಿಂದ ನೀರು ಹುಟ್ಟಿ ಅದು ರೂಪವನ್ನು ಹೊಂದಿಕೊಂಡಿತು. ನೀರು ವ್ಯತ್ಯಾಸಹೊಂದಿ ಗಂಧ (ವಾಸನೆ) ವನ್ನು ಹುಟ್ಟಿಸಿತು.

೯೬. ಆ ವ್ಯತ್ಯಾಸದಿಂದ ಪೃಥಿವಿಯ ರೂಪವಾದ ಒಂದು ಸಮೂಹವುಂಟಾಯಿತು. ಅದರ ಗುಣವು ಗಂಧವೆನ್ನಿಸಿಕೊಂಡಿತು. ಇಂದ್ರಿಯಗಳು ತೇಜಸ್ಸಿನ ವಿಕಾರವಾದುವು ಮತ್ತು ಹತ್ತು ಇಂದ್ರಿಯಗಳೆಂದೂ ಹೇಳುತ್ತಾರೆ.

೯೭. ಹನ್ನೊಂದನೆಯ ಇಂದ್ರಿಯವು ಮನಸ್ಸು ಇದೂ ವೈಕಾರಿಕವು. ಚರ್ಮ, ಕಣ್ಣು, ಮೂಗು ನಾಲಿಗೆ, ಕಿವಿ ಎಂಬ ಇವು ಐದು ಇಂದ್ರಿಯಗಳು.

ಶಬ್ದಾದಿಜ್ಞಾನಸಿದ್ಧ್ಯರ್ಥಂ ಬುದ್ಧಿಯುಕ್ತಾನಿ ಪಂಚ ವೈ ।
ಪಾಯೂಪಸ್ಥಂ ಹಸ್ತಪಾದೌ ಕೀರ್ತಿತಾ ವಾಕ್ಚ ಪಂಚಮೀ ॥ ೯೮ ॥

ವಿಸರ್ಗಶಿಲ್ಪಗತ್ಯುಕ್ತಿರ್ಗುಣದೋಷೌ ಚ ಕಥ್ಯತೇ ।
ಆಕಾಶವಾಯುತೇಜಾಂಸಿ ಸಲಿಲಂ ಪೃಥಿವೀ ತಥಾ ॥ ೯೯ ॥

ಶಬ್ದಾದಿಭಿರ್ಗುಣೈರ್ವಿಪ್ರ ಯುಕ್ತಾನೀತ್ಯುತ್ತರೋತ್ತರೈಃ ।
ಶಾಂತಾ ಘೋರಾಶ್ಚ ಮೂಢಾಶ್ಚ ವಿಶೇಷಾಸ್ತೇನ ತೇ ಸ್ಮೃತಾಃ ॥ ೧೦೦ ॥

ನಾನಾವೀರ್ಯಾಃ ಪೃಥಗ್ಭೂತಾಸ್ತತಸ್ತೇ ಸಂಹತಿಂ ವಿನಾ ।
ನಾಶಕ್ನುವನ್ಪ್ರಜಾಸ್ಸ್ರಷ್ಟುಮಸಮಾಗಮ್ಯ ಕೃತ್ಸ್ನಶಃ ॥ ೧೦೧ ॥

ಸಮೇತ್ಯಾನ್ಯೋನ್ಯಸಂಯೋಗಾತ್ಪರಸ್ಪರಸಮಾಶ್ರಯಾತ್ ।
ಏಕಸಂಘಾತಲಕ್ಷ್ಯಾಶ್ಚ ಸಂಪ್ರಾಪ್ಯೈಕ್ಯಮಶೇಷತಃ ॥ ೧೦೨ ॥

---

೯೮. ಈ ಪಂಚೇಂದ್ರಿಯಗಳೂ ಬುದ್ಧಿಯಿಂದ ಕೂಡಿಕೊಂಡು ಶಬ್ದಸ್ಪರ್ಶಾದಿಗಳ ಜ್ಞಾನವನ್ನುಂಟುಮಾಡುತ್ತವೆ. ಪಾಯು, ಉಪಸ್ಥ, ಹಸ್ತ, ಪಾದ, ವಾಕ್, ಇವೈದೂ ಕರ್ಮೇಂದ್ರಿಯಗಳು.

೯೯. ಸೃಷ್ಟಿ, ಅವುಗಳ ಸ್ವಭಾವ, ಗಮನ, ಮಾತು, ಗುಣ, ದೋಷ, ಆಕಾಶ, ವಾಯು, ತೇಜಸ್ಸು, ನೀರು, ಪೃಥಿವೀ ಇವುಗಳ ವಿಷಯವನ್ನು ಹೇಳುತ್ತೇನೆ.

೧೦೦. ಶಬ್ದವೇ ಮುಂತಾದ ಗುಣಗಳಿಂದ ಅವು ಕೂಡಿರುತ್ತವೆ. ಎಂದರೆ ಪೃಥಿವಿಗೆ ಗಂಧವೂ, ಅಪ್ಪಿಗೆ (ನೀರಿಗೆ) ರಸವೂ, ತೇಜಸ್ಸಿಗೆ ರೂಪವೂ, ಆಕಾಶಕ್ಕೆ ಶಬ್ದವೂ, ವಾಯುವಿಗೆ ಸ್ಪರ್ಶವೂ, ಗುಣಗಳೆಂದು ತಿಳಿಯಬೇಕು. ಈ ಗುಣಗಳನ್ನು ಇವು ಹೊಂದಿರುವುದರಿಂದ ಶಾಂತವಾಗಿಯೂ, ಘೋರವಾಗಿಯೂ ಮತ್ತು ಹೆಚ್ಚು ಕಡಿಮೆಯಾದಂತೆಯೂ ಹೆಚ್ಚು ಕಡಿಮೆಗಳು ಕಾಣುತ್ತವೆ.

೧೦೧. ಹೀಗೆ ಇವುಗಳೂ ಬಗೆಬಗೆಯ ಶಕ್ತಿಯುಳ್ಳವಾಗಿ ಬೇರೆ ಬೇರೆಯಾಗಿರುತ್ತವೆ. ಅವು ಒಟ್ಟಿಗೆ ಸೇರದಿದ್ದರೆ ಪ್ರಜೆಗಳನ್ನು ಸೃಷ್ಟಿಮಾಡಲಾರವು.

೧೦೨. ಈ ಪೃಥಿವೀ ಮುಂತಾದುವು ಒಂದಕ್ಕೊಂದು ಸೇರಿಕೊಂಡು ಐಕ್ಯವಾಗುವುದರಿಂದ ಒಂದರಂತೆಯೇ ಕಾಣುವಂತೆ ಐಕ್ಯವನ್ನು ಹೊಂದುತ್ತವೆ.

ಪುರುಷಾಧಿಷ್ಠಿತತ್ವಾಚ್ಚ ವ್ಯಕ್ತಾನುಗ್ರಹಣೇ ತಥಾ ।
ಮಹದಾದಯೋ ವಿಶೇಷಾಂತಾ ಹ್ಯಂಡಮುತ್ಪಾದಯಂತಿ ವೈ ॥ ೧೦೩ ॥

ತತ್ಕ್ರಮೇಣ ವಿವೃದ್ಧಂ ತು ಜಲಬುದ್ಬುದವತ್ಸಮಂ ।
ತತ್ರಾವ್ಯಕ್ತಸ್ವರೂಪೋಽಸೌ ವ್ಯಕ್ತರೂಪೀ ಜನಾರ್ದನಃ ॥ ೧೦೪ ॥

ಬ್ರಹ್ಮಾ ಬ್ರಹ್ಮಸ್ವರೂಪೇಣ ಸ್ವಯಮೇವ ವ್ಯವಸ್ಥಿತಃ ।
ಮೇರುರುಲ್ಬಮಭೂತ್ತಸ್ಯ ಜರಾಯುಶ್ಚ ಮಹೀಧರಾಃ ॥ ೧೦೫ ॥

ಗರ್ಭೋದಕಂ ಸಮುದ್ರಾಶ್ಚ ತಸ್ಯಾಽಸಂಶ್ಚ ಮಹಾತ್ಮನಃ ।
ತತ್ರ ದ್ವೀಪಾಃ ಸಮುದ್ರಾಶ್ಚ ಸಜ್ಯೋತಿರ್ಲೋಕಸಂಗ್ರಹಃ ॥ ೧೦೬ ॥

ತಸ್ಮಿನ್ನಂಡೇಽಭವನ್ವೀರ ಸದೇವಾಸುರಮಾನುಷಾಃ ।
ವಾರಿವಹ್ನ್ಯನಿಲಾಕಾಶೈರ್ವೃತೈರ್ಭೂತಾದಿನಾ ಬಹಿಃ ॥ ೧೦೭ ॥

---

೧೦೩. ಪುರುಷನು, ಇವುಗಳಲ್ಲಿ ಸೇರಿರುವುದರಿಂದಲೂ, ಅವನ ಅನುಗ್ರಹದಿಂದಲೂ ಮಹತ್ತನ್ನೇ ಮೊದಲು ಮಾಡಿಕೊಂಡು ವಿಶೇಷದ ಪರ್ಯಂತವಾಗಿರುವ ಅಂಡಗಳನ್ನು ಉತ್ಪತ್ತಿಮಾಡುತ್ತವೆ.

೧೦೪. ನೀರಿನ ಗುಳ್ಳೆಯಂತಿದ್ದ ಆ ಅಂಡವು ಕ್ರಮದಿಂದ ದಪ್ಪವಾಗುತ್ತದೆ. ಇದು ಅವ್ಯಕ್ತವಾದ ಸ್ವರೂಪವುಳ್ಳದ್ದಾಗಿಯೂ, ಜನಾರ್ದನನು ವ್ಯಕ್ತವಾಗಿಯೂ ಆಗಿರುತ್ತಾರೆ.

೧೦೫. ಬ್ರಹ್ಮನು ಸ್ವಸ್ವರೂಪದಿಂದ ಇರುತ್ತಾನೆ. ಆ ಬ್ರಹ್ಮನಿಗೆ ಮೇರುವು ಚೀಲದೊಳಗಿರುವ ಉಲ್ಬವೆಂಬ ಪದಾರ್ಥವಾಗಿಯೂ, ಮಿಕ್ಕ ಬೆಟ್ಟಗಳು ಜರಾಯು ವೆಂಬ ಚೀಲವಾಗಿಯೂ ಇರುತ್ತವೆ.

೧೦೬. ಸಮುದ್ರಗಳು ಗರ್ಭದೊಳಗಿನ ನೀರಾಗಿಯೂ, ಆ ಬ್ರಹ್ಮನಿಗೆ ಆದುವು.

೧೦೭. ಅದರೊಳಗೆ ದ್ವೀಪಗಳು ಸಮುದ್ರಗಳು, ಜ್ಯೋತಿಸ್ಸು, ಲೋಕಗಳು ಉಂಟಾದುವು. ನೀರು, ಬೆಂಕಿ, ಗಾಳಿ, ಆಕಾಶ, ಪೃಥಿವಿಗಳು ಇವು ಹೊರಗೆ ಆವರಿಸಿಕೊಂಡಿದ್ದುವು. ಎಂದರೆ ಯಥೇಚ್ಛವಾಗಿ ಕಂಡುಬಂದುವು.

ವೃತಂ ದಶಗುಣೈರಂಡಂ ಭೂತಾದಿರ್ಮಹತಾ ತಥಾ ।
ಅವ್ಯಕ್ತೇನಾವೃತೋ ರಾಜಂಸ್ತೈಸ್ಸರ್ವೈಸ್ಸಹಿತೋ ಮಹಾನ್ ॥ ೧೦೮ ॥

ಏಭಿರಾವರಣೈಸ್ಸರ್ವೈಸ್ಸರ್ವಭೂತೈಶ್ಚ ಸಂಯುತಂ ।
ನಾರಿಕೇಲಫಲಂ ಯದ್ವದ್ಬೀಜಂ ಬಾಹ್ಯಫಲೈರಿವ ॥ ೧೦೯ ॥

ಬ್ರಹ್ಮಾ ಸ್ವಯಂ ಚ ಜಗತೋ ವಿಸೃಷ್ಟೌ ಸಂಪ್ರವರ್ತತೇ ।
ಸೃಷ್ಟಿಂ ಚ ಯಾತ್ಯನುಯುಗಂ ಯಾವತ್ಕಲ್ಪವಿಕಲ್ಪನಾ ॥ ೧೧೦ ॥

ಸ ಸಂಜ್ಞಾಂ ಯಾತಿ ಭಗವಾನೇಕ ಏವ ಜನಾರ್ದನಃ ।
ಸತ್ತ್ವಭುಗ್ಗುಣವಾನ್ದೇವೋ ಹ್ಯಪ್ರಮೇಯಪರಾಕ್ರಮಃ ॥ ೧೧೧ ॥

ತಮೋದ್ರೇಕಂ ಚ ಕಲ್ಪಾಂತೇ ರೂಪಂ ರೌದ್ರಂ ಕರೋತಿ ಚ ।
ರಾಜೇಂದ್ರಾಖಿಲಭೂತಾನಿ ಭಕ್ಷಯತ್ಯತಿಭೀಷಣಃ ॥ ೧೧೨ ॥

---

೧೦೮. ಹತ್ತು ಗುಣಗಳಿಂದಲೂ, ಪೃಥಿವ್ಯಾದಿ ಭೂತಗಳಿಂದಲೂ, ಮಹತ್ತಿನಿಂದಲೂ ಆ ಅಂಡವು ಕೂಡಿರುತ್ತದೆ. ಆ ಮಹತ್ತೂ ಕೂಡ ಇವೆಲ್ಲದರಿಂದಲೂ ಅವ್ಯಕ್ತವಾಗಿ ಕೂಡಿರುತ್ತದೆ. ಇವೆಲ್ಲವುಗಳಿಂದಲೂ ಮಹತ್ತು ಕೂಡಿರುತ್ತದೆ.

೧೦೯. ತೆಂಗಿನಕಾಯಿನ ಬೀಜವು ಹೊರಗಿನ ವಸ್ತುಗಳಿಂದ ಹೇಗೆ ಸುತ್ತುವರಿಯಲ್ಪಟ್ಟಿದೆಯೋ ಹಾಗೆ ಈ ಆವರಣಗಳಿಂದಲೂ ಎಲ್ಲಾ ಭೂತಗಳಿಂದಲೂ ಆ ಬ್ರಹ್ಮವು ಕೂಡಿರುತ್ತದೆ.

೧೧೦. ಬ್ರಹ್ಮನು ತಾನಾಗಿಯೇ ಪ್ರಪಂಚದ ಸೃಷ್ಟಿಯಲ್ಲಿ ತೊಡಗುತ್ತಾನೆ. ಕಲ್ಪವೂ ನಾಶವಾಗುವವರೆಗೂ ಬ್ರಹ್ಮನು ಯುಗಯುಗದಲ್ಲಿಯೂ ಹೀಗೆಯೇ ಸೃಷ್ಟಿಯನ್ನು ಹೊಂದುತ್ತಾನೆ.

೧೧೧. ಸತ್ವಗುಣದಿಂದ ಕೂಡಿಕೊಂಡು ಭಗವಂತನಾದ, ಅಪ್ರಮೇಯ ಪರಾಕ್ರಮವುಳ್ಳ ಆ ಜನಾರ್ದನನು ಆಯಾಯ ಹೆಸರುಗಳನ್ನು ಹೊಂದುತ್ತಾನೆ.

೧೧೨. ಕಲ್ಪದ ಕೊನೆಯಲ್ಲಿ ತಮೋಗುಣವನ್ನು ಹೊಂದಿ ರುದ್ರನ ರೂಪವನ್ನು ಹೊಂದುತ್ತಾನೆ. ಆಗ ಅತಿ ಭಯಂಕರನಾಗಿ ಎಲ್ಲಾ ಪ್ರಾಣಿಗಳನ್ನೂ ನಾಶ ಮಾಡುತ್ತಾನೆ.

ಭಕ್ಷಯಿತ್ವಾ ಚ ಭೂತಾನಿ ಜಗತ್ಯೇಕಾರ್ಣವೀಕೃತೇ ।
ನಾಗಪರ್ಯಂಕಶಯನೇ ಶೇತೇ ಸರ್ವಸ್ವರೂಪಧೃಕ್ ॥ ೧೧೩ ॥

ಪ್ರಬುದ್ಧಶ್ಚ ಪುನಸ್ಸೃಷ್ಟಿಂ ಪ್ರಕರೋತಿ ಚ ರೂಪಧೃಕ್ ।
ಸೃಷ್ಟಿಸ್ಥಿತ್ಯಂತಕರಣಾದ್ಬ್ರಹ್ಮವಿಷ್ಣುಶಿವಾತ್ಮಕಃ ॥ ೧೧೪ ॥

ಸ್ರಷ್ಟಾ ಸೃಜತಿ ಚಾತ್ಮಾನಂ ವಿಷ್ಣುಃ ಪಾಲ್ಯಂ ಚ ಪಾತಿ ಚ ।
ಉಪಸಂಹ್ರಿಯತೇ ಚಾಪಿ ಸಂಹರ್ತಾ ಚ ಸ್ವಯಂ ಪ್ರಭುಃ ॥ ೧೧೫ ॥

ಪೃಥಿವ್ಯಾಪಸ್ತಥಾ ತೇಜೋ ವಾಯುರಾಕಾಶಮೇವ ಚ ।
ಸ ಏವ ಸರ್ವಭೂತೇಶೋ ವಿಶ್ವರೂಪೋ ಯತೋಽವ್ಯಯಃ ।
ಸರ್ಗಾದಿಕಂ ತತೋಽಸ್ಯೈವ ಭೂತಸ್ಥಮುಪಕಾರಕಂ ॥ ೧೧೬ ॥

---

೧೧೩. ಪ್ರಾಣಿಗಳನ್ನೆಲ್ಲಾ ತಿಂದು ಪ್ರಪಂಚವೇ ಒಂದೇ ಸಮುದ್ರವಂತೆ ನೀರಿ ನಿಂದಾವರಿಸಲ್ಪಟ್ಟಾಗ ಆ ಸ್ವಾಮಿಯು ಶೇಷನ ಹಾಸಿಗೆಯಲ್ಲಿ ಸರ್ವವನ್ನು ತಾನೇ ಧರಿಸಿ ಮಲಗುತ್ತಾನೆ.

೧೧೪. ಎಚ್ಚೆತ್ತಮೇಲೆ ರೂಪವನ್ನು ಮತ್ತೆ ಹೊಂದಿ, ಸೃಷ್ಟಿಯನ್ನು ಮಾಡು ತ್ತಾನೆ. ಸೃಷ್ಟಿ, ಸ್ಥಿತಿ, ನಾಶಗಳನ್ನು ಮಾಡುವುದರಿಂದ ಬ್ರಹ್ಮ, ವಿಷ್ಣು, ಶಿವನೆಂದು ಹೆಸರನ್ನು ಹೊಂದುತ್ತಾನೆ.

೧೧೫. ಬ್ರಹ್ಮನಾಗಿ ಎಲ್ಲವನ್ನೂ ತನ್ನನ್ನೂ ಕೂಡ ಉತ್ಪತ್ತಿಮಾಡಿಕೊಳ್ಳು ತ್ತಾನೆ. ವಿಷ್ಣುವಾಗಿ ಕಾಪಾಡಬೇಕಾದುದನ್ನು ಕಾಪಾಡುತ್ತಾನೆ. ರುದ್ರನಾಗಿ ಎಲ್ಲ ವನ್ನೂ ಆ ಪ್ರಭುವೇ ಸಂಹರಿಸುತ್ತಾನೆ.

೧೧೬. ಭೂಮಿ, ನೀರು, ತೇಜಸ್ಸು, ವಾಯು, ಆಕಾಶ ಇವೆಲ್ಲವೂ ಆ ಸ್ವಾಮಿ ಯಾದ ಬ್ರಹ್ಮನೇ. ಪ್ರಪಂಚದ ರೂಪವೂ, ಅವ್ಯಯನಾದ ಅವನೇ. ಅವುಗಳಿಂದಲೇ ಪ್ರಪಂಚದ ಉತ್ಪತ್ತಿಯನ್ನು ಮಾಡುತ್ತಾನೆ. ಇವನೇನೇ ಈ ರೀತಿ ಭೂತಗಳಲ್ಲಿದ್ದು ಕೊಂಡು ಉಪಕಾರವನ್ನು ಮಾಡುತ್ತಾನೆ.

ಜ ಸರ್ಗಕರ್ತಾ
ಪ್ರ[illegible] ಪಾಲ್ಯತೇ ಗತಃ ।
ಸ್ವಾಭಿರಶೇಷಮೂರ್ತಿ-
ವರಿಷ್ಠೋ ವರದೋ ವರೇಣ್ಯಃ ॥ ೧೧೭ ॥

ಶ್ರೀಮಹಾಪುರಾಣೇ ಪಾದ್ಮೇ ಪಂಚಮೇ ಸೃಷ್ಟಿಖಂಡೇ
ಸೃಷ್ಟಿಕರಣಂ ನಾಮ ದ್ವಿತೀಯೋಽಧ್ಯಾಯಃ.

---

೧೧೭. ಉತ್ಪತ್ತಿಹೊಂದುವವನೂ ಆ ಬ್ರಹ್ಮನೇ. ಉತ್ಪತ್ತಿಮಾಡುವವನೂ ಅವನೇನೇ. ಅವನನ್ನೇ ಕಾಪಾಡಿಕೊಳ್ಳಬೇಕು. ಅವನೇ ಕಾಪಾಡುವವನೂ ಆ ಉತ್ತಮನೂ ವರವನ್ನು ಕೊಡುವವನೂ ಶ್ರೇಷ್ಠನೂ ಆದ ಆ ಸ್ವಾಮಿಯೇ ಬ್ರಹ್ಮ, ವಿಷ್ಣು, ರುದ್ರಾವಸ್ಥೆಗಳನ್ನು ಹೊಂದುವನು.

ಇಲ್ಲಿಗೆ ಶ್ರೀಪದ್ಮಮಹಾಪುರಾಣದ ಐದನೆಯದಾದ ಸೃಷ್ಟಿಖಂಡದಲ್ಲಿ
ಸೃಷ್ಟಿಕರಣವೆಂಬ ಎರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## ತೃತೀಯೋಽಧ್ಯಾಯಃ

॥ ಭೀಷ್ಮ ಉವಾಚ ॥

ನಿರ್ಗುಣಸ್ಯಾಪ್ರಮೇಯಸ್ಯ ಶುದ್ಧಸ್ಯಾಪಿಮಹಾತ್ಮನಃ ।
ಕಥಂ ಸರ್ಗಾದಿಕರ್ತೃತ್ವಂ ಬ್ರಹ್ಮಣೋ ಹ್ಯುಪಪದ್ಯತೇ ॥ ೧ ॥

॥ ಪುಲಸ್ತ್ಯ ಉವಾಚ ॥

ಶಕ್ತಯಸ್ಸರ್ವಭಾವಾನಾಮಚಿಂತ್ಯಜ್ಞಾನಗೋಚರಾಃ ।
ಯತ್ರತೋ ಬ್ರಹ್ಮಣಸ್ತಾಸ್ತು ಸರ್ಗಾದ್ಯಾ ಭಾವಶಕ್ತಯಃ ॥ ೨ ॥

ಉತ್ಪನ್ನಃ ಪ್ರೋಚ್ಯತೇ ವಿದ್ವಾನ್ನಿತ್ಯ ಏವೋಪಚಾರತಃ ।
ನಿಜೇನ ಸ್ವಸ್ವಮಾನೇನ ಆಯುರ್ವರ್ಷಶತಂ ಸ್ಮೃತಂ ॥ ೩ ॥

### ಮೂರನೆಯ ಅಧ್ಯಾಯವು.

೧. ಭೀಷ್ಮನು ಹೇಳಿದನು ;—ಗುಣರಹಿತನೂ, ಇಂಥವನೆಂದು ತಿಳಿಯಲು ಆಗದೆಯೂ ಇರುವ, ಶುದ್ಧನಾದ ಆ ಮಹಾತ್ಮನಾದ ಬ್ರಹ್ಮನಿಗೆ ಸೃಷ್ಟಿ, ಸ್ಥಿತಿ, ಲಯ ಗಳಲ್ಲಿ ಕರ್ತೃವಾಗುವಿಕೆಯು ಹೇಗೆ ಉಂಟಾಗುತ್ತದೆ ?

೨. ಪುಲಸ್ತ್ಯನು ಹೇಳಿದನು :—ಭಾವಶಕ್ತಿಗಳನ್ನು ಯೋಚಿಸಲು ಕೂಡಾ ಆಗುವುದಿಲ್ಲ. ಜ್ಞಾನಕ್ಕೂ ನಿಲುಕುವುದಿಲ್ಲ. ಆದ್ದರಿಂದ ಬ್ರಹ್ಮನ ಭಾವಶಕ್ತಿಗಳೇ ಈ ಸೃಷ್ಟಿ ಮುಂತಾದವು.

೩. ತಿಳಿವಳಿಕೆಯುಳ್ಳವರು ನಿತ್ಯವಾದ ಆ ಬ್ರಹ್ಮನನ್ನೂ ಉತ್ಪನ್ನನೆಂದೆನ್ನು ತ್ತಾರೆ. ಅದು ಔಪಚಾರಿಕವಾದ ಮಾತು. ಅವರವರ ಅಳತೆಗಳಿಂದ ಅವಕ್ಕೆ ನೂರು ವರ್ಷಗಳು ಆಯುಸ್ಸೆಂದು ತಿಳಿಯಬೇಕು.

ತತ್ಪರಾಖ್ಯಂ ಪರಾರ್ಧಂ ಚ ತದರ್ಧಂ ಪರಿಕೀರ್ತಿತಂ ।
ಕಾಷ್ಠಾ ಪಂಚದಶಾಖ್ಯಾತಾ ನಿಮೇಷಾ ಮುನಿಸತ್ತಮಾಃ ॥ ४ ॥

ಕಾಷ್ಠಾಸ್ತ್ರಿಂಶತ್ಕಲಾಸ್ತ್ರಿಂಶತ್ಕಾಲೋ ಮೌಹೂರ್ತಿಕೋ ವಿಧಿಃ ।
ತಾವತ್ಸಂಖ್ಯೈರಹೋರಾತ್ರಂ ಮುಹೂರ್ತೈರ್ಮಾನುಷಂ ಸ್ಮೃತಂ ॥ ೫ ॥

ಅಹೋರಾತ್ರಾಣಿ ತಾವಂತಿ ಮಾಸಃ ಪಕ್ಷದ್ವಯಾತ್ಮಕಃ ।
ಸ್ವಪ್ರಮಾಣೈಶ್ಶತೈಸ್ಸಂಧ್ಯಾ ಪೂರ್ವಾ ತತ್ರಾಭಿಧೀಯತೇ ॥ ೬ ॥

ಸಂಧ್ಯಾಂಶಕಶ್ಚ ತತ್ತುಲ್ಯೋ ಯುಗಸ್ಯಾನಂತರೋ ಹಿ ಯಃ ।
ಸಂಧ್ಯಾಸಂಧ್ಯಾಂಶಯೋರಂತಃ ಕಾಲೋ ಯೋ ನೃಪಸತ್ತಮ ॥ ೭ ॥

ಯುಗಾಖ್ಯಸ್ಸ ತು ವಿಜ್ಞೇಯಃ ಕೃತತ್ರೇತಾದಿಸಂಜ್ಞಿತಃ ।
ಕೃತಂ ತ್ರೇತಾ ದ್ವಾಪರಶ್ಚ ಕಲಿಶ್ಚೈವ ಚತುರ್ಯುಗಂ ॥ ೮ ॥

ಪ್ರೋಚ್ಯತೇ ತತ್ಸಹಸ್ರಂ ತು ಬ್ರಹ್ಮಣೋ ದಿವಸಂ ನೃಪ ।
ಬ್ರಹ್ಮಣೋ ದಿವಸೇ ರಾಜನ್ಮನವಶ್ಚ ಚತುರ್ದಶ ॥ ೯ ॥

---

೪-೬. ಆ ಆಯುಸ್ಸು ಪರಾಸಂಖ್ಯಾಕವಾದುದು. ಅದರ ಅರ್ಧವು ಪರಾರ್ಧ ವೆಂದೂ ಹೇಳಲ್ಪಟ್ಟಿದೆ. ಎಲೈ ಋಷಿಗಳೇ, ಹದಿನೈದು ನಿಮಿಷಗಳು ಒಂದು ಕಾಷ್ಠ ವೆನ್ನಿಸಿಕೊಳ್ಳುತ್ತವೆ. ಮೂವತ್ತು ಕಾಷ್ಠಗಳು ಒಂದು ಕಲೆ, ಆ ಮೂವತ್ತು ಕಲೆಗಳು ಒಂದು ಮುಹೂರ್ತವಾಗುತ್ತದೆ. ಮೂವತ್ತು ಮುಹೂರ್ತಗಳು ಒಂದು ಅಹೋ ರಾತ್ರಿ (ದಿನ) ಯಾಗುತ್ತದೆ. ಇದು ಮಾನುಷವಾದುದು. ಮೂವತ್ತು ಅಹೋರಾತ್ರಿ ಗಳು (ದಿನ) ಒಂದು ಮಾಸವೆನ್ನಿಸಿಕೊಳ್ಳುತ್ತವೆ. ಆ ಮಾಸಕ್ಕೆ ಎರಡು ಪಕ್ಷಗಳು. ಅಂತಹ ನೂರು ಮಾಸಗಳು ಒಂದು ಪೂರ್ವಸಂಧ್ಯೆ ಎನ್ನಿಸಿಕೊಳ್ಳುತ್ತದೆ.

೭-೮. ಮತ್ತೊಂದು ಅಷ್ಟೇ ಇದ್ದರೆ ಅದು ಅಪರಸಂಧ್ಯೆಯು. ಮೊದಲನೆಯ ಸಂಧ್ಯೆಯ ಕೊನೆ, ಎರಡನೆಯ ಸಂಧ್ಯೆಯ ಆದಿ ಈ ಮಧ್ಯಕ್ಕೆ ಯುಗವೆನ್ನುತ್ತಾರೆ. ಆ ಯುಗಗಳು ಕೃತ, ತ್ರೇತ, ದ್ವಾಪರ, ಕಲಿ ಎಂಬುದಾಗಿ ನಾಲ್ಕು ಇವೆ.

೯. ಆ ಸಾವಿರ ಯುಗಗಳು ಬ್ರಹ್ಮನಿಗೊಂದು ದಿವಸವಾಗುತ್ತವೆ. ಈ ಬ್ರಹ್ಮನ ದಿವಸದಲ್ಲಿ ಹದಿನಾಲ್ಕು ಮನುಗಳು ಇರುತ್ತಾರೆ.

ಭವಂತಿ ಪರಿಮಾಣಂ ಚ ತೇಷಾಂ ಕಾಲಕೃತಂ ಶೃಣು ।
ಸಪ್ತರ್ಷಯಸ್ಸುರಾಶ್ಶಕ್ರೋ ಮನುಸ್ತತ್ಸೂನವೋ ನೃಪ ॥ ೧೦ ॥

ಏಕಕಾಲೇ ಹಿ ಸೃಜ್ಯಂತೇ ಸಂಹ್ರಿಯಂತೇ ಚ ಪೂರ್ವವತ್ ।
ಚತುರ್ಯುಗಾಣಾಂ ಸಂಖ್ಯಾತಾ ಸಾಧಿಕಾ ಹ್ಯೇಕಸಪ್ತತಿಃ ॥ ೧೧ ॥

ಮನ್ವಂತರಂ ಮನೋಃ ಕಾಲಃ ಸುರಾದೀನಾಂ ಚ ಪಾರ್ಥಿವ ।
ಅಷ್ಟೌ ಶತಸಹಸ್ರಾಣಿ ದಿವ್ಯಯಾ ಸಂಖ್ಯಯಾ ಸ್ಮೃತಃ ॥ ೧೨ ॥

ದ್ವಾಪಂಚಾಶತ್ತಥಾನ್ಯಾನಿ ಸಹಸ್ರಾಣ್ಯಧಿಕಾನಿ ಚ ।
ತ್ರಿಂಶತ್ಕೋಟ್ಯಸ್ತು ಸಂಪೂರ್ಣಾಃ ಸಂಖ್ಯಾತಾಃ ಸಂಖ್ಯಯಾ ನೃಪ ॥ ೧೩ ॥

ಸಪ್ತಷಷ್ಟಿಸ್ತಥಾನ್ಯಾನಿ ನಿಯುತಾನಿ ಮಹಾಮತೇ ।
ವಿಂಶತಿಶ್ಚ ಸಹಸ್ರಾಣಿ ಕಾಲೋಽಯಮಧಿಕಂ ವಿನಾ ॥ ೧೪ ॥

ಮನ್ವಂತರಸ್ಯ ಸಂಖ್ಯೇಯಂ ಮಾನುಷೈರಿಹ ವತ್ಸರೈಃ ।
ಸೋಽಯಂ ಮನುಪ್ರಮಾಣೇನ ಕಾಲೋ ಬ್ರಾಹ್ಮಮಹಸ್ಸ್ಮೃತಂ ॥ ೧೫ ॥

೧೦. ಇದು ಅವರ ಕಾಲದ ಪರಿಮಾಣವು (ಅಳತೆಯು). ಸಪ್ತರ್ಷಿಗಳೂ, ದೇವತೆಗಳೂ, ಇಂದ್ರನೂ, ಮನುವೂ, ಮನುವಿನ ಮಕ್ಕಳೂ ಇರುತ್ತಾರೆ.

೧೧. ಅವರೆಲ್ಲರನ್ನೂ ಕೂಡ ಒಂದೇ ಸಾರಿ ಸೃಷ್ಟಿಸುತ್ತಾನೆ. ಒಂದೇ ಸಾರಿ ನಾಶಮಾಡುತ್ತಾನೆ. ಈ ಯುಗಗಳು ಇಪ್ಪತ್ತೊಂದಾದರೆ ಅದಕ್ಕೆ ಮನ್ವಂತರವೆಂದು ಹೆಸರು.

೧೨. ನೂರು ಸಾವಿರದ ಎಂಟು ಮನ್ವಂತರಗಳಿಗೆ ಒಂದು ದೇವಸಂವತ್ಸರವು

೧೩-೧೪. ಐವತ್ತೆರಡು ವರ್ಷವೂ, ಮೇಲೆ ಸಾವಿರ ವರ್ಷಗಳು, ಮೂವತ್ತು ಕೋಟಿ ವರ್ಷಗಳೂ ಇವುಗಳಲ್ಲಿ ಅಧಿಕ ಮಾಸದಿನಗಳು ಸೇರಿಲ್ಲ. ಎಂದರೆ ಒಟ್ಟಿನಲ್ಲಿ ಅರವತ್ತೇಳು ನಿಯುತವೂ, ಮೂವತ್ತು ಕೋಟಿಯೂ ಇಪ್ಪತ್ತೊಂದು ಸಾವಿರದ ಐವತ್ತೆರಡು ಮನುಷ್ಯ ವರ್ಷಗಳು. ಇಷ್ಟಕ್ಕೆ ಪ್ರಳಯವಾಗುವುದು. ಇದರಲ್ಲಿ ಅಧಿಕವು ಸೇರಿಲ್ಲ.

೧೫. ಈ ಮೇಲೆ ಹೇಳಿದ ವರ್ಷಗಳು ಮನುಷ್ಯ ವರ್ಷಗಳಿಂದ ಮನ್ವಂತರ ಸಂಖ್ಯೆಯು ಎಂದರೆ ಒಂದು ಮನುವಿನ ವರ್ಷವು, ಈ ಸಂಖ್ಯೆಯ ವರ್ಷಗಳು ಮನು ಪಗೆ ತುಂಬಿದರೆ ಬ್ರಹ್ಮನಿಗೆ ಒಂದು ಹಗಲು ಎನ್ನಿಸಿಕೊಳ್ಳುತ್ತದೆ.

ಬ್ರಾಹ್ಮೋ ನೈಮಿತ್ತಿಕೋ ನಾಮ ತಸ್ಯಾಂತೇ ಪ್ರತಿಸಂಚರಃ ।
ತದಾದಿ ದಹ್ಯತೇ ಸರ್ವಂ ತ್ರೈಲೋಕ್ಯಂ ಭೂರ್ಭುವಾದಿಕಂ ॥ ೧೬ ॥

ಜನಂ ಪ್ರಯಾನ್ತಿ ತಾಪಾರ್ತಾ ಮಹರ್ಲೋಕನಿವಾಸಿನಃ ।
ಏಕಾರ್ಣವೇ ತು ತ್ರೈಲೋಕ್ಯೇ ಬ್ರಹ್ಮಾ ಬ್ರಹ್ಮವಿದಾಂ ವರಃ ॥ ೧೭ ॥

ಭೋಗಿಶಯ್ಯಾಗತಶ್ಶೇತೇ ತ್ರೈಲೋಕ್ಯಗ್ರಾಸಬೃಂಹಿತಃ ।
ಜನಸ್ಥೈರ್ಯೋಗಿಭಿರ್ದೇವಶ್ಚಿಂತ್ಯಮಾನೋ ಜಗದ್ವಿಭುಃ ॥ ೧೮ ॥

ತತ್ಪ್ರಮಾಣಾಂ ಹಿ ತಾಂ ರಾತ್ರಿಂ ತದಂತೇ ಸೃಜತೇ ಪುನಃ ।
ಏವಂ ತು ಬ್ರಹ್ಮಣೋ ವರ್ಷಮೇವಂ ವರ್ಷಶತಂ ಚ ಯತ್ ॥ ೧೯ ॥

ಶತಂ ಹಿ ತಸ್ಯ ವರ್ಷಾಣಾಂ ಪರಮಾಯುರ್ಮಹಾತ್ಮನಃ ।
ಪ್ರಜಾಸ್ಸಸರ್ಜ ಭಗವಾಂಸ್ತತ್ರಾದಿಸ್ಸರ್ವಸಂಭವಃ ॥ ೨೦ ॥

ಅತೀತಕಲ್ಪಾವಸಾನೇ ನಿಶಾಸುಪ್ತೋತ್ಥಿತಃ ಪ್ರಭುಃ ।
ಸತ್ವೋದ್ರಿಕ್ತಸ್ತಥಾ ಬ್ರಹ್ಮಾ ಶೂನ್ಯಂ ಲೋಕಮಪಶ್ಯತ ॥ ೨೧ ॥

---

೧೬. ಇದು ಬ್ರಾಹ್ಮವಾದ ನೈಮಿತ್ತಿಕವಾದ ಪ್ರಳಯವು. ಆ ಅಹಸ್ಸಿನ ಆದಿಯಲ್ಲಿ ಭೂರ್ಭುವಸ್ಸ್ವರ್ಲೋಕಗಳು ನಾಶವಾಗುತ್ತವೆ.

೧೭. ಆಗ ಮಹರ್ಲೋಕನಿವಾಸಿಗಳಾದವರು ತಾಪವನ್ನು ಸಹಿಸಲಾರದೆ ಜನೋಲೋಕಕ್ಕೆ ಓಡುತ್ತಾರೆ. ಮೂರು ಲೋಕಗಳೂ ನೀರಿನ ಮಯವಾದಾಗ ಬ್ರಹ್ಮನು ಸರ್ಪಶಯ್ಯೆಯಲ್ಲಿ ಮೂರು ಲೋಕಗಳನ್ನೂ ಹೊಟ್ಟೆಯಲ್ಲಿಟ್ಟುಕೊಂಡು ಮಲಗುತ್ತಾನೆ.

೧೮-೧೯. ಜನೋಲೋಕವಲ್ಲಿರುವ ಯೋಗಿಗಳಿಂದ ಸ್ಮರಿಸಲ್ಪಟ್ಟವನಾಗಿ ಬ್ರಹ್ಮನು ಅವರಿಗೆ ಯೋಗ್ಯವಾದ ರೀತಿಯಲ್ಲಿ ರಾತ್ರಿಯನ್ನು ಸೃಷ್ಟಿಸುತ್ತಾನೆ. ಹೀಗೆ ಬ್ರಹ್ಮನಿಗೆ ದಿನವೂ ವರ್ಷವೂ ಆಗುತ್ತವೆ.

೨೦. ಆ ಬ್ರಹ್ಮನಿಗೆ ಅವನ ವರ್ಷಗಳು ನೂರು ಆಯುಸ್ಸು. ಹೀಗೆ ಪ್ರಜೆಗಳನ್ನು ಸೃಷ್ಟಿಮಾಡಿದನು. ಮೊದಲು ಉತ್ಪತ್ತಿಯಾಗುವುದು ಈ ರೀತಿಯಾಗೆಂದು ತಿಳಿಯುವುದು.

೨೧. ಈ ಕಲ್ಪದ ಕೊನೆಯಲ್ಲಿ ರಾತ್ರಿ ಮಲಗಿ ಎದ್ದು, ಆ ಬ್ರಹ್ಮನು ಸತ್ವಗುಣದಿಂದ ಕೂಡಿದವನಾಗಿ ಲೋಕವೆಲ್ಲವೂ ಬರಿಯದಾಗಿರುವುದನ್ನು ಕಂಡನು.

ತೋಯಾಂತೇ ಸ ಮಹೀಂ ಜ್ಞಾತ್ವಾ ನಿಮಗ್ನಾಂ ವಾರಿಸಂಪ್ಲವೇ ।
ಪ್ರವಿಚಿಂತ್ಯ ತದುದ್ಧಾರಂ ಕರ್ತುಕಾಮಃ ಪ್ರಜಾಪತಿಃ ॥ ೨೨ ॥

ವಿಷ್ಣುರೂಪಂ ತದಾ ಜ್ಞಾತ್ವಾ ಪೃಥ್ವೀಂ ವೋಢುಂ ಸ್ವತೇಜಸಾ ।
ಮತ್ಸ್ಯಕೂರ್ಮಾದಿಕಾಂಶ್ಚಾನ್ಯಾನ್ವಾರಾಹೀಂ ತನುಮಾವಿಶತ್ ॥ ೨೩ ॥

ವೇದಯಜ್ಞಮಯಂ ರೂಪಮಶೇಷಜಗತಸ್ಸ್ಥಿತೌ ।
ಪ್ರವಿವೇಶ ತದಾ ತೋಯಂ ತೋಯಾಧಾರೇ ಧರಾಧರಃ ॥ ೨೪ ॥

ನಿರೀಕ್ಷ್ಯ ತಂ ತದಾ ದೇವೀ ಪಾತಾಲತಲಮಾಗತಂ ।
ತುಷ್ಟಾವ ಪ್ರಣತಾ ಭೂತ್ವಾ ಭಕ್ತಿನಮ್ರಾ ವಸುಂಧರಾ ॥ ೨೫ ॥

॥ ಪೃಥಿವ್ಯುವಾಚ ॥

ನಮಸ್ತೇ ಸರ್ವಭೂತಾಯ ನಮಸ್ತೇ ಪರಮಾತ್ಮನೇ ।
ಮಾಮುದ್ಧರಾಸ್ಮಾದದ್ಯ ತ್ವಂ ತ್ವತ್ತೋಽಹಂ ಪೂರ್ವಮುತ್ಥಿತಾ ॥ ೨೬ ॥

ಪರಮಾತ್ಮನ್ನಮಸ್ತೇಽಸ್ತು ಪುರುಷಾಯ ನಮೋಽಸ್ತು ತೇ ।
ಪ್ರಧಾನವ್ಯಕ್ತರೂಪಾಯ ಕಾಲಭೂತಾಯ ತೇ ನಮಃ ॥ ೨೭ ॥

---

೨೨-೨೩. ಆಗ ಆ ಬ್ರಹ್ಮನು ನೀರಿನೊಳಗೆ ಭೂಮಿಯು ಮುಳುಗಿರುವುದನ್ನು ತಿಳಿದು, ಅದನ್ನು ಎತ್ತಬೇಕೆಂದು ಯೋಚಿಸಿ ಹಾಗೆ ಮಾಡಲು ವಿಷ್ಣು ರೂಪವನ್ನು ಹೊಂದಿ ತನ್ನ ಶಕ್ತಿಯಿಂದ ಭೂಮಿಯನ್ನು ಮೇಲಕ್ಕೆತ್ತಲು, ಮೀನು, ಆಮೆ, ಹಂದಿ ಮುಂತಾದ ಅವತಾರಗಳನ್ನು ಮಾಡಿದನು.

೨೪. ಈ ಸ್ವಾಮಿಯು ವೇದಯಜ್ಞಗಳ ರೂಪವನ್ನು ಪ್ರಪಂಚದ ಸ್ಥಿತಿಗೋಸ್ಕರ ಹೊಂದಿದನು. ನೀರಿನೊಳಗೆ ಭೂಮಿಯನ್ನು ಎತ್ತಲು ಪ್ರವೇಶಿಸಿದನು.

೨೫. ಪಾತಾಳದ ಬುಡಕ್ಕೆ ಬಂದ ಆ ಸ್ವಾಮಿಯನ್ನು ಭೂದೇವಿಯು ನೋಡಿ ನಮಸ್ಕರಿಸಿ, ಭಕ್ತಿಯಿಂದ ನಮ್ರಳಾಗಿ ಹೊಗಳಿದಳು.

೨೬. ಪೃಥಿವಿಯು ಹೇಳಿದಳು:—ಸರ್ವಭೂತಸ್ವರೂಪನಾದ ನಿನಗೆ ನಮಸ್ಕಾರವು, ಪರಮಾತ್ಮನಾದ ನಿನಗೆ ನಮಸ್ಕಾರವು, ಈಗ ಈ ಕಷ್ಟದಿಂದ ನನ್ನನ್ನು ಕಾಪಾಡು, ನೀನೇ ನನ್ನನ್ನು ಮೊದಲೂ ಉದ್ಧಾರಮಾಡಿದ್ದೆ.

೨೭. ಪರಮಾತ್ಮನೇ, ನಿನಗೆ ನಮಸ್ಕಾರವು, ಪರಮಪುರುಷನೇ, ನಿನಗೆ ನಮಸ್ಕಾರವು. ಪ್ರಧಾನನೂ, ವ್ಯಕ್ತನೂ ಆದ ನಿನಗೆ ನಮಸ್ಕಾರವು, ಕಾಲಸ್ವರೂಪನಾದ ನಿನಗೆ ನಮಸ್ಕಾರವು.

**ತ್ವಂ ಕರ್ತಾ ಸರ್ವಭೂತಾನಾಂ ತ್ವಂ ಪಾತಾ ತ್ವಂ ವಿನಾಶಕೃತ್ ।**
**ಸರ್ಗಾದೌ ಯಃ ಪರೋ ಬ್ರಹ್ಮಾ ವಿಷ್ಣುರುದ್ರಾತ್ಮರೂಪಧೃಕ್ ॥ ೨೮ ॥**

**ಭವತೋ ಯತ್ಪರಂ ರೂಪಂ ತನ್ನಜಾನಾತಿ ಕಶ್ಚನ ।**
**ಅವತಾರೇಷು ಯದ್ರೂಪಂ ತದರ್ಥಂ ತ್ರಿದಿವೌಕಸಃ ॥ ೨೯ ॥**

**ತ್ವಾಮಾರಾಧ್ಯ ಪರಂ ಬ್ರಹ್ಮ ಯಾತಾ ಮುಕ್ತಿಂ ಮುಮುಕ್ಷವಃ ।**
**ವಾಸುದೇವಮನಾರಾಧ್ಯ ಕೋ ಮೋಕ್ಷಂ ಸಮವಾಪ್ಸ್ಯತೇ ॥ ೩೦ ॥**

**ಯದ್ರೂಪಂ ಮನಸಾ ಗ್ರಾಹ್ಯಂ ಯದ್ಗ್ರಾಹ್ಯಂ ಚಕ್ಷುರಾದಿಭಿಃ ।**
**ಬುದ್ಧ್ಯಾ ಚ ಯತ್ಪರಿಚ್ಛೇದ್ಯಂ ತದ್ರೂಪಮಖಿಲಂ ತವ ॥ ೩೧ ॥**

**ತ್ವನ್ಮಯಾಹಂ ತ್ವದಾಧಾರಾ ತ್ವತ್ಸೃಷ್ಟಾ ತ್ವಾಮುಪಾಶ್ರಿತಾ ।**
**ಮಾಧವೀಮಿತಿ ಲೋಕೋಽಯಮಭಿಧತ್ತೇ ತತೋ ಹಿ ಮಾಂ ॥ ೩೨ ॥**

---

೨೮. ಎಲ್ಲಾ ಪ್ರಾಣಿಗಳನ್ನು ಸೃಷ್ಟಿಸಿದವನೇ ನೀನು, ನೀನೇ ಕಾಪಾಡುವವನು, ನೀನೇ ನಾಶಮಾಡುವವನು, ಎಲ್ಲವೂ ಹುಟ್ಟುವಾಗ ಬ್ರಹ್ಮರೂಪನಾಗಿ, ಅನಂತರ ವಿಷ್ಣು ರುದ್ರರೂಪವನ್ನು ಹೊಂದುತ್ತೀಯೆ.

೨೯. ನಿನ್ನ ರೂಪಗಳನ್ನು ಯಾವನೂ ತಿಳಿಯನು. ನೀನು ತಾಳುವ ಅವತಾರಗಳ ರೂಪವನ್ನು ಹೊಂದುವುದಕ್ಕೋಸ್ಕರಲೇ ದೇವತೆಗಳು ಇರುತ್ತಾರೆ.

೩೦. ಮೋಕ್ಷವನ್ನು ಅಪೇಕ್ಷಿಸಿದವರು ನಿನ್ನನ್ನು ಪೂಜಿಸಿಯೇ ಮೋಕ್ಷವನ್ನು ಪಡೆದರು. ವಾಸುದೇವನಾದ ನಿನ್ನನ್ನು ಆರಾಧಿಸದೆ ಯಾವನು ತಾನೆ ಮೋಕ್ಷವನ್ನು ಹೊಂದುವನು?

೩೧. ಮನಸ್ಸಿನಿಂದಲೂ, ಚಕ್ಷುರಾದಿ ಇಂದ್ರಿಯಗಳಿಂದಲೂ, ಬುದ್ಧಿಯಿಂದಲೂ ಯಾವ ರೂಪವನ್ನು ತಿಳಿಯಬಹುದೋ ಆ ರೂಪವೆಲ್ಲವೂ ನಿನಗಿದೆ.

೩೨. ನನ್ನಲ್ಲಿ ನೀನು ಸಂಪೂರ್ಣವಾಗಿದ್ದೀಯೆ. ನಾನು ನಿನ್ನನ್ನೇ ಆಧಾರವಾಗಿಟ್ಟುಕೊಂಡಿದ್ದೇನೆ. ನೀನೇ ನನ್ನನ್ನು ಸೃಷ್ಟಿಮಾಡಿದೆ. ನಾನೂ ನಿನ್ನನ್ನೇ ಆಶ್ರಯಿಸಿದ್ದೇನೆ. ಮಾಧವನಾದ ನಿನ್ನ ಸಂಬಂಧದವಳು ನಾನಾದುದರಿಂದ ಜನವು ನನ್ನನ್ನು ಮಾಧವೀ ಎಂದು ಕರೆಯುತ್ತದೆ.

ಸ ಚ ಸಂಸ್ತೂಯಮಾನಸ್ತು ಪೃಥಿವ್ಯಾ ಪೃಥಿವೀಧರಃ ।
ಸಾಮಸ್ವರಧ್ವನಿಶ್ರೀಮಾನ್ನಗರ್ಜ ಪರಿಘರ್ಘರಂ ॥ ೩೬ ॥

ತತಸ್ಸಮುತ್ಕ್ಷಿಪ್ಯ ಧರಾಂ ಸ್ವಕೀಲಯಾ
ಮಹಾವರಾಹಃ ಸ್ಫುಟಪದ್ಮಲೋಚನಃ ।
ರಸಾತಲಾದುತ್ಪಲಪುಲ್ಲಸನ್ನಿಭಃ
ಸಮುತ್ಥಿತೋ ನೀಲ ಇವಾಚಲೋ ಮಹಾನ್ ॥ ೩೭ ॥

ಉತ್ತಿಷ್ಠತಾ ತೇನ ಮುಖಾನಿಲಾಹತಾಂ
ಸ್ತದಾಪ್ಲವಾಂಭೋಜನಲೋಕಸಂಶ್ರಯಾನ್ ।
ಸನಂದನಾದೀನಪಕಲ್ಮಷಾನ್ಮುನೀಂ-
ಶ್ಚಕಾರ ಭೂಯೋಽಪಿ ಪವಿತ್ರತಾಸ್ಪದಂ ॥ ೩೮ ॥

ಪ್ರಯಾಂತಿ ತೋಯಾನಿ ಖುರಾಗ್ರವಿಕ್ಷತೇ
ರಸಾತಲೇಽಧಃ ಕೃತಶಬ್ದಸಂತತಿ ।

---

೩೬. ಭೂಮಿಯನ್ನು ಉದ್ಧಾರಮಾಡುವ ಆ ಸ್ವಾಮಿಯನ್ನು ಭೂಮಿಯು ಸ್ತುತಿಸಲು, ಆ ಸ್ವಾಮಿಯು ಸಾಮವ ಧ್ವನಿಯುಳ್ಳವನಾಗಿ ಗಟ್ಟಿಯಾಗಿ ಗರ್ಜಿಸಿದನು.

೩೭. ಸ್ವಾಮಿಯು ದೊಡ್ಡ ಹಂದಿಯ ರೂಪವನ್ನು ತಾಳಿ, ಆ ಭೂಮಿಯನ್ನು ತನ್ನ ಕೋರೆದಾಡೆಯಿಂದ ಮೇಲಕ್ಕೆತ್ತಿ, ಅದರ ಮೇಲೆ ಕೂರಿಸಿಕೊಂಡು ಅರಳಿರುವ ಕನ್ನೈದಿಲೆಯಂತೆ ಪಾತಾಳದ ದೆಸೆಯಿಂದ ದೊಡ್ಡ ನೀಲಪರ್ವತದಂತೆ ಮೇಲಕ್ಕೆ ಎದ್ದನು.

೩೮. ಆ ಸ್ವಾಮಿಯು ತಾನು ರಭಸದಿಂದ ಮೇಲಕ್ಕೇಳುತ್ತಿರುವಾಗ ಆ ಗಾಳಿಯು ತನ್ನ ಸಂಬಂಧದಿಂದ ಸುಖವಾಗಿ ಬೀಸುತ್ತಿರಲು, ಅವನು ಏಳುತ್ತಿರುವಾಗ ಹಾರಿದ ನೀರಿನ ತುಂತುರು ಜನಲೋಕದವರನ್ನು ತೋಯಿಸಿತು. ಅಲ್ಲಿದ್ದ ಸನಂದನನೇ ಮುಂತಾದ ಋಷಿಗಳನ್ನು, ಅವರು ಪಾಪರಹಿತರಾದರೂ ಪವಿತ್ರರನ್ನಾಗಿಮಾಡಿದನು.

೩೯. ರಸಾತಲವನ್ನು ಕಾಲಿನ ಗೊರಸಿನಿಂದ ಕೆರೆಯಲು ಅದರ ಕೆಳಗಡೆ ಬಹುವಾಗಿ ಶಬ್ದವಾಯಿತು. ಉಗುರಿನ ಗಾಳಿಯು ಎಲ್ಲಾ ಕಡೆಗೂ ಹೋಗುತ್ತಿತ್ತು.

ಶ್ವಾಸಾನಿಲಾಸ್ತಾಃ ಪರಿತಃ ಪ್ರಯಾಂತಿ
ಸಿದ್ಧಾ ಜನಾ ಯೇ ನಿಯತಂ ವಸಂತಿ ॥ ೩೬ ॥

ಉತ್ತಿಷ್ಠತಸ್ತಸ್ಯ ಜಲಾರ್ದ್ರಕುಕ್ಷೇ-
ರ್ಮಹಾವರಾಹಸ್ಯ ಮಹೀಂ ವಿದಾರ್ಯ ।
ವಿಧುನ್ವತೋ ವೇದಮಯಂ ಶರೀರಂ
ವ್ಯೋಮಾಂತರಸ್ಥಾ ಮುನಯೋ ಜುಷಂತಿ ॥ ೩೭ ॥

॥ ಮುನಯ ಊಚುಃ ॥

ಜನೇಶ್ವರಾಣಾಂ ಪರಮೇಶಕೇಶವಃ ।
ಪ್ರಭುರ್ಗದಾಶಂಖವರಾಸಿಚಕ್ರಧೃಕ್ ॥
ಪ್ರಸೂತಿನಾಶಸ್ಥಿತಿಹೇತುರೀಶ್ವರ-
ಸ್ತ್ವಮೇವ ನಾನ್ಯತ್ಪರಮಂ ಚ ಯತ್ಪದಂ ॥ ೩೮ ॥

ಪಾದೇಷು ವೇದಾಸ್ತವ ಯೂಪದಂಷ್ಟ್ರ
ದಂತೇಷು ಯಜ್ಞಾಃ ಶ್ರುತಯಶ್ಚ ವಕ್ತ್ರೇ ।

---

ನೀರು ಸುತ್ತುಮುತ್ತಲೂ ಹಾರುತ್ತಿತ್ತು. ಸಿದ್ಧಲೋಕದಲ್ಲಿ ಸಿದ್ಧರವರೆಗೂ ಆ ಉಸಿರಿನ ಗಾಳಿಯು ಹೋಗುತ್ತಿತ್ತು.

೩೭. ಭೂಮಿಯನ್ನು ಕಿತ್ತುಕೊಂಡು ಮೈಯ್ಯೆಲ್ಲವೂ ನೀರಾಗಿ ಮೇಲಕ್ಕೇಳುತ್ತಿರುವ ಆ ವರಾಹನು ತನ್ನ ವೇದಮಯವಾದ ಶರೀರವನ್ನು ಕೊಡವುತ್ತಿರಲು, ಆಕಾಶದಲ್ಲಿದ್ದ ಋಷಿಗಳು ಆಗ ಆ ಸ್ವಾಮಿಯನ್ನು ಸೇವಿಸಿದರು.

೩೮. ಮುನಿಗಳು ಹೇಳಿದರು :—ನೀನೇ ರಾಜರಿಗೆಲ್ಲಾ ಉತ್ತಮನಾದ ಕೇಶವನು. ಗದೆ, ಶಂಖ, ಚಕ್ರ, ಕತ್ತಿಗಳನ್ನು ಧರಿಸಿರುವ ಪ್ರಭುವು. ಉತ್ಪತ್ತಿ, ಸ್ಥಿತಿ, ನಾಶಗಳಿಗೆ ನೀನೇ ಕಾರಣನು. ನೀನೇ ಬೇಕಾದುದನ್ನು ಕೊಡತಕ್ಕವನು. ನಿನ್ನಿಂದ ಬೇರೆಯಾದ ಪರಮಪದವಿಲ್ಲ.

೩೯. ಎಲೈ ಪ್ರಭುವೇ, ನಿನ್ನ ನಾಲ್ಕು ಕಾಲುಗಳಲ್ಲಿ ಚತುರ್ವೇದಗಳೂ, ಕೋರೆದಾಡೆಯಲ್ಲಿ ಯೂಪಸ್ತಂಭವೂ, ಹಲ್ಲುಗಳಲ್ಲಿ ಯಜ್ಞಗಳೂ, ಮುಖದಲ್ಲಿ ಶ್ರುತಿಗಳೂ,

ಹುತಾಶಜಿಹ್ವೋಽಸಿ ತನೂರುಹಾಣಿ
ದರ್ಭಾಃ ಪ್ರಭೋ ಯಜ್ಞಪುಮಾಂಸ್ತ್ವಮೇವ ॥ ೩೯ ॥

ದ್ಯಾವಾಪೃಥಿವ್ಯೋರತುಲಪ್ರಭಾವ
ಯದಂತರಂ ತದ್ವಪುಷಾ ತವೈವ ।
ವ್ಯಾಪ್ತಂ ಜಗದ್ವ್ಯಾಪಿ ಸಮಸ್ತಮೇತ-
ದ್ಧಿತಾಯ ವಿಶ್ವಸ್ಯ ವಿಭೋ ಭವ ತ್ವಂ ॥ ೪೦ ॥

ಪರಮಾತ್ಮಾ ತ್ವಮೇವೈಕೋ ನಾನ್ಯೋಽಸ್ತಿ ಜಗತಃ ಪತೇ ।
ತವೈಷಾ ಮಹಿಮಾ ಯೇನ ವ್ಯಾಪ್ತಮೇತಚ್ಚರಾಚರಂ ॥ ೪೧ ॥

ಜ್ಞಾನಸ್ವರೂಪಮಖಿಲಂ ಜಗದೇತದಬುದ್ಧಯಃ ।
ಅರ್ಥಸ್ವರೂಪಂ ಪಶ್ಯಂತೋ ಭ್ರಾಮ್ಯಂತೇ ತಮಸಃ ಪ್ಲವೇ ॥ ೪೨ ॥

ಯೇ ತು ಜ್ಞಾನವಿದೋ ವೃದ್ಧಾಶ್ಚೇತಸಸ್ತೇಽಖಿಲಂ ಜಗತ್ ।
ಜ್ಞಾನಾತ್ಮಕಂ ಪ್ರಪಶ್ಯಂತಿ ತ್ವದ್ರೂಪಂ ಪರಮೇಶ್ವರ ॥ ೪೩ ॥

---

ನಾಲಿಗೆಯಲ್ಲಿ ಅಗ್ನಿಯೂ, ರೋಮಗಳಲ್ಲಿ ದರ್ಭೆಗಳೂ ಅಡಗಿವೆ. ಆದ್ದರಿಂದ ನೀನೇ ಯಜ್ಞಪುರುಷನಾಗಿದ್ದೀಯೆ.

೪೦. ಬಹಳವಾದ ಪ್ರಭಾವವುಳ್ಳವನೇ, ಭೂಮ್ಯಾಕಾಶಗಳ ಮಧ್ಯೆ ಇರುವ ಜಗವನ್ನೆಲ್ಲಾ ನಿನ್ನ ದೇಹವೇ ವ್ಯಾಪಿಸಿಕೊಂಡಿದೆ. ಈ ಪ್ರಪಂಚವೆಲ್ಲವೂ ನಿನ್ನ ದೇಹವೇನೇ. ಎಲೈ ಪ್ರಭುವೇ, ನೀನು ಈ ಪ್ರಪಂಚದ ಹಿತಕ್ಕೋಸ್ಕರವಿದ್ದೀಯೆ.

೪೧. ನೀನೇ ಪರಮಾತ್ಮನು, ಪ್ರಪಂಚಕ್ಕೆಲ್ಲಾ ನೀನೊಬ್ಬನು ಒಡೆಯನೇ ಹೊರತು ಬೇರೊಬ್ಬನಿಲ್ಲ, ನಿನ್ನ ಮಹಿಮೆಯು ಚರಾಚರ ರೂಪವಾದ ಈ ಪ್ರಪಂಚವನ್ನೇ ವ್ಯಾಪಿಸಿದೆ.

೪೨. ಈ ಪ್ರಪಂಚವೇನೇ ಸಮಸ್ತವಾದ ಜ್ಞಾನಸ್ವರೂಪವು. ಬುದ್ಧಿಯಿಲ್ಲದವರು ಅರ್ಥವನ್ನು ಹುಡುಕುತ್ತಾ ಅಜ್ಞಾನದ ಪರಂಪರೆಯಲ್ಲಿ ಬಿದ್ದು ಸುತ್ತುತ್ತಿರುತ್ತಾರೆ.

೪೩. ವೃದ್ಧರೂ, ಜ್ಞಾನಿಗಳೂ ಆದವರು ಪ್ರಪಂಚವೆಲ್ಲವನ್ನೂ ತಮ್ಮ ಮನಸ್ಸಿನಂತೆ ಜ್ಞಾನಸ್ವರೂಪವನ್ನಾಗಿಯೇ ತಿಳಿಯುತ್ತಾರೆ. ಅದು ನಿನ್ನ ರೂಪವಾದುದಲ್ಲವೇ !

ಪ್ರಸೀದ ಸರ್ವಭೂತಾತ್ಮನ್ಭವಾಯ ಜಗತಸ್ತ್ವಿಮಾಂ ।
ಉದ್ಧರೋರ್ವೀಮಮೇಯಾತ್ಮನ್ನಿಮಗ್ನಾಂ ಜಲಸಂಪ್ಲವೇ ॥ ೪೪ ॥

ಸತ್ತ್ವೋದ್ರಿಕ್ತೋಽಸಿ ಭಗವನ್ ಗೋವಿಂದ ಪೃಥಿವೀಮಿಮಾಂ ।
ಸಮುದ್ಧರ ಭವಾಯೇಶ ಕುರು ಸರ್ವಜಗದ್ಧಿತಂ ॥ ೪೫ ॥

ಏವಂ ಸಂಸ್ತೂಯಮಾನಸ್ತು ಪರಮಾತ್ಮಾ ಮಹೀಧರಃ ।
ಉಜ್ಜಹಾರ ಕ್ಷಿತಿಂ ಕ್ಷಿಪ್ರಂ ನ್ಯಸ್ತವಾನ್ಸ ಮಹಾರ್ಣವೇ ॥ ೪೬ ॥

ತಸ್ಯೋಪರಿ ಜಲೌಘಸ್ಯ ಮಹತೀ ನೌರಿವಾಸ್ಥಿತಾ ।
ತತಃ ಕ್ಷಿತಿಂ ಸಮಾಂ ಕೃತ್ವಾ ಪೃಥಿವ್ಯಾಮುಚ್ಚಿನೋದ್ಗಿರೀನ್ ॥ ೪೭ ॥

ಯಥಾವಿಭಾಗಂ ಭಗವಾನನಾದಿಃ ಪುರುಷೋತ್ತಮಃ ।
ಭೂರಿಭಾರಾಂ ತತಃ ಕೃತ್ವಾ ಸಪ್ತ ದ್ವೀಪಾನ್ಯಥಾತಥಂ ॥ ೪೮ ॥

---

೪೪. ಸರ್ವ ಪ್ರಾಣಿಗಳ ಸ್ವರೂಪನಾದವನೇ ಪ್ರಸನ್ನನಾಗು, ಈ ಜಗತ್ತು ಸರಿಯಾಗಿದ್ದು ಪ್ರಾಣಿಗಳು ಬದುಕುವುದಕ್ಕೋಸ್ಕರ ನೀರಿನಲ್ಲಿ ಮುಳುಗಿರುವ ಇದನ್ನು ಉದ್ಧಾರಮಾಡು.

೪೫. ಎಲೈ ಸ್ವಾಮಿಯೇ, ಸತ್ವಗುಣವೆಂಬ ಈ ಹೆಚ್ಚಿನವನಾಗಿದ್ದೀಯೆ ಈಗ ಈ ಭೂಮಿಯನ್ನು ಪ್ರಪಂಚದ ಸ್ಥಿತಿಗೋಸ್ಕರ ಎತ್ತು. ಪ್ರಪಂಚಕ್ಕೆ ಹಿತವನ್ನು ಮಾಡು.

೪೬. ಹೀಗೆ ಹೊಗಳಲ್ಪಟ್ಟ ಆ ಸ್ವಾಮಿಯು ಭೂಮಿಯನ್ನು ಮೇಲಕ್ಕೆತ್ತಿ ಸಮುದ್ರದ ಮೇಲುಭಾಗದಲ್ಲಿಟ್ಟನು.

೪೭. ಆ ನೀರಿನ ಮೇಲೆ ಈ ಭೂಮಿಯು ದೊಡ್ಡ ಹಡಗಿನಂತೆ ನಿಂತಿತು. ಈಗ ಆ ಸ್ವಾಮಿಯು ಅದೆಲ್ಲವನ್ನೂ ಸಮವಾಗಿ ಮಾಡಿ ಬೆಟ್ಟಗಳನ್ನು ಮೇಲಕ್ಕೆ ಕಾಣುವಂತೆ ಬಿಟ್ಟುಬಿಟ್ಟನು.

೪೮-೪೯. ಆದಿರಹಿತನಾದ ಆ ಸ್ವಾಮಿಯು ಯಾವ ಯಾವ ಭಾಗವು ಎಲ್ಲೆಲ್ಲಿರಬೇಕೋ ಅದದನ್ನು ಅಲ್ಲಲ್ಲಿ ಇಟ್ಟನು. ಅದಕ್ಕೆ ಭಾರವು ಹೆಚ್ಚಾಗಿ ಸಿಕ್ಕುವಂತೆ

ಘೋರಾದ್ಯಾಂಶ್ಚ ತುರೋ ಲೋಕಾನ್ಪೂರ್ವವತ್ಸಮಕಲ್ಪಯತ್ ।
ಬ್ರಹ್ಮಣೇ ವಿಷ್ಣುನಾ ಪೂರ್ವಮೇತದೇವ ಪ್ರದರ್ಶಿತಂ ॥ ೪೯ ॥

ತುಷ್ಟೇನ ದೇವದೇವೇನ ತ್ವಂ ದೇವಃ ಪುರುಷೋತ್ತಮಃ ।
ತ್ವಯಾ ಮಯಾ ಜಗಚ್ಚೇದಂ ಧಾರ್ಯಂ ಪಾಲ್ಯಂ ಚ ಯತ್ನತಃ ॥ ೫೦ ॥

ಯೇಷಾಂ ತ್ವಸುರಮುಖ್ಯಾನಾಂ ವರೋ ದತ್ತೋ ಮಯಾಧುನಾ ।
ದೇವಾನಾಂ ಹಿತಕಾಮೇನ ಹಂತವ್ಯಾಸ್ತೇ ತ್ವಯಾ ವಿಭೋ ॥ ೫೧ ॥

ಅಹಂ ಸೃಷ್ಟಿಂ ಕರಿಷ್ಯಾಮಿ ಸಾ ಚ ಪಾಲ್ಯಾ ತ್ವಯಾ ವಿಭೋ ।
ಏವಮುಕ್ತೋ ಗತೋ ವಿಷ್ಣುರ್ದೇವಾದೀನಸೃಜತ್ಪ್ರಭುಃ ॥ ೫೨ ॥

ಅಬುದ್ಧಿಪೂರ್ವಕಸ್ತಸ್ಯ ಪ್ರಾದುರ್ಭೂತಸ್ತಮೋಮಯಃ ।
ಅವಿದ್ಯೇಯಂ ಚ ಸರ್ವೇಷಾಂ ಪ್ರಾದುರ್ಭೂತಾ ಮಹಾತ್ಮನಃ ॥ ೫೩ ॥

---

ಮಾಡಿದನು. ಅನಂತರ ಏಳು ದ್ವೀಪಗಳನ್ನೂ ಮೊದಲಿನಂತೆ ಇಟ್ಟನು. ಪೂರ್ವದಲ್ಲಿಯೂ ಇದನ್ನೇ ವಿಷ್ಣುವು ಬ್ರಹ್ಮನಿಗೆ ತೋರಿಸಿದ್ದನು.

೫೦. ಆಗ ಸಂತೋಷಗೊಂಡ ಬ್ರಹ್ಮನು ಎಲೈ ಸ್ವಾಮಿಯೇ, ನೀನೇ ದೇವನಾದ ಪುರುಷೋತ್ತಮನು. ನೀನೂ ನಾನೂ ಈ ಭೂಮಿಯನ್ನು ಪ್ರಯತ್ನಪಟ್ಟು ಕಾಪಾಡಬೇಕು ಮತ್ತು ಧರಿಸಬೇಕು.

೫೧. ಎಲೈ ವಿಷ್ಣುವೇ, ನಾನು ಯಾವರಾಕ್ಷಸರಿಗೆ ವರವನ್ನು ಕೊಟ್ಟಿರುವೆನೋ ಅವರನ್ನು ದೇವತೆಗಳ ಹಿತಕ್ಕೋಸ್ಕರ ನೀನು ಕೊಲ್ಲಬೇಕು.

೫೨. ಆಗ ಬ್ರಹ್ಮನು, ನಾನು ಸೃಷ್ಟಿಮಾಡುತ್ತೇನೆ. ನೀನು ಅದನ್ನು ಕಾಪಾಡು ಎಂದನು. ಹೀಗೆನ್ನಲು ಆ ವಿಷ್ಣುವು ಹೊರಟುಹೋದನು. ಇತ್ತ ಬ್ರಹ್ಮನು ದೇವಾದಿಗಳನ್ನು ಸೃಷ್ಟಿಸಿದನು.

೫೩. ಆ ಬ್ರಹ್ಮನು ಬೇರೆಯ ಜ್ಞಾನದಲ್ಲಿದ್ದಾಗ ಹೇಗೋ ಅಜ್ಞಾನವು ಉಂಟಾಯಿತು. ಆಗ ಅದೇ ಅವಿದ್ಯೆ ಎನ್ನಿಸಿಕೊಂಡು ಎಲ್ಲರನ್ನೂ ಆವರಿಸಿತು.

**ಪಂಚಧಾವಸ್ಥಿತಸ್ಸರ್ಗೋ ಧ್ಯಾಯತಃ ಪ್ರತಿಬುದ್ಧವಾನ್ ।**
**ಬಹಿರಂತಶ್ಚಾಪ್ರಕಾಶಃ ಸಂವೃತಾತ್ಮಾನಮಾತ್ಮನಃ ॥ ೫೪ ॥**

**ಮುಖ್ಯಾ ನಾಗಾ ಯತಶ್ಚೋಕ್ತಾ ಮುಖ್ಯಸರ್ಗಸ್ತತಸ್ತ್ವಯಂ ।**
**ತಂ ದೃಷ್ಟ್ವಾಽಸಾಧಕಂ ಸರ್ಗಮಮನ್ಯದಪರಂ ಪ್ರಭುಃ ॥ ೫೫ ॥**

**ತಸ್ಯಾಭಿಧ್ಯಾಯತೋಽನಸ್ತುಸ್ತಿರ್ಯಕ್ಸ್ರೋತೋಽಭ್ಯವರ್ತತ ।**
**ತಸ್ಮಾತ್ತಿರ್ಯಕ್ಪ್ರವೃತ್ತಿಸ್ಸ್ಯಾತ್ತಿರ್ಯಗ್ಯಾತಸ್ತತಃ ಸ್ಮೃತಃ ॥ ೫೬ ॥**

**ಪಶ್ವಾದಯಸ್ತೇ ವಿಖ್ಯಾತಾಸ್ತಮಃಪ್ರಾಯಾ ಹ್ಯವೇದಿನಃ ।**
**ಉತ್ಪಥಗ್ರಾಹಿಣಶ್ಚೈವ ತೇಽಜ್ಞಾನೇ ಜ್ಞಾನಮಾನಿನಃ ॥ ೫೭ ॥**

**ಅಹಂಕೃತಾಸ್ತ್ವಹಂಮಾನಾ ಅಷ್ಟಾವಿಂಶದ್ವಿಧಾತ್ಮಕಾಃ ।**
**ಅನ್ತಃಪ್ರಕಾಶಾಸ್ತೇ ಸರ್ವ ಆವೃತಾಸ್ತೇ ಪರಸ್ಪರಂ ॥ ೫೮ ॥**

---

೫೪. ಬ್ರಹ್ಮನು ಯೋಚಿಸುತ್ತಿದ್ದಾಗ ಹಿಂದಿದ್ದ ಐದು ಬಗೆಯಾದ ಸೃಷ್ಟಿಯೂ ಗೊತ್ತಾಯಿತು. ತಾನು ತಿಳಿಯದಂತೆ ಒಳಗೇ ಕಾಣದಂತಿದ್ದ ಆ ಸೃಷ್ಟಿಯು ಜ್ಞಾನದಿಂದ ಹೊರಕ್ಕೆ ಗೋಚರವಾಯಿತು.

೫೫. ನಾಗಗಳೆಲ್ಲವೂ ಮುಖ್ಯವಾದುದರಿಂದ ಅವುಗಳ ಉತ್ಪತ್ತಿಯೇ ಮುಖ್ಯವಾಯಿತು. ಆ ಸೃಷ್ಟಿಯನ್ನು ನೋಡಿ ಇವೇ ಎಲ್ಲಕ್ಕೂ ಮಾದರಿಯಾಯಿತೆಂದು ತಿಳಿದುಕೊಂಡನು.

೫೬. ಹಾಗೆಯೇ ಬ್ರಹ್ಮನು ಯೋಚಿಸುತ್ತಿರಲು, ಅವನ ಮೂಗಿನಿಂದ ಕೆಳಗಡೆಗೆ ಪ್ರವಾಹವು ಹೊರಟಿತು, ಅದರಿಂದ ತಿರ್ಯಗ್ಜಂತುಗಳು ಹುಟ್ಟಿದುವು. ಅವುಗಳ ನಡತೆಯು ಕೀಳಾಯಿತು, ಆದ್ದರಿಂದ ಅವನ್ನು ತಿರ್ಯಕ್ಕೆಂದು ಕರೆಯುತ್ತಾರೆ.

೫೭. ಅವೆಲ್ಲವೂ ಪಶುಗಳೆನ್ನಿಸಿಕೊಂಡುವು. ಅಜ್ಞಾನದಿಂದ ಕೂಡಿದುವು. ತಿಳಿವಳಿಕೆಯಿಲ್ಲದುವು, ದಾರಿತಪ್ಪಿ ನಡೆಯತಕ್ಕವು, ಅಜ್ಞಾನದಲ್ಲಿದ್ದರೂ ಜ್ಞಾನಿಗಳೆಂದು ತಿಳಿದುಕೊಂಡಿರುವುವು.

೫೮. ಅಹಂಕಾರದಿಂದ ಕೂಡಿಕೊಂಡು ತಾನೇ ದೊಡ್ಡವನೆಂದು [illegible]. ಇವು ಇಪ್ಪತ್ತೆಂಟು ಬಗೆಯಾಗಿವೆ, ಇವೆಲ್ಲಕ್ಕೂ ಒಳಗಿನ ಜ್ಞಾನವುಂಟು. ಆದರೂ ಹೊರಗೆ ಅಜ್ಞಾನದಿಂದ ಕೂಡಿವೆ.

ತಮಪ್ಯಸಾಧಕಂ ಮತ್ವಾ ಧ್ಯಾಯತೋಽನ್ಯಸ್ತತೋಽಭವತ್ ।
ಊರ್ಧ್ವಸ್ರೋತಸ್ತೃತೀಯಸ್ತು ಸಾತ್ತ್ವಿಕೋರ್ಧ್ವಮವರ್ತತ ॥ ೫೯ ॥

ತೇ ಸುಖಪ್ರೀತಿಬಹುಲಾ ಬಹಿರಂತರನಾವೃತಾಃ ।
ಪ್ರಕಾಶಾ ಬಹಿರಂತಶ್ಚ ಊರ್ಧ್ವಸ್ರೋತಸ್ತತಃ ಸ್ಮೃತಃ ॥ ೬೦ ॥

ತುಷ್ಟಾತ್ಮನಸ್ತೃತೀಯಸ್ತು ದೇವಸರ್ಗಸ್ತು ಸಂಸ್ಮೃತಃ ।
ತಸ್ಮಿನ್ಸರ್ಗೇಽಭವತ್ಪ್ರೀತಿರ್ನಿಷ್ಯಂದೇ ಬ್ರಹ್ಮಣಸ್ತದಾ ॥ ೬೧ ॥

ತತೋಽನ್ಯಂ ಸ ತದಾ ದಧ್ಯೌ ಸಾಧಕಂ ಸರ್ಗಮುತ್ತಮಂ ।
ಅಸಾಧಕಾಂಸ್ತು ತಾನ್ ಜ್ಞಾತ್ವಾ ಮುಖ್ಯಸರ್ಗಾದಿಸಂಭವಾನ್ ॥ ೬೨ ॥

ತಥಾಭಿಧ್ಯಾಯತಸ್ತಸ್ಯ ಸತ್ಯಾಭಿಧ್ಯಾಯಿನಸ್ತತಃ ।
ಪ್ರಾದುರ್ಭೂತಸ್ತದಾ ವ್ಯಕ್ತಾದರ್ವಾಕ್ಸ್ರೋತಸ್ತು ಸಾಧಕಃ ॥ ೬೩ ॥

---

೫೯. ಅದನ್ನೂ ಕಾರಣವಾಗಲಿಲ್ಲವೆಂದೂ ತಿಳಿದು ಬ್ರಹ್ಮನು ಧ್ಯಾನಮಾಡುತ್ತಿರಲು, ಅನಂತರ ಮೇಲುಮುಖವಾಗಿ ಪ್ರವಾಹವು ಹರಿಯಿತು. ಅದೇ ಮೂರನೆಯ ಪ್ರವಾಹವು, ಆ ಮೇಲುಭಾಗದ ಪ್ರವಾಹವು ಸಾತ್ವಿಕವಾಯಿತು.

೬೦. ಅವು ಸುಖದಿಂದಲೂ, ಪ್ರೀತಿಯಿಂದಲೂ, ಕೂಡಿ ಒಳಗೂ ಹೊರಗೂ ಮರೆಯಿಲ್ಲದುವಾದುವು. ಮತ್ತು ಒಳಗೂ ಹೊರಗೂ ಪ್ರಕಾಶವಾದುವು. ಈ ಮೇಲು ಪ್ರವಾಹವು ಈ ರೀತಿಯಿದೆ.

೬೧. ಆ ಸೃಷ್ಟಿಯಿಂದ ಸಂತೋಷಗೊಂಡನು, ಈ ಮೂರನೆಯ ಸೃಷ್ಟಿಯನ್ನು ದೇವಸೃಷ್ಟಿಯೆನ್ನುತ್ತಾರೆ. ಈ ರೀತಿ ಉಂಟಾದ ಪ್ರವಾಹದ ಸೃಷ್ಟಿಯಲ್ಲಿ ಬ್ರಹ್ಮನಿಗೆ ಪ್ರೀತಿಯುಂಟಾಯಿತು.

೬೨. ಮುಖದಿಂದುಂಟಾದ ಆ ಪ್ರವಾಹದ ಸೃಷ್ಟಿಯಲ್ಲಿ ಹುಟ್ಟಿದವರನ್ನು ಕಾರಣಕರ್ತರಾಗುವುದಿಲ್ಲವೆಂದು ತಿಳಿದು ಉತ್ತಮವಾದ ಮತ್ತೊಂದು ಸಾಧಕವನ್ನು ಯೋಚಿಸಿದನು.

೬೩. ಆ ಬ್ರಹ್ಮನು ಹಾಗೆ ಧ್ಯಾನಮಾಡುತ್ತ ಸತ್ಯವನ್ನು ಧ್ಯಾನಿಸಲು, ಆಗ ವ್ಯಕ್ತದಿಂದ ಸಾಧಕವಾದ ಹೊಸ ಪ್ರವಾಹವು ಉಂಟಾಯಿತು.

ಯಸ್ಮಾದರ್ವಾಕ್ಪ್ರವರ್ತಂತೇ ತತೋಽರ್ವಾಕ್ಸ್ರೋತಸಸ್ತು ತೇ ।
ತೇ ಚ ಪ್ರಕಾಶಬಹುಳಾಸ್ತಮೋದ್ರಿಕ್ತಾ ರಜೋಽಧಿಕಾಃ ॥ ೬೪ ॥

ತಸ್ಮಾತ್ತೇ ದುಃಖಬಹುಳಾ ಭೂಯೋ ಭೂಯಶ್ಚ ಕಾರಿಣಃ ।
ಪ್ರಕಾಶಾ ಬಹಿರಂತಶ್ಚ ಮನುಷ್ಯಾಸ್ಸಾಧಕಾಶ್ಚ ತೇ ॥ ೬೫ ॥

ಪಂಚಮೋಽನುಗ್ರಹಸ್ಸರ್ಗಃ ಸ ಚತುರ್ಧಾ ವ್ಯವಸ್ಥಿತಃ ।
ವಿಪರ್ಯಯೇಣ ಸಿದ್ಧ್ಯಾ ಚ ಶಕ್ತ್ಯಾ ತುಷ್ಟ್ಯಾ ತಥೈವ ಚ ॥ ೬೬ ॥

ನಿವೃತ್ತಂ ವರ್ತಮಾನಂ ಚ ತೇಽನುಜಾನಂತಿ ವೈ ಪುನಃ ।
ಭೂತಾದಿಕಾನಾಂ ಭೂತಾನಾಂ ಷಷ್ಠಸ್ಸರ್ಗಸ್ಸ ಉಚ್ಯತೇ ॥ ೬೭ ॥

ತೇ ಪರಿಗ್ರಾಹಿಣಸ್ಸರ್ವೇ ಸವಿಭಾಗರತಾಸ್ತು ತೇ ।
ಚೋದನಾಶಾಪ್ಯಶೀಲಾಶ್ಚ ಜ್ಞೇಯಾ ಭೂತಾದಿಕಾಸ್ತು ತೇ ॥ ೬೮ ॥

---

೬೪. ಅಡ್ಡಡ್ಡಲಾಗಿ ಈ ಪ್ರವಾಹವು ಹುಟ್ಟಿದುದರಿಂದ ಅದರಲ್ಲಿ ಹುಟ್ಟಿದವರಿಗೆ ಅರ್ವಾಕ್ಸ್ರೋತಸ್ಸುಗಳೆಂದು ಹೆಸರು, ಅವರು ಅತಿಯಾಗಿ ಪ್ರಕಾಶಮಾನರಾದರು. ತಮೋಗುಣವು ಉದ್ರೇಕಗೊಂಡಿತು, ರಜೋಗುಣವೂ ಹೆಚ್ಚಾಗಿದ್ದಿತು.

೬೫. ಆದ್ದರಿಂದಲೇ ಅವರಿಗೆ ದುಃಖವು ಹೆಚ್ಚಾಯಿತು, ಪದೇ ಪದೇ ಕೆಲಸ ಮಾಡುವವರಾದರು, ಒಳಗೂ, ಹೊರಗೂ ಪ್ರಕಾಶವುಳ್ಳವರಾದರು, ಅವರು ಮನುಷ್ಯ ರಿಗೆ ಕಾರಣರಾದರು.

೬೬. ಇದು ಐದನೆಯ ಅನುಗ್ರಹದ ಸೃಷ್ಟಿಯಾಯಿತು. ಅದು ವಿಪರ್ಯಯ ಎಂದಲೂ, ಸಿದ್ಧಿಯಿಂದಲೂ, ಶಕ್ತಿಯಿಂದಲೂ, ತುಷ್ಟಿಯಿಂದಲೂ ನಾಲ್ಕು ಬಗೆ ಯಾಯಿತು.

೬೭. ಅವರು ಹಿಂದಿನದನ್ನೂ ಈಗಾಗುವುದನ್ನೂ ತಿಳಿಯುತ್ತಾರೆ, ಭೂತ ಗಳೇ ಆದಿಯಾಗಿರುವ ಪ್ರಾಣಿಗಳಿಗೆ ಆರನೆಯ ಸೃಷ್ಟಿ ಎಂದು ಹೇಳಿಸಿಕೊಂಡಿತು.

೬೮. ಆ ಭೂತಗಳು ತೆಗೆದುಕೊಳ್ಳುವವರಾದರು ಮತ್ತು ವಿಭಾಗವನ್ನು ಹೊಂದಿದರು, ಮತ್ತೊಬ್ಬರಿಗೆ ಹೇಳಿ ಪ್ರೇರಿಸುವವರಾದರು. ಜಪಮಾಡಲು ಶಕ್ತ ಶಕ್ತರಾದರು, ಇಂಥವರಾದರು.

ಇತ್ಯೇತೇ ಕಥಿತಾಸ್ಸರ್ಗಾಃ ಷಡತ್ರ ನೃಪಸತ್ತಮ ।
ಪ್ರಥಮೋ ಮಹತಸ್ಸರ್ಗೋ ವಿಜ್ಞೇಯೋ ಬ್ರಹ್ಮಣಸ್ತು ಯಃ ॥ ೬೯ ॥

ತನ್ಮಾತ್ರಾಣಾಂ ದ್ವಿತೀಯಸ್ತು ಭೂತಸರ್ಗೋ ಹಿ ಸ ಸ್ಮೃತಃ ।
ವೈಕಾರಿಕಸ್ತೃತೀಯಸ್ತು ಸರ್ಗಶ್ಚೈಂದ್ರಿಯಕಃ ಸ್ಮೃತಃ ॥ ೭೦ ॥

ಇತ್ಯೇಷ ಪ್ರಾಕೃತಸ್ಸರ್ಗಃ ಸಂಭೂತೋಽಬುದ್ಧಿಪೂರ್ವಕಃ ।
ಮುಖ್ಯಸರ್ಗಶ್ಚತುರ್ಥಸ್ತು ಮುಖ್ಯಾ ವೈ ಸ್ಥಾವರಾಃ ಸ್ಮೃತಃ ॥ ೭೦ ॥

ತ್ರಿರ್ಯಕ್ಸ್ರೋತಶ್ಚ ಯಃ ಪ್ರೋಕ್ತಸ್ತಿರ್ಯಗ್ಯೋನಿಸ್ಸ ಉಚ್ಯತೇ ।
ತತೋರ್ಧ್ವರೇತಸಾಂ ಷಷ್ಠೋ ದೇವಸರ್ಗಸ್ತು ಸ ಸ್ಮೃತಃ ॥ ೭೨ ॥

ತತೋಽರ್ವಾಕ್ಸ್ರೋತಸಾಂ ಸರ್ಗಃ ಸಪ್ತಮಸ್ಸ ತು ಮಾನುಷಃ ।
ಅಷ್ಟಮೋಽನುಗ್ರಹಸ್ಸರ್ಗಃ ಸಾತ್ತ್ವಿಕಸ್ತಾಮಸಸ್ತು ಸಃ ॥ ೭೩ ॥

---

೬೯. ಈ ರೀತಿಯಾಗಿ ಆರು ಬಗೆಯ ಸೃಷ್ಟಿಯನ್ನು ಹೇಳಿದಂತಾಯಿತು, ಬ್ರಹ್ಮನು ಮೊದಲು ಮಾಡಿದ ಸೃಷ್ಟಿಯು ಮಹಾಸೃಷ್ಟಿ ಎನ್ನಿಸಿಕೊಂಡಿತು.

೭೦. ಎರಡನೆಯ ಸೃಷ್ಟಿಯು ಭೂತಸರ್ಗವೆನ್ನಿಸಿಕೊಂಡಿತು, ಇದು ತನ್ಮಾತ್ರ ಸೃಷ್ಟಿಯು. ಮೂರನೆಯದು ವೈಕಾರಿಕಸೃಷ್ಟಿಯು ಇದು ಇಂದ್ರಿಯ ಸೃಷ್ಟಿ ಎನ್ನಿಸಿಕೊಂಡಿತು.

೭೦. ಈ ರೀತಿಯಾಗಿ ಪ್ರಕೃತಿಸಂಬಂಧಿಯಾದ ಸೃಷ್ಟಿಯು ತನಗೆ ತಿಳಿಯದ ರೀತಿಯಲ್ಲಾಯಿತು, ಮುಖ್ಯವಾದುದೇ ಈ ನಾಲ್ಕನೆಯ ಸೃಷ್ಟಿಯು ಅವು ಸ್ಥಾವರ ಮಯವಾದುವು.

೭೨. ತಿರ್ಯಕ್ಸ್ರೋತಸ್ಸಿನಿಂದ ಹುಟ್ಟಿದವುಗಳನ್ನು ತಿರ್ಯಗ್ಯೋನಿಗಳೆಂದು ಹೇಳುತ್ತಾರೆ. ಆರನೆಯದು ಊರ್ಧ್ವರೇತಸ್ಸಿನವರ ಸೃಷ್ಟಿಯು. ಅದನ್ನು ದೇವಸೃಷ್ಟಿ ಎನ್ನುತ್ತಾರೆ.

೭೩. ಅನಂತರ ಅರ್ವಾಕ್ಸ್ರೋತಸ್ಸಿನ ಸೃಷ್ಟಿಯು ಏಳನೆಯದು, ಅದು ಮನುಷ್ಯರ ಸಂಬಂಧವಾದುದು. ಎಂಟನೆಯದಾದ ಅನುಗ್ರಹಸರ್ಗವು ಸಾತ್ವಿಕವೂ, ತಾಮಸವೂ ಆಗಿದೆ.

ಪಂಚೈತೇ ವೈಕೃತಾಸ್ಸರ್ಗಾಃ ಪ್ರಾಕೃತಾಸ್ತು ತ್ರಯಃ ಸ್ಮೃತಾಃ ।
ಏತೇ ತವ ಸಮಾಖ್ಯಾತಾ ನವ ಸರ್ಗಾಃ ಪ್ರಜಾಪತೇಃ ॥ ೭೪ ॥

ಪ್ರಾಕೃತಾ ವೈಕೃತಾಶ್ಚೈವ ಜಗತೋ ಮೂಲಹೇತವಃ ।
ಸೃಜತೋ ಜಗದೀಶಸ್ಯ ಕಿಮನ್ಯಚ್ಛ್ರೋತುಮಿಚ್ಛಸಿ ॥ ೭೫ ॥

॥ ಭೀಷ್ಮ ಉವಾಚ ॥
ಸಂಕ್ಷೇಪಾತ್ಕಥಿತಾಸ್ಸರ್ಗಾ ದೇವಾದೀನಾಂ ಗುರೋ ತ್ವಯಾ ।
ವಿಸ್ತರಾಚ್ಛ್ರೋತುಮಿಚ್ಛಾಮಿ ತ್ವತ್ತೋ ಮುನಿವರೋತ್ತಮ ॥ ೭೬ ॥

॥ ಪುಲಸ್ತ್ಯ ಉವಾಚ ॥
ಕರ್ಮಭಿರ್ಭಾವಿತಾಸ್ಸರ್ವೇ ಕುಶಲಾಕುಶಲಾಸ್ತು ತೇ ।
ಖ್ಯಾತಾಸ್ತ್ವಯಾ ಹ್ಯನಿರ್ಮುಕ್ತಾಸ್ಸಂಹಾರಾದ್ಯುಪಸಂಪ್ಲತಾಃ ॥ ೭೭ ॥

ಸ್ಥಾವರಾದ್ಯಾಸ್ಸುರಾದ್ಯಾಸ್ತು ಪ್ರಜಾ ರಾಜಂಶ್ಚತುರ್ವಿಧಾಃ ।
ಬ್ರಹ್ಮಣಃ ಕುರ್ವತಸ್ಸೃಷ್ಟಿಂ ಜಜ್ಞಿರೇ ಮಾನಸಾಃ ಸ್ಮೃತಾಃ ॥ ೭೮ ॥

---

೭೪. ಈ ಐದೂ ಬ್ರಹ್ಮನ ವಿಕೃತಿಯಿಂದುಂಟಾದ ಸೃಷ್ಟಿಗಳು, ಪ್ರಕೃತಿಯಿಂದುಂಟಾದುವು ಮೂರು. ಈ ರೀತಿಯಾಗಿ ಬ್ರಹ್ಮನ ಒಂಭತ್ತು ಸರ್ಗಗಳನ್ನು ನಿನಗೆ ವಿವರಿಸಿದ್ದೇನೆ.

೭೫. ಈ ಪ್ರಾಕೃತ ವೈಕೃತ ಸೃಷ್ಟಿಗಳು ಜಗತ್ತನ್ನು ಸೃಷ್ಟಿಸುವ ಬ್ರಹ್ಮನ ಜಗತ್ತಿಗೆ ಮೂಲಕಾರಣಗಳು, ಇನ್ನೇನು ಕೇಳಬೇಕೋ ಕೇಳು.

೭೬. ಭೀಷ್ಮನು ಹೇಳಿದನು:—ಎಲೈ ಗುರುವೇ, ದೇವಾದಿಗಳ ಸೃಷ್ಟಿಯನ್ನು ಸಂಕ್ಷೇಪವಾಗಿ ಹೇಳಿದ್ದೀಯೆ, ಅದನ್ನೇ ನಿನ್ನಿಂದ ವಿಸ್ತಾರವಾಗಿ ಕೇಳಬೇಕೆಂಬ ಅಪೇಕ್ಷೆಯುಳ್ಳವನಾಗಿ ಇದ್ದೇನೆ.

೭೭. ಪುಲಸ್ತ್ಯನು ಹೇಳಿದನು:—ಇವರೆಲ್ಲರಿಗೂ ಕರ್ಮದ ಸಂಬಂಧವುಂಟು ಸುಖದುಃಖಗಳುಂಟು, ಇವರು ಮುಕ್ತರಲ್ಲ, ಸಂಹಾರದಿಂದ ನಾಶವಾಗತಕ್ಕವರು ಎನ್ನಿಸಿಕೊಂಡಿರುವವರನ್ನು ಹೇಳಿದ್ದೇನೆ.

೭೮. ಸ್ಥಾವರಗಳೂ, ದೇವತೆಗಳೂ ಆದ ಪ್ರಜೆಗಳು ನಾಲ್ಕು ಬಗೆಯಾಗಿದ್ದಾರೆ. ಸೃಷ್ಟಿಮಾಡುತ್ತಿರುವ ಬ್ರಹ್ಮನ ದೆಸೆಯಿಂದ ಕೆಲವರೂ ಮಾನಸರೂ ಹುಟ್ಟಿದರು.

ತತೋ ದೇವಾಸುರಪಿತೃ್ನ್ಮಾನುಷಾಂಸ್ತು ಚತುಷ್ಟಯಂ ।
ಸಿಸೃಕ್ಷುರಂಭಸೇತ್ಯಾನಿ ಸ್ವಮಾತ್ಮಾನಮಯೂಯುಜತ್ ॥ ೭೯ ॥

ಯುಕ್ತಾತ್ಮನಸ್ತತೋ ಜಾತಾ ದುರಾತ್ಮಾನಃ ಪ್ರಜಾಪತೇಃ ।
ಸಿಸೃಕ್ಷೋರ್ಜಘನಾತ್ಪೂರ್ವಂ ಜಜ್ಞಿರೇ ತ್ವಸುರಾಸ್ತತಃ ॥ ೮೦ ॥

ತತ್ಯಾಜಾಥ ತತೋ ದುಷ್ಟಾಂ ತಮೋಮಾತ್ರಾತ್ಮಿಕಾಂ ತನುಂ ।
ಸಾ ಚ ತ್ಯಕ್ತಾ ತತಸ್ತೇನ ರಾಜೇಂದ್ರಾಭೂದ್ವಿಭಾವರೀ ॥ ೮೧ ॥

ಸಿಸೃಕ್ಷುರನ್ಯದೇಹಸ್ಥಃ ಪ್ರೀತಿಮಾಪುಸ್ತತಃ ಸುರಾಃ ।
ಸತ್ತ್ವೋದ್ರಿಕ್ತಾಸ್ಸಮುದ್ಭೂತಾ ಮುಖತೋ ಬ್ರಾಹ್ಮಣಾದಯಃ ॥ ೮೨ ॥

ತ್ಯಕ್ತಾ ಸಾಪಿ ತನುಸ್ತೇನ ಸತ್ತ್ವಪ್ರಾಯಮಭೂದ್ದಿನಂ ।
ತತೋ ಹಿ ಬಲಿನೋ ರಾತ್ರಾವಸುರಾ ದೇವತಾ ದಿವಾ ॥ ೮೩ ॥

---

೭೯. ಅನಂತರ ದೇವ, ಅಸುರ, ಪಿತೃ, ಮನುಷ್ಯರು ಈ ನಾಲ್ಕು ಬಗೆಯನ್ನು ಸೃಷ್ಟಿಮಾಡಲು ನೀರಿನಲ್ಲಿ ತನ್ನನ್ನು ಸೇರಿಸಿದನು.

೮೦. ಅನಂತರ ಯೋಗ್ಯನಾದ ಈ ಬ್ರಹ್ಮನ ದೆಸೆಯಿಂದ ದುರಾತ್ಮರು ಹುಟ್ಟಿದರು. ಹಾಗೆ ಉತ್ಪತ್ತಿಮಾಡಲು ಅಪೇಕ್ಷಿಸಿದ ಆ ಬ್ರಹ್ಮನ ತೊಡೆಯಿಂದ ಮೊದಲು ಅಸುರರು ಉತ್ಪನ್ನರಾದರು.

೮೧. ಆಗ ಆ ದೇವನು ತಮೋಗುಣದಿಂದ ದುಷ್ಟವಾದ ಆ ದೇಹವನ್ನು ವಿಸರ್ಜಿಸಿದನು. ಎಲೈ ದೊರೆಯೇ, ಹಾಗೆ ಬಿಟ್ಟ ಆ ಬ್ರಹ್ಮನ ದೇಹವೇ ರಾತ್ರಿಯಾಯಿತು.

೮೨. ಬೇರೆಯ ದೇಹದಲ್ಲಿ ಉತ್ಪತ್ತಿಮಾಡುವುದನ್ನು ನೋಡಿ ದೇವತೆಗಳು ಸಂತೋಷಪಟ್ಟರು. ಆಗ ಆ ಬ್ರಹ್ಮನ ಮುಖದಿಂದ ಸತ್ವದಿಂದ ಕೂಡಿದ ಬ್ರಾಹ್ಮಣಾದಿಗಳು ಹುಟ್ಟಿದರು.

೮೩. ಆಮೇಲೆ ಆ ಬ್ರಹ್ಮನು ಆ ಸತ್ವಗುಣದಿಂದ ಕೂಡಿ ದೇಹವನ್ನು ಬಿಟ್ಟುಬಿಟ್ಟನು. ಅದೇ ದಿನವಾಯಿತು (ಹಗಲು). ಆದ್ದರಿಂದಲೇ ರಾತ್ರಿಯಲ್ಲಿ ಅಸುರರೂ, ಹಗಲಿನಲ್ಲಿ ದೇವತೆಗಳೂ ಬಲಿಷ್ಠರಾಗಿರುವುದು.

**ಸತ್ತ್ವಮಾತ್ರಾತ್ಮಿಕಾಂ ಚೈವ ತತೋಽನ್ಯಾಂ ಜಗೃಹೇ ತನುಂ ।**
**ಪಿತೃವನ್ಮನ್ಯಮಾನಸ್ಯ ಪಿತರಸ್ತಸ್ಯ ಜಜ್ಞಿರೇ　　॥ ೮೪ ॥**

**ಉತ್ಸಸರ್ಜ ಪಿತೄನ್ಸೃಷ್ಟ್ವಾ ತತಸ್ತಾಮಪಿ ಸ ಪ್ರಭುಃ ।**
**ಸಾ ಚೋತ್ಸೃಷ್ಟಾಽಭವಂತ್ಸಂಧ್ಯಾ ದಿನನಕ್ತಾಂತರಸ್ಥಿತಿಃ　　॥ ೮೫ ॥**

**ರಜೋಮಾತ್ರಾತ್ಮಿಕಾಮನ್ಯಾಂ ಜಗೃಹೇ ಸ ತನುಂ ತತಃ ।**
**ರಜೋಮಾತ್ರೋತ್ಕಟಾ ಜಾತಾ ಮನುಷ್ಯಾಃ ಕುರುಸತ್ತಮ　　॥ ೮೬ ॥**

**ತಾಮಪ್ಯಾಶು ಸ ತತ್ಯಾಜ ತನುಮಾದ್ಯಾಂ ಪ್ರಜಾಪತಿಃ ।**
**ಜ್ಯೋತ್ಸ್ನಾ ಸಮಭವಚ್ಚಾಪಿ ಪ್ರಾಕ್ಸಂಧ್ಯಾಥಾಭಿಧೀಯತೇ　　॥ ೮೭ ॥**

**ಜ್ಯೋತ್ಸ್ನಾಗಮೇ ತು ಬಲಿನೋ ಮನುಷ್ಯಾಃ ಪಿತರಸ್ತಥಾ ।**
**ರಾಜೇಂದ್ರ ಸಂಧ್ಯಾಸಮಯೇ ತಸ್ಮಾತ್ತೇ ಪ್ರಭವಂತಿ ವೈ　　॥ ೮೮ ॥**

---

೮೪. ಕೇವಲ ಸತ್ವವೇ ಇರುವ ಮತ್ತೊಂದು ದೇಹವನ್ನು ಆ ಸ್ವಾಮಿಯನ್ನು ಸ್ವೀಕರಿಸಿ ಅವರಿಂದ ಸೃಷ್ಟಿಸಲು ಈ ಬ್ರಹ್ಮನು ದೊಡ್ಡವರೆಂಬ ಭಾವವನ್ನು ಇಟ್ಟು ಕೊಂಡಿದ್ದುದರಿಂದ ಹಾಗೆಯೇ ಇರುವ ಪಿತೃಗಳು ಹುಟ್ಟಿದರು.

೮೫. ಆ ರೀತಿ ಪಿತೃಗಳು ಹುಟ್ಟಿದ ಮೇಲೆ ಆ ಬ್ರಹ್ಮನು ಆ ದೇಹವನ್ನು ಬಿಟ್ಟುಬಿಟ್ಟನು. ಆಗ ಆ ದೇಹವು ಹಗಲು, ರಾತ್ರಿಗಳ ಮಧ್ಯದ ಸಾಯಂಕಾಲವಾಗಿ ಪರಿಣಸಿತು.

೮೬. ಅನಂತರ ಆ ರಜೋಗುಣವುಳ್ಳ ದೇಹವನ್ನು ಸ್ವೀಕರಿಸಿದನು. ಅದರಿಂದ ರಜೋಗುಣವೇ ಹೆಚ್ಚಾಗಿ ಉಳ್ಳ ಮನುಷ್ಯರು ಹುಟ್ಟಿದರು.

೮೭. ಬ್ರಹ್ಮನು ಆ ದೇಹವನ್ನು ಬಿಟ್ಟುಬಿಟ್ಟನು, ಅದರಿಂದ ಬೆಳದಿಂಗಳುಂಟಾಯಿತು. ಅದೇ ಪ್ರಾಕ್ಸಂಧ್ಯೇ (ಮೊದಲಿನ) ಎನ್ನಿಸಿಕೊಳ್ಳುತ್ತದೆ.

೮೮. ಆ ಬೆಳದಿಂಗಳಿನ ಸಂಧ್ಯಾಸಮಯದಲ್ಲಿ ಮನುಷ್ಯರೂ ಪಿತೃಗಳೂ ಬಲಿಷ್ಠರಾಗಿರುತ್ತಾರೆ. ಎಲ್ಲೈ ದೊರೆಯೇ, ಏಕೆಂದರೆ ಆ ದೇಹದಿಂದ ಅವರು ಹುಟ್ಟಿದವರಷ್ಟೆ.

ಬ್ರಹ್ಮಣಸ್ತು ಶರೀರಾಣಿ ತ್ರಿಗುಣೋಪಾಶ್ರಯಾಣಿ ಚ ।
ರಜೋಮಾತ್ರಾತ್ಮಿಕಾಮೇವ ತತೋಽನ್ಯಾಂ ಜಗೃಹೇ ತನುಂ ॥ ೮೯ ॥

ತತಸ್ತು ಬ್ರಹ್ಮಣೋ ಜಾತಾ ಜಜ್ಞೇ ಕೋಪಸ್ತಥಾಕೃತಃ ।
ಕ್ಷುತ್ಕಾಮೋ ಹ್ಯಂಧಕಾರೇ ತು ತೇಽಸೃಜದ್ಭಗವಾಂಸ್ತತಃ ॥ ೯೦ ॥

ವಿರೂಪಾಶ್ಮಶ್ರುಜಾತಾಸ್ತೇ ಸಮಧಾವಂತ ತಂ ಪ್ರಭುಂ ।
ರಕ್ಷತಾಮೇವ ಯೈರುಕ್ತಂ ರಾಕ್ಷಸಾಸ್ತೇ ತತೋಽಭವನ್ ॥ ೯೧ ॥

ಊಚುಃ ಖಾದಾಮ ಇತ್ಯನ್ಯೇ ಯೇ ತೇ ಯಕ್ಷಾಸ್ತು ತೇಽಭವನ್ ।
ಅಪಿ ಯೇನಾಸ್ಯ ತಾನ್ದೃಷ್ಟ್ವಾ ಕೇಶಾಶ್ಶೀರ್ಯಂತಿ ವೇಧಸಃ ॥ ೯೨ ॥

ಹೀನಾಶ್ಚ ಶಿರಸೋ ಭೂಯಃ ಸಮಾರೋಹಂತಿ ತೇ ಶಿರಃ ।
ಸರ್ಪಣಾತ್ತೇಽಭವನ್ಸರ್ಪಾ ಹೀನತ್ವಾದಹಯಸ್ಸ್ಮೃತಾಃ ॥ ೯೩ ॥

---

೮೯. ಬ್ರಹ್ಮನ ಶರೀರವು ಸತ್ವರಜಸ್ತಮೋಗುಣಗಳೆಂಬ ಮೂರು ಗುಣಗಳಿಂದ ಕೂಡಿದೆ. ಅವುಗಳಲ್ಲಿ ರಜೋಮಾತ್ರದ ಶರೀರವನ್ನೇ ಬೇರೆಯಾಗಿ ಧರಿಸಿದನು,

೯೦. ಆಗ ಬ್ರಹ್ಮನು ಹುಟ್ಟಿತು, ಆ ರೀತಿಯಾದವರೇ ಹುಟ್ಟಿದರು. ಆಗ ಹಸಿವಿನಿಂದ ಕೂಡಿದವನಾಗಿ ಕತ್ತಲೆಯಲ್ಲಿಯೇ ಆ ಸ್ವಾಮಿಯು ಸೃಷ್ಟಿಮಾಡಲು ಮೊದಲು ಮಾಡಿದನು.

೯೧. ಆಗ ಹುಟ್ಟಿದವರು ವಿರೂಪರಾಗಿಯೂ, ಬಹುವಾದ ಕೂದಲುಳ್ಳವರಾಗಿಯೂ ಹುಟ್ಟಿ ಆ ಬ್ರಹ್ಮನನ್ನೇ ಓಡಿಸಿಕೊಂಡು ಮೇಲೆ ಬಿದ್ದರು, ಆಗ ಕಾಪಾಡಿರಿ (ರಕ್ಷಿಸಿರಿ) ಎಂದು ಯಾರು ಹೇಳಿದರೋ ಅವರು ರಾಕ್ಷಸರಾದರು,

೯೨. ತಿನ್ನುತ್ತೇವೆಂದು ಯಾರು ಹೇಳಿದರೋ ಅವರು ಯಕ್ಷರಾದರು, ಇವರನ್ನು ನೋಡಿ ಬ್ರಹ್ಮನ ತಲೆಯಕೂದಲು ಉದುರಿತು.

೯೩. ಆ ಕೂದಲುಗಳು ಬಿದ್ದಮೇಲೂ ಮತ್ತೆ ಅವೇ ಆ ಬ್ರಹ್ಮನ ತಲೆಯನು ಹತ್ತಿದುವು, ಹಾಗೆ ಮೇಲಕ್ಕೆ ಹತ್ತಿದುದರಿಂದ ಅವು ಸರ್ಪಗಳಾದುವು, ಬಿದ್ದುದರಿಂದ ಅಹಿಗಳಾದುವು.

ತತಃ ಕ್ರುದ್ಧೇನ ವೈ ಸೃಷ್ಟಾ ಕ್ರೋಧಾತ್ಮಾನೋ ವಿನಿರ್ಮಿತಾಃ ।
ವರ್ಣೇನ ಕಪಿಶೇನೋಗ್ರಾ ಭೂತಾಸ್ತೇ ಪಿಶಿತಾಶನಾಃ ॥ ೯೪ ॥

ಧಯಂತೋ ಗಾಂ ಸಮುದ್ಭೂತಾ ಗಂಧರ್ವಾಸ್ತಸ್ಯ ತತ್ಕ್ಷಣಾತ್ ।
ಪಿಬಂತೋ ಜಜ್ಞಿರೇ ವಾಚಂ ಗಂಧರ್ವಾಸ್ತೇನ ತೇಽಭವನ್ ॥ ೯೫ ॥

ಏತಾನಿ ಸೃಷ್ಟ್ವಾ ಭಗವಾನ್ಬ್ರಹ್ಮಾ ತಚ್ಛಕ್ತಿಚೋದಿತಃ ।
ತತಸ್ಸ್ವಚ್ಛಂದತೋಽನ್ಯಾನಿ ವಯಾಂಸಿ ವಯಸೋಽಸೃಜತ್ ॥ ೯೬ ॥

ಅವಯೋ ಬಾಹುತಶ್ಚಕ್ರೇ ಮುಖತೋಽಜಾಂಶ್ಚ ಸೃಷ್ಟವಾನ್ ।
ಸೃಷ್ಟವಾನುದರಾದ್ಗಾಶ್ಚ ಮಹಿಷಾಂಶ್ಚ ಪ್ರಜಾಪತಿಃ ॥ ೯೭ ॥

ಪದ್ಭ್ಯಾಂ ಚಾಶ್ವಾನ್ಸಮಾತಂಗಾನ್ರಾಸಭಾನ್ಗವಯಾನ್ಮೃಗಾನ್ ।
ಉಷ್ಟ್ರಾನಶ್ವತರಾಂಶ್ಚೈವ ಪಶೂನನ್ಯಾಂಶ್ಚ ಜಾತಯಃ ॥ ೯೮ ॥

---

೯೪. ಆಗ ಕೋಪಗೊಂಡ ಆ ಬ್ರಹ್ಮನು ಕೋಪಿಗಳನ್ನು ನಿರ್ಮಿಸಿದನು. ಬಣ್ಣದಲ್ಲಿ ಕೆಂಚಗೂ ಕ್ರೂರರಾಗಿಯೂ ಇದ್ದು ಅವರು ಮಾಂಸವನ್ನು ತಿನ್ನುವವ ರಾದರು.

೯೫. ಆ ಬ್ರಹ್ಮನು ಹಸುವನ್ನು ಕರೆಯುವಾಗ ಕೆಲವರು ಹುಟ್ಟಲು ಅವರೇ ಗಂಧರ್ವರಾದರು, ಅವರು ಮಾತನ್ನೇ ಕುಡಿಯುತ್ತಿದ್ದರು.

೯೬. ಇವರನ್ನೆಲ್ಲಾ ಸೃಷ್ಟಿಮಾಡಿ ಆ ಬ್ರಹ್ಮನು ಅವನ ಶಕ್ತಿಯಿಂದ ಪ್ರೇರಿತ ನಾಗಿ ಅನಂತರ ಅನೇಕವಾಗಿ ಮಿಕ್ಕ ಪಕ್ಷಿಗಳನ್ನೂ ಸೃಷ್ಟಿಸಿದನು.

೯೭. ತೋಳುಗಳಿಂದ ಕುರಿಗಳನ್ನೂ, ಮುಖಗಳಿಂದ ಆಡುಗಳನ್ನೂ ಸೃಷ್ಟಿ ಮಾಡಿದನು. ಮತ್ತು ಹೊಟ್ಟೆಯಿಂದ ಗೋವುಗಳನ್ನೂ, ಎಮ್ಮೆಗಳನ್ನೂ ಸೃಷ್ಟಿ ಮಾಡಿದನು.

೯೮. ಕಾಲುಗಳಿಂದ ಕುದುರೆ, ಆನೆ, ಕತ್ತೆ, ಗವಯಗಳೂ ಮತ್ತು ಮೃಗ ಗಳೂ, ಒಂಟೆಗಳೂ, ಹೇಸರಗತ್ತೆಗಳೂ, ಉಳಿದ ಪಶುಜಾತಿಗಳನ್ನೂ ಕೂಡ ಸೃಷ್ಟಿಸಿದನು.

ಓಷಧ್ಯಃ ಫಲಮೂಲಾನಿ ರೋಮಭ್ಯಸ್ತಸ್ಯ ಜಜ್ಞಿರೇ ।
ತ್ರೇತಾಯುಗಮುಖೇ ಬ್ರಹ್ಮಾ ಕಲ್ಪಸ್ಯಾದೌ ನೃಪೋತ್ತಮ ॥ ೯೯ ॥

ಸೃಷ್ಟ್ವಾ ಪಶ್ವೌಷಧೀಸ್ಸಮ್ಯಕ್ಸ ಯುಯೋಜ ತದಾಧ್ವರೇ ।
ಗೌರಜಃ ಪುರುಷೋ ಮೇಷ ಅಶ್ವಾಶ್ವತರಗರ್ದಭಾಃ ॥ ೧೦೦ ॥

ಏತಾನನ್ಯಾನ್ಪಶೂನಾಹುರಾರಣ್ಯಾಂಶ್ಚ ನಿಭೋಧ ಮೇ ।
ಶ್ವಾಪದಂ ದ್ವಿಖುರಂ ಹಸ್ತೀ ವಾನರಂ ಪಕ್ಷಿಪಂಚಮಂ ॥ ೧೦೧ ॥

ಕ್ಷುದ್ರಕಾಃ ಪಶವಃ ಷಷ್ಠಾಃ ಸಪ್ತಮಾಸ್ತು ಸರೀಸೃಪಾಃ ।
ಗಾಯತ್ರವತ್ಸ್ಯವಶ್ಚೈವ ಬೃಹತ್ಸಾಮ ರಥಂತರಂ ॥ ೧೦೨ ॥

ಅಗ್ನಿಷ್ಟೋಮಂ ಚ ಯಜ್ಞಾನಾಂ ನಿರ್ಮಮೇ ಪ್ರಥಮಾನ್ಮುಖಾತ್ ।
ಯಜೂಂಷಿ ತ್ರೈಷ್ಟುಭಂ ಛಂದಸ್ತೋಮಂ ಪಂಚದಶಂ ತಥಾ ॥ ೧೦೩ ॥

ಬೃಹತ್ಸಾಮ ತಥೋಕ್ತಂ ಚ ದಕ್ಷಿಣಾದಸೃಜನ್ಮುಖಾತ್ ।
ಸಾಮಾನಿ ಜಗತೀಛಂದಸ್ತೋಮಂ ಪಂಚದಶಂ ತಥಾ ॥ ೧೦೪ ॥

---

೯೯. ಅವನ ರೋಮಗಳಿಂದ ಓಷಧಿಗಳೂ, ಫಲಗಳೂ, ಮೂಲಗಳೂ ಹುಟ್ಟಿದುವು, ಕಲ್ಪದ ಮೊದಲಿನ ತ್ರೇತಾಯುಗದಲ್ಲಿ ಹೀಗೆ ಸೃಷ್ಟಿಮಾಡಿದನು.

೧೦೦. ನೀರನ್ನೂ, ಔಷಧಿಗಳನ್ನೂ ಸೃಷ್ಟಿಸಿ ಯಾಗದಲ್ಲಿ ಅವನ್ನು ಸೇರುವಂತೆ ಮಾಡಿದನು.

೧೦೧. ಪಸು, ಆಡು, ಮನುಷ್ಯ, ಹೋತ, ಕುದುರೆ, ಹೇಸರಕತ್ತೆ, ಕತ್ತೆ ಇವನ್ನು ಪಶುಗಳೆಂದೆನ್ನುತ್ತಾರೆ, ಕ್ರೂರಮೃಗಗಳೂ, ಗೊರಸು ಸೀಳಾದವು, ಆನೆ, ಕಪಿ, ಪಕ್ಷಿ ಇವನ್ನು ಆರಣ್ಯಕವೆಂದೆನ್ನುತ್ತಾರೆ.

೧೦೨. ಕ್ಷುದ್ರಪಶುಗಳೂ, ಏಳನೆಯದಾಗಿ, ಸರ್ಪಭೇದಗಳೂ, ಗಾಯತ್ರೀ ಸಾಮಗಳೂ, ರಥಂತರ, ಅಗ್ನಿಷ್ಟೋಮ, ಇವನ್ನು ಯಜ್ಞಕ್ಕೋಸ್ಕರ ಮೊದಲನೆಯ ಮುಖದಿಂದ ನಿರ್ಮಿಸಿದನು.

೧೦೩. ಯಜುರ್ವೇದ, ತ್ರೈಷ್ಟುಭ, ಛನ್ದಸ್ತೋಮ, ಪಂಚದಶ, ಬೃಹತ್ಸಾಮ ಇವನ್ನು ದಕ್ಷಿಣಮುಖದಿಂದ ಹೇಳಿದನು.

೧೦೪. ಸಾಮವೇದ, ಜಗತೀ ಛಂದಸ್ತೋಮ, ಪಂಚದಶ, ವೈರೂಪ ಅತಿರಾತ್ರ ಇವನ್ನು ಪಶ್ಚಿಮಮುಖದಿಂದ ಸೃಷ್ಟಿಸಿದನು.

ವೈರೂಪಮತಿರಾತ್ರಂ ಚ ಪಶ್ಚಿಮಾದಸೃಜನ್ಮುಖಾತ್ ।
ಏಕವಿಂಶಮಥರ್ವಾಣಂ ಸಾಮೋರ್ಯ್ಯಾಮಾನಮೇವ ಚ ॥ ೧೦೫ ॥

ಅನುಷ್ಟುಭಂ ಸವೈರಾಜಮುತ್ತರಾದಸೃಜನ್ಮುಖಾತ್ ।
ಉಚ್ಚಾವಚಾನಿ ಭೂತಾನಿ ಗಾತ್ರೇಭ್ಯಸ್ತಸ್ಯ ಜಜ್ಞಿರೇ ॥ ೧೦೬ ॥

ದೇವಾಸುರಪಿತೄನ್ಸೃಷ್ಟ್ವಾ ಮನುಷ್ಯಾಂಶ್ಚ ಪ್ರಜಾಪತಿಃ ।
ತತಃ ಪುನಸ್ಸಸರ್ಜಾಸೌ ಸ ಕಲ್ಪಾದೌ ಪಿತಾಮಹಃ ॥ ೧೦೭ ॥

ಯಕ್ಷಾನ್ಪಿಶಾಚಾನ್ಗಂಧರ್ವಾಂಸ್ತಥೈವಾಪ್ಸರಸಾಂ ಗಣಾನ್ ।
ಸಿದ್ಧಕಿನ್ನರರಕ್ಷಾಂಸಿ ಹಯಾನ್ಪಕ್ಷಿಮೃಗೋರಗಾನ್ ॥ ೧೦೮ ॥

ಅವ್ಯಯಂ ಚ ವ್ಯಯಂ ಚೈವ ಯದಿದಂ ಸ್ಥಾಣುಜಂಗಮಂ ।
ತತ್ತತ್ಸಮಸೃಜದ್ಬ್ರಹ್ಮಾ ಭಗವಾನಾದಿಕೃದ್ವಿಭುಃ ॥ ೧೦೯ ॥

ತೇಷಾಂ ಚ ಯಾನಿ ಕರ್ಮಾಣಿ ಪ್ರಾಕ್ಸೃಷ್ಟ್ಯಾಂ ಪ್ರತಿಪೇದಿರೇ ।
ತಾನ್ಯೇವ ಪ್ರತಿಪದ್ಯಂತೇ ಸೃಜ್ಯಮಾನಾಃ ಪುನಃ ಪುನಃ ॥ ೧೧೦ ॥

---

೧೦೫. ಇಪ್ಪತ್ತೊಂದು ಸಂಖ್ಯಾಕವಾದ ಅಥರ್ವಾಣ, ಸಾಮೋರ್ಯ್ಯಾಮಾನ, ಅನುಷ್ಟುಪ್, ವೈರಾಜ ಇವನ್ನು ಉತ್ತರಮುಖದಿಂದ ಸೃಜಿಸಿದನು.

೧೦೬. ಅನೇಕ ಬಗೆಯಾದ ಪ್ರಾಣಿಗಳನ್ನು ಅವನ ದೇಹದಿಂದ ಉತ್ಪತ್ತಿ ಮಾಡಿದನು.

೧೦೭. ಆ ಬ್ರಹ್ಮನು ದೇವತೆಗಳು, ಅಸುರರು, ಪಿತೃಗಳನ್ನು ಸೃಷ್ಟಿಮಾಡಿ ಮನುಷ್ಯರನ್ನೂ ಸೃಷ್ಟಿಸಿದನು. ಮತ್ತೆ ಕಲ್ಪದ ಮೊದಲಿನಲ್ಲಿ ಆ ಬ್ರಹ್ಮನು ಮುಂದೆ ಹೇಳುವವರನ್ನು ಸೃಷ್ಟಿಸಿದನು.

೧೦೮. ಯಕ್ಷರು, ಪಿಶಾಚರು, ಗಂಧರ್ವರು, ಅಪ್ಸರರು, ಸಿದ್ಧರು, ಕಿನ್ನರರು, ರಾಕ್ಷಸರು, ಕುದುರೆಗಳು, ಪಕ್ಷಿಗಳು, ಮೃಗಗಳು ಸರ್ಪಗಳನ್ನು ಸೃಷ್ಟಿಸಿದನು.

೧೦೯. ನಾಶವಾಗುವುದು, ನಾಶವಾಗದ್ದು, ಚರ, ಅಚರ, ಇವುಗಳೆಲ್ಲವನ್ನೂ ಆ ಬ್ರಹ್ಮನು ಸೃಷ್ಟಿಸಿದನು.

೧೧೦. ಮೊದಲಿನ ಸೃಷ್ಟಿಯಲ್ಲಿ ಅವುಗಳಿಗೆ ಯಾವ ಯಾವ ಕೆಲಸಗಳು ನಿಯಮಿತವಾದವೋ ಆಯಾ ಕೆಲಸಗಳನ್ನೇ ಈಗ ಹುಟ್ಟಿದವುಗಳೂ ಹೊಂದಿದುವು.

ಹಿಂಸ್ರಾಹಿಂಸ್ರೇ ಮೃದುಕ್ರೂರೇ ಧರ್ಮಾಧರ್ಮೇ ಋತಾನೃತೇ ।
ತದ್ಭಾವಿತಾಃ ಪ್ರಪದ್ಯಂತೇ ತಸ್ಮಾತ್ತತ್ತಸ್ಯ ರೋಚತೇ ॥ ೧೧೧ ॥

ಇಂದ್ರಿಯಾರ್ಥೇಷು ಸರ್ವೇಷು ಶರೀರೇಷು ಚ ಸ ಪ್ರಭುಃ ।
ನಾನಾತ್ವಂ ವಿನಿಯೋಗಂ ತು ಧಾತ್ರೈವ ವ್ಯಸೃಜತ್ಸ್ವಯಂ ॥ ೧೧೨ ॥

ನಾಮ ರೂಪಂ ಚ ಭೂತಾನಾಂ ಕೃತ್ಯಾನಾಂ ಚ ಪ್ರಪಂಚನಂ ।
ವೇದಶಬ್ದೇಭ್ಯ ಏವಾದೌ ದೇವಾದೀನಾಂ ಚಕಾರ ಸಃ ॥ ೧೧೩ ॥

ಋಷೀಣಾಂ ನಾಮಧೇಯಾನಿ ಯಥಾವೇದಶ್ರುತಾನಿ ವೈ ।
ಯಥಾಯೋಗ್ಯಸ್ಯ ಯೋಗ್ಯಾನಿ ಅನ್ಯೇಷಾಮಪಿ ಸೋಽಕರೋತ್ ॥ ೧೧೪ ॥

ಯಥಾಯತರ್ತುಲಿಂಗಾನಿ ನಾನಾರೂಪಾಣಿ ಪರ್ಯಯೇ ।
ದೃಶ್ಯಂತೇ ತಾನಿ ತಾನ್ಯೇವ ತಥಾ ಭಾವಾ ಯುಗಾದಿಷು ॥ ೧೧೫ ॥

---

೧೧೧. ಹಿಂಸೆಮಾಡುವುವು, ಹಿಂಸೆಮಾಡದವು, ಮೃದು, ಕ್ರೂರ, ಧರ್ಮ, ಅಧರ್ಮ, ನಿಜ, ಸುಳ್ಳು, ಇವುಗಳನ್ನು ಅವು ಪೂರ್ವದಲ್ಲಿ ಹೊಂದಿದ್ದಂತೆಯೇ ಹೊಂದಿದುವು, ಆ ಪೂರ್ವದಂತೆಯೇ ಅವುಗಳಿಗೂ ರುಚಿಸಿತು.

೧೧೨. ಇಂದ್ರಿಯಗಳು, ಅವುಗಳ ಪ್ರಯೋಜನಗಳು, ಇವನ್ನು ಎಲ್ಲಾ ಪ್ರಾಣಿಗಳಲ್ಲಿಯೂ ಆ ಬ್ರಹ್ಮನು ನಾನಾ ರೀತಿಯಾಗಿರುವಿಕೆಯನ್ನೂ ಕಲ್ಪಿಸಿ ಅವುಗಳಲ್ಲಿ ಯಾವ ಯಾವುದು ಯಾವ ಯಾವುದನ್ನು ಹೊಂದಬೇಕೆಂಬುದನ್ನು ಕಲ್ಪಿಸಿದನು.

೧೧೩. ಪ್ರಾಣಿಗಳ ಹೆಸರು, ರೂಪ, ಮಾಡತಕ್ಕ ಕೆಲಸಗಳು, ಇವುಗಳ ವಿವರಣೆಯನ್ನು ದೇವಾದಿಗಳಿಗೆ ವೇದ ಶಬ್ದದಿಂದಲೇ ಮಾಡಿದನು.

೧೧೪. ಋಷಿಗಳಿಗೆ ಹೆಸರನ್ನೂ ಕೂಡ ಅವರವರಿಗೆ ಯೋಗ್ಯವಾಗಿಯೂ, ಮಿಕ್ಕವರಿಗೂ ಅವರಿಗೆ ಯೋಗ್ಯವಾಗಿಯೂ ವೇದದಲ್ಲಿ ಹೆಸರು ಬರುವಂತೆಯೇ ಮಾಡಿದನು.

೧೧೫. ಋತುಗಳ ಗುರುತುಗಳೂ, ಹೆಸರುಗಳೂ, ನಾನಾಬಗೆಯಾಗಿ ಹಿಂದಿನ ಯುಗದಲ್ಲಿದ್ದಂತೆಯೇ ಈ ಯುಗದ ಆದಿಯಲ್ಲಿಯೂ ಅವನೇ ಕಂಡುಬಂದುವು, ಹಾಗೆಯೇ ಹೆಸರಿಟ್ಟನು.

ಕರೋತ್ಯೇವಂವಿಧಾಂ ಸೃಷ್ಟಿಂ ಕಲ್ಪಾದೌ ಸ ಪುನಃ ಪುನಃ ।
ಸಿಸೃಕ್ಷೋಃ ಶಕ್ತಿಯುಕ್ತೋಽಸೌ ಸೃಜ್ಯಸೃಷ್ಟಿಪ್ರಚೋದಿತಃ ॥ ೧೧೬ ॥

॥ ಭೀಷ್ಮ ಉವಾಚ ॥

ಅರ್ವಾಕ್ಸ್ರೋತಶ್ಚ ಕಥಿತೋ ಭವತಾ ಯಶ್ಚ ಮಾನುಷಃ ।
ಬ್ರಹ್ಮನ್ವಿಸ್ತರತೋ ಬ್ರೂಹಿ ಬ್ರಹ್ಮಾ ತಮಸೃಜದ್ಯಥಾ ॥ ೧೧೭ ॥

ಯಥಾ ವರ್ಣಾನ್ಸಮಸೃಜದ್ಗುಣಾಂಶ್ಚ ಸ ಮಹಾಮುನೇ ।
ಯಚ್ಚ ತೇಷಾಂ ಸ್ಮೃತಂ ಕರ್ಮ ವಿಪ್ರಾದೀನಾಂ ತದುಚ್ಯತಾಂ ॥ ೧೧೮ ॥

॥ ಪುಲಸ್ತ್ಯ ಉವಾಚ ॥

ಸತ್ತ್ವಾಭಿಧ್ಯಾಯಿನಸ್ತಸ್ಯ ಸಿಸೃಕ್ಷೋರ್ಬ್ರಹ್ಮಣಃ ಪ್ರಜಾಃ ।
ಅಜಾಯಂತ ಕುರುಶ್ರೇಷ್ಠ ಸತ್ತ್ವೋದ್ರಿಕ್ತಾ ಮುಖಾದ್ದ್ವಿಜಾಃ ॥ ೧೧೯ ॥

ವಕ್ಷಸೋ ರಜಸೋದ್ರಿಕ್ತಾಸ್ತಥಾನ್ಯಾ ಬ್ರಹ್ಮಣೋಽಭವನ್ ।
ರಾಜನ್ಯಾಸ್ತಮಸಾ ವೈಶ್ಯಾಸ್ತಮೋದ್ರಿಕ್ತಾಸ್ತಥೋರುತಃ ॥ ೧೨೦ ॥

---

೧೧೬. ಸೃಷ್ಟಿಯನ್ನು ಮಾಡಲು ಮನಸ್ಸು ಬಂದು ಅವರಲ್ಲಿ ಶಕ್ತಿಯುಳ್ಳವನಾಗಿ ಈ ರೀತಿಯಾದ ಸೃಷ್ಟಿಯನ್ನೂ ಕಲ್ಪದ ಆದಿಯಲ್ಲಿ ಆಗಾಗ್ಗೆ ಮಾಡುತ್ತಾನೆ.

೧೧೭. ಭೀಷ್ಮನು ಹೇಳಿದನು :- -ಅಡ್ಡಡ್ಡಲಾಗಿ ಹರಿದುವೆಂದು ಹೇಳಿದ ಪ್ರವಾಹದಿಂದ ಮನುಷ್ಯರು ಹುಟ್ಟಿದರೆಂದು ಹೇಳಿದೆಯಲ್ಲ ಸ್ವಾಮಿ! ಅದನ್ನು ಬ್ರಹ್ಮನು ಸೃಷ್ಟಿಮಾಡಿದ ರೀತಿಯಲ್ಲಿ ವಿಸ್ತಾರವಾಗಿ ಹೇಳು.

೧೧೮. ಆ ಬ್ರಹ್ಮನು ವರ್ಣಗಳನ್ನು ಹೇಗೆ ಸೃಷ್ಟಿಸಿದನು? ಗುಣಗಳನ್ನು ಹೇಗೆ ಸೃಷ್ಟಿಸಿದನು? ಆ ಬ್ರಾಹ್ಮಣಾದಿಗಳಿಗೆ ಯಾವ ಯಾವ ಕರ್ಮವು ಉಕ್ತವಾಗಿದೆ? ಅವೆಲ್ಲವನ್ನೂ ವಿಸ್ತಾರವಾಗಿ ಹೇಳು.

೧೧೯. ಪುಲಸ್ತ್ಯನು ಹೇಳಿದನು :—ಸತ್ವಗುಣವನ್ನೇ ಧ್ಯಾನಮಾಡುತ್ತ, ಸತ್ವಗುಣದಲ್ಲಿಯೇ ಇದ್ದುಕೊಂಡು ಪ್ರಜೆಗಳನ್ನು ಸೃಷ್ಟಿಮಾಡುತ್ತಿರುವ ಆ ಬ್ರಹ್ಮನ ಮುಖದಿಂದ ಸತ್ವಗುಣದಿಂದ ಹೊರಹೊಮ್ಮುವ ಬ್ರಾಹ್ಮಣರೇ ಹುಟ್ಟಿದರು.

೧೨೦. ಆ ಬ್ರಹ್ಮನ ಎದೆಯಿಂದ ರಜೋಗುಣದಿಂದ ಕೂಡಿದ ಕ್ಷತ್ರಿಯರೂ, ತಮೋಗುಣದಿಂದ ಕೂಡಿದ ವೈಶ್ಯರು ಆ ಬ್ರಹ್ಮನ ತೊಡೆಯಿಂದಲೂ ಹುಟ್ಟಿದರು.

ಪದ್ಭ್ಯಾಂ ಸಮುಸೃಜದ್ಬ್ರಹ್ಮಾ ಶೂದ್ರಾನ್ನೃಪವರೋತ್ತಮ ।
ತತಃ ಪ್ರಧಾನಾಸ್ತೇ ಸರ್ವೇ ಚಾತುರ್ವರ್ಣ್ಯಮಿದಂ ತತಃ ॥ ೧೨೧ ॥

ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾಶ್ಚ ನೃಪಸತ್ತಮ ।
ಪಾದೋರುವಕ್ಷಸ್ಥಳತೋ ಮುಖತಶ್ಚ ಸಮುದ್ಭವಾಃ ॥ ೧೨೨ ॥

ಯಜ್ಞನಿಷ್ಪತ್ತಯೇ ಸರ್ವಮೇತದ್ಬ್ರಹ್ಮಾ ಚಕಾರ ಹ
ಚಾತುರ್ವರ್ಣ್ಯಂ ಮಹಾಭಾಗ ಯಜ್ಞಸಾಧನಮುತ್ತಮಂ ॥ ೧೨೩ ॥

ಯಜ್ಞೇನಾಪ್ಯಾಯಿತಾ ದೇವಾ ವೃಷ್ಟ್ಯುತ್ಸರ್ಗೇಣ ಮಾನವಾಃ ।
ಆಪ್ಯಾಯನಂ ವೈ ಕುರ್ವಂತಿ ಯಜ್ಞಾಃ ಕಲ್ಯಾಣಹೇತವಃ ॥ ೧೨೪ ॥

ನಿಷ್ಪಾದ್ಯಂತೇ ನರೈಸ್ತೇ ತು ಸ್ವಕರ್ಮನಿರತೈಸ್ಸದಾ ।
ವಿರುದ್ಧಾಚರಣೋಪೇತೈಃ ಸದ್ಭಿಸ್ಸನ್ಮಾರ್ಗಗಾಮಿಭಿಃ ॥ ೧೨೫ ॥

---

೧೨೧. ಆಮೇಲೆ ಬ್ರಹ್ಮನು ಪಾದಗಳಿಂದ ಶೂದ್ರರನ್ನೂ ಸೃಷ್ಟಿಸಿದನು. ಈ ರೀತಿ ಇವರು ಪ್ರಧಾನರಾದರು, ಹೀಗೆ ಬ್ರಹ್ಮನು ನಾಲ್ಕು ಜಾತಿಗಳನ್ನೂ ಸೃಷ್ಟಿಸಿದನು.

೧೨೨. ಎಲೈ ಕುರುಶ್ರೇಷ್ಠನೇ, ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಶೂದ್ರರು, ಮುಖ, ಎದೆ, ತೊಡೆ, ಪಾದಗಳಿಂದ ಕ್ರಮವಾಗಿ ಹುಟ್ಟಿದರು.

೧೨೩. ಯಜ್ಞವನ್ನು ಮಾಡುವುದಕ್ಕೋಸ್ಕರ ಬ್ರಹ್ಮನು ಇದೆಲ್ಲವನ್ನೂ ಮಾಡಿದನು. ಎಲೈ ಭೀಷ್ಮನೇ, ಈ ನಾಲ್ಕು ವರ್ಣಗಳೂ ಯಜ್ಞಕ್ಕೆ ಮುಖ್ಯವಾದ ಸಾಧನವು.

೧೨೪. ಯಜ್ಞದಿಂದ ಸಂತೋಷಗೊಂಡ ದೇವತೆಗಳು ಮಳೆಯನ್ನು ಹುಯ್ಯಿಸಿರುವುದರಿಂದ ಮನುಷ್ಯರಿಗೆ ಸುಖವನ್ನುಂಟುಮಾಡುತ್ತಾರೆ, ಯಜ್ಞವು ಒಳ್ಳೆಯದಕ್ಕೆ ಕಾರಣವು.

೧೨೫. ಆ ಯಜ್ಞಗಳನ್ನು ತಮ್ಮ ಕೆಲಸದಲ್ಲಿ ನಿರತರಾದ, ಕೆಟ್ಟಮಾರ್ಗಕ್ಕೆ ಹೋಗದ, ಒಳ್ಳೆಯ ಮಾರ್ಗವನ್ನೇ ಅನುಸರಿಸುವ ಸತ್ಪುರುಷರು ಆ ಯಜ್ಞಗಳನ್ನು ಮಾಡುತ್ತಾರೆ.

**ಸ್ವರ್ಗಾಪವರ್ಗೌ ಮಾನುಷ್ಯಾತ್ಪ್ರಾಪ್ನುವಂತಿ ನರಾ ನೃಪಾ ।**
**ಯಚ್ಚಾಭಿರುಚಿತಂ ಸ್ಥಾನಂ ತದ್ಯಾಂತಿ ಮನುಜಾ ವಿಭೋ ॥ ೧೨೬ ॥**

**ಪ್ರಜಾಸ್ತಾ ಬ್ರಹ್ಮಣಾ ಸೃಷ್ಟಾಶ್ಚಾತುರ್ವರ್ಣ್ಯವ್ಯವಸ್ಥಿತೌ ।**
**ಸಮ್ಯಕ್ಶ್ರದ್ಧಾಸಮಾಚಾರಾಚರಣಾನ್ನೃಪಸತ್ತಮ ॥ ೧೨೭ ॥**

**ಯಥೇಚ್ಛಾಚಾರನಿರತಾಃ ಸರ್ವಭಾಧಾವಿವರ್ಜಿತಾಃ ।**
**ಶುದ್ಧಾಂತಃಕರಣಾ ಪುಣ್ಯಾ ಧರ್ಮಾನುಷ್ಠಾನನಿರ್ಮಲಾಃ ॥ ೧೨೮ ॥**

**ಶುದ್ಧೇ ಚ ತಾಸಾಂ ಮನಸಿ ಶುದ್ಧೇಂತಃಕರಣೇ ಹರೌ ।**
**ಶುದ್ಧಜ್ಞಾನಂ ಪ್ರಪಶ್ಯಂತಿ ಬ್ರಹ್ಮಾಖ್ಯಂ ಯೇನ ತತ್ಪದಂ ॥ ೧೨೯ ॥**

**ತತಃ ಕಾಲಾತ್ಮಕೋ ಯೋಽಸೌ ವೈರಿಚ್ಯಾವಾಸ ಉಚ್ಯತೇ ।**
**ಸಂಸಾರಪಾತಮತ್ಯರ್ಥಂ ಘೋರಮಲ್ಪಾಲ್ಪಸಾರವತ್ ॥ ೧೩೦ ॥**

---

೧೨೬. ಎಲೈ ದೊರೆಯೇ! ಮನುಷ್ಯರಾದವರು ತಮ್ಮ ಸ್ವಭಾವದಿಂದ ಸ್ವರ್ಗಮೋಕ್ಷಗಳನ್ನು ಹೊಂದುತ್ತಾರೆ. ಎಲೈ ವಿಭುವೇ, ಆ ಸ್ವರ್ಗಮೋಕ್ಷಗಳಲ್ಲಿ ಯಾವುದು ಇಷ್ಟವೋ ಅದಕ್ಕೆ ಯೋಗ್ಯವಾದ ಕೆಲಸಗಳನ್ನು ಮಾಡಿಕೊಂಡು ಅಲ್ಲಿಗೆ ಹೋಗುತ್ತಾರೆ.

೧೨೭. ನಾಲ್ಕು ವರ್ಣಗಳನ್ನೂ ವಿಂಗಡಿಸಿ ಬ್ರಹ್ಮನು ಪ್ರಜೆಗಳನ್ನು ಸೃಷ್ಟಿಸಿದನು. ಅವರುಗಳಲ್ಲಿ ಒಳ್ಳೆಯ ಆಚಾರಗಳನ್ನೂ, ಶ್ರದ್ಧೆಯನ್ನೂ ಇಟ್ಟುಕೊಂಡು ಆಚರಿಸುವವರು ಸ್ವರ್ಗಮೋಕ್ಷಗಳನ್ನು ಹೊಂದುತ್ತಾರೆ.

೧೨೮. ಅವರಿಗೆ ಇಷ್ಟಬಂದ ಆಚಾರಗಳನ್ನು ಅನುಸರಿಸುತ್ತ ಒಬ್ಬರಿಗೂ ತೊಂದರೆಮಾಡದೆ ನಿರ್ಮಲವಾದ ಮನಸ್ಸುಳ್ಳವರಾಗಿ ಪುಣ್ಯವೂ ಧರ್ಮವೂ ಆದ ಕೆಲಸಗಳನ್ನು ಮಾಡುತ್ತ ನಿರ್ಮಲರಾಗಿರಬೇಕು.

೧೨೯. ಮನಸ್ಸು ಶುದ್ಧವಾಗುತ್ತಲೂ ಹರಿಯ ವಿಷಯದಲ್ಲಿ ಅಂತಃಕರಣ ಶುದ್ಧವಾಗುತ್ತಲೂ ಆಗ ಅವರು ಬ್ರಹ್ಮನೆಂಬ ಹೆಸರುಳ್ಳ ಶುದ್ಧಜ್ಞಾನವನ್ನು ತಿಳಿಯುತ್ತಾರೆ.

೧೩೦. ಅನಂತರ ಕಾಲಾತ್ಮಕವಾದ ಬ್ರಹ್ಮನ ಸ್ಥಾನವೆಂದು ಹೇಳಲ್ಪಡುವ ಸ್ಥಳವನ್ನು ತಿಳಿಯುತ್ತಾನೆ. ಈ ಸಂಸಾರದಲ್ಲಿ ಹುಟ್ಟುವಿಕೆಯು ಬಹಳ ಕ್ರೂರವಾದುದು, ಸಾರವೆಂಬುದು ಬಹು ಸ್ವಲ್ಪವಾದುದು.

ಅಧರ್ಮಬೀಜಭೂತಂ ಚ ಮೋಹಲೋಭಸಮನ್ವಿತಂ ।
ಪ್ರಜಾಸು ತಾಸು ರಾಜೇಂದ್ರ ಜರಾದಿಕ್ರಮಸಾಧಕಂ ॥ ೧೩೧ ॥

ತತಸ್ಸಾಹಸಜಾ ಸಿದ್ಧಿಸ್ತಾಸಾಂ ಚಾತೀವ ಜಾಯತೇ ।
ರಾಗೋಽಲಸಾದಯಶ್ಚಾನ್ಯಾಃ ಸಿದ್ಧಯೋಽಷ್ಟೌ ಭವಂತಿ ಯಾಃ ॥ ೧೩೨ ॥

ತಾಸು ಕ್ಷೀಣಾಸ್ವಶೇಷಾಸು ವರ್ಧಮಾನೇ ಚ ಪಾತಕೇ ।
ದ್ವಂದ್ವಾಭಿನವದುಃಖಾರ್ತಾಸ್ತಾ ಭವಂತಿ ತತಃ ಪ್ರಜಾಃ ॥ ೧೩೩ ॥

ತತೋ ದುರ್ಗಾಣಿ ತಾಶ್ಚಕ್ರುರ್ನಾರ್ಕ್ಷ್ಯಂ ಪಾರ್ವತಮೌದಕಂ ।
ಕೃತ್ರಿಮಂ ಚ ತಥಾ ದುರ್ಗಂ ಪುರಂ ಖರ್ವಟಿಕಾದಿಕಂ ॥ ೧೩೪ ॥

ಗೃಹಾಣಿ ಚ ಯಥಾನ್ಯಾಯಂ ತೇಷು ಚಕ್ರುಃ ಪುರಾದಿಷು ।
ಶೀತಾತಪಾದಿಬಾಧಾನಾಂ ಪ್ರಶಮಾಯ ಮಹಾಮತೇ ॥ ೧೩೫ ॥

ಪ್ರತೀಹಾರಮಿಮಂ ಕೃತ್ವಾ ಶೀತಾದೇಸ್ತಾಃ ಪ್ರಜಾಃ ಪುನಃ ।
ವಾರ್ತೋಪಾಯಂ ತತಶ್ಚಕ್ರುರ್ಹಸ್ತಸಿದ್ಧಿಂ ಚ ಕರ್ಮಜಾಂ ॥ ೧೩೬ ॥

---

೧೩೧. ಈ ಸಂಸಾರವು ಅಧರ್ಮಕ್ಕೆ ಕಾರಣವು, ಮೋಹಲೋಭಗಳಿಂದ ಕೂಡಿದೆ, ಜನಗಳಿಗೆ ಮುಪ್ಪು ಮುಂತಾದುವುಗಳಿಗೆ ಕಾರಣವಾದುದು.

೧೩೨. ಈ ರೀತಿಯಾದ ಸಂಸಾರದಲ್ಲಿ ದುಃಖಪಡುವವರಿಗೆ ಆ ಸದ್ಧರ್ಮಗಳು, ಯಾಗಗಳು ಅವರಿಗೆ ಸಿದ್ಧಿಯನ್ನುಂಟುಮಾಡುತ್ತವೆ. ಆಸೆ, ಸೋಮಾರಿತನ ಇವೆಲ್ಲವೂ ಹೋಗಿ ಅಷ್ಟಸಿದ್ಧಿಗಳೂ ಉಂಟಾಗುತ್ತವೆ.

೧೩೩. ಆ ಪುಣ್ಯಗಳೆಲ್ಲವೂ ಕ್ಷಯಿಸಿ ಹೋದ ಮೇಲೆ ಪಾಪವು ಹೆಚ್ಚಲು, ಆಮೇಲೆ ಶೀತೋಷ್ಣ ಮುಂತಾದ ದ್ವಂದ್ವಗಳಿಗೆ ಸಿಕ್ಕಿ ಆ ಪ್ರಜೆಗಳು ದುಃಖಪಡುತ್ತಾರೆ.

೧೩೪-೧೩೫. ಆ ರೀತಿ ಕಷ್ಟಕ್ಕೆ ಸಿಲುಕಿದ ಆ ಪ್ರಜೆಗಳು ಮರ, ಕಲ್ಲು, ನೀರು ಇವುಗಳಿಂದ ರಕ್ಷಣೆಯನ್ನು ಮಾಡಿಕೊಂಡರು. ಅನಂತರ ತಾವು ನಿರ್ಮಿತವಾದ ದುರ್ಗ, ಪಟ್ಟಣ, ಹಳ್ಳಿಮನೆ ಇವುಗಳನ್ನು ಅವರಿಗೆ ಅನುಕೂಲವಾದ ರೀತಿಯಲ್ಲಿ ಮಾಡಿಕೊಳ್ಳುತ್ತಾರೆ.

೧೩೬. ಶೀತೋಷ್ಣಾದಿಗಳಿಗೆ ಆ ಪ್ರಜೆಗಳು ಈ ರೀತಿಯಾಗಿ ಪ್ರತೀಕಾರವನ್ನು ಮಾಡಿಕೊಂಡು ಅನಂತರ ಜೀವನೋಪಾಯವನ್ನು ಮಾಡಿಕೊಂಡರು. ಆಮೇಲೆ ಕೆಲಸಕ್ಕೆ ತಕ್ಕುದಾದ ಹಸ್ತಸಿದ್ಧಿಯನ್ನು ಮಾಡಿಕೊಂಡರು.

ವ್ರೀಹಯಶ್ಚ ಯವಾಶ್ಚೈವ ಗೋಧೂಮಾ ಅಣವಸ್ತಿಲಾಃ ।
ಪ್ರಿಯಂಗುಕೋವಿದಾರಶ್ಚ ಕೋರದೂಷಾಸ್ಸತೀನಕಾಃ ॥ ೧೩೭ ॥

ಮಾಷಮುದ್ಗಾ ಮಸೂರಾಶ್ಚ ನಿಷ್ಪಾವಾಶ್ಚ ಕುಳುತ್ಥಕಾಃ ।
ಆಢಕ್ಯಶ್ಚಣಕಾಶ್ಚೈವ ಶಣಾಸ್ಸಪ್ತದಶ ಸ್ಮೃತಾಃ ॥ ೧೩೮ ॥

ಇತ್ಯೇತಾ ಓಷಧೀನಾಂ ತು ಗ್ರಾಮ್ಯಾಣಾಂ ಜಾತಯೋ ನೃಪ ।
ಓಷಧ್ಯೋ ಯಜ್ಞಿಯಾಶ್ಚೈವ ಗ್ರಾಮ್ಯಾರಣ್ಯಾಶ್ಚತುರ್ದಶ ॥ ೧೩೯ ॥

ವ್ರೀಹಯಸ್ಸಯವಾ ಮಾಷಾ ಗೋಧೂಮಾ ಅಣವಸ್ತಿಲಾಃ ।
ಪ್ರಿಯಂಗುಸಪ್ತಮಾ ಹ್ಯೇತಾ ಅಷ್ಟಮಾಶ್ಚ ಕುಳುತ್ಥಕಾಃ ॥ ೧೪೦ ॥

ಶ್ಯಾಮಾಕಾಸ್ತ್ವಥ ನೀವಾರಾ ಜರ್ತಿಲಾಶ್ಚ ಗವೇಧುಕಾಃ ।
ತಥಾ ವೇಣುಯವಾಃ ಪ್ರೋಕ್ತಾಸ್ತದ್ವನ್ಮರ್ಕಟಕಾ ನೃಪ ॥ ೧೪೧ ॥

ಗ್ರಾಮ್ಯಾರಣ್ಯಾಃ ಸ್ಮೃತಾ ಹ್ಯೇತಾ ಓಷಧ್ಯಶ್ಚ ಚತುರ್ದಶ ।
ಯಜ್ಞನಿಷ್ಪತ್ತಯೋ ತದ್ವತ್ತಥಾಽಽಸಾಂ ಹೇತುರುತ್ತಮಃ ॥ ೧೪೨ ॥

---

೧೩೭-೧೩೮ ಭತ್ತ, ಯವವೆಂಬ ಧಾನ್ಯ, ಗೋಧಿ, ಸಣ್ಣಭತ್ತ, ಎಳ್ಳು, ನವಣೆ, ಕೋವಿದಾರ, ಹಾರಕ, ನೆಲಗಡಲೆ, ಉದ್ದು, ಹೆಸರು, ಕಾಡುಕಡಲೆ, ಅವರೆ, ಹುರುಳಿ, ತೊಗರೆ, ಕಡಲೆ, ಶಾಣವೆಂಬ ಧಾನ್ಯ, ಇವು ಹದಿನೇಳೂ, ಗ್ರಾಮಗಳಲ್ಲಿ ಹುಟ್ಟುವ ಔಷಧಿಗಳ ಜಾತಿಗಳು.

೧೩೯-೧೪೧. ಈ ಹಿಂದೆ ಹೇಳಿದುವು ಗ್ರಾಮಗಳಲ್ಲಿ ಹುಟ್ಟುವ ಯಜ್ಞಕ್ಕೆ ಬೇಕಾದ ಔಷಧಿಗಳು (ಧಾನ್ಯಗಳು) ಭತ್ತ, ಯವ, ಉದ್ದು, ಗೋಧಿ, ಸಣ್ಣಭತ್ತ, ಎಳ್ಳು, ನವಣೆ, ಇವೇಳು ಎಂಟನೆಯದಾದ ಹುರುಳಿ, ಸಾಮೆ, ಬೂಕಧಾನ್ಯ, ಕಾಡೆಳ್ಳು, ಕಾಡುಗೋಧಿ, ಬಿದಿರಕ್ಕಿ ಮರ್ಕಟಕವೆಂಬ ಧಾನ್ಯ ಇವು ಹದಿನಾಲ್ಕು ಗ್ರಾಮ ಮತ್ತು ಅರಣ್ಯಗಳಲ್ಲೂ ಬೆಳೆಯುತ್ತದೆ.

೧೪೨-೧೪೩. ಇವೆಲ್ಲವೂ ಯಜ್ಞಕ್ಕೆ ಬೇಕಾದವುಗಳು, ಇವೇ ಯಜ್ಞಕ್ಕೆ ಉತ್ತಮವಾದ ಕಾರಣಗಳು, ಇವೇ ಯಜ್ಞದ ಜೊತೆಗೆ ಪ್ರಜೆಗಳಿಗೂ ಕಾರಣವಾಗಿವೆ.

ಏತಾಶ್ಚ ಸಹ ಯಜ್ಞೇನ ಪ್ರಜಾನಾಂ ಕಾರಣಂ ಪರಂ ।
ಏತೈರೇವ ಮಹಾಪ್ರಾಜ್ಞಾಸ್ತತೋ ಯಜ್ಞಾನ್ವಿತನ್ವತೇ ॥ ೧೪೩ ॥

ಅಹನ್ಯಹನ್ಯನುಷ್ಠಾನಂ ಯಜ್ಞಾನಾಂ ಪಾರ್ಥಿವೋತ್ತಮ ।
ಉಪಕಾರಂ ಪರಂ ಪುಂಸಾಂ ಕ್ರಿಯಮಾಣಂ ಚ ಶಾಂತಿದಂ ॥ ೧೪೪ ॥

ಯೇಷಾಂ ಚಕಾರ ಸೃಷ್ಟ್ಯೋಽಸೌ ಪರಬಿಂದುಮಹಾಮತೇ ।
ಮರ್ಯಾದಾಂ ಸ್ಥಾಪಯಾಮಾಸ ಯಥಾಸ್ಥಾನಂ ಯಥಾಗುಣಂ ॥ ೧೪೫ ॥

ವರ್ಣಾನಾಮಾಶ್ರಮಾಣಾಂ ಚ ಧರ್ಮಾಧರ್ಮಭೃತಾಂ ವರ ।
ಲೋಕಾನಾಂ ಸರ್ವವರ್ಣಾನಾಂ ಸಮ್ಯಗ್ಧರ್ಮಾನುಪಾಲಿನಾಂ ॥ ೧೪೬ ॥

ಪ್ರಾಜಾಪತ್ಯಂ ಬ್ರಾಹ್ಮಣಾನಾಂ ಸ್ಮೃತಂ ಸ್ಥಾನಂ ತು ಪಾರ್ಥಿವ ।
ಸ್ಥಾನಮೈಂದ್ರಂ ಕ್ಷತ್ರಿಯಾಣಾಂ ಸಂಗ್ರಾಮೇಷ್ವನಿವರ್ತಿನಾಂ ॥ ೧೪೭ ॥

—

ಇವುಗಳಿಂದಲೇ ವಿದ್ವಾಂಸರು ಯಜ್ಞಗಳನ್ನು ಮಾಡುತ್ತಾರೆ.

೧೪೪. ಎಲೈ ರಾಜನೆ, ನಿತ್ಯವೂ ಯಜ್ಞವನ್ನು ಮಾಡುತ್ತಿರಬೇಕು. ಅದು ಮನುಷ್ಯರಿಗೆ ಉಪಕಾರವಾಗಿರುತ್ತದೆ. ಉತ್ತಮವಾದ ಶಾಂತಿಯೂ ಆಗಿದೆ.

೧೪೫. ಎಲೈ ಬಹು ಬುದ್ಧಿಯುಳ್ಳ ಭೀಷ್ಮನೇ, ಅಮೃತಬಿಂದುಸ್ವರೂಪವಾದ ಯಜ್ಞವು ಮಾಡಲ್ಪಟ್ಟದ್ದೇ ಆದರೆ ಅದು ಅತನಿಗೆ ಯೋಗ್ಯವಾದ ಸ್ಥಾನವೂ, ಗುಣವೂ ಉಳ್ಳ ಒಂದು ಸ್ಥಿತಿಯನ್ನು ಕಲ್ಪಿಸುತ್ತದೆ.

೧೪೬. ಧರ್ಮ ಅಧರ್ಮಗಳನ್ನು ಹೊಂದಿರುವ ವರ್ಣಗಳು ಆಶ್ರಮಗಳುಳ್ಳವರಿಗೂ, ಸರಿಯಾಗಿ ಧರ್ಮವನ್ನು ಅನುಸರಿಸುವ ಎಲ್ಲಾ ಪ್ರಜೆಗಳಿಗೂ ಇದು ಒಂದು ಸ್ಥಿತಿಯನ್ನು ಕಲ್ಪಿಸುತ್ತದೆ.

೧೪೭. ಎಲೈ ಧೊರೆಯೇ, ಸ್ವಧರ್ಮದಲ್ಲಿರುವ ಬ್ರಾಹ್ಮಣರಿಗೆ ಪ್ರಾಜಾಪತ್ಯ ಸ್ಥಾನವು ಸಿಕ್ಕುತ್ತದೆ. ಯುದ್ಧದಲ್ಲಿ ಹಿಂತಿರುಗದ ಕ್ಷತ್ರಿಯನಿಗೆ ಇಂದ್ರಸ್ಥಾನವು ಸಿಕ್ಕುತ್ತದೆ.

ವೈಶ್ಯಾನಾಂ ಮಾರುತಂ ಸ್ಥಾನಂ ಸ್ವಧರ್ಮಮನುವರ್ತಿನಾಂ ।
ಗಾಂಧರ್ವಂ ಸರ್ವಶೂದ್ರಾಣಾಂ ಪರಿಚರ್ಯಾನುವರ್ತಿನಾಂ ॥ ೧೪೮ ॥

ಅಷ್ಟಾಶೀತಿಸಹಸ್ರಾಣಾಂ ಯತೀನಾಮೂರ್ಧ್ವರೇತಸಾಂ ।
ಸ್ಮೃತಂ ಯೇಷಾಂ ತು ಯತ್ಸ್ಥಾನಂ ತದೇವ ಗುರುವಾಸಿನಾಂ ॥ ೧೪೯ ॥

ಸಪ್ತರ್ಷೀಣಾಂ ಚ ಯತ್ಸ್ಥಾನಂ ಸ್ಮೃತಂ ತದ್ವೈ ವನೌಕಸಾಂ ।
ಪ್ರಾಜಾಪತ್ಯಂ ಗೃಹಸ್ಥಾನಾಂ ನ್ಯಾಸಿನಾಂ ಬ್ರಹ್ಮಸಂಜ್ಞಿತಂ ॥ ೧೫೦ ॥

ಯೋಗಿನಾಮಮೃತಂ ಸ್ಥಾನಂ ಬ್ರಹ್ಮಣಃ ಪರಮಂ ಪದಂ ।
ಏಕಾಂತಿನಸ್ಸದೋದ್ಯುಕ್ತಾ ಧ್ಯಾಯಿನೋ ಯೋಗಿನೋ ಹಿ ಯೇ ॥ ೧೫೧ ॥

ತೇಷಾಂ ತತ್ಪರಮಂ ಸ್ಥಾನಂ ಯನ್ನ ಪಶ್ಯಂತಿ ಸೂರಯಃ ।
ಗತಾಗತಾ ನಿವರ್ತಂತೇ ಚಂದ್ರಾದಿತ್ಯಾದಯೋ ಗ್ರಹಾಃ ॥ ೧೫೨ ॥

೧೪೮. ತಮ್ಮ ತಮ್ಮ ಧರ್ಮದಲ್ಲಿರುವ ವೈಶ್ಯರಿಗೆ ಮಾರುತಸ್ಥಾನವು ಲಭಿಸುತ್ತದೆ, ಸೇವಾಸಕ್ತರಾದ ಶೂದ್ರರಿಗೆ ಗಾಂಧರ್ವಸ್ಥಾನವು ಬರುತ್ತದೆ.

೧೪೯. ಇಂದ್ರಿಯ ನಿಗ್ರಹಿಗಳಾದ ಎಂಭತ್ತೆಂಟು ಸಾವಿರ ಯತಿಗಳಿಗೆ ಯಾವ ಸ್ಥಾನವು ನಿಯತವೋ ಅದೇಸ್ಥಾನವು ಗುರುಸಮೀಪದಲ್ಲಿ ವಾಸಿಸುವವರಿಗೆ ಬರುತ್ತದೆ.

೧೫೦. ಗೃಹಸ್ಥಾಶ್ರಮವನ್ನು ಅನುಭವಿಸುತ್ತಿದ್ದು, ಆಮೇಲೆ ಕಾಡಿಗೆ ಹೋಗಿ ಋಷಿವೃತ್ತಿಯಿಂದಿರುವವರಿಗೆ ಸಪ್ತರ್ಷಿಗಳಿಗೆ ಯಾವ ಸ್ಥಾನವೋ ಅದು ಲಭಿಸುತ್ತದೆ. ಗೃಹಸ್ಥರಿಗೆ ಪ್ರಾಜಾಪತ್ಯಸ್ಥಾನವು ಸಿಕ್ಕುತ್ತದೆ. ಎಲ್ಲವನ್ನೂ ಭಗವದರ್ಪಣೆಮಾಡುವವರಿಗೆ ಬ್ರಹ್ಮಸ್ಥಾನವು ಸಿಕ್ಕುತ್ತದೆ.

೧೫೧. ಯೋಗಿಗಳಿಗೆ ಅಮೃತಸ್ಥಾನವು ಸಿಕ್ಕುತ್ತದೆ. ಯೋಗವನ್ನು ಸಾಧಿಸುತ್ತ ಏಕಾಂತದಲ್ಲಿರುವವರಿಗೆ ಬ್ರಹ್ಮನ ಪರಮಪದವು ಸಿಕ್ಕುತ್ತದೆ.

೧೫೨. ಅಂತಹ ಯೋಗಿಗಳಿಗೆ ವಿದ್ವಾಂಸರಿಗೂ ಗೋಚರವಾಗದ ಸ್ಥಾನವು ಲಭಿಸುತ್ತದೆ. ಸೂರ್ಯ, ಚಂದ್ರ, ಮುಂತಾದ ಗ್ರಹಗಳೂ ಹೋಗುತ್ತವೆ, ಬರುತ್ತವೆ. ಹುಟ್ಟುತ್ತವೆ, ಸಾಯುತ್ತವೆ. ಆದರೆ ಪ್ರಾಣಾಯಾಮದಿಂದ ಕೂಡಿದ ಯೋಗಿಗಳು ಇದುವರೆಗೂ ಅವರ ಸ್ಥಾನದಿಂದ ಹಿಂತಿರುಗಿಯೇ ಇಲ್ಲ.

ಅಪ್ಯಾಪಿ ನೋ ನಿವರ್ತಂತೇ ಪ್ರಾಣಾಯಾಮಪರಾಯಣಾಃ ।
ತಾಮಿಸ್ರಮಂಧತಾಮಿಸ್ರಂ ಮಹಾರೌರವರೌರವಂ ॥ ೧೫೩ ॥

ಅಸಿಪತ್ರವನಂ ಘೋರಂ ಕಾಲಸೂತ್ರಮವೀಚಿಮತ್ ।
ನಿಂದಕಾನಾಂ ವೇದಸ್ಯ ಯಜ್ಞವ್ಯಾಘಾತಕಾರಿಣಾಂ ॥ ೧೫೪ ॥

ಸ್ಥಾನಮೇತತ್ಸಮಾಖ್ಯಾತಂ ಸ್ವಧರ್ಮತ್ಯಾಗಿನಶ್ಚ ಯೇ ।
ತತೋಽಭಿಧ್ಯಾಯತಸ್ತಸ್ಯ ಜಜ್ಞಿರೇ ಮಾನಸೀ ಪ್ರಜಾಃ ॥ ೧೫೫ ॥

ತಚ್ಛರೀರಸಮುತ್ಪನ್ನೈಃ ಕಾಯಸ್ಥೈಃ ಕರಣೈಸ್ಸಹ ।
ಕ್ಷೇತ್ರಜ್ಞಾಸ್ಸಮವರ್ತಂತ ಗಾತ್ರೇಭ್ಯಸ್ತಸ್ಯ ಧೀಮತಃ ॥ ೧೫೬ ॥

ತೇ ಸರ್ವೇ ಸಮವರ್ತಂತ ಯೇ ಮಯಾ ಪ್ರಾಗುದಾಹೃತಾಃ ।
ದೇವಾದ್ಯಾಃ ಸ್ಥಾವರಾದ್ಯಾಶ್ಚ ತ್ರೈಗುಣ್ಯವಿಷಯೇ ಸ್ಥಿತಾಃ ॥ ೧೫೭ ॥

ಏವಂ ಭೂತಾನಿ ಸೃಷ್ಟಾಣಿ ಸ್ಥಾವರಾಣಿ ಚರಾಣಿ ಚ ।
ಯದಾಸ್ಯ ತಾಃ ಪ್ರಜಾಸ್ಸರ್ವಾ ನ ವ್ಯವರ್ಧಂತ ಧೀಮತಃ ॥ ೧೫೮ ॥

---

೧೫೩-೧೫೪. ವೇದವನ್ನು ನಿಂದಿಸುವವರಿಗೂ, ಯಜ್ಞವನ್ನು ನಾಶಮಾಡುವವರಿಗೂ ತನ್ನ ವರ್ಣಕ್ಕೆ ಯೋಗ್ಯವಾದ ಕರ್ಮವನ್ನು ಮಾಡದೆ ಬಿಡುವವರಿಗೂ ತಾಮಿಸ್ರ, ಅಂಧತಾಮಿಸ್ರ, ರೌರವ, ಮಹಾರೌರವ, ಘೋರವಾದ ಅಸಿಪತ್ರವನ, ಕಾಲಸೂತ್ರ, ಅವೀಚಿ ಮುಂತಾದ ನರಕಗಳಿರುತ್ತವೆ.

೧೫೫-೧೫೬. ಧ್ಯಾನಮಾಡುತ್ತಿರುವ ಆ ಬ್ರಹ್ಮನ ಮನಸ್ಸಿನಿಂದ ಪ್ರಜೆಗಳು ಹುಟ್ಟಿದರು. ಅವರ ದೇಹದ ಜೊತೆಯಲ್ಲಿಯೇ ಕಾರಣಗಳೂ ಹುಟ್ಟಿದುವು. ಆ ಸ್ವಾಮಿಯ ಶರೀರದಿಂದ ಅನೇಕರಾದವರು ಹುಟ್ಟಿದರು. ಅವರೆಲ್ಲರನ್ನೂ ನಾನು ಮೊದಲೇ ಹೇಳಿದ್ದೇನೆ.

೧೫೭. ಅವರೆಲ್ಲರೂ ಸತ್ವರಜಸ್ತಮೋಗುಣಗಳಿಂದ ಕೂಡಿದ ದೇವಾದಿಗಳಾದ ಚರಾಚರಗಳೆಂದೂ ಹೇಳಿದ್ದೇನೆ.

೧೫೮. ಈ ರೀತಿಯಾದ ಚರಾಚರಗಳನ್ನು ಸೃಷ್ಟಿಸಿದನು. ಆಮೇಲೆ ಆ ಸ್ವಾಮಿಯು ತಾನು ಸೃಷ್ಟಿಸಿದ ಪ್ರಜೆಗಳು ವೃದ್ಧಿಯಾಗದಿದ್ದುದನ್ನು ನೋಡಿ ಆಗ ತನಗೆ ಸಮರಾದ ಮಕ್ಕಳನ್ನು ಸೃಷ್ಟಿಮಾಡಿದನು.

ಅಥಾನ್ಯಾನ್ಮಾನಸಾನ್ಪುತ್ರಾನ್ಸದೃಶಾನಾತ್ಮನಾಸೃಜತ್ ।
ಭೃಗುಂ ಚ ಪುಲಹಂ ಚೈವ ಕ್ರತುಮಂಗಿರಸಂ ತಥಾ ॥ ೧೫೯ ॥

ಮರೀಚಿಂ ದಕ್ಷಮತ್ರಿಂ ಚ ವಸಿಷ್ಠಂ ಚೈವ ಮಾನಸಾನ್ ।
ನವ ಬ್ರಹ್ಮಾಣ ಇತ್ಯೇತೇ ಪುರಾಣೇ ನಿಶ್ಚಯಂ ಗತಾಃ ॥ ೧೬೦ ॥

ಸನಂದನಾದಯೋ ಯೇ ಚ ಪೂರ್ವಂ ಸೃಷ್ಟಾಶ್ಚ ವೇಧಸಾ ।
ನ ತೇ ಲೋಕೇಷ್ವಸಜ್ಯಂತ ನಿರಪೇಕ್ಷಾಃ ಪ್ರಜಾಸು ತೇ ॥ ೧೬೧ ॥

ಸರ್ವೇ ಹ್ಯಾಗತವಿಜ್ಞಾನಾ ವೀತರಾಗಾ ವಿಮತ್ಸರಾಃ ।
ತೇಷ್ವೇವಂ ನಿರಪೇಕ್ಷೇಷು ಲೋಕಸೃಷ್ಟೌ ಮಹಾತ್ಮನಃ ॥ ೧೬೨ ॥

ಬ್ರಹ್ಮಣೋಽಭೂನ್ಮಹಾಕ್ರೋಧಸ್ತ್ರೈಲೋಕ್ಯದಹನಕ್ಷಮಃ ।
ತಸ್ಯ ಕ್ರೋಧಾತ್ಸಮುದ್ಭೂತಂ ಜ್ವಾಲಾಮಾಲಾವದೀಪಿತಂ ॥ ೧೬೩ ॥

---

೧೫೯-೧೬೦. ಭೃಗು, ಪುಲಹ, ಕ್ರತು, ಅಂಗಿರಸ, ಮರೀಚಿ, ದಕ್ಷ, ಅತ್ರಿ, ವಸಿಷ್ಠ ಎಂಬವರನ್ನು ಮನಸ್ಸಿನಿಂದಲೇ ಸೃಷ್ಟಿಸಿದನು. ಇವರೇನೇ ನವ (ಒಂಭತ್ತು) ಬ್ರಹ್ಮರೆಂದು ಪುರಾಣದಲ್ಲಿ ಪ್ರಖ್ಯಾತರಾಗಿದ್ದಾರೆ.

೧೬೧. ಬ್ರಹ್ಮನು ಮೊದಲು ಸೃಷ್ಟಿಸಿದ ಸನಂದನಾದಿಗಳು ಪ್ರಜೆಗಳಲ್ಲಿ ಅಪೇಕ್ಷೆಹೊಂದದೆ ಲೋಕದಲ್ಲಿ ಪ್ರಜೆಗಳನ್ನು ಸೃಷ್ಟಿಸಲಿಲ್ಲ.

೧೬೨. ಅವರೆಲ್ಲರಿಗೂ ಹುಟ್ಟಿದೊಡನೆಯೇ ಜ್ಞಾನೋದಯವಾಯಿತು. ಮಾತ್ಸರ್ಯಾದಿಗಳನ್ನು ಬಿಟ್ಟು ವೈರಾಗ್ಯಶಾಲಿಗಳಾದರು. ಈ ಸನಂದಾದಿಗಳು ಲೋಕ ಸೃಷ್ಟಿಯಲ್ಲಿ ಆಸಕ್ತರಾಗದಿರಲು ಆ ಮಹಾತ್ಮನಾದ ಬ್ರಹ್ಮನಿಗೆ ಮೂರು ಲೋಕವನ್ನು ಸುಡುವಷ್ಟು ಕೋಪವು ಬಂದಿತು.

೧೬೩. ಅವನ ಕೋಪದಿಂದ ಹುಟ್ಟಿದ ಬೆಂಕಿಯು ಜ್ವಾಲೆಯನ್ನು ಬೀಸಿ ಕೊಂಡು ಉರಿಯುತ್ತ ಮೂರು ಲೋಕವನ್ನು ಸುಟ್ಟಿತು.

ಬ್ರಹ್ಮಣಸ್ತು ತದಾ ಜ್ಯೋತಿಸ್ತ್ರೈಲೋಕ್ಯಮಖಿಲಂ ದಹತ್ ।
ಭ್ರುಕುಟೀಕುಟಿಲಾತ್ತಸ್ಯ ಲಲಾಟಾತ್ಕ್ರೋಧದೀಪಿತಾತ್ ॥ ೧೬೪ ॥

ಸಮುತ್ಪನ್ನಸ್ತದಾ ರುದ್ರೋ ಮಧ್ಯಾಹ್ನಾರ್ಕಸಮಪ್ರಭಃ ।
ಅರ್ಧನಾರೀನರವಪುಃ ಪ್ರಚಂಡೋಽತಿಶರೀರವಾನ್ ॥ ೧೬೫ ॥

ವಿಭಜಾತ್ಮಾನಮಿತ್ಯುಕ್ತ್ವಾ ತಂ ಬ್ರಹ್ಮಾಂತರ್ದಧೇ ತತಃ ।
ತಥೋಕ್ತೋಽಸೌ ದ್ವಿಧಾ ಸ್ತ್ರೀತ್ವಂ ಪುರುಷತ್ವಂ ತಥಾಕರೋತ್ ॥ ೧೬೬ ॥

ಬಿಭೇದ ಪುರುಷತ್ವಂ ಚ ದಶಧಾ ಚೈಕಧಾ ಚ ಸಃ ।
ಸೌಮ್ಯಾಸೌಮ್ಯೈಸ್ತಥಾ ರೂಪೈಶ್ಶಾಂತೈಃ ಸ್ತ್ರೀತ್ವಂ ಚ ಸ ಪ್ರಭುಃ॥ ೧೬೭ ॥

ಬಿಭೇದ ಬಹುಧಾ ಚೈವ ಸ್ವರೂಪೈರಸಿತೈಸ್ಸಿತೈಃ ।
ತತೋ ಬ್ರಹ್ಮಾ ಸ್ವಸಂಭೂತಂ ಸರ್ವಂ ಸ್ವಾಯಂಭುವಂ ಪ್ರಭುಂ ॥ ೧೬೮ ॥

೧೬೪-೧೬೫. ಕೋಪಗೊಂಡು ಹುಬ್ಬು ಗಂಟುಹಾಕಿಕೊಂಡಿರುವ ಆ ಬ್ರಹ್ಮನ ಹಣೆಯಿಂದ ಮಧ್ಯಾಹ್ನ ಸೂರ್ಯನಂತೆ ಜ್ವಲಿಸುವ ಅರ್ಧ ಶರೀರವು ಹೆಂಗಸಾಗಿಯೂ, ಅರ್ಧ ಶರೀರವು ಗಂಡಸಾಗಿಯೂ ಇರುವ ರುದ್ರನು ಹುಟ್ಟಿದನು.

೧೬೬. ಆ ಬ್ರಹ್ಮನು ಈ ಅರ್ಧನಾರೀಶ್ವರನನ್ನು ಕುರಿತುಗಂಡು ಹೆಣ್ಣನ್ನು ವಿಭಾಗವಾಗುವಂತೆ ಹೇಳಿದನು. ಆಗ ಆ ರುದ್ರನು ಎರಡು ಭಾಗವಾಗಿ ಒಂದು ಗಂಡು ಒಂದು ಹೆಣ್ಣು ಆಗುವಂತೆ ಮಾಡಿದನು.

೧೬೭. ರುದ್ರಪುರುಷರೂಪವಾಗಿರುವುದನ್ನು ಹನ್ನೊಂದು ಭಾಗವಾಗಿ ಭಾಗ ಮಾಡಿಕೊಂಡನು. ಮತ್ತು ಆ ಹೆಂಗಸನ್ನು ಸೌಮ್ಯ ಕ್ರೂರಗಳು ಆದ ರೂಪವುಳ್ಳ ಶಾಂತವಾದ ಆ ಸ್ತ್ರೀವ್ಯಕ್ತಿಯನ್ನು ಕಪ್ಪು ಬಿಳುಪುಗಳೇ ಮೊದಲಾದ ನಾನಾಬಣ್ಣಗಳಿಂದ ಬಹು ರೂಪವಾಗಿರುವಂತೆ ಮಾಡಿದನು.

೧೬೮. ಆಮೇಲೆ ಆ ಬ್ರಹ್ಮನು ತನ್ನಿಂದಲೇ ಉತ್ಪನ್ನನಾದ ಸ್ವಾಯಂಭುವ ಮನುವನ್ನು ಅಧಿಕಾರದಲ್ಲಿ ನಿಯಮಿಸಿದನು.

ಆತ್ಮಾನಮೇವ ಕೃತವಾನ್ಪ್ರಜಾಪತ್ಯೇ ಮನುಂ ನೃಪ ।
ಶತರೂಪಾಂ ಚ ತಾಂ ನಾರೀಂ ತಪೋನಿರ್ಧೂತಕಲ್ಮಷಾಂ ॥ ೧೬೯ ॥

ಸ್ವಾಯಂಭುವೋ ಮನುರ್ನಾಮ ಪತ್ನೀತ್ವೇ ಜಗೃಹೇ ಪ್ರಭುಃ ।
ತಸ್ಮಾಚ್ಚ ಪುರುಷಾದ್ದೇವೀಸ್ವರೂಪಾಚ್ಚ ವ್ಯಜಾಯತ ॥ ೧೭೦ ॥

ಪ್ರಿಯವ್ರತೋತ್ತಾನಪಾದಪ್ರಸೂತ್ಯಾಕೂತಿಸಂಜ್ಞಿತಂ ।
ದದೌ ಪ್ರಸೂತಿಂ ದಕ್ಷಾಯ ಆಕೂತಿಂ ರುಚಯೇ ಪುರಾ ॥ ೧೭೧ ॥

ಪ್ರಜಾಪತಿಸ್ಸ ಜಗ್ರಾಹ ತಯೋರ್ಜಜ್ಞೇ ಸದಕ್ಷಿಣಃ ।
ಪುತ್ರೋ ಯಜ್ಞೋ ಮಹಾಭಾಗ ದಂಪತ್ಯೋರ್ಮಿಥುನಂ ತತಃ ॥ ೧೭೨ ॥

ಯಜ್ಞಸ್ಯ ದಕ್ಷಿಣಾಯಾಂ ತು ಪುತ್ರಾ ದ್ವಾದಶ ಜಜ್ಞಿರೇ ।
ಯಾಮಾ ಇತಿ ಸಮಾಖ್ಯಾತಾ ದೇವಾಃ ಸ್ವಾಯಂಭುವೇ ಮನೌ ॥ ೧೭೩ ॥

---

೧೬೯. ತಪಸ್ಸಿನಿಂದ ಪಾಪಗಳನ್ನು ನಾಶಮಾಡಿಕೊಂಡಿರುವ, ನಾನಾರೀತಿಯಾದ ಬಣ್ಣವುಳ್ಳ ಆ ಹೆಂಗಸನ್ನು ಸ್ವಾಯಂಭುವ ಮನುವು ಹೆಂಡತಿಯನ್ನಾಗಿ ಮಾಡಿಕೊಂಡನು.

೧೭೦. ಆ ಸ್ವಾಯಂಭುವ ಮನುವಿಗೆ ಆ ದೇವಿಯಲ್ಲಿ ಪ್ರಿಯವ್ರತ, ಉತ್ತಾನಪಾದ ಪ್ರಸೂತಿ, ಆಕೂತಿ ಎಂದು ನಾಲ್ವರು ಮಕ್ಕಳಾದರು.

೧೭೧. ಆ ಹೆಣ್ಣು ಮಕ್ಕಳೊಳಗೆ ಪ್ರಸೂತಿಯನ್ನು ದಕ್ಷನಿಗೂ, ಆಕೂತಿಯನ್ನು ರುಚಿ ಎಂಬವನಿಗೂ ಕೊಟ್ಟನು.

೧೭೨. ಸ್ವಾಯಂಭುವಮನುವು ಸ್ವೀಕರಿಸಿದ ಆಕೆಯಲ್ಲಿ ದಕ್ಷಿಣಾ ಎಂಬ ಹೆಣ್ಣೂ, ಯಜ್ಞನೆಂಬ ಗಂಡೂ ಹುಟ್ಟಿದರು. ಮತ್ತೆ ಆ ಯಜ್ಞ ದಕ್ಷಿಣೆಯೂನೂ ಸೇರಿದರು.

೧೭೩. ಯಜ್ಞನಿಗೆ ದಕ್ಷಿಣೆಯಲ್ಲಿ ಹನ್ನೆರಡು ಜನ ಮಕ್ಕಳು ಹುಟ್ಟಿದರು. ಅವರೆಲ್ಲರೂ ಯಾಮಾಃ ಎಂದು ಪ್ರಖ್ಯಾತಿಯನ್ನು ಪಡೆದ ದೇವತೆಗಳು, ಈ ರೀತಿ ಸ್ವಾಯಂಭುವ ಮನುವಿನಲ್ಲಿ ಹುಟ್ಟಿದರು.

ಪ್ರಸೂತ್ಯಾಂ ಚ ತದಾ ಜಾತಾಶ್ಚತ್ವಾರೋ ವಿಶಂತಿಸ್ತಥಾ ।
ಸಸರ್ಜ ಕನ್ಯಾಸ್ತಾಸಾಂ ತು ಸಮ್ಯಗ್ನಾಮಾನಿ ಮೇ ಶೃಣು ॥ ೧೭೪ ॥

ಶ್ರದ್ಧಾ ಲಕ್ಷ್ಮೀರ್ಧೃತಿಃ ಪುಷ್ಟಿಸ್ತುಷ್ಟಿರ್ಮೇಧಾ ಕ್ರಿಯಾ ತಥಾ ।
ಬುದ್ಧಿರ್ಲಜ್ಜಾ ವಪುಶ್ಶಾಂತಿಃ ಸಿದ್ಧಿಃ ಕೀರ್ತಿಸ್ತ್ರಯೋದಶೀ ॥ ೧೭೫ ॥

ಪತ್ನ್ಯರ್ಥಂ ಪ್ರತಿಜಗ್ರಾಹ ಧರ್ಮೋ ದಾಕ್ಷಾಯಣೀಂ ಪ್ರಭುಃ ।
ತಾಭ್ಯಸ್ಸಿಷ್ಟಾ ಯವೀಯಸ್ಯ ಏಕಾದಶ ಸುಲೋಚನಾಃ ॥ ೧೭೬ ॥

ಖ್ಯಾತಿಶ್ಶಾಂತ್ಯಥ ಸಂಭೂತಿಃ ಸ್ಮೃತಿಃ ಪ್ರೀತಿಃ ಕ್ಷಮಾ ತಥಾ ।
ಸಂನತಿಶ್ಚಾನುಸೂಯಾ ಚ ಊರ್ಜಾ ಸ್ವಾಹಾ ಸ್ವಧಾ ತಥಾ ॥ ೧೭೭ ॥

ಭೃಗುರ್ಭಗೋ ಮರೀಚಿಶ್ಚ ತಥಾ ಚೈವಾಂಗಿರಾ ಮುನಿಃ ।
ಅಹಂ ಚ ಪುಲಹಶ್ಚೈವ ಕ್ರತುಶ್ಚರ್ಷಿವರಸ್ತಥಾ ॥ ೧೭೮ ॥

ಅತ್ರಿರ್ವಸಿಷ್ಠೋ ವಹ್ನಿಶ್ಚ ಪಿತರಶ್ಚ ಯಥಾಕ್ರಮಂ ।
ಖ್ಯಾತ್ಯಾದ್ಯಾ ಜಗೃಹುಃ ಕನ್ಯಾ ಮುನಯೋ ರಾಜಸತ್ತಮ ॥ ೧೭೯ ॥

---

೧೭೪. ಪ್ರಸೂತಿಯಲ್ಲಾದರೋ ಇಪ್ಪತ್ತುನಾಲ್ಕು ಜನ ಹೆಣ್ಣು ಮಕ್ಕಳ್ ಹುಟ್ಟಿದರು, ಅವರ ಹೆಸರನ್ನು ಹೇಳುತ್ತೇನೆ ಕೇಳು.

೧೭೫. ಶ್ರದ್ಧೆ, ಲಕ್ಷ್ಮಿ, ಧೃತಿ, ಪುಷ್ಟಿ, ತುಷ್ಟಿ, ಮೇಧೆ, ಕ್ರಿಯೆ, ಬುದ್ಧಿ, ಲಜ್ಜೆ, ವಪು, ಶಾನ್ತಿ, ಸಿದ್ಧಿ, ಕೀರ್ತಿ ಈ ರೀತಿ ಹದಿಮೂರು ಜನರು.

೧೭೬. ದಕ್ಷನ ಮಕ್ಕಳಾದ ಈ ಹದಿಮೂರು ಜನರನ್ನೂ ಧರ್ಮನು ಮದುವೆಯಾದನು. ಅವರಲ್ಲಿ ಹನ್ನೊಂದು ಜನ ಹೆಣ್ಣು ಮಕ್ಕಳು ಹುಟ್ಟಿದರು.

೧೭೭. ಖ್ಯಾತಿ, ಶಾಂತಿ, ಸಂಭೂತಿ, ಸ್ಮೃತಿ, ಪ್ರೀತಿ, ಕ್ಷಮಾ, ಸನ್ನತಿ, ಅನಸೂಯೆ, ಊರ್ಜೆ, ಸ್ವಾಹಾ, ಸ್ವಧಾ ಎಂದು ಆ ಹನ್ನೊಂದು ಜನ ಹೆಣ್ಣುಮಕ್ಕಳ ಹೆಸರು.

೧೭೮-೧೭೯. ಭೃಗು, ಭಗ, ಮರೀಚಿ, ಅಂಗಿರಸ, ಪುಲಸ್ತ್ಯ, ಪುಲಹ, ಕ್ರತು, ಅತ್ರಿ, ವಸಿಷ್ಠ, ವಹ್ನಿ, ಪಿತೃಗಳು ಈ ರೀತಿ ಋಷಿಗಳಾದ ಗಂಡು ಮಕ್ಕಳೂ ಖ್ಯಾತಿಯೇ ಮೊದಲಾದ ಹೆಣ್ಣುಮಕ್ಕಳೂ ಹುಟ್ಟಿದರು.

**ಶ್ರದ್ಧಾ ಕಾಮಂ ತಥಾ ಲಕ್ಷ್ಮೀರ್ದರ್ಪಂ ಚ ನಿಯಮಂ ಧೃತಿಃ ।**
**ಸಂತೋಷಂ ಚ ತಥಾ ತುಷ್ಟಿರ್ಲೋಭಂ ಪುಷ್ಟಿರಸೂಯತ ॥ ೧೮೦ ॥**

**ಮೇಧಾ ಶ್ರಿಯಂ ಕ್ರಿಯಾ ದಂಡಂ ನಯಂ ವಿನಯಮೇವ ಚ ।**
**ಬೋಧಂ ಬುದ್ಧಿಸ್ತಥಾ ಲಜ್ಜಾ ವಿನಯಂ ವಪುರಾತ್ಮಜಂ ॥ ೧೮೧ ॥**

**ವ್ಯವಸಾಯಂ ಕ್ರಿಯಾ ಜಜ್ಞೇ ಕ್ಷೇಮಂ ಶಾಂತಿರಸೂಯತ ।**
**ಸುಖಂ ಸಿದ್ಧಿರ್ಯಶಃ ಕೀರ್ತಿರಿತ್ಯೇತೇ ಧರ್ಮಸೂನವಃ ॥ ೧೮೨ ॥**

**ಕಾಮಾನ್ನಂದೀ ಸುತಂ ಹರ್ಷಂ ಧರ್ಮಪುತ್ರಾದಸೂಯತ ।**
**ಹಿಂಸಾ ಭಾರ್ಯಾ ತ್ವಧರ್ಮಸ್ಯ ತಸ್ಯಾಂ ಜಜ್ಞೇ ತಥಾನೃತಂ ॥ ೧೮೩ ॥**

**ಕನ್ಯಾ ಚ ನಿಕೃತಿಸ್ತಾಭ್ಯಾಂ ಭಯಂ ನರಕಮೇವ ಚ ।**
**ಮಾಯಾಥ ವೇದನಾ ಚೈವ ಮಿಥುನಂ ದ್ವಂದ್ವಮೇವ ಚ ॥ ೧೮೪ ॥**

೧೮೦. ಶ್ರದ್ಧೆಯು ಕಾಮನೆಂಬ ಮಗನನ್ನೂ, ಲಕ್ಷ್ಮಿಯು ದರ್ಪನೆಂಬುವನನ್ನೂ, ಧೃತಿಯು ನಿಯಮನನ್ನೂ, ತುಷ್ಟಿಯು ಸಂತೋಷವನ್ನೂ, ಪುಷ್ಟಿಯು ಲೋಭನೆಂಬ ಮಗನನ್ನೂ ಹೆತ್ತರು.

೧೮೧-೧೮೨. ಮೇಧೆಯು ಶ್ರೀಯನ್ನೂ, ಕ್ರಿಯೆಯು ಉತ್ತಮನೂ ವಿನಯಸಂಪನ್ನನೂ ಆದ ದಂಡನನ್ನೂ, ಬುದ್ಧಿಯು ಬೋಧನನ್ನೂ, ಲಜ್ಜೆಯು ವಿನಯನನ್ನೂ, ವಪುವು ವ್ಯವಸಾಯನೆಂಬ ಮಗ ಕ್ರಿಯೆಯೆಂಬ ಮಗಳನ್ನೂ, ಶಾಂತಿಯು ಕ್ಷೇಮನನ್ನೂ, ಸಿದ್ಧಿಯು ಸುಖವನ್ನೂ, ಕೀರ್ತಿಯು ಯಶಸ್ಸನ್ನೂ ಹೆತ್ತರು, ಇವರೇ ಧರ್ಮನ ಮಕ್ಕಳು.

೧೮೩. ಧರ್ಮನ ಮಗನಾದ ಕಾಮನು ನಂದಿಯಲ್ಲಿ ಹರ್ಷನನ್ನು ಪಡೆದನು. ಅಧರ್ಮನಿಗೆ ಹಿಂಸೆಯು ಹೆಂಡತಿಯು, ಆಕೆಯಲ್ಲಿ ಅನೃತನು ಹುಟ್ಟಿದನು.

೧೮೪. ಅಧರ್ಮನ ಹೆಂಡತಿಯಾದ ಹಿಂಸೆಯಲ್ಲಿಯೇ ನಿಕೃತಿಯೆಂಬ ಕನ್ಯೆಯೂ, ಭಯ, ನರಕವೆಂಬ ಮತ್ತಿಬ್ಬರು ಗಂಡುಮಕ್ಕಳೂ ಹುಟ್ಟಿದರು. ಮಾಯಾ, ವೇದನಾ, ಮಿಥುನ, ದ್ವಂದ್ವ ಎಂಬವರೂ ಮಕ್ಕಳಾದರು.

**ತತೋ ಜಜ್ಞೇ ತಥಾ ಮಾಯಾಂ ಮೃತ್ಯುಂ ಭೂತಾಪಹಾರಿಣಂ ।**
**ವೇದನಾ ಸ್ವಸುತಂ ಚಾಪಿ ದುಃಖಂ ಜಜ್ಞೇಽಥ ರೌರವಾತ್ ॥ ೧೮೫ ॥**

**ಮೃತ್ಯೋರ್ವ್ಯಾಧಿಜರಾಶೋಕತೃಷ್ಣಾಕ್ರೋಧಾಶ್ಚ ಜಜ್ಞಿರೇ ।**
**ದುಃಖೋತ್ತರಾಸ್ಸ್ಮೃತಾ ಹ್ಯೇತೇ ಸರ್ವೇ ಚಾಧರ್ಮಲಕ್ಷಣಾಃ ॥ ೧೮೬ ॥**

**ನೈಷಾಂ ಭಾರ್ಯಾಸ್ತಿ ಪುತ್ರೋ ವಾ ತೇ ಸರ್ವೇ ಹ್ಯೂರ್ಧ್ವರೇತಸಃ ।**
**ರೌದ್ರಾಣ್ಯೇತಾನಿ ರೂಪಾಣಿ ಬ್ರಹ್ಮಣೋ ನೃಪರಾತ್ಮಜ ॥ ೧೮೭ ॥**

**ನಿತ್ಯಂ ಪ್ರಳಯಹೇತುತ್ವಂ ಜಗತೋಽಸ್ಯ ಪ್ರಯಾಂತಿ ವೈ ।**
**ರುದ್ರಸರ್ಗಂ ಪ್ರವಕ್ಷ್ಯಾಮಿ ಯಥಾ ಬ್ರಹ್ಮಾ ಚಕಾರ ಹ ॥ ೧೮೮ ॥**

**ಕಲ್ಪಾದಾವಾತ್ಮನಸ್ತುಲ್ಯಂ ಸುತಂ ಪ್ರಧ್ಯಾಯತಸ್ತತಃ ।**
**ಪ್ರಾದುರಾಸೀತ್ಪ್ರಭೋರಂಕೇ ಕುಮಾರೋ ನೀಲಲೋಹಿತಃ ॥ ೧೮೯ ॥**

೧೮೫. ಅನಂತರ ಮಾಯೆಯು ಪ್ರಾಣಿಗಳನ್ನು ನಾಶಮಾಡುವ ಮೃತ್ಯುವನ್ನು ಹೆತ್ತಳು. ವೇದನೆಯೆಂಬವಳು ದುಃಖವನ್ನೂ, ರೌರವಗಳೆಂಬವರನ್ನೂ ಹೆತ್ತಳು.

೧೮೬. ಮೃತ್ಯುವಿಗೆ ವ್ಯಾಧಿ, ಜರೆ, ಶೋಕ, ತೃಷ್ಣೆ, ಕ್ರೋಧರೆಂಬ ಮಕ್ಕಳಾದರು. ಇವರೆಲ್ಲರೂ ದುಃಖವನ್ನು ಕೊಡತಕ್ಕವರು ಮತ್ತು ಎಲ್ಲರೂ ಅಧರ್ಮದ ಲಕ್ಷಣವುಳ್ಳವರು.

೧೮೭. ಎಲೈ ರಾಜಪುತ್ರನೇ, ಇವರಿಗೆ ಹೆಂಡಿರೂ, ಮಕ್ಕಳೂ ಯಾರೂ ಇಲ್ಲ. ಜಿತೇಂದ್ರಿಯರು. ಇವರೆಲ್ಲರಿಗೂ ಆ ಬ್ರಹ್ಮನ ಉಗ್ರರೂಪವೇ ಇರುವುದು.

೧೮೮. ಇವರೆಲ್ಲರೂ ಈ ಜಗತ್ತಿಗೆ ಪ್ರತಿದಿನದಲ್ಲಿಯೂ ಪ್ರಳಯಕ್ಕೆ ಕಾರಣವಾಗುತ್ತಿರುತ್ತಾರೆ. ಬ್ರಹ್ಮನು ರುದ್ರಸೃಷ್ಟಿಯನ್ನು ಮಾಡಿದ ರೀತಿಯನ್ನು ಹೇಳುತ್ತೇನೆ.

೧೮೯. ಕಲ್ಪದ ಮೊದಲಿನಲ್ಲಿ ತನ್ನಂತಿರುವ ಮಗನು ಹುಟ್ಟಬೇಕೆಂದು ಯೋಚಿಸುತ್ತಿದ್ದ ಆ ಬ್ರಹ್ಮನ ತೊಡೆಯಲ್ಲಿ ಕಪ್ಪು ಕೆಂಪು ಬಣ್ಣವುಳ್ಳ ಒಬ್ಬ ಮಗನು ಹುಟ್ಟಿದನು.

ರುದನ್ವೈ ಸುಸ್ವರಂ ಸೋಽಥ ದ್ರವಂಶ್ಚ ನೃಪಸತ್ತಮ ।
ಕಿಂ ರೋದಿಷೀತಿ ತಂ ಬ್ರಹ್ಮಾ ರುದನ್ತಂ ಪ್ರತ್ಯುವಾಚ ವೈ ॥ ೧೯೦ ॥

ನಾಮ ದೇಹೀತಿ ತಂ ಸೋಽಥ ಪ್ರತ್ಯುವಾಚ ಪ್ರಜಾಪತಿಂ ।
ರುದ್ರಸ್ತ್ವಂ ದೇವನಾಮಾಸಿ ಮಾರೋದೀರ್ಧೈರ್ಯಮಾವಹ ॥ ೧೯೧ ॥

ಏವಮುಕ್ತಃ ಪುನಸ್ಸೋಽಥ ಸಪ್ತಕೃತ್ವೋ ರುರೋದ ಹ ।
ತತೋಽನ್ಯಾನಿ ದದೌ ತಸ್ಮೈ ಸಪ್ತ ನಾಮಾನಿ ವೈ ಪ್ರಭುಃ ॥ ೧೯೨ ॥

ಸ್ಥಾನಾನಿ ಚೈಷಾಮಷ್ಟಾನಾಂ ಪತ್ನೀಃ ಪುತ್ರಾಂಸ್ತಥೈವ ಚ ।
ಭವಂ ಶರ್ವಮಥೇಶಾನಂ ಶಿವಂ ಪಶುಪತೀಂ ನೃಪ ॥ ೧೯೩ ॥

ಭೀಮಮುಗ್ರಂ ಮಹಾದೇವಮುವಾಚ ಸ ಪಿತಾಮಹಃ ।
ಸೂರ್ಯೋ ಜಲಂ ಮಹೀವಹ್ನಿರ್ವಾಯುರಾಕಾಶಮೇವ ಚ ॥ ೧೯೪ ॥

---

೧೯೦. ಆ ರೀತಿ ಹುಟ್ಟಿದವನು ಸುಸ್ವರವಾಗಿ ಅಳುತ್ತ ನೀರಾಗಲು ಮೊದಲು ಮಾಡಿದನು. ಇದನ್ನು ನೋಡಿ ಬ್ರಹ್ಮನು ಏತಕ್ಕೆ ಅಳುತ್ತೀ ಎಂದು ಅವನನ್ನು ಕೇಳಿದನು.

೧೯೧. ಆ ಮಗುವು ನನಗೆ ಹೆಸರನ್ನು ಇಡು ಎನ್ನಲು ಬ್ರಹ್ಮನು ನೀನು ರುದ್ರನೆಂದು ದೇವತೆಗಳಲ್ಲಿ ಹೆಸರುಳ್ಳವನಾಗು. ಅಳಬೇಡ, ಧೈರ್ಯವನ್ನು ಹೊಂದು ಎಂದು ಹೇಳಿದನು.

೧೯೨. ಹೀಗೆ ಹೇಳಿದರೂ ಮತ್ತೆ ಆ ರುದ್ರನು ಏಳು ಬಾರಿ ಅತ್ತನು. ಆಗ ಆ ಸ್ವಾಮಿಯು ಅವನಿಗೆ ಮತ್ತೆ ಬೇರೆ ಏಳು ಹೆಸರುಗಳನ್ನು ಕೊಟ್ಟನು.

೧೯೩. ಈ ಎಂಟು ಜನ ಹೆಸರಿನವರಿಗೂ ಬೇರೆಬೇರೆ ಜಾಗಗಳನ್ನೂ ಬೇರೆ ಬೇರೆಯಾದ ಹೆಂಡತಿ ಮಕ್ಕಳನ್ನೂ ಕೊಟ್ಟನು. ಭವ, ಶರ್ವ, ಈಶಾನ, ಶಿವ, ಪಶು ಪತಿ, ಭೀಮ, ಉಗ್ರ, ಮಹಾದೇವ ಎಂಬದಾಗಿ ಹೆಸರಿಟ್ಟನು.

೧೯೪. ಸೂರ್ಯ, ನೀರು, ಭೂಮಿ, ಬೆಂಕಿ, ಗಾಳಿ, ಆಕಾಶ, ದೀಕ್ಷಿತ, ಬ್ರಾಹ್ಮಣ ಚಂದ್ರರೆಂಬುವರನ್ನೂ ಅವರಿಗೆ ದೇಹವಾಗಿ ಮಾಡಿದನು.

ದೀಕ್ಷಿತೋ ಬ್ರಾಹ್ಮಣಃ ಸೋಮ ಇತ್ಯೇತಾಸ್ತನವಃ ಕ್ರಮಾತ್ ।
ಸುವರ್ಚಲಾ ತಥಾ ಚೋಷಾ ವಿಕೇಶೀ ಚ ತಥಾ ಶಿವಾ ॥ ೧೯೫ ॥

ಸ್ವಾಹಾದೇಶಸ್ತಥಾ ದೀಕ್ಷಾ ರೋಹಿಣೀ ಚ ಯಥಾಕ್ರಮಂ ।
ಸೂರ್ಯಾದೀನಾಂ ನರಶ್ರೇಷ್ಠ ರುದ್ರಾದ್ಯೈರ್ನಾಮಭಿಃ ಕ್ರಮಾತ್ ॥ ೧೯೬ ॥

ಪತ್ನ್ಯಶ್ಚ ತಾ ಮಹಾಭಾಗಾಸ್ತದಪತ್ಯಾನಿ ಮೇ ಶೃಣು ।
ಯೇಷಾಂ ಸೂತಿಃ ಪ್ರಸೂತಿಶ್ಚ ಇದಮಾಪೂರಿತಂ ಜಗತ್ ॥ ೧೯೭ ॥

ಶನೈಶ್ಚರಸ್ತಥಾ ಶುಕ್ರೋ ಲೋಹಿತಾಂಗೋ ಮನೋಜವಃ ।
ಸ್ವರ್ಗಾಸ್ಕಂದೋಽಥ ಸಂತಾನೋ ಬುಧಶ್ಚಾನುಕ್ರಮಾತ್ಸುತಾಃ ॥ ೧೯೮ ॥

ಏವಂ ಪ್ರಕಾರೋ ರುದ್ರೋಽಸೌ ಸತೀಂ ಭಾರ್ಯಾಮವಿಂದತ ।
ದಕ್ಷಕೋಪಾಚ್ಚ ತತ್ಯಾಜ ಸಾ ಸತೀ ಸ್ವಂ ಕಳೇಬರಂ ॥ ೧೯೯ ॥

೧೯೫-೧೯೬. ಸುವರ್ಚಲಾ, ಉಷೆ, ವಿಕೇಶೀ, ಶಿವೆ, ಸ್ವಾಹಾ, ಆದೇಶ, ದೀಕ್ಷೆರೋಹಿಣೀ ಎಂಬದಾಗಿ ಸೂರ್ಯಾದಿಗಳಿಗೆ ಕ್ರಮವಾಗಿ ಹೆಂಡಿರು. ಅವರ ಮಕ್ಕಳ ಹೆಸರನ್ನೂ ಹೇಳುತ್ತೇನೆ ಕೇಳು.

೧೯೭. ಅವರ ಮಕ್ಕಳು ಮುಮ್ಮಕ್ಕಳುಗಳಿಂದ ಈ ಪ್ರಪಂಚವೆಲ್ಲವೂ ತುಂಬಿ ಹೋಗಿದೆ.

೧೯೮. ಶನಿ, ಶುಕ್ರ, ಅಂಗಾರಕ, ಮನೋಜವ, ಸ್ವರ್ಗ, ಆಸ್ಕಂದ, ಸಂತಾನ. ಬುಧ ಎಂಬವರು ಕ್ರಮದಿಂದ ಅವರೊಬ್ಬೊಬ್ಬರಿಗೂ ಒಬ್ಬೊಬ್ಬರು ಮಕ್ಕಳು.

೧೯೯. ಈರೀತಿಯಾಗಿದ್ದರೂ ರುದ್ರನು ಸತೀ ಎಂಬವಳನ್ನು ಹೆಂಡತಿಯನ್ನಾಗಿ ಹೊಂದಿದನು. ಆಕೆಯು ದಕ್ಷನಮೇಲಿನ ಕೋಪದಿಂದ ದೇಹವನ್ನು ತ್ಯಾಗಮಾಡಿದಳು.

**ಹಿಮವತಸ್ತು ಸಾ ಭೂತಾ ಮೇನಾಯಾಂ ದ್ವಿಜಸತ್ತಮ ।**
**ಉಪಯೇಮೇ ಪುನಶ್ಚೈವ ಯಾಚಿತ್ವಾ ಭಗವಾನುತ　　　　॥ ೨೦೦ ॥**

**ದೇವೌ ಧಾತೃವಿಧಾತಾರೌ ಭೃಗೋಃ ಖ್ಯಾತಿರಸೂಯತ ।**
**ಶ್ರಿಯಂ ಚ ದೇವದೇವಸ್ಯ ವಾಸುದೇವಪರಿಗ್ರಹಂ　　　　॥ ೨೦೧ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಂಚಮೇ ಸೃಷ್ಟಿಖಂಡೇ**
**ತೃತೀಯೋಽಧ್ಯಾಯಃ**

---

೨೦೦. ಅನಂತರ ಆ ಮೇನೆಯಲ್ಲಿ ಹಿಮವಂತನಿಂದ ಆ ಸತಿಯು ಜನ್ಮವೆತ್ತಿದಳು. ಅನಂತರ ಆ ಭಗವಂತನನ್ನು ಕೇಳಿಕೊಂಡು ಮತ್ತೆ ಮದುವೆಯಾದಳು.

೨೦೧. ಭೃಗುವಿನಿಂದ ಖ್ಯಾತಿಯಲ್ಲಿ ಧಾತೃವಿಧಾತೃಗಳು ಹುಟ್ಟಿದರು. ದೇವದೇವನಾದ ವಾಸುದೇವನ ಹೆಂಡತಿಯಾದ ಶ್ರೀಯನ್ನು ಹೆತ್ತಳು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ಮೂರನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## ಚತುರ್ಥೋಽಧ್ಯಾಯಃ

॥ ಭೀಷ್ಮ ಉವಾಚ ॥

ಕ್ಷೀರಾಬ್ಧೌ ತು ತದಾ ಜಾತಾ ಕೀರ್ತಿತಾ ಕಮಲಾ ಪ್ರಭೋ ।
ಖ್ಯಾತ್ಯಾಂ ಭೃಗೋಸ್ಸಮುತ್ಪನ್ನಾ ಏತದಾಹ ಕಥಂ ಭವಾನ್ ॥ ೧ ॥

ಕಥಂ ಚ ದಕ್ಷದುಹಿತಾ ದೇಹಂ ತ್ಯಕ್ತವತೀ ತು ಸಾ ।
ಮೇನಾಯಾಂ ಗರ್ಭಸಂಭೂತಿರುಮಾಯಾ ಜನ್ಮ ಏವ ಚ ॥ ೨ ॥

ಕಿಮರ್ಥಂ ದೇವೀ ದೇವೇನ ಪತ್ನೀ ಹೈಮವತೀ ಕೃತಾ ।
ವಿರೋಧಂ ಚಾಪಿ ದಕ್ಷೇಣ ಭಗವಾಂಸ್ತದ್ಬ್ರವೀತು ಮೇ ॥ ೩ ॥

### ನಾಲ್ಕನೆಯ ಅಧ್ಯಾಯವು.

೧. ಭೀಷ್ಮನು ಹೇಳಿದನು:—ಎಲೈ ಪ್ರಭುವೇ, ಲಕ್ಷ್ಮಿಯು ಹಿಂದೆ ಕ್ಷೀರ ಸಮುದ್ರದಲ್ಲಿ ಹುಟ್ಟಿದಳೆಂದು ಕೇಳಿದ್ದೇವೆ. ಈಗ ನೀನು ಆಕೆಯು ಖ್ಯಾತಿಯೆಂಬು ವಳಲ್ಲಿ ಭೃಗುವಿನ ದೆಸೆಯಿಂದ ಹುಟ್ಟಿದಳೆಂದು ಹೇಳಿದೆಯಲ್ಲಾ ಅದು ಹೇಗೆ ?

೨. ದಕ್ಷನ ಮಗಳು ದೇಹವನ್ನು ಏತಕ್ಕೆ, ಹೇಗೆ ಬಿಟ್ಟಳು ? ಆ ಉಮೆಯು ಮೇನೆಯ ಗರ್ಭದಲ್ಲೇಕೆ ಹುಟ್ಟಿದಳು ?

೩. ಈ ಈಶ್ವರನು ಹಿಮವಂತನ ಮಗಳಾದ ಮೇನೆಯನ್ನೇಕೆ ಮದುವೆ ಯಾದನು ? ಈಶ್ವರನು ದಕ್ಷನೊಡನೇಕೆ ವಿರೋಧವನ್ನು ಹೊಂದಿದನು ಎಂಬುದನ್ನು ತಾವು ಹೇಳಬೇಕು.

॥ ಪುಲಸ್ತ್ಯ ಉವಾಚ ॥

ಇದಂ ಚ ಶೃಣು ಭೂಪಾಲ ಯತ್ಪೃಷ್ಟೋಽಹಮಿಹ ತ್ವಯಾ ।
ಶ್ರೀಸಂಬಂಧಂ ಮಯಾಪ್ಯೇತಚ್ಛ್ರುತಮಾಸೀತ್ಪಿತಾಮಹಾತ್ ॥ ೪ ॥

ಅತ್ರಿಪುತ್ರಸ್ತು ದುರ್ವಾಸಾಃ ಸಂಚರಸ್ತು ಮಹೀಮಿಮಾಂ ।
ಸ ದದರ್ಶ ಶುಭಾಂ ಮಾಲಾಂ ವಿದ್ಯಾಧರ್ಯಾಃ ಕರೇ ಸ್ಥಿತಾಂ ॥ ೫ ॥

ದೃಷ್ಟ್ವಾ ಚ ತಾಂ ಯಾಚಿತವಾನ್ ಶೋಭಮಾನಾಂ ಸ್ರಜಂ ತದಾ ।
ಪ್ರಣಿಪತ್ಯ ಚ ತಂ ತಸ್ಮೈ ಸ್ರಜಂ ದತ್ತವತೀ ತದಾ ॥ ೬ ॥

ಉನ್ಮತ್ತವ್ರತಧೃಗ್ವಿಪ್ರಃ ಶೋಭಮಾನೋಽಬ್ರವೀದಿದಂ ।
ಇಮಾಂ ವಿದ್ಯಾಧರೀಕನ್ಯಾಂ ಪೀನೋನ್ನತಪಯೋಧರಾಂ ॥ ೭ ॥

ಸರ್ವಾಲಂಕಾರಸೌಭಾಗ್ಯೈರ್ಯುಕ್ತಾಂ ದೃಷ್ಟ್ವಾಽಥ ವೈ ಮನಃ ।
ಕ್ಷೋಭಮಾಯಾತಿ ಮೇ ಸದ್ಯೋ ನಾಹಂ ಕಾಮೀ ವಿಚಕ್ಷಣಃ ॥ ೮ ॥

---

೪. ಪುಲಸ್ತ್ಯನು ಹೇಳಿದನು:—ಎಲೈ ದೊರೆಯೇ, ನೀನು ಕೇಳಿದ ಈ ವಿಷಯವನ್ನು ಹೇಳುತ್ತೇನೆ. ಆ ಲಕ್ಷ್ಮಿಯ ವಿಷಯವನ್ನು ಬ್ರಹ್ಮನಿಂದಲೇ ನಾನು ಕೇಳಿದ್ದೇನೆ.

೫. ಅತ್ರಿಮಹರ್ಷಿಯ ಮಗನಾದ ದೂರ್ವಾಸನು ಈ ಭೂಮಿಯನ್ನು ಸಂಚರಿಸುತ್ತಿರಲು ಓರ್ವ ವಿದ್ಯಾಧರ ಹೆಂಗಸು ಹಿಡಿದುಕೊಂಡಿದ್ದ ಒಂದು ಒಳ್ಳೆಯ ಪುಷ್ಪಮಾಲೆಯನ್ನು ನೋಡಿದನು.

೬. ಈ ದೂರ್ವಾಸನು ಆ ಮಾಲೆಯು ಚೆನ್ನಾಗಿದ್ದುದರಿಂದ ಅದನ್ನು ಕೊಡೆಂದು ಕೇಳಿದನು. ಆಕೆಯು ಆ ಋಷಿಗೆ ಆ ಮಾಲೆಯನ್ನು ಕೊಟ್ಟು ನಮಸ್ಕರಿಸಿದಳು.

೭-೮. ಉನ್ಮತ್ತವ್ರತವನ್ನು ಧರಿಸಿದ ಆ ಋಷಿಯು, ದಪ್ಪವಾಗಿ ಮೇಲೆಕ್ಕೆದ್ದಿರುವ ಮೊಲೆಗಳುಳ್ಳ, ಎಲ್ಲಾ ಅಲಂಕಾರಗಳಿಂದಲೂ ಕೂಡಿರುವ ಈ ವಿದ್ಯಾಧರ ಕನ್ಯೆಯನ್ನು ನೋಡಿದಮಾತ್ರದಿಂದಲೇ ನನ್ನ ಮನಸ್ಸು ಕಲಕಿಹೋಗಿದೆ. ಆದರೆ ನಾನು ವಿವೇಕಿಯಾದುದರಿಂದ ಅಪೇಕ್ಷಿಸುವುದಿಲ್ಲ ಎಂದು ಹೇಳಿಕೊಂಡನು.

ವ್ರಜಾಮಿ ತಾಪಸನ್ಯತ್ರ ಸೌಭಾಗ್ಯಂ ಸ್ವಂ ಪ್ರದರ್ಶಯನ್ ।
ಏತದುಕ್ತ್ವಾ ಸ ರಾಜೇಂದ್ರ ಪರಿಬಭ್ರಾಮ ಮೇದಿನೀಂ ॥ ೯ ॥

ಐರಾವತಂ ಸಮಾರೂಢಂ ರಾಜಾನಂ ತ್ರಿದಿವೌಕಸಾಂ ।
ತ್ರೈಲೋಕ್ಯಸ್ಯ ಪತಿಂ ಶಕ್ರಂ ಭ್ರಾಜಮಾನಂ ಶಚೀಪತಿಂ ॥ ೧೦ ॥

ತಾಮಾತ್ಮಶಿರಸೋ ಮಾಲಾಂ ಭ್ರಮದುನ್ಮತ್ತಷಟ್ಪದಾಂ ।
ಆದಾಯಾಮರರಾಜಾಯ ಚಿಕ್ಷೇಪೋನ್ಮತ್ತವನ್ಮುನಿಃ ॥ ೧೧ ॥

ಗೃಹೀತ್ವಾ ದೇವರಾಜೇನ ಮಾಲಾ ಸಾ ಗಜಮೂರ್ಧನಿ ।
ಯುಕ್ತಾ ರರಾಜ ಸಾ ಶ್ವೇತಾ ಕೈಲಾಸೇ ಜಾಹ್ನವೀ ಯಥಾ ॥ ೧೨ ॥

ಮದಾಂಧಕಾರಿತಾಕ್ಷೋಽಸೌ ಗಂಧಾಕೃಷ್ಟೇನ ವಾರಣಃ ।
ಕರೇಣಾದಾಯ ಚಿಕ್ಷೇಪ ತಾಂ ಮಾಲಾಂ ಪೃಥಿವೀತಲೇ ॥ ೧೩ ॥

---

೯. ಆದ್ದರಿಂದ ನನ್ನ ಸೌಭಾಗ್ಯವನ್ನು ತೋರಿಸುತ್ತ ಬೇರೆಕಡೆಗೆ ಹೋಗುತ್ತೇನೆ ಎಂದುಹೇಳಿಕೊಂಡು ಭೂಪ್ರದಕ್ಷಿಣೆಗೆ ಹೊರಟನು.

೧೦-೧೧. ಮೂರು ಲೋಕಕ್ಕೂ ಒಡೆಯನೂ, ಶಚಿಯ ಗಂಡನೂ, ದೇವತೆಗಳಿಗೆ ಒಡೆಯನೂ ಆದ ಇಂದ್ರನು ಐರಾವತವನ್ನು ಹತ್ತಿ ಮೆರೆದುಕೊಂಡು ಹೋಗುತ್ತಿರಲು, ಅಲ್ಲಿಗೆ ಹೋಗಿದ್ದ ಆ ದುರ್ವಾಸನು ತನ್ನ ತಲೆಯಮೇಲಿದ್ದ, ದುಂಬಿಗಳು ಮುತ್ತಿಕೊಂಡಿದ್ದ ಆ ಮಾಲೆಯನ್ನು ತೆಗೆದು ಹುಚ್ಚನಂತೆ ಆ ಇಂದ್ರನಮೇಲೆ ಎಸೆದನು.

೧೨. ಆ ಇಂದ್ರನು ಆ ಮಾಲೆಯನ್ನು ತೆಗೆದುಕೊಂಡು ಆನೆಯ ತಲೆಯ ಮೇಲಿಟ್ಟನು. ಆಗ ಆ ಆನೆಯ ಮೇಲಿದ್ದ ಬಿಳಿಯ ಮಾಲೆಯು ಕೈಲಾಸದಲ್ಲಿನ ಗಂಗೆಯಂತೆ ಪ್ರಕಾಶಿಸಿತು.

೧೩. ಮದದಿಂದ ಕಣ್ಣುಕಾಣಿಸದಿದ್ದ ಆ ಆನೆಯು ವಾಸನೆಯಿಂದ ಆ ಮಾಲೆಯನ್ನು ತಿಳಿದು ಸೊಂಡಲಿನಿಂದ ತೆಗೆದುಕೊಂಡು ನೆಲದಮೇಲೆ ಬಿಸಾಡಿತು.

ತತಶ್ಚುಕೋಪ ಭಗವಾನ್ದುರ್ವಾಸಾ ಮುನಿಪುಂಗವಃ ।
ರಾಜೇಂದ್ರ ದೇವರಾಜಾನಂ ಕ್ರುದ್ಧಶ್ಚೇದಮುವಾಚ ಹ ॥ ೧೪ ॥

॥ ದುರ್ವಾಸ ಉವಾಚ ॥

ಐಶ್ವರ್ಯಮದದುಷ್ಟಾತ್ಮನ್ನತಿಮತ್ತೋಽಸಿ ವಾಸವ ।
ಶ್ರಿಯೋ ಧಾಮ ಸ್ರಜಂ ಯಸ್ಮಾನ್ಮದ್ದತ್ತಾಂ ನಾಭಿನಂದಸಿ ॥ ೧೫ ॥

ತ್ರೈಲೋಕ್ಯಶ್ರೀರತೋ ಮೂಢ ವಿನಾಶಮುಪಯಾಸ್ಯತಿ ।
ಮದ್ದತ್ತಾ ಭವತಾ ಮಾಲಾ ಯಸ್ಮಾತ್ಕ್ಷಿಪ್ತಾ ಮಹೀತಲೇ ॥ ೧೬ ॥

ತಸ್ಮಾತ್ಪ್ರಣಷ್ಟಲಕ್ಷ್ಮೀಕಂ ತ್ರೈಲೋಕ್ಯಂ ಚ ಭವಿಷ್ಯತಿ ।
ಯಸ್ಯ ಸಂಜಾತಕೋಪಸ್ಯ ಭಯಮೇತಿ ಚರಾಚರಂ ॥ ೧೭ ॥

ತಂ ತ್ವಂ ಮದಾವಲೇಪೇನ ದೇವರಾಜಾವಮನ್ಯಸೇ ।
ಮಹೇಂದ್ರೋ ವಾರಣಸ್ಕಂಧಾದವತೀರ್ಯ ತ್ವರಾನ್ವಿತಃ ॥ ೧೮ ॥

---

೧೪. ಎಲೈ ರಾಜನೇ! ಆಗ ಆ ಋಷಿಶ್ರೇಷ್ಠನಾದ ದುರ್ವಾಸನಿಗೆ ಕೋಪ ಬಂದು ಆ ದೇವರಾಜನನ್ನು ಕುರಿತು ಕೋಪದಿಂದ ಇಂತೆಂದನು.

೧೫. ದುರ್ವಾಸನು ಹೇಳಿದನು :—ಐಶ್ವರ್ಯದ ಮದದಿಂದ ಕೆಟ್ಟುಹೋಗಿರುವ ಮನಸ್ಸುಳ್ಳ ಎಲೈ ಇಂದ್ರನೇ, ಬಹು ಕೊಬ್ಬಿದ್ದೀಯೆ. ಸಂಪತ್ತಿಗೆ ತವರುಮನೆಯಾದ ನಾನು ಕೊಟ್ಟ ಹೂಮಾಲೆಯನ್ನು ನೀನು ತಿರಸ್ಕರಿಸಿದುದರಿಂದ ನಿನ್ನ ಈ ಮೂರು ಲೋಕದ ಒಡೆತನವುಳ್ಳ, ಈ ಸಂಪತ್ತು ನಾಶವಾಗುತ್ತದೆ.

೧೬. ನಾನು ಕೊಟ್ಟ ಹೂಮಾಲೆಯನ್ನು ನೀನು ನೆಲದಮೇಲೆ ಬಿಸಾಡಿದುದರಿಂದ ಮೂರು ಲೋಕವೂ ಕೂಡ ಲಕ್ಷ್ಮಿಯಿಂದ ನಾಶವಾಗುತ್ತದೆ.

೧೭. ಯಾವ ನಾನು ಕೋಪಗೊಂಡರೆ ಸ್ಥಾವರಜಂಗಮಗಳಿಂದ ಕೂಡಿದ ಈ ಪ್ರಪಂಚವೇ ಭಯಗೊಳ್ಳುವುದೋ ಅಂತಹ ನನ್ನನ್ನು ಎಲೈ ದೇವರಾಜನೇ, ನೀನು ಹೆಮ್ಮೆಯಿಂದ ಅವಮಾನಮಾಡುತ್ತೀಯಾ ?

೧೮. ಮಹೇಂದ್ರನು ಒಡನೆಯೇ ಆನೆಯ ಮೇಲಿನಿಂದಿಳಿದು ಆ ಋಷಿಶ್ರೇಷ್ಠನಾದ ದೂರ್ವಾಸಮುನಿಯನ್ನು ಸಮಾಧಾನಪಡಿಸಿದನು.

ಪ್ರಸಾದಯಾಮಾಸ ಮುನಿಂ ದುರ್ವಾಸಸಮಕಲ್ಮಷಂ ।
ಪ್ರಸಾದ್ಯಮಾನಸ್ಸ ತದಾ ಪ್ರಣಿಪಾತಪುರಸ್ಸರಂ ॥ ೧೯ ॥

ನಾಹಂ ಕ್ಷಮಿಷ್ಯೇ ಬಹುನಾ ಕಿಮುಕ್ತೇನ ಶತಕ್ರತೋ ।
ಇತ್ಯುಕ್ತ್ವಾ ಪ್ರಯಯೌ ವಿಪ್ರೋ ದೇವರಾಜೋಽಪಿ ತಂ ಪುನಃ ॥ ೨೦ ॥

ಆರುಹ್ಯೈರಾವಣಂ ನಾಗಂ ಪ್ರಯಯೌ ಚಾಮರಾವತೀಂ ।
ತತಃ ಪ್ರಭೃತಿ ನಿಶ್ಶ್ರೀಕಂ ಸಶಕ್ರಂ ಭುವನತ್ರಯಂ ॥ ೨೧ ॥

ನ ಯಜ್ಞಾಸ್ಸಂಪ್ರವರ್ತಂತೇ ನ ತಪಸ್ಯಂತಿ ತಾಪಸಾಃ ।
ನ ಚ ದಾನಾನಿ ದೀಯಂತೇ ನಷ್ಟಪ್ರಾಯಮಭೂಜ್ಜಗತ್ ॥ ೨೨ ॥

ಏವಮತ್ಯಂತನಿಶ್ಶ್ರೀಕೇ ತ್ರೈಲೋಕ್ಯೇ ಸತ್ತ್ವವರ್ಜಿತೇ ।
ದೇವಾನ್ಪ್ರತಿ ಬಲೋದ್ಯೋಗಂ ಚಕ್ರುರ್ದೈತೇಯದಾನವಾಃ ॥ ೨೩ ॥

---

೧೯. ಇಂದ್ರನು ನಮಸ್ಕಾರಮಾಡಿ ಸಮಾಧಾನಪಡಿಸಿದರೂ ಆ ಕೋಪಿಯಾದ ಋಷಿಯು, ಎಲೈ ಶತಕ್ರತುವೇ, ಬಹಳ ಮಾತುಗಳಿಂದುಪಯೋಗವಿಲ್ಲ. ನಾನು ಕ್ಷಮಿಸುವುದಿಲ್ಲ ಎಂದನು.

೨೦-೨೧. ಹೀಗೆಂದು ಹೇಳಿ ಆ ದೂರ್ವಾಸನು ಹೊರಟುಹೋದನು ಆ ಇಂದ್ರನೂ ಕೂಡ ಐರಾವತವನ್ನು ಹತ್ತಿಕೊಂಡು ಅಮರಾವತಿಗೆ ಹೋದನು. ಅದು ಮೊದಲುಗೊಂಡು ಇಂದ್ರನೂ, ಮೂರು ಲೋಕಗಳೂ, ಕಾಂತಿಹೀನವಾಗಿಯೂ ಸಂಪತ್ತು ಇಲ್ಲದವುಗಳಾಗಿಯೂ ಆದುವು.

೨೨. ಯಜ್ಞಗಳು ನಡೆಯುತ್ತಿಲ್ಲ. ತಪಸ್ವಿಗಳು ತಪಸ್ಸುಮಾಡುತ್ತಿಲ್ಲ. ಯಾರೂ ದಾನಗಳನ್ನೇ ಕೊಡುತ್ತಿಲ್ಲ. ಹೀಗಾಗಿ ಪ್ರಪಂಚವೇ ಹಾಳಾದಂತಾಯಿತು.

೨೩. ಹೀಗೆ ಮೂರು ಲೋಕಗಳೂ ಕಾಂತಿಸಂಪತ್ತುಹೀನಗಳಾಗಿ ಬಲವು ನಾಶವಾಗಲು, ದೈತ್ಯರೂ ದಾನವರೂ ದೇವತೆಗಳಮೇಲೆ ಕಾರ್ಯವನ್ನಾರಂಭಿಸಿದರು.

ವಿಜಿತಾಸ್ತ್ರಿದಶಾ ದೈತ್ಯೈರಿಂದ್ರಾದ್ಯಾಶ್ಶರಣಂ ಯಯುಃ ।
ಪಿತಾಮಹಂ ಮಹಾಭಾಗಂ ಹುತಾಶನಪುರೋಗಮಾಃ ॥ ೨೪ ॥

ಯಥಾವತ್ಕಥಿತೋ ದೇವೈರ್ಬ್ರಹ್ಮಾ ಪ್ರಾಹ ತಥಾ ಸುರಾನ್ ।
ಕ್ಷೀರೋದಸ್ಯೋತ್ತರಂ ಕೂಲಂ ಜಗಾಮ ಸಹಿತೈಸ್ಸುರೈಃ ॥ ೨೫ ॥

ಗತ್ವಾ ಜಗಾದ ಭಗವಾನ್ವಾಸುದೇವಂ ಪಿತಾಮಹಃ ।
ಉತ್ತಿಷ್ಠ ವಿಷ್ಣೋ ತ್ವಂ ಶೀಘ್ರಂ ದೇವಾನಾಂ ತು ಹಿತಂ ಕುರು ॥ ೨೬ ॥

ತ್ವಯಾ ವಿನಾ ದಾನವೈಸ್ತು ಜಿತಾಸ್ಸರ್ವೇ ಪುನಃ ಪುನಃ ।
ಇತ್ಯುಕ್ತಃ ಪುಂಡರೀಕಾಕ್ಷೋ ಭಗವಾನ್ಪುರುಷೋತ್ತಮಃ ॥ ೨೭ ॥

ಅಪೂರ್ವತಪಸಸ್ಸ್ಥಾನಂ ದೃಷ್ಟ್ವಾ ದೇವಾನುವಾಚ ಹ ।
ತೇಜಸೋ ಭವತಾಂ ದೇವಾಃ ಕರಿಷ್ಯಾಮ್ಯುಪಬೃಂಹಣಂ ॥ ೨೮ ॥

---

೨೪. ದೈತ್ಯರಿಂದ ಸೋತ ಇಂದ್ರಾದಿಗಳೂ ಅಗ್ನಿಯೇ ಮುಂತಾದವರೂ ಮಹಾಮಹಿಮನಾದ ಬ್ರಹ್ಮನನ್ನು ಮರೆಹೊಕ್ಕರು.

೨೫. ದೇವತೆಗಳು ಆ ಬ್ರಹ್ಮನಿಗೆ ನಿಶ್ಚಯವಾದ ಸಂಗತಿಯನ್ನು ತಿಳಿಸಿದರು. ಆಗ ಬ್ರಹ್ಮನು ಆ ದೇವತೆಗಳಿಗೂ ಹೇಳಿ ಅವರನ್ನು ಕರೆದುಕೊಂಡು ಅವರೊಡನೆ ಕ್ಷೀರಸಮುದ್ರದ ಉತ್ತರದಡಕ್ಕೆ ಹೋದನು.

೨೬. ಬ್ರಹ್ಮನು ಆ ಸ್ಥಳಕ್ಕೆ ಹೋಗಿ ಆ ವಿಷ್ಣುವನ್ನು ಕುರಿತು ಎಲೈ ವಿಷ್ಣುವೇ, ನೀನು ಬೇಗ ಏಳು. ದೇವತೆಗಳಿಗೆ ಒಳ್ಳೆಯದನ್ನು ಮಾಡು ಎಂದನು.

೨೭. ಎಲೈ ಪುಂಡರೀಕಾಕ್ಷನೇ, ನೀನಿಲ್ಲದಿದ್ದುದರಿಂದ ನಾವು ದಾನವರಿಂದ ಬಾರಿಬಾರಿಗೂ ಜೈಸಲ್ಪಟ್ಟಿರುವೆವು ಎಂದು ಅರಿಕೆಮಾಡಿಕೊಂಡರು.

೨೮. ಆಗ ಆ ವಿಷ್ಣುವು ತಪಸ್ಸುಮಾಡುವುದಕ್ಕೆ ಉತ್ತಮವಾದ ಒಂದು ಸ್ಥಾನವನ್ನು ಯೋಚಿಸಿ, ಎಲೈ ದೇವತೆಗಳಿರ, ನಿಮ್ಮ ತೇಜಸ್ಸನ್ನು ವೃದ್ಧಿಮಾಡುತ್ತೇನೆ

ವದಾಮ್ಯುಪಂ ಯುಕ್ತ್ಯಾಯುತಾಂ ಭವದ್ಭಿಸ್ತದಿದಂ ಸುರಾಃ ।
ಆನೀಯ ಸಕಲೈರ್ದೈತ್ಯೈಃ ಕ್ಷೀರಾಬ್ಧೌ ಸಕಲೌಷಧೀಃ ॥ ೨೯ ॥

ಮಂಥಾನಂ ಮಂದರಂ ಕೃತ್ವಾ ನೇತ್ರಂ ಕೃತ್ವಾ ತು ವಾಸುಕಿಂ ।
ಮಥ್ಯತಾಮಮೃತಂ ದೇವಾಃ ಸಹಾಯೇ ಮಯ್ಯವಸ್ಥಿತೇ ॥ ೩೦ ॥

ಸಾಮಪೂರ್ವಂ ಚ ದೈತ್ಯಾನಾಂ ತತ್ರ ಸಂಭಾಷ್ಯ ಕರ್ಮಣಿ ।
ಸಾಮಾನ್ಯಫಲಭೋಕ್ತಾರೋ ಯೂಯಂ ವಾತ್ರ ಭವಿಷ್ಯಥ ॥ ೩೧ ॥

ಮಥ್ಯಮಾನೇ ಚ ತತ್ರಾಬ್ಧೌ ಯತ್ಸಮುತ್ಪದ್ಯತೇಽಮೃತಂ ।
ತತ್ಪಾನಾದ್ಬಲಿನೋ ಯೂಯಮಮರಾಸ್ಸಂಭವಿಷ್ಯಥ ॥ ೩೨ ॥

ತಥೈವಾಹಂ ಕರಿಷ್ಯಾಮಿ ಯಥಾ ತ್ರಿದಶವಿದ್ವಿಷಃ ।
ನ ಪ್ರಾಪ್ಸ್ಯಂತ್ಯಮೃತಂ ದೇವಾಃ ಕೇವಲಂ ಕ್ಲೇಶಭಾಗಿನಃ ॥ ೩೩ ॥

---

೨೯. ಎಲೈ ದೇವತೆಗಳಿರಾ, ನಾನು ಹೇಳುವುದನ್ನು ಮಾಡಿರಿ. ನೀವೆಲ್ಲರೂ ದೈತ್ಯರೊಡನೆ ಸೇರಿಕೊಂಡು ಔಷಧಿಗಳನ್ನೆಲ್ಲಾ ಸಮುದ್ರದಲ್ಲಿ ಹಾಕಿರಿ.

೩೦. ಮಂದರಪರ್ವತವನ್ನು ಕಡೆಗೋಲನ್ನಾಗಿಯೂ, ವಾಸುಕಿಯನ್ನು ಕಡೆಯುವ ಹಗ್ಗವನ್ನಾಗಿಯೂ ಮಾಡಿಕೊಂಡು ಆ ಸಮುದ್ರವನ್ನು ಕಡೆಯಿರಿ. ನಾನು ಸಹಾಯಕನಾಗಿರುತ್ತೇನೆ.

೩೧. ನೀವು ದೈತ್ಯರ ಬಳಿಗೆ ಹೋಗಿ ಒಳ್ಳೆಯ ಮಾತಿನಿಂದ ಈ ಕಡೆಯುವ ಕೆಲಸದಲ್ಲಿ ಸಹಾಯಮಾಡಿರಿ. ನಾವೂ ನೀವೂ ಬಂದ ಪದಾರ್ಥಗಳನ್ನು ಸಮವಾಗಿ ಹಂಚಿಕೊಳ್ಳೋಣ ಎಂದು ಹೇಳಿ ಒಡಂಬಡಿಸಿರಿ.

೩೨. ಸಮುದ್ರವನ್ನು ಕಡೆಯುವಾಗ ಬರುವ ಅಮೃತವನ್ನು ಪಾನಮಾಡಿ ನೀವೂ ಕೂಡ ಮರಣವಿಲ್ಲದವರಾಗಿರಿ.

೩೩. ರಾಕ್ಷಸರಿಗೆ ಅಮೃತವು ಸಿಕ್ಕದೆ ಅವರು ಕಷ್ಟಪಟ್ಟುದೊಂದೇ ಫಲವು ಅವರಿಗಾಗುವಂತೆ ಮಾಡುತ್ತೇನೆ.

ಇತ್ಯುಕ್ತ್ವಾ ದೇವದೇವೇನ ಸರ್ವ ಏವ ತತಸ್ಸುರಾಃ ।
ಸಂಧಾನಮಸುರೈಃ ಕೃತ್ವಾ ಯತ್ನವಂತೋಽಮೃತೇಽಭವನ್ ॥ ೩೪ ॥

ತಥೌಷಧೀಸ್ಸಮಾನೀಯ ದೇವದೈತೇಯದಾನವಾಃ ।
ಕ್ಷಿಪ್ತ್ವಾ ಕ್ಷೀರಾಬ್ಧಿಪಯಸಿ ಶರದಭ್ರಾಮಲತ್ವಿಷಿ ॥ ೩೫ ॥

ಮಂಥಾನಂ ಮಂದರಂ ಕೃತ್ವಾ ನೇತ್ರಂ ಕೃತ್ವಾ ತು ವಾಸುಕಿಂ ।
ತತೋ ಮಥಿತುಮಾರಬ್ಧಾ ರಾಜೇಂದ್ರ ತರಸಾಮೃತಂ ॥ ೩೬ ॥

ವಿಬುಧಾಸ್ಸಹಿತಾಸ್ಸರ್ವೇ ಯತಃ ಪುಚ್ಛಂ ತತಃ ಕೃತಾಃ ।
ವಿಷ್ಣುನಾ ವಾಸುಕೇರ್ದೈತ್ಯಾಃ ಪೂರ್ವಕಾಯೇ ನಿವೇಶಿತಾಃ ॥ ೩೭ ॥

ತೇನಾಸ್ಯ ಪ್ರಾಣವಾತೇನ ವಹ್ನಿನಾ ಚ ಹತತ್ವಿಷಃ ।
ನಿಸ್ತೇಜಸೋಽಸುರಾಸ್ಸರ್ವೇ ಬಭೂವುರಮರದ್ಯುತೇ ॥ ೩೮ ॥

ತೇನ ವೈ ಮುಖನಿಶ್ವಾಸವಾಯುನಾ ತು ಬಲಾಹಕೈಃ ।
ಪುಚ್ಛಪ್ರದೇಶೇ ವರ್ಷದ್ಭಿಸ್ತದಾ ಚಾಪ್ಯಾಯಿತಾಸ್ಸುರಾಃ ॥ ೩೯ ॥

---

೩೪. ಸ್ವಾಮಿಯು ಹೀಗೆ ಹೇಳಲು, ದೇವತೆಗಳು ರಾಕ್ಷಸರೊಡನೆ ಸಂಧಿಯನ್ನು ಮಾಡಿಕೊಂಡು ಅಮೃತವನ್ನು ಹೊಂದುವುದರಲ್ಲಿ ಪ್ರಯತ್ನಮಾಡಿದರು.

೩೫-೩೬. ಅದೇ ರೀತಿಯಾಗಿ ದೇವತೆಗಳೂ, ದಾನವರೂ ಔಷಧಿಯನ್ನು ತಂದು ಕ್ಷೀರಸಮುದ್ರಕ್ಕೆ ಹಾಕಿ ಮಂದರಪರ್ವತವನ್ನು ಮಂಥನ್ನಾಗಿಯೂ, ವಾಸುಕಿಯನ್ನು ಕಡೆಯುವ ಹಗ್ಗವನ್ನಾಗಿಯೂ ಮಾಡಿಕೊಂಡು ಆಮೇಲೆ ಕಡೆಯಲು ಮೊದಲುಮಾಡಿದರು.

೩೭. ವಿಷ್ಣುವೂ ದೇವತೆಗಳನ್ನು ವಾಸುಕಿಯ ಬಾಲದ ಕಡೆಯನ್ನೂ, ದೈತ್ಯರು ವಾಸುಕಿಯ ತಲೆಯ ಕಡೆಯೂ ಹಿಡಿದುಕೊಳ್ಳುವಂತೆ ಮಾಡಿದನು.

೩೮. ಆ ದೈತ್ಯರು ತಲೆಯ ಕಡೆಯಿದ್ದುದರಿಂದ ಆ ವಾಸುಕಿಯ ವಿಷದ ಉಸಿರಿನಿಂದಲೂ ಆ ಶಾಖದಿಂದಲೂ ಬಲಗುಂದಿದರು.

೩೯. ಆ ಮುಖದ ಉಸಿರುಗಾಳಿಯಿಂದ ಹೊಡೆಯಲ್ಪಟ್ಟ ಮೋಡಗಳು ಆ ವಾಸುಕಿಯ ಬಾಲದ ಕಡೆಯಲ್ಲಿ ಮಳೆಯನ್ನು ತುಂತುರು ತುಂತುರಾಗಿ ಸುರಿಸುತ್ತಾ ಆ ದೇವತೆಗಳನ್ನು ತಣ್ಣಗೆ ಮಾಡುತ್ತಿತ್ತು.

ಕ್ಷೀರೋದಸಮುದ್ರೇ ಭಗವಾನ್ಸ್ಥಿತ್ವಾ ಬ್ರಹ್ಮವಿದಾಂ ವರಃ ।
ಮಹಾದೇವೋ ಮಹಾತೇಜಾ ವಿಷ್ಣುಪೃಷ್ಠನಿವಾಸಿನೌ ॥ ೪೦ ॥

ಬಾಹುಭ್ಯಾಂ ಮಂದರಂ ಗೃಹ್ಯ ಪದ್ಮವತ್ಸ ಪರಂತಪಃ ।
ಶೃಂಖಲೇ ಚ ತದಾ ಹೃತ್ವಾ ಗೃಹೀತ್ವಾ ಮಂದರಾಚಲಂ ॥ ೪೧ ॥

ದೇವಾನಾಂ ದಾನವಾನಾಂ ಚ ಬಲಮಧ್ಯೇ ವ್ಯವಸ್ಥಿತಃ ।
ಕ್ಷೀರೋದಮಧ್ಯೇ ಭಗವಾನ್ಕೂರ್ಮರೂಪೀ ಸ್ವಯಂ ಹರಿಃ ॥ ೪೨ ॥

ಅನ್ಯೇನ ತೇಜಸಾ ದೇವಾನುಪಬೃಂಹಿತವಾನ್ಪ್ರಭುಃ ।
ಮಥ್ಯಮಾನೇ ತತಸ್ತಸ್ಮಿನ್ಕ್ಷೀರಾಬ್ಧೌ ದೇವದಾನವೈಃ ॥ ೪೩ ॥

ಹವಿರ್ಧಾನ್ಯಭವತ್ಪೂರ್ವಂ ಸುರಭಿಃ ಸುರಪೂಜಿತಾ ।
ಜಗ್ಮುರ್ಮುದಂ ತದಾ ದೇವಾ ದಾನವಾಸ್ತು ಮಹಾಮತೇ ॥ ೪೪ ॥

ವ್ಯಾಕ್ಷಿಪ್ತತೇಜಸಶ್ಚೈವ ಬಭೂವುಸ್ತಿಮಿತೇಕ್ಷಣಾಃ ।
ಕಿಮೇತದಿತಿ ಸಿದ್ಧಾನಾಂ ದಿವಿ ಚಿಂತಯತಾಂ ತದಾ ॥ ೪೫ ॥

---

೪೦. ಕ್ಷೀರಸಮುದ್ರದ ಮಧ್ಯದಲ್ಲಿ ಪರಮಾತ್ಮನ ಜ್ಞಾನವನ್ನು ಬಲ್ಲ ಬ್ರಹ್ಮನೂ, ಶಕ್ತನಾದ ಈಶ್ವರನೂ, ವಿಷ್ಣುವಿನ ಹಿಂದೆಯೂ ನಿಂತರು.

೪೧-೪೨. ಆ ಬ್ರಹ್ಮನು ತೋಳುಗಳಿಂದ ಮಂದರಪರ್ವತವನ್ನು ಸರಪಣಿಯಿಂದ ಅತ್ತಿತ್ತ ಬಾಗದಂತೆ ಹಿಡಿದುಕೊಂಡು ದೇವತೆಗಳಿಗೂ, ದಾನವರಿಗೂ, ಮಧ್ಯದಲ್ಲಿ ನಿಂತುಕೊಂಡನು. ಕ್ಷೀರಸಮುದ್ರದ ಮಧ್ಯದಲ್ಲಿ ಹರಿಯು ಆಮೆಯ ಅವತಾರದಿಂದ ಬೆನ್ನಿನ ಮೇಲೆ ಆ ಬೆಟ್ಟವನ್ನು ಹೊತ್ತುಕೊಂಡನು.

೪೩-೪೪. ಆ ವಿಷ್ಣುವು ತನ್ನ ಮತ್ತೊಂದು ತೇಜಸ್ಸಿನಿಂದ ದೇವತೆಗಳನ್ನು ಬ್ಬಿಸುತ್ತಿದ್ದನು. ಹೀಗೆ ಆ ಎರಡು ಪಂಗಡಗಳೂ ಸಮುದ್ರವನ್ನು ಕಡೆಯುತ್ತಿರಲು, ಮೊದಲು ದೇವತೆಗಳಿಂದ ಪೂಜಿತವಾದ ಹವಿಸ್ಸಿನ ಪಾತ್ರೆಯು ಹುಟ್ಟಿತು. ಆಗ ದೇವತೆಗಳೂ ರಾಕ್ಷಸರೂ ಸಂತೋಷವನ್ನು ಹೊಂದಿದರು.

೪೫. ಆ ಪಾತ್ರೆಯ ತೇಜಸ್ಸಿನಿಂದ ಅವರೆಲ್ಲರೂ ದಿಕ್ಕುತೋಚದವರಾದರು. ಅಂತರಿಕ್ಷದಲ್ಲಿದ್ದ ಸಿದ್ಧರು ಇದೇನೆಂದು ಯೋಚಿಸುತ್ತಿದ್ದರು. ಆಗ ಮದ್ಯದ ಮಹಿಮೆಯಿಂದ ಕಣ್ಣನ್ನು ಹೊರಳಿಸುತ್ತಾ ಮದ್ಯದ ದೇವತೆಯಾದ ವಾರುಣಿಯು ಬಂದಳು.

ಬಭೂವ ವಾರುಣೀ ದೇವೀ ಮದಾಘೂರ್ಣಿತಲೋಚನಾ ।
ಕೃತಾವರ್ತಾ ತತಸ್ತಸ್ಮಾತ್ಪ್ರಸ್ಖಲಂತೀ ಪದೇ ಪದೇ ॥ ೪೬ ॥

ಏಕವಸ್ತ್ರಾ ಮುಕ್ತಕೇಶೀ ರಕ್ತಾಂತಸ್ತಬ್ಧಲೋಚನಾ ।
ಅಹಂ ಬಲಪ್ರದಾ ದೇವೀ ಮಾಂ ವಾ ಗೃಹ್ಣೀತ ದಾನವಾಃ ॥ ೪೭ ॥

ಅಶುಚಿಂ ದೇವತಾಂ ಮತ್ವಾ ತ್ಯಕ್ತವಂತಸ್ತದಾ ಸುರಾಃ ।
ಜಗೃಹುಸ್ತಾಂ ತತೋ ದೈತ್ಯಾ ಗ್ರಹಣಾಂತೇ ಸುರಾಭವತ್ ॥ ೪೮ ॥

ಮಂಥನೇ ಪಾರಿಜಾತೋಽಭೂದ್ದೇವಶ್ರೀನಂದನೋ ದ್ರುಮಃ ।
ರೂಪೌದಾರ್ಯಗುಣೋಪೇತಾ ಅಭವಂಶ್ಚಾಪ್ಸರೋ ಗಣಾಃ ॥ ೪೯ ॥

ಷಷ್ಟಿಕೋಟ್ಯಸ್ತದಾ ಜಾತಾಃ ಸಾಮಾನ್ಯಾ ದೇವದಾನವೈಃ ।
ಸರ್ವಾಸ್ತಾಃ ಕೃತಪೂರ್ವಂ ತು ಸಾಮಾನ್ಯಂ ಪುಣ್ಯಕರ್ಮಣಾಂ ॥ ೫೦ ॥

---

೪೬-೪೭. ಆಕೆಯು ಅತ್ತಿತ್ತ ತಬ್ಬರಿಸುತ್ತಾ ಬಾರಿ ಬಾರಿಗೂ ಎಡವುತ್ತಾ ಒಂದೇ ಬಟ್ಟೆಯನ್ನು ಉಟ್ಟುಕೊಂಡು, ತಲೆಯನ್ನು ಕೆದರಿಕೊಂಡು, ನೆಟ್ಟಕಣ್ಣುಗಳುಳ್ಳವಳಾಗಿ ಬಂದು, ನಾನು ಎಲ್ಲರಿಗೂ ಬಲವನ್ನು ಕೊಡುವ ಹೆಂಗಸು. ನನ್ನನ್ನು ಸ್ವೀಕರಿಸಿರಿ ಎಂದು ದಾನವರಿಗೆ ಹೇಳಿದಳು.

೪೮. ಆ ವಾರುಣೀದೇವತೆಯನ್ನು ಅಶುಚಿಯೆಂದು ತಿಳಿದು ದೇವತೆಗಳು ಬಿಟ್ಟುಬಿಟ್ಟರು, ದೈತ್ಯರು ಆಕೆಯನ್ನು ಪರಿಗ್ರಹಿಸಿದರು, ಆ ದಾನವರು ಗ್ರಹಿಸಿದಮೇಲೆ ಅದು ಸುರೆಯಾಯಿತು.

೪೯. ಮುಂದೆ ಕಡೆಯುತ್ತಿರಲು ಉತ್ತಮವಾದ ತೇಜಸ್ಸುಳ್ಳ ಪಾರಿಜಾತವು ಹುಟ್ಟಿತು. ಅನಂತರ ರೂಪು ಔದಾರ್ಯ ಈ ಗುಣಗಳಿಂದ ಕೂಡಿದ ಅಪ್ಸರಸ್ತ್ರೀಯರು ಹುಟ್ಟಿದರು.

೫೦. ಅಪ್ಸರಸ್ತ್ರೀಯರು ಅರವತ್ತುಕೋಟಿ ಜನರು ಹುಟ್ಟಿದರು. ಅವರು ದೇವತೆಗಳಿಗೂ ದಾನವರಿಗೂ ಸಮವಾಗಿ ಭೋಗಾರ್ಹರಾದರು. ಅಲ್ಲದೆ ಪುಣ್ಯ ಕೆಲಸವನ್ನು ಮಾಡಿ ದೇವಲೋಕಕ್ಕೆ ಹೋದವರಿಗೆಲ್ಲಾ ಅವರ ಭೋಗವು ಸಿಕ್ಕುವಂತೆಯೂ ಮಾಡಿದರು.

ತತಶ್ಶೀತಾಂಶುರಭವದ್ದೇವಾನಾಂ ಪ್ರೀತಿದಾಯಕಃ ।
ಯಯಾಚೇ ಶಂಕರೋ ದೇವೋ ಜಟಾಭೂಷಣಕೃನ್ಮಮ ॥ ೫೧ ॥

ಭವಿಷ್ಯತಿ ನ ಸಂದೇಹೋ ಗೃಹೀತೋಽಯಂ ಮಯಾ ಶಶೀ ।
ಅನುಮೇನೇ ಚ ತಂ ಬ್ರಹ್ಮಾ ಭೂಷಣಾಯ ಹರಸ್ಯ ತು ॥ ೫೨ ॥

ತತೋ ವಿಷಂ ಸಮುದ್ಭೂತಂ ಕಾಲಕೂಟಂ ಭಯಾವಹಂ ।
ತೇನ ಚೈವಾರ್ದಿತಾಸ್ಸರ್ವೇ ದಾನವಾಸ್ಸಹ ದೈವತೈಃ ॥ ೫೩ ॥

ಅರ್ದಿತಂ ಭುವನಂ ಸರ್ವಂ ಬ್ರಹ್ಮವಿಷ್ಣುಪುರೋಗಮಂ ।
ಮಹಾದೇವೇನ ತತ್ಪೀತಂ ಬಲಾದ್ಗೃಹ್ಯ ಯದೃಚ್ಛಯಾ ॥ ೫೪ ॥

ತಸ್ಯ ಪಾನಾನ್ನೀಲಕಂಠಸ್ತತೋ ಜಾತೋ ಮಹೇಶ್ವರಃ ।
ಪಾನಾವಶೇಷಂ ನಾಗೇಷು ಕ್ಷೀರಾಬ್ಧಿಸಮುಪಸ್ಥಿತಂ ॥ ೫೫ ॥

ತೇನ ಚಾಭಯದಾನೇನ ಶಂಕರಸ್ತು ತದಾಭವತ್ ।
ಬ್ರಹ್ಮಣಾನುಗೃಹೀತೋಽಸ್ಮಿ ವದತಾ ಮಾಮನುತ್ತಮಂ ॥ ೫೬ ॥

---

೫೧-೫೨. ಆಮೇಲೆ ದೇವತೆಗಳಿಗೆ ಪ್ರೀತಿಯನ್ನುಂಟುಮಾಡುತ್ತಿರುವ ಚಂದ್ರನು ಹುಟ್ಟಿದನು. ಆ ಚಂದ್ರನನ್ನು ಶಂಕರನು, ನನಗೆ ಜಟೆಗೆ ಒಳ್ಳೆಯ ಒಡವೆಯಾಗುವನೆಂದೂ ಇದರಲ್ಲಿ ಸಂದೇಹವಿಲ್ಲವೆಂದೂ ಆದ್ದರಿಂದ ನಾನು ತೆಗೆದುಕೊಂಡೆನೆಂದೂ ಹೇಳಲು, ಹಾಗೇ ಆಗಲೆಂದು ಬ್ರಹ್ಮನು ಒಪ್ಪಿಕೊಂಡನು.

೫೩. ಆಮೇಲೆ ಭಯಂಕರವಾದ ಕಾಲಕೂಟವೆಂಬ ವಿಷವು ಹುಟ್ಟಿತು. ಅದರಿಂದ ದೈತ್ಯರೂ ದೇವತೆಗಳೂ ಬಾಧಿಸಲ್ಪಟ್ಟರು.

೫೪. ಪ್ರಪಂಚವೆಲ್ಲವನ್ನೂ, ಕೊನೆಗೆ ಬ್ರಹ್ಮ ವಿಷ್ಣುಗಳನ್ನೂ ಆ ವಿಷವು ತೊಂದರೆಪಡಿಸಿತು. ಆಗ ಮಹಾದೇವನು ಆ ವಿಷವನ್ನು ಬಲಾತ್ಕಾರದಿಂದ ತೆಗೆದುಕೊಂಡು ಸುಖವಾಗಿ ಕುಡಿದುಬಿಟ್ಟನು.

೫೫. ಅದನ್ನು ಕುಡಿದುದರಿಂದಲೇ ಈಶ್ವರನು ನೀಲಕಂಠನಾದನು. ಕಪ್ಪು ಕತ್ತಿನಲ್ಲಿ ನಿಂತಿತು. ಕುಡಿದುಳಿದ ವಿಷವನ್ನು ಹಾವುಗಳು ಕುಡಿದುವು.

೫೬. ಬ್ರಹ್ಮನು ಅವನಿಗೆ ಉತ್ತಮವಾದ ವರವನ್ನು ಕೊಟ್ಟುದರಿಂದ ಅನುಗೃಹೀತನಾದನು. ಅದರಿಂದಲೇ ಅವನಿಗೆ ಶಂ= ಸುಖವನ್ನು ಕರ= ಮಾಡುವುದರಿಂದ ಶಂಕರನೆಂಬ ಹೆಸರು ಬಂದಿತು.

ತತೋ ಧನ್ವಂತರಿರ್ಜಾತಃ ಶ್ವೇತಾಂಬರಧರಃ ಸ್ವಯಂ ।
ಬಿಭ್ರತ್ಕಮಂಡಲುಂ ಪೂರ್ಣಮಮೃತಸ್ಯ ಸಮುತ್ಥಿತಃ ॥ ೫೭ ॥

ತತಸ್ಸ್ವಸ್ಥಮನಸ್ಕಾಸ್ತೇ ವೈದ್ಯರಾಜಸ್ಯ ದರ್ಶನಾತ್ ।
ತತಶ್ಚಾಶ್ವಸ್ಸಮುತ್ಪನ್ನೋ ನಾಗಶ್ಚೈರಾವಣಸ್ತಥಾ ॥ ೫೮ ॥

ತತಃ ಸ್ಫುರತ್ಕಾಂತಿಮತೀ ವಿಕಾಸಿಕಮಲೇ ಸ್ಥಿತಾ ।
ಶ್ರೀರ್ದೇವೀ ಪಯಸಸ್ತಸ್ಮಾದುತ್ಥಿತಾ ಧೃತಪಂಕಜಾ ॥ ೫೯ ॥

ತಾಂ ತುಷ್ಟುವುರ್ಮುದಾ ಯುಕ್ತಾಃ ಶ್ರೀಸೂಕ್ತೇನ ಮಹರ್ಷಯಃ ॥
ವಿಶ್ವಾವಸುಮುಖಾಸ್ತಸ್ಯಾ ಗಂಧರ್ವಾಃ ಪುರತೋ ಜಗುಃ ॥ ೬೦ ॥

ಘೃತಾಚೀಪ್ರಮುಖಾ ರಾಜನ್ನನೃತುಶ್ಚಾಪ್ಸರೋ ಗಣಾಃ ।
ಗಂಗಾದ್ಯಾಃ ಸರಿತಸ್ತೋಯೈಃ ಸ್ನಾನಾರ್ಥಮುಪತಸ್ಥಿರೇ ॥ ೬೧ ॥

೫೭. ಅನಂತರ ಬಿಳಿಯ ಬಟ್ಟೆಯನ್ನುಟ್ಟು ಅಮೃತದಿಂದ ತುಂಬಿದ ಕಮಂಡಲುವನ್ನು ಹಿಡಿದುಕೊಂಡು ಧನ್ವಂತರಿಯು ಹುಟ್ಟಿಬಂದನು.

೫೮. ಅನಂತರ ಆ ದೇವಾಸುರರು ವೈದ್ಯರಾಜನಾದ ಧನ್ವಂತರಿಯನ್ನು ಕಾಣುತ್ತಲೂ ಸಂತೋಷಪಟ್ಟರು. ಆಮೇಲೆ ಉಚ್ಚೈಶ್ರವಸ್ಸೆಂಬ ಕುದುರೆಯೂ ಐರಾವತವೆಂಬ ಆನೆಯೂ ಹುಟ್ಟಿದುವು.

೫೯. ಆಮೇಲೆ ಒಳ್ಳೆಯ ಸುಂದರಿಯಾದ, ಅರಳಿರುವ ಕಮಲದಲ್ಲಿ ಕುಳಿತಿರುವ ಲಕ್ಷ್ಮೀದೇವಿಯು ಕೈಯಲ್ಲಿ ಕಮಲವನ್ನು ಹಿಡಿದುಕೊಂಡು ಹುಟ್ಟಿದಳು.

೬೦. ಮಹರ್ಷಿಗಳೆಲ್ಲರೂ ಆಕೆಯನ್ನು ಸಂತೋಷದಿಂದ ಶ್ರೀಸೂಕ್ತದಿಂದ ಸ್ತುತಿಸಿದರು. ವಿಶ್ವಾವಸುವೇ ಮುಂತಾದ ಗಂಧರ್ವರು ಆಕೆಯ ಮುಂದುಗಡೆಯಲ್ಲಿ ಗಾನಮಾಡಿದರು.

೬೧. ಘೃತಾಚಿಯೇ ಮುಂತಾದ ಅಪ್ಸರಸ್ತ್ರೀಯರು ಆಕೆಯ ಮುಂದೆ ಕುಣಿದರು. ಗಂಗೆಯೇ ಮುಂತಾದ ನದಿಗಳು ಆಕೆಯ ಸ್ನಾನಕ್ಕೋಸ್ಕರ ಅಲ್ಲಿಗೆ ಬಂದುವು.

ದಿಗ್ಗಜಾ ಮೇಘಪಾತ್ರಸ್ಥಮಾದಾಯ ವಿಮಲಂ ಜಲಂ ।
ಸ್ನಾಪಯಾಂ ಚಕ್ರಿರೇ ದೇವೀಂ ಸರ್ವಲೋಕಮಹೇಶ್ವರೀಂ ॥ ೬೨ ॥

ಕ್ಷೀರೋದಸ್ತು ಸ್ವಯಂ ತಸ್ಯೈ ಮಾಲಾಮಮ್ಲಾನಪಂಕಜಾಂ ।
ದದೌ ವಿಭೂಷಣಾನ್ಯಂಗೇ ವಿಶ್ವಕರ್ಮಾ ಚಕಾರ ಹ ॥ ೬೩ ॥

ದಿವ್ಯಮಾಲಾಂಬರಧರಾಂ ಸ್ನಾತಾಂ ಭೂಷಣಭೂಷಿತಾಂ ।
ಪ್ರಾರ್ಥಮಾನಾಸ್ತತೋ ದೇವಾ ಬ್ರಹ್ಮವಿಷ್ಣುಶಿವಾದಯಃ ॥ ೬೪ ॥

ಇಂದ್ರಾದ್ಯಾಶ್ಚಾಮರಗಣಾ ವಿದ್ಯಾಧರಮಹೋರಗಾಃ ।
ದಾನವಾಶ್ಚ ಮಹಾದೈತ್ಯಾ ರಾಕ್ಷಸಾಃ ಸಹ ಗುಹ್ಯಕೈಃ ॥ ೬೫ ॥

ತಾಂ ಕನ್ಯಾಂ ಸಾಭಿಲಾಷಾಸ್ತೇ ತತೋ ಬ್ರಹ್ಮಾ ಉವಾಚ ಹ ।
ವಾಸುದೇವ ತ್ವಮೇವೈತಾಂ ಮಯಾ ದತ್ತಾಂ ಗೃಹಾಣ ವೈ ॥ ೬೬ ॥

ದೇವಾಶ್ಚ ದಾನವಾಶ್ಚೈವ ಪ್ರತಿಷಿದ್ಧಾ ಮಯಾ ತ್ವಿಹ ।
ತುಷ್ಟೋಽಹಂ ಕರ್ಮಣಾ ತೇಽದ್ಯ ಅನಲ್ಪೇನೇಹ ಕರ್ಮಣಾ ॥ ೬೭ ॥

---

೬೨. ದಿಗ್ಗಜಗಳು ಮೇಘದಲ್ಲಿದ್ದ ಪವಿತ್ರವಾದ ನೀರನ್ನು ತೆಗೆದುಕೊಂಡು ಆ ಸರ್ವಲೋಕಕ್ಕೂ ಒಡೆಯಳಾದ ಲಕ್ಷ್ಮಿಯನ್ನು ಸ್ನಾನಮಾಡಿಸಿದವು.

೬೩. ಕ್ಷೀರಸಮುದ್ರವು ತಾನಾಗಿಯೇ ಆಕೆಗೆ ಬಾಡದಿರುವ ಮಾಲೆಯನ್ನು ಕೊಟ್ಟಿತು. ವಿಶ್ವಕರ್ಮನು ಆವಳಿಗೆ ಬೇಕಾದ ಒಡವೆಗಳನ್ನೆಲ್ಲಾ ಮಾಡಿಕೊಟ್ಟನು.

೬೪-೬೫. ಸ್ನಾನಮಾಡಿ, ಒಳ್ಳೆಯ ಮಾಲೆಯನ್ನು ಧರಿಸಿ, ಒಡವೆಗಳಿಂದ ಅಲಂಕೃತಳಾದ ಲಕ್ಷ್ಮಿಯನ್ನು ಬ್ರಹ್ಮ, ವಿಷ್ಣು, ಶಿವ, ಇಂದ್ರಾದಿಯಾದ ದೇವತೆಗಳೂ, ವಿದ್ಯಾಧರ ಮಹೋರಗರೂ, ದಾನವರೂ, ದೈತ್ಯರೂ, ಗುಹ್ಯಕರೂ, ರಾಕ್ಷಸರೂ ತಾವು ತಾವು ವರಿಸಬೇಕೆಂದು ಆಸೆಯಿಂದ ನೋಡುತ್ತಿದ್ದರು. ಇದನ್ನು ತಿಳಿದು ಬ್ರಹ್ಮನು ಇಂತೆಂದನು.

೬೬-೬೭. ಎಲೈ ವಾಸುದೇವನೇ, ನಾನು ಈಕೆಯನ್ನು ನಿನಗೆ ಕೊಡುತ್ತೇನೆ. ನೀನು ಆಕೆಯನ್ನು ಪರಿಗ್ರಹಿಸು. ಈಕೆಯನ್ನು ವರಿಸುವುದರಲ್ಲಿ ದೇವತೆಗಳನ್ನೂ, ದಾನವರನ್ನೂ, ಈಕೆಯನ್ನು ವರಿಸದಂತೆ ಹೇಳಿದ್ದೇನೆ. ನಿನ್ನ ಕೆಲಸವು ಅತ್ಯಮೋಘವಾದುದರಿಂದ ನಾನು ಸಂತೋಷಪಟ್ಟೆನು. ಆದ್ದರಿಂದ ನಾನು ಕೊಡುತ್ತೇನೆ, ನೀನು ಪರಿಗ್ರಹಿಸು ಎಂದನು.

ಸಾ ಶ್ರೀಸ್ತು ಬ್ರಹ್ಮಣಾ ಪ್ರೋಕ್ತಾ ದೇವಿ ಗಚ್ಛಸ್ವ ಕೇಶವಂ ।
ಮಯಾ ದತ್ತಂ ಪತಿಂ ಪ್ರಾಪ್ಯ ನೋದಸ್ವ ಶಾಶ್ವತೀಸ್ಸಮಾಃ ॥ ೬೮ ॥

ಪಶ್ಯತಾಂ ಸರ್ವಭೂತಾನಾಂ ಗತಾ ವಕ್ಷಸ್ಥಲಂ ಹರೇಃ ।
ತತೋ ವಕ್ಷಸ್ಥಲಂ ಪ್ರಾಪ್ಯ ದೇವಂ ವಚನಮಬ್ರವೀತ್ ॥ ೬೯ ॥

॥ ಶ್ರೀರುವಾಚ ॥

ನಾಹಂ ತ್ಯಾಜ್ಯಾ ತ್ವಯಾ ದೇವ ಸದಾ ಚಾದೇಶಕಾರಿಣೀ ।
ವಕ್ಷಸ್ಥಲೇ ನಿವತ್ಸ್ಯಾಮಿ ಸರ್ವಸ್ಯ ಜಗತಃ ಪ್ರಿಯಾ ॥ ೭೦ ॥

ತತೋಽವಲೋಕಿತಾ ದೇವಾ ಹರಿವಕ್ಷಃಸ್ಥಲಸ್ಥಯಾ ।
ಲಕ್ಷ್ಮ್ಯಾ ರಾಜೇಂದ್ರ ಸಹಸಾ ಪರಾಂ ನಿರ್ವೃತಿಮಾಗತಾಃ ॥ ೭೧ ॥

ಉದ್ವೇಗಂ ಚ ಪರಂ ಜಗ್ಮುರ್ದೈತ್ಯಾ ವಿಷ್ಣುಪರಾಙ್ಮುಖಾಃ ।
ತ್ಯಕ್ತಾಸ್ತು ದಾನವಾ ಲಕ್ಷ್ಮ್ಯಾ ವಿಪ್ರಚಿತ್ತಿಪುರೋಗಮಾಃ ॥ ೭೨ ॥

---

೬೮. ಆಗ ಬ್ರಹ್ಮನು ಆ ಲಕ್ಷ್ಮಿಯನ್ನು ಕುರಿತು, ಎಲೈ ಲಕ್ಷ್ಮಿಯೇ! ನೀನು ಕೇಶವನ ಬಳಿಗೆ ಹೋಗಿ ಆತನನ್ನು ವರಿಸು, ನಾನು ನಿನಗೆ ಆತನನ್ನು ಗಂಡನನ್ನಾಗಿ ಕಲ್ಪಿಸಿದ್ದೇನೆ, ನೀನು ಅವನೊಡನೆ ಅನೇಕ ಕಾಲಗಳ ಪರ್ಯಂತರ ಸುಖಪಡು.

೬೯. ಎಲ್ಲಾ ಪ್ರಾಣಿಗಳು ನೋಡುತ್ತಿದ್ದಂತೆಯೇ ಆ ಲಕ್ಷ್ಮಿಯು ಹರಿಯ ವಕ್ಷಸ್ಥಳಕ್ಕೆ ಸೇರಿದಳು. ಆ ಸ್ವಾಮಿಯ ವಕ್ಷಸ್ಥಳಕ್ಕೆ ಹೋಗಿ ಆತನನ್ನು ಕುರಿತು ಇಂತೆಂದಳು.

೭೦. ಲಕ್ಷ್ಮಿಯು ಹೇಳಿದಳು:—ಎಲೈ ದೇವನೇ, ನನ್ನನ್ನು ನೀನು ಯಾವಾಗಲೂ ಬಿಡಕೂಡದು. ನಿನ್ನ ಅಪ್ಪಣೆಯಂತೆ ನಾನು ಯಾವಾಗಲೂ ನಡೆಯುತ್ತೇನೆ ಪ್ರಪಂಚಕ್ಕೆಲ್ಲಾ ಹಿತವನ್ನು ಮಾಡುವವಳಾಗಿ ನಿನ್ನ ವಕ್ಷಸ್ಸಿನಲ್ಲಿಯೇ ಇರುತ್ತೇನೆ.

೭೧. ಹರಿಯ ವಕ್ಷಸ್ಥಳದಲ್ಲಿದ್ದುಕೊಂಡು ಆ ಲಕ್ಷ್ಮಿಯು ದೇವತೆಗಳನ್ನು ನೋಡಿದಳು. ಅದರಿಂದ ಅವರೆಲ್ಲರೂ ಬಹುವಾಗಿ ಸುಖವನ್ನು ಹೊಂದಿದರು.

೭೨. ಆಗ ವಿಷ್ಣುವಿನಲ್ಲಿ ದ್ವೇಷವನ್ನು ಹೊಂದಿದ್ದ ದೈತ್ಯರೆಲ್ಲರೂ ಕೋಪವನ್ನು ತಾಳಿದರು. ಅದನ್ನು ನೋಡಿ ಆಕೆಯು ವಿಪ್ರಚಿತ್ತಿಯೇ ಮುಂತಾದ ಆ ದೈತ್ಯರನ್ನು ಬಿಟ್ಟುಬಿಟ್ಟಳು.

ತತಸ್ತೇ ಜಗೃಹುರ್ದೈತ್ಯಾ ಧನ್ವಂತರಿಕರಸ್ಥಿತಂ ।
ಅಮೃತಂ ತು ಮಹಾವೀರ್ಯಾ ದೈತ್ಯಾಃ ಪಾಪಸಮನ್ವಿತಾಃ ॥ ೭೩ ॥

ಮಾಯಯಾ ಲೋಭಯಿತ್ವಾ ತು ವಿಷ್ಣುಃ ಸ್ತ್ರೀರೂಪಸಂಸ್ಥಿತಃ ।
ಆಗತ್ಯ ದಾನವಾನ್ಪ್ರಾಹ ದೀಯತಾಂ ಮೇ ಕಮಂಡಲುಃ ॥ ೭೪ ॥

ಯುಷ್ಮಾಕಂ ವಶಗಾ ಭೂತ್ವಾ ಸ್ಥಾಸ್ಯಾಮಿ ಭವತಾಂ ಗೃಹೇ ।
ತಾಂ ದೃಷ್ಟ್ವಾ ರೂಪಸಂಪನ್ನಾಂ ನಾರೀಂ ತ್ರೈಲೋಕ್ಯಸುಂದರೀಂ ॥ ೭೫ ॥

ಪ್ರಾರ್ಥಮಾನಾಂ ಸುವಪುಷಂ ಲೋಭೋಪಹತಚೇತಸಃ ।
ದತ್ವಾಮೃತಂ ತತಸ್ತಸ್ಯೈ ನ ತಾಂ ಪಶ್ಯಂತಿ ತೇಽಗ್ರತಃ ॥ ೭೬ ॥

ತತಃ ಪ್ರಹೃತ್ಯ ಗೋವಿಂದೋ ದೇವಾನಾಮಮೃತಂ ದದೌ ।
ತತಃ ಪಪುಸ್ಸುರಗಣಾಶ್ಶಕ್ರಾದ್ಯಾಸ್ತತ್ತದಾಮೃತಂ ॥ ೭೭ ॥

---

೭೩. ಆಮೇಲೆ ರಾಕ್ಷಸರು ಧನ್ವಂತರಿಯ ಕೈಯಲ್ಲಿದ್ದ ಅಮೃತವನ್ನು ಪಾಪ ಬುದ್ಧಿಯಿಂದ ಪರಾಕ್ರಮಶಾಲಿಗಳಾದ ಅವರು ಕಿತ್ತುಕೊಂಡರು.

೭೪. ಆಗ ವಿಷ್ಣುವು ಸ್ತ್ರೀರೂಪವನ್ನು ಹೊಂದಿ ಮಾಯೆಯಿಂದ ಆ ರಾಕ್ಷಸ ರನ್ನು ವಂಚಿಸುತ್ತಾ ಬಂದು ಎಲೈ ದೈತ್ಯರಿರಾ, ಕಮಂಡಲುವನ್ನು ನನ್ನ ಕೈಯಲ್ಲಿ ಕೊಡಿರಿ.

೭೫-೭೬. ನಾನು ನಿಮಗೆ ವಶವಾಗಿ ನಿಮ್ಮ ಮನೆಯಲ್ಲಿರುತ್ತೇನೆ ಎಂದಳು. ತ್ರಿಲೋಕಸುಂದರಿಯಾದ ಆ ಹೆಂಗಸಿನ ರೂಪವನ್ನು ನೋಡಿ, ಆಕೆಯು ಬಂದು ತಾನಾ ಗಿಯೇ ಕೇಳುತ್ತಿರುವುದನ್ನೂ ಯೋಚಿಸಿ, ಆಶೆಯಿಂದ ಅವಳ ಕೈಗೆ ಅಮೃತವನ್ನು ಕೊಟ್ಟರು. ಅನಂತರ ಆಕೆಯು ಎದುರಿಗೆ ಕಾಣಲೇ ಇಲ್ಲ.

೭೭. ಅನಂತರ ಗೋವಿಂದನು ಹಾಗೆ ತಂದ ಅಮೃತವನ್ನು ದೇವತೆಗಳಿಗೆ ಕೊಟ್ಟನು. ಆಗ ಇಂದ್ರಾದಿ ದೇವತೆಗಳು ಅದನ್ನು ಕುಡಿದರು.

ಉದ್ಯತಾಯುಧನಿಸ್ತ್ರಿಂಶಾ ದೈತ್ಯಾಸ್ತಾಂಸ್ತೇ ಸಮಭ್ಯಯುಃ ।
ಪೀತೇಽಮೃತೇ ಚ ಬಲಿಭಿರ್ದೇವೈರ್ದೈತ್ಯಚಮೂಸ್ತತಃ ॥ ೭೮ ॥

ವಧ್ಯಮಾನಾ ದಿಶಂ ಭೇಜೇ ಪಾತಾಳಂ ಚ ವಿವೇಶ ವೈ ।
ತತೋ ದೇವಾ ಮುದಾ ಯುಕ್ತಾಶ್ಶಂಖಚಕ್ರಗದಾಭೃತಂ ॥ ೭೯ ॥

ಪ್ರಣಿಪತ್ಯ ಯಥಾಪೂರ್ವಂ ತತೋ ಜಗ್ಮುಸ್ತ್ರಿವಿಷ್ಟಪಂ ।
ತತಃ ಪ್ರಭೃತಿ ತೇ ಭೀಷ್ಮ ಸ್ತ್ರೀಲೌಲ್ಯಾ ದಾನವಾಭವನ್ ॥ ೮೦ ॥

ಅಪಧ್ಯಾತಾಸ್ತು ಕೃಷ್ಣೇನ ಗತಾಸ್ತೇ ತು ರಸಾತಲಂ ।
ತತಃ ಸೂರ್ಯಃ ಪ್ರಸನ್ನಾಭೋ ಯಯೌ ವೈ ಸ್ವೇನ ವರ್ತ್ಮನಾ ॥ ೮೧ ॥

ಜಜ್ವಾಲ ಭಗವಾಂಶ್ಚೋಚ್ಚೈಶ್ಚಾರುದೀಪ್ತಿರ್ಹುತಾಶನಃ ।
ಧರ್ಮೇ ಚ ಸರ್ವಭೂತಾನಾಂ ತದಾ ಮತಿರಜಾಯತ ॥ ೮೨ ॥

ಶ್ರಿಯಾ ಯುಕ್ತಂ ಚ ತ್ರೈಲೋಕ್ಯಂ ವಿಷ್ಣುನಾ ಪ್ರತಿಪಾಲಿತಂ ।
ದೇವಾಸ್ತು ತೇ ತದಾ ಪ್ರೋಕ್ತಾ ಬ್ರಹ್ಮಣಾ ಲೋಕಧಾರಿಣಾ ॥ ೮೩ ॥

---

೭೮. ಅಮೃತವನ್ನು ಕುಡಿದಮೇಲೆ ಆ ದೇವತೆಗಳು ಕತ್ತಿ ಮುಂತಾದ ಆಯುಧಗಳನ್ನೆತ್ತಿಕೊಂಡು ದೈತ್ಯರ ಮೇಲೆ ಯುದ್ಧಕ್ಕೆ ಹೋದರು. ಆಗ ಆ ದೈತ್ಯರೆಲ್ಲರೂ ಏಟನ್ನು ತಿನ್ನುತ್ತಾ ಪಾತಾಳವನ್ನು ಹೊಕ್ಕರು.

೭೯-೮೦. ಆ ದೇವತೆಗಳು ಸಂತೋಷಪಟ್ಟು ಶಂಖ, ಚಕ್ರ, ಗದೆಗಳನ್ನು ಧರಿಸಿರುವ ಸ್ವಾಮಿಗೆ ನಮಸ್ಕರಿಸಿ ಮೊದಲಿನಂತೆ ದೇವಲೋಕಕ್ಕೆ ಹೋದರು. ಎಲೈ ಭೀಷ್ಮನೇ, ಅದು ಮೊದಲುಗೊಂಡು ಆ ದಾನವರು ಸ್ತ್ರೀಯರಲ್ಲಿ ಆಸೆಯುಳ್ಳವರಾದರು.

೮೧. ಕೃಷ್ಣನು ತಿರಸ್ಕರಿಸಲು ಆ ದಾನವರೆಲ್ಲರೂ ರಸಾತಳಕ್ಕೆ ಹೋದರು. ಆಗ ಸೂರ್ಯನು ಚೆನ್ನಾಗಿ ಪ್ರಕಾಶಿಸುತ್ತ ತನ್ನ ದಾರಿಯಲ್ಲಿ ಸುತ್ತುವುದಕ್ಕೆ ಮೊದಲು ಮಾಡಿದನು.

೮೨. ಅಗ್ನಿಯೂ ಕೂಡ ಮನೋಹರವಾದ ಕಾಂತಿಗಳನ್ನು ಬೀರುತ್ತಾ ಜ್ವಲಿಸಿದನು. ಆಗ ಎಲ್ಲಾ ಪ್ರಾಣಿಗಳಿಗೂ ಧರ್ಮದಲ್ಲಿ ಬುದ್ಧಿ ಹುಟ್ಟಿತು.

೮೩. ಆಗ ಮೂರು ಲೋಕವೂ ಸಂಪತ್ತಿನಿಂದ ಕೂಡಿಕೊಂಡಿತು. ಅದನ್ನು ವಿಷ್ಣುವು ಕಾಪಾಡಿದನು. ಆಗ ಲೋಕಧಾರಿಯಾದ ಬ್ರಹ್ಮನು ದೇವತೆಗಳಿಗೆ ಹೀಗೆಂದು ಹೇಳಿದನು.

ಭವತಾಂ ರಕ್ಷಣಾರ್ಥಾಯ ಮಯಾ ವಿಷ್ಣುರ್ನಿಯೋಜಿತಃ ।
ಉಮಾಪತಿಶ್ಚ ದೇವೇಶೋ ಯೋಗಕ್ಷೇಮಂ ಕರಿಷ್ಯತಿ ॥ ೮೪ ॥

ಉಪಾಸ್ಯಮಾನೌ ಸತತಂ ಯುಷ್ಮತ್ಕ್ಷೇಮಕರೌ ಯತಃ ।
ತತಃ ಕ್ಷೇಮ್ಯೌ ಸದಾ ಚೇಮೌ ಭವಿಷ್ಯೇತೇ ವರಪ್ರದೌ ॥ ೮೫ ॥

ಏವಮುಕ್ತ್ವಾ ತು ಭಗವಾನ್ಜಗಾಮ ಗತಿಮಾತ್ಮನಃ ।
ಅದರ್ಶಂ ತು ಗತೇ ದೇವೇ ಸರ್ವಲೋಕಪಿತಾಮಹೇ ॥ ೮೬ ॥

ದೇವಲೋಕಂ ಗತೇ ಶಕ್ರೇ ಸ್ವಂ ಲೋಕಂ ಹರಿಶಂಕರೌ ।
ಪ್ರಾಪ್ತೌ ತು ತತ್ಕ್ಷಣಾದ್ದೇವೋ ಸ್ಥಾನಂ ಕೈಲಾಸಮೇವ ಚ ॥ ೮೭ ॥

ತತಸ್ತು ದೇವರಾಜೇನ ಪಾಲಿತಂ ಭುವನತ್ರಯಂ ।
ಏವಂ ಲಕ್ಷ್ಮೀರ್ಮಹಾಭಾಗ ಉತ್ಪನ್ನಾ ಕ್ಷೀರಸಾಗರಾತ್ ॥ ೮೮ ॥

---

೮೪. ನಿಮ್ಮನ್ನು ಕಾಪಾಡುವುದಕ್ಕೋಸ್ಕರ ನಾನು ವಿಷ್ಣುವಿಗೆ ಹೇಳಿದೆನು. ಇದೇ ರೀತಿ ಈಶ್ವರನಿಗೂ ಹೇಳಿದೆನು. ಅವರು ನಿಮ್ಮ ಯೋಗಕ್ಷೇಮವನ್ನು ನೋಡಿ ಕೊಳ್ಳುತ್ತಾರೆ.

೮೫. ಅವರು ಯಾವಾಗಲೂ ನಿಮ್ಮ ಕ್ಷೇಮವನ್ನೇ ಮಾಡುವುದರಿಂದ ಅವ ರನ್ನು ನೀವು ಸೇವಿಸಿರಿ. ಆದ್ದರಿಂದ ಅವರು ಸದಾ ಕ್ಷೇಮದಿಂದಿದ್ದು ನಿಮಗೆ ವರವನ್ನು ಕೊಡುವರು.

೮೬-೮೭. ಬ್ರಹ್ಮನು ಹೀಗೆಂದು ಹೇಳಿ ತನ್ನ ಸ್ಥಾನಕ್ಕೆ ಹೊರಟುಹೋದನು. ಈ ರೀತಿ ಎಲ್ಲಾ ಲೋಕಕ್ಕೂ ತಾತನಾದ ಬ್ರಹ್ಮನು ಹೊರಟುಹೋಗಲು, ಇಂದ್ರನೂ ಹರಿಶಂಕರರೂ ತಮ್ಮ ತಮ್ಮ ಲೋಕಗಳಿಗೆ ಹೊರಟುಹೋದರು. ಸ್ವಾಮಿಯೂ ಕೂಡ ತನ್ನ ಸ್ಥಾನವಾದ ಕೈಲಾಸಕ್ಕೆ ಹೋದನು.

೮೮. ಆಮೇಲೆ ಈ ಇಂದ್ರನು ಮೂರು ಲೋಕವನ್ನೂ ಕಾಪಾಡುತ್ತ ಸುಖ ವಾಗಿದ್ದನು. ಎಲೈ ಪುಣ್ಯಾತ್ಮನಾದ ಭೀಷ್ಮನೇ, ಈ ರೀತಿ ಲಕ್ಷ್ಮಿಯು ಕ್ಷೀರಸಮುದ್ರ ದಿಂದ ಹುಟ್ಟಿದಳು.

ಪುನಃ ಖ್ಯಾತ್ಯಾಂ ಸಮುತ್ಪನ್ನಾ ಭೃಗೋರೇಷಾ ಸನಾತನೀ ।
ಶ್ರೀಯಾ ಸಹ ಸಮುತ್ಪನ್ನಂ ಭೃಗುಣಾ ತು ಮಹರ್ಷಿಣಾ ॥ ೮೯ ॥

ಸ್ವನಾಮ್ನಾ ನಗರಂ ಚೈವ ಕೃತಂ ಪೂರ್ವಸರಿತ್ತಟೇ ।
ನರ್ಮದಾಯಾ ಮಹಾಭಾಗ ಬ್ರಹ್ಮಣಾ ಚಾನುಮೋದಿತಂ ॥ ೯೦ ॥

ಲಕ್ಷ್ಮ್ಯಾಃ ಪುರಂ ಚ ಪಿತ್ರೋಕ್ತಂ ದೇವಿಕಾಯಾಮಥಾರ್ಪಿತಂ ।
ಆಗತಾ ದೇವಲೋಕೇಶಂ ಪುನರ್ಯಾಚಯತೇ ಸ್ವಯಂ ॥ ೯೧ ॥

ಲೋಭಾನ್ನ ದತ್ತಂ ನಗರಂ ಪ್ರಾರ್ಥನಾಯಾಂ ಯದಾ ಪುನಃ ।
ಭೃಗೋಸ್ಸಕಾಶಾನ್ನಾವಾಪ ತದಾ ಚೈವಾಹ ಕೇಶವಂ ॥ ೯೨ ॥

॥ ಲಕ್ಷ್ಮ್ಯುವಾಚ ॥

ಅಹಂ ಪಿತ್ರಾ ಪರಾಭೂತಾ ಗೃಹೀತಂ ಚ ಪುರಂ ಮಮ ।
ತಸ್ಯ ಹಸ್ತಾತ್ಸಮಾಕ್ಷಿಪ್ಯ ಪುರಂ ತಚ್ಚಾನಯಸ್ವ ಹ ॥ ೯೩ ॥

---

೮೯. ಈ ಪುರಾತನಳಾದ ಲಕ್ಷ್ಮಿಯು ಮತ್ತೆ ಖ್ಯಾತಿಯಲ್ಲಿ ಭೃಗುವಿನಿಂದ ಉತ್ಪನ್ನಳಾದಳು. ಭೃಗುವಿನಿಂದ ಮತ್ತೆ ಶ್ರೀಯೊಡನೆ ಈಕೆಯು ಹುಟ್ಟಿದಳು.

೯೦. ತನ್ನ ಹೆಸರಿನಿಂದಲೇ ನರ್ಮದೆಯ ಪೂರ್ವ ತೀರದಲ್ಲಿ ಪಟ್ಟಣವೂ ಕಟ್ಟಲ್ಪಟ್ಟಿತು. ಬ್ರಹ್ಮನೂ ಕೂಡ ಅದನ್ನು ಒಪ್ಪಿಕೊಂಡನು.

೯೧. ಲಕ್ಷ್ಮಿಯಪುರವೆಂದು ತಂದೆಯು ಹೇಳಿ ಆ ದೇವಿಕೆಗೆ ಕೊಟ್ಟನು. ಆಕೆಯು ಮತ್ತೆ ಜಗನ್ನಾಥನ ಬಳಿಗೆ ಬಂದು ತಾನಾಗಿಯೇ ಕೇಳಿಕೊಂಡಳು.

೯೨. ಬಂದು ಕೇಳಿಕೊಂಡರೂ ಕೂಡ ಲೋಭತನದಿಂದ ಆ ನಗರವನ್ನು ಕೊಡಲಿಲ್ಲ. ಭೃಗುವಿನ ದೆಸೆಯಿಂದ ಯಾವಾಗ ಆ ಪಟ್ಟಣವು ಸಿಕ್ಕಲಿಲ್ಲವೋ ಆಗ ಕೇಶವನನ್ನು ಕುರಿತು ಇಂತೆಂದಳು.

೯೩. ಲಕ್ಷ್ಮಿಯು ಹೇಳಿದಳು :—ನನ್ನನ್ನು ನನ್ನ ತಂದೆಯು ತಿರಸ್ಕರಿಸಿ ನನ್ನ ಪಟ್ಟಣವನ್ನು ಕಿತ್ತುಕೊಂಡಿರುವನು, ಆತನಿಂದ ಆ ಪಟ್ಟಣವನ್ನು ಕಿತ್ತು ನನಗೆ ಕೊಡು.

ತಂ ಗತ್ವಾ ಪುಂಡರೀಕಾಕ್ಷೋ ದೇವಶ್ಚಕ್ರಗದಾಧರಃ ।
ಸಾಮಪೂರ್ವಂ ಭೃಗುಂ ಚಾಹ ಕನ್ಯಾಯೈ ಪುರಮರ್ಪಯ ॥ ೯೪ ॥

ಕುಂಚಿಕಾನಾಳಕೇ ಹ್ಯೋಭೇ ದೀಯತಾಂ ಚ ಪ್ರಸಾದತಃ ।
ಭೃಗುಸ್ತಂ ಕುಪಿತಃ ಪ್ರಾಹ ನಾಹಮರ್ಪಯಿಷ್ಯೇ ಪುರಂ ॥ ೯೫ ॥

ನ ಲಕ್ಷ್ಮ್ಯಾಸ್ತತ್ಪುರಂ ದೇವ ಮಯಾ ಚೇದಂ ಸ್ವಯಂ ಕೃತಂ ।
ಭಗವನ್ನೈವ ದಾಸ್ಯಾಮಿ ಆಕ್ಷೇಪಂ ತ್ಯಜ ಕೇಶವ ॥ ೯೬ ॥

ತಂ ಪ್ರಾಹ ದೇವೋ ಭೂಯೋಽಪಿ ಲಕ್ಷ್ಮ್ಯಾಸ್ತತ್ಪುರಮರ್ಪಯ ।
ಸರ್ವಥಾ ತು ತ್ವಯಾ ತ್ಯಾಜ್ಯಂ ವಚನಾನ್ಮೇ ಮಹಾಮುನೇ ॥ ೯೭ ॥

ತತಃ ಕೋಪಸಮಾವಿಷ್ಟೋ ಭೃಗುಸ್ತಂ ಪ್ರಾಹ ಕೇಶವಂ ॥ ೯೮ ॥

---

೯೪. ಆಗ ಸ್ವಾಮಿಯಾದ ಶಂಖ, ಚಕ್ರ, ಗದೆಗಳನ್ನು ಧರಿಸಿರುವ ಪುಂಡರೀಕಾಕ್ಷನಾದ ಶ್ರೀವಿಷ್ಣುವು ಭೃಗುವಿನ ಬಳಿಗೆ ಹೋಗಿ, ಒಳ್ಳೆಯ ಮಾತಿನಿಂದ ನಿನ್ನ ಮಗಳಿಗೆ ಆ ಪಟ್ಟಣವನ್ನು ಕೊಡು ಎಂದನು,

೯೫. ಕುಂಚಿಕ, ನಾಳಕವೆಂಬ ಎರಡು ಪಟ್ಟಣಗಳನ್ನು ದಯವಿಟ್ಟು ನಿನ್ನ ಮಗಳಿಗೆ ಕೊಟ್ಟುಬಿಡು ಎನ್ನಲು, ಭೃಗುವು ಕೋಪಕೊಂಡು ನಾನು ಆ ಪಟ್ಟಣಗಳನ್ನು ಕೊಡುವುದಿಲ್ಲವೆಂದನು.

೯೬. ಎಲೈ ಸ್ವಾಮಿಯೇ, ಇವು ಲಕ್ಷ್ಮಿಯ ಊರುಗಳಲ್ಲ, ನಾನೇ ಸ್ವಂತವಾಗಿ ಮಾಡಿಕೊಂಡುವು. ಸ್ವಾಮಿಯೇ, ನಾನು ಅವನ್ನು ಕೊಡುವುದಿಲ್ಲ, ಆಕ್ಷೇಪವನ್ನು ಮಾಡಬೇಡ.

೯೭-೯೮. ಮತ್ತೆ ಭೃಗುವಿಗೆ ಸ್ವಾಮಿಯು ನೀನು ಆ ಲಕ್ಷ್ಮಿಯ ಮನೆಗಳನ್ನು ಕೊಟ್ಟುಬಿಡು. ನನ್ನ ಮಾತಿನ ಮೇಲೆ ನೀನು ಅವನ್ನು ಬಿಡಲೇಬೇಕು ಎಂದನು. ಆಗ ಭೃಗುವು ಕೋಪಗೊಂಡು ಕೇಶವನಿಗಿಂತೆಂದನು.

॥ ಭೃಗುರುವಾಚ ॥

ಪಕ್ಷಪಾತೇನ ಮಾಂ ಸಾಧೋ ಭಾರ್ಯಾಯಾಸ್ತತ್ಕೃತೇನ ಚ ।
ಮರ್ತ್ಯಲೋಕೇಽಸಕೃಚ್ಚೈವ ಜನ್ಮ ಪ್ರಾಪ್ಸ್ಯಸಿ ಕೇಶವ ।
ಭಾರ್ಯಾಯಾಸ್ತೇ ವಿಯೋಗಶ್ಚ ದುಃಖಾನ್ಯನುಭವಿಷ್ಯಸಿ ॥ ೯೯ ॥

ಶಾಪಮೇವಂ ದದೌ ತಸ್ಮೈ ಭೃಗುಃ ಪರಮಕೋಪನಃ ।
ವಿಷ್ಣುನಾ ಚ ಪುನಸ್ತಸ್ಯ ದತ್ತಶ್ಶಾಪೋ ಮಹಾತ್ಮನಾ ॥ ೧೦೦ ॥

ನೈವಾಪತ್ಯಕೃತಾಂ ಪ್ರೀತಿಂ ಪ್ರಾಪ್ಸ್ಯಸೇ ಮುನಿಪುಂಗವ ।
ಶಾಪಂ ದತ್ತ್ವಾ ಋಷೇಸ್ತಸ್ಯ ಬ್ರಹ್ಮಲೋಕಂ ಜಗಾಮ ಹ ॥ ೧೦೧ ॥

ಪದ್ಮೇ ಸ್ಥಿತಂ ಪದ್ಮವೀರ್ಯಂ ಪದ್ಮಾಕ್ಷಂ ಪದ್ಮವಾಸಿನಂ ।
ಪದ್ಮಜನ್ಮಾನಮಾಹೇದಂ ನತ್ವಾ ದೇವಸ್ತು ಕೇಶವಃ ॥ ೧೦೨ ॥

---

೯೯. ಭೃಗುವು ಹೇಳಿದನು:—ಎಲೈ ಕೇಶವನೇ, ನೀನು ಪಕ್ಷಪಾತದಿಂದಲೂ ಹೆಂಡತಿಗೋಸ್ಕರ ಹೀಗೆ ಕೇಳುತ್ತಿರುವುದರಿಂದಲೂ ಭೂಲೋಕದಲ್ಲಿ ಬಾರಿ ಬಾರಿಗೂ ಜನ್ಮವನ್ನು ಹೊಂದು. ಅಲ್ಲದೆ ನಿನ್ನ ಹೆಂಡತಿಯ ಅಗಲುವಿಕೆಯನ್ನು ಆಗಾಗ ಹೊಂದು.

೧೦೦. ಭೃಗುವು ಈ ರೀತಿ ಆ ಕೇಶವನಿಗೆ ಬಹು ಕೋಪದಿಂದ ಶಾಪ ಕೊಟ್ಟನು. ವಿಷ್ಣುವೂ ಕೂಡ ಕೋಪಗೊಂಡು ಆ ಭೃಗುವಿಗೆ ಶಾಪಕೊಟ್ಟನು.

೧೦೧. ಎಲೈ ಋಷಿಶ್ರೇಷ್ಠನೇ, ನೀನು ಮಕ್ಕಳಲ್ಲಿ ಪ್ರೀತಿಯನ್ನು ತೋರದುದರಿಂದ ಮಕ್ಕಳಲ್ಲಿ ನಿನಗೂ, ನಿನ್ನಲ್ಲಿ ಮಕ್ಕಳಿಗೂ ಪ್ರೀತಿಯಿಲ್ಲದೆ ಹೋಗಲಿ [illegible] ಋಷಿಗೆ ಶಾಪವನ್ನು ಕೊಟ್ಟು ಬ್ರಹ್ಮಲೋಕಕ್ಕೆ ಹೊರಟುಹೋದನು.

೧೦೨. ಅಲ್ಲಿ ಪದ್ಮದಲ್ಲಿದ್ದ, ಪದ್ಮವೇ ವೀರ್ಯವಾಗುಳ್ಳ, ಪದ್ಮದಂತೆ ಕಣ್ಣುಳ್ಳ, ಪದ್ಮದಲ್ಲಿ ವಾಸಿಸುವ, ಪದ್ಮದಿಂದ ಹುಟ್ಟಿದ ಆ ಬ್ರಹ್ಮನನ್ನು ಕುರಿತು ಕೇಶವನು ನಮಸ್ಕರಿಸಿ ಇಂತೆಂದನು.

॥ ವಿಷ್ಣುರುವಾಚ ॥
ಭಗವಂಸ್ತವ ಪುತ್ರೋಽಸೌ ಭೃಗುಃ ಪರಮಕೋಪನಃ ।
ನಿಷ್ಕಾರಣೇನ ತೇನಾಹಂ ಶಪ್ತೋಽಸ್ಮಿ ಜನ್ಮ ಮಾನುಷೇ ॥ ೧೦೩ ॥

ಲಪ್ಸ್ಯಸೇ ದಶಕೃತ್ವೋ ಚ ತತ್ರ ದುಃಖಾನ್ಯನೇಕಶಃ ।
ಭಾರ್ಯಾವಿಯೋಗಜಾದೀನಿ ಬಲಪೌರುಷನಾಶನಂ ॥ ೧೦೪ ॥

ತ್ಯಕ್ತ್ವಾ ಚಾಹಮಿಮಾಂಲ್ಲೋಕಾಞ್ಛಯಿಷ್ಯೇ ಚ ಮಹೋದಧೌ ।
ದೇವಕಾರ್ಯೇಷು ಸರ್ವೇಷು ಪುನಶ್ಚಾವಾಹನಂ ಕೃಥಾಃ ॥ ೧೦೫ ॥

ತಥಾ ಬ್ರುವಂ ತಂ ತಂದೇವಂ ಬ್ರಹ್ಮಾ ಲೋಕಗುರುಸ್ತದಾ ।
ಪ್ರಸಾದನಾರ್ಥಂ ವಿಷ್ಣೋಸ್ತು ಸ್ತುತಿಮೇತಾಂ ಚಕಾರ ಹ ॥ ೧೦೬ ॥

॥ ಬ್ರಹ್ಮೋವಾಚ ॥
ತ್ವಯಾ ಸೃಷ್ಟಂ ಜಗದಿದಂ ಪದ್ಮಂ ನಾಭೌ ವಿನಿಸ್ಸೃತಂ ।
ತತ್ರ ಚಾಹಂ ಸಮುತ್ಪನ್ನಸ್ತವ ಧ್ಯಾನಾಚ್ಚ ಕೇಶವ ॥ ೧೦೭ ॥

---

೧೦೩. ವಿಷ್ಣುವು ಹೇಳಿದನು :—ಎಲೈ ಭಗವಂತನಾದ ಬ್ರಹ್ಮನೇ, ನಿನ್ನ ಮಗನಾದ ಭೃಗುವು ಬಹಳ ಕೋಪಗೊಂಡು ಕಾರಣವಿಲ್ಲದೆ ಮನುಷ್ಯನಾಗಿ ಹುಟ್ಟೆಂದು ನನಗೆ ಶಾಪಕೊಟ್ಟನು.

೧೦೪. ಆ ಮನುಷ್ಯಲೋಕದಲ್ಲಿ ಹತ್ತು ಬಾರಿ ನೀನು ಹುಟ್ಟಿ ಅನೇಕ ಬಾರಿ ಹೆಂಡತಿಯ ವಿಯೋಗವನ್ನೂ, ಬಲ, ಪೌರುಷಗಳ ನಾಶವನ್ನೂ ಹೊಂದುತ್ತೀಯೆ ಎಂದು ಶಪಿಸಿದನು.

೧೦೫. ನಾನು ಲೋಕಗಳೆಲ್ಲವನ್ನೂ ಬಿಟ್ಟು ಸಮುದ್ರದಲ್ಲಿ ಮಲಗುತ್ತೇನೆ. ದೇವತೆಗಳ ಕೆಲಸದಲ್ಲೆಲ್ಲಾ ಮತ್ತೆ ಆವಾಹನೆಯನ್ನು ಮಾಡು, ಎಂದರೆ ಆ ಕೆಲಸ ಗಳಲ್ಲಿ ಕರೆ ಎಂದನು.

೧೦೬. ಹಾಗೆ ಹೇಳುತ್ತಿರುವ ಕೇಶವನನ್ನು ಕುರಿತು ಲೋಕಗುರುವಾದ ಬ್ರಹ್ಮನು ಆಗ ವಿಷ್ಣುವನ್ನು ಸುಮುಖನನ್ನಾಗಿ ಮಾಡಿಕೊಳ್ಳಲು ಈ ರೀತಿ ಸ್ತುತಿ ಯನ್ನು ಮಾಡಿದನು.

೧೦೭. ಬ್ರಹ್ಮನು ಹೇಳಿದನು :—ಎಲೈ ಕೇಶವನೇ, ನೀನೇ ಈ ಜಗತ್ತನ್ನು ಸೃಷ್ಟಿಮಾಡಿದೆ, ಪದ್ಮವನ್ನು ನಾಭಿಯಲ್ಲಿ ಹುಟ್ಟಿಸಿದೆ, ಆದರಲ್ಲಿ ನಾನು ನಿನ್ನ ಧ್ಯಾನ ದಿಂದ ಹುಟ್ಟಿದೆ.

ತ್ವಂ ತ್ರಾತಾ ಸರ್ವಲೋಕಾನಾಂ ಸ್ರಷ್ಟಾ ತ್ವಂ ಜಗತಃ ಪ್ರಭೋ ।
ತ್ರೈಲೋಕ್ಯಂ ನ ತ್ವಯಾ ತ್ಯಾಜ್ಯಮೇಷ ಏವ ವರೋ ಮಮ ॥ ೧೦೮ ॥

ದಶಜನ್ಮ ಮನುಷ್ಯೇಷು ಲೋಕಾನಾಂ ಹಿತಕಾಮ್ಯಯಾ ।
ಸ್ವಯಂ ಕರ್ತಾ ನ ತೇ ಶಕ್ತಃ ಶಾಪದಾನಾಯ ಕೇಶವಃ ॥ ೧೦೯ ॥

ಕೋಽಯಂ ಭೃಗುಃ ಕಥಂ ತೇನ ಶಕ್ಯಶ್ಶಪ್ತುಂ ಜನಾರ್ದನ ।
ಮಾನಯಸ್ವ ಸದಾ ವಿಪ್ರಾನ್ಬ್ರಾಹ್ಮಣಾಂಸ್ತೇನ ಶತ್ರುಹನ್ ॥ ೧೧೦ ॥

ಯೋಗನಿದ್ರಾಮುಪಾಸಸ್ವ ಕ್ಷೀರಾಬ್ಧೌ ತ್ವಂ ಹಿ ಮಾಧವ ।
ಕಾರ್ಯಕಾಲೇ ಪುನಸ್ತ್ವಂ ತು ತ್ವಚ್ಛಕ್ತ್ಯಾ ಉಪಬೃಂಹಿತಃ ॥ ೧೧೧ ॥

ಸರ್ವಕಾರ್ಯಾರ್ಥತಶ್ಚಕ್ರಸ್ತ್ವನ್ಯೈವಾಂಶೇನ ಶತ್ರುಹನ್ ।
ತ್ರೈಲೋಕ್ಯಂ ಪಾಲಯೇದ್ಯಸ್ತು ತ್ವದಾಜ್ಞಾಂ ಸ ಕರಿಷ್ಯತಿ ।
ಏವಂ ಸ್ತುತಸ್ತದಾ ವಿಷ್ಣುಬ್ರಹ್ಮಾಣಮಿದಮಬ್ರವೀತ್ ॥ ೧೧೨ ॥

---

೧೦೮. ನೀನೇ ಪ್ರಪಂಚವನ್ನೆಲ್ಲಾ ಕಾಪಾಡತಕ್ಕವನು, ನೀನೇ ಪ್ರಪಂಚವೆಲ್ಲ ವನ್ನೂ ಸೃಷ್ಟಿಸಿದವನು, ಮೂರು ಲೋಕವನ್ನೂ ನೀನು ಬಿಡಕೂಡದು. ಇದೇ ನೀನು ನನಗೆ ಕೊಡಬೇಕಾದ ವರವು.

೧೦೯. ಲೋಕದ ಹಿತಕಾಂಕ್ಷೆಗೋಸ್ಕರ ಹತ್ತು ಜನ್ಮಗಳನ್ನು ಮನುಷ್ಯರಲ್ಲಿ ಹೊಂದು, ನೀನೇ ಪ್ರಪಂಚವೆಲ್ಲವನ್ನೂ ಸೃಷ್ಟಿಮಾಡುವವನು, ನಿನಗೆ ಶಾಪವನ್ನು ಕೊಡಬಾರದು.

೧೧೦. ಈ ಭೃಗುವು ಎಷ್ಟರವನು? ಎಲೈ ಜನಾರ್ದನನೇ ಅತನಿಂದ ನಿನಗೆ ಶಾಪಕೊಡಲು ಹೇಗೆ ತಾನೆ ಸಾಧ್ಯ? ವಿಪ್ರರಾದ ಬ್ರಾಹ್ಮಣರನ್ನು ನೀನು ಸದಾ ಗೌರವಿಸು.

೧೧೧. ಎಲೈ ಮಾಧವನೇ ನೀನು ಕ್ಷೀರಸಮುದ್ರದಲ್ಲಿ ಯೋಗನಿದ್ರೆಯನ್ನು ಮಾಡುತ್ತಿರು. ಕಾರ್ಯದ ಕಾಲದಲ್ಲಿ ನಿನ್ನ ಶಕ್ತಿಯಿಂದ ವೃದ್ಧಿಪಡಿಸು.

೧೧೨. ಎಲೈ ಶತ್ರುನಾಶಕನೇ! ನಿನ್ನ ಅಂಶದಿಂದಲೇ ಇಂದ್ರನು ಸರ್ವ ಕಾರ್ಯಗಳನ್ನು ಮಾಡಲು ಉತ್ಪನ್ನನಾಗಿರುವನು, ಅವನೇ ಮೂರು ಲೋಕವನ್ನೂ ಕಾಪಾಡುತ್ತ ನಿನ್ನ ಅಪ್ಪಣೆಯನ್ನೂ ಪಾಲಿಸುವನು.

॥ ವಿಷ್ಣುರುವಾಚ ॥

ಸರ್ವಮೇತತ್ಕರಿಷ್ಯಾಮಿ ಯನ್ಮಾಂ ಜ್ಞಾಪಯಸೇ ಪ್ರಭೋ ॥ ೧೧೩ ॥

ಅದರ್ಶನಂ ಗತೋ ದೇವೋ ಬ್ರಹ್ಮಾ ತಂ ನಾಭಿಜಗ್ಮಿವಾನ್ ।
ಗತೇ ದೇವೇ ತದಾ ವಿಷ್ಣೌ ಬ್ರಹ್ಮಾ ಲೋಕಪಿತಾಮಹಃ ॥ ೧೧೪ ॥

ಭೂಯಶ್ಚಕಾರ ಸೈ ಸೃಷ್ಟಿಂ ಲೋಕಾನಾಂ ಪ್ರಭವಃ ಪ್ರಭುಃ ।
ತಂ ದೃಷ್ಟ್ವಾ ನಾರದಃ ಪ್ರಾಹ ವಾಕ್ಯಂ ವಾಕ್ಯವಿದಂ ಮುನಿಃ ॥ ೧೧೫ ॥

॥ ನಾರದ ಉವಾಚ ॥

ಸಹಸ್ರಶೀರ್ಷಾಪುರುಷಃ ಸಹಸ್ರಾಕ್ಷಸ್ಸಹಸ್ರಪಾತ್ ।
ಸರ್ವವ್ಯಾಪೀ ಭುವಃ ಸ್ಪರ್ಶಾದತ್ಯತಿಷ್ಠದ್ದಶಾಂಗುಲಂ ॥ ೧೧೬ ॥

ಯದ್ಭೂತಂ ಯಚ್ಚ ವೈಭಾವ್ಯಂ ಸರ್ವಮೇವ ಭವಾನ್ಯತಃ ।
ತ್ವತ್ತೋ ವಿಶ್ವಮಿದಂ ತಾತ ತ್ವತ್ತೋ ಭೂತಂ ಭವಿಷ್ಯತಿ ॥ ೧೧೭ ॥

---

೧೧೩. ವಿಷ್ಣುವು ಹೇಳಿದನು :—ಎಲೈ ಪ್ರಭುವೇ ನೀನು ನನಗೆ ಜ್ಞಾಪಿಸು ವುದೆಲ್ಲವನ್ನೂ ಮಾಡುತ್ತೇನೆ.

೧೧೪-೧೧೫. ವಿಷ್ಣುವು ಹೊರಟುಹೋದನು, ಬ್ರಹ್ಮನು ಅವನ ಮಾತನ್ನೂ ಅನುಮೋದಿಸಲಿಲ್ಲ, ಅವನ ಹಿಂದೆ ಹೋಗಲೂ ಇಲ್ಲ, ಆ ವಿಷ್ಣುವು ಹೊರಟು ಹೋಗುತ್ತಲೂ ಪಿತಾಮಹನಾದ, ಲೋಕ ಸೃಷ್ಟಿಕರ್ತನಾದ ಬ್ರಹ್ಮನು ಮತ್ತೆ ಸೃಷ್ಟಿ ಮಾಡಲು ಉಪಕ್ರಮಿಸಿದನು. ನಾರದನು ಆ ಮಾತು ಬಲ್ಲವನಾದ ಬ್ರಹ್ಮನನ್ನು ಕುರಿತು ಇಂತೆಂದನು.

೧೧೬. ನಾರದನು ಹೇಳಿದನು :—ಎಲೈ ಬ್ರಹ್ಮನೇ! ನೀನು ಸಾವಿರ ತಲೆ ಯುಳ್ಳವನು, ಸಾವಿರ ಕಾಲುಳ್ಳವನು, ನೀನೇ ಸರ್ವ ವ್ಯಾಪಿಯು. ಭೂಮಿಯನ್ನು ಸ್ಪರ್ಶಿಸುತ್ತಾ ಹತ್ತು ಅಂಗುಲದಲ್ಲಿ ಮೇಲಿದ್ದೀಯೆ.

೧೧೭. ಯಾವುದು ಸೃಷ್ಟವಾಗಿದೆಯೋ ಯಾವುದು ಸೃಷ್ಟವಾಗುತ್ತದೆಯೋ ಅವೆಲ್ಲವೂ ನೀನೇನೆ. ಎಲೈ ತಾತನೇ, ನಿನ್ನಿಂದಲೇ ಈ ಪ್ರಪಂಚವೆಲ್ಲವೂ ಹುಟ್ಟಿ ದವು ಮತ್ತು ಹುಟ್ಟುತ್ತವೆ.

ತ್ವತ್ತೋ ಯಜ್ಞಾಸ್ಸರ್ವಹುತಃ ಪೃಷದಾಜ್ಯಂ ಪಶುರ್ದ್ವಿಧಾ ।
ತ್ವತ್ತೋ ಋಚೋಽಥ ಸಾಮಾನಿ ತ್ವತ್ತಶ್ಛಂದಾಂಸಿ ಜಜ್ಞಿರೇ ॥ ೧೧೮ ।

ತ್ವತ್ತೋ ಯಜ್ಞಾಶ್ಚ ಜಾಯಂತೇ ತ್ವತ್ತೋಽಶ್ವಾಶ್ಚೈವ ದಂತಿನಃ ।
ಗಾವಸ್ತ್ವತ್ತಸ್ಸಮುದ್ಭೂತಾಸ್ತ್ವತ್ತೋ ಜಾತಾ ವಯೋ ಮೃಗಾಃ ॥

ತ್ವನ್ಮುಖಾದ್ಬ್ರಾಹ್ಮಣಾ ಜಾತಾಸ್ತ್ವತ್ತಃ ಕ್ಷತ್ರಮಜಾಯತ ।
ವೈಶ್ಯಾಸ್ತವೋರುಜಾಶ್ಶೂದ್ರಾಸ್ತೇ ಚ ಪದ್ಭ್ಯಾಂ ಸಮುದ್ಗತಾಃ ॥ ೧೨೦ ॥

ಅಕ್ಷ್ಣೋಸ್ಸೂರ್ಯೋಽನಿಲಶ್ಶ್ರೋತ್ರಾಚ್ಚಂದ್ರಮಾ ಮನಸಸ್ತವ ।
ಪ್ರಾಣೋಽಸ್ತಸುಷಿರಾಜ್ಜಾತೋ ಮುಖಾದಗ್ನಿರಜಾಯತ ॥ ೧೨೧ ॥

ನಾಭಿತೋ ಗಗನಂ ದ್ಯೌಶ್ಚ ಶಿರಸಸ್ಸಮವರ್ತತ ।
ದಿಶಶ್ಶ್ರೋತ್ರಾತ್ ಕ್ಷಿತಿಃ ಪದ್ಭ್ಯಾಂ ತ್ವತ್ತಸ್ಸರ್ವಮಭೂದಿದಂ ॥ ೧೨೨ ॥

---

೧೧೮. ನಿನ್ನಿಂದಲೇ ಯಜ್ಞವೂ, ನಿನ್ನಿಂದಲೇ ಸರ್ವ ಹೋಮಗಳೂ, ನಿನ್ನಿಂದಲೇ ಹವಿಸ್ಸು ಮತ್ತು ಪಶುವೂ ಎರಡು ಬಗೆಯಾದವು, ಎಲೈ ಋಷಿಯೇ ನಿನ್ನಿಂದಲೇ ಸಾಮಗಳು, ನಿನ್ನಿಂದಲೇ ಛಂದಸ್ಸುಗಳೂ ಹುಟ್ಟಿದುವು.

೧೧೯. ನಿನ್ನಿಂದಲೇ ಯಜ್ಞಗಳೂ ಹುಟ್ಟಿದುವು, ನಿನ್ನಿಂದಲೇ ಕುದುರೆಗಳೂ, ಆನೆಗಳೂ ಹುಟ್ಟಿದುವು, ನಿನ್ನಿಂದಲೇ ಗೋವುಗಳೂ, ಪಕ್ಷಿಗಳೂ, ಮೃಗಗಳೂ ಹುಟ್ಟಿದುವು.

೧೨೦. ನಿನ್ನ ಮುಖದಿಂದ ಬ್ರಾಹ್ಮಣರೂ, ನಿನ್ನ ಬಾಹುಗಳಿಂದ ಕ್ಷತ್ರಿಯರೂ, ನಿನ್ನ ತೊಡೆಗಳಿಂದ ವೈಶ್ಯರೂ, ಕಾಲುಗಳಿಂದ ಶೂದ್ರರೂ ಹುಟ್ಟಿದರು.

೧೨೧. ನಿನ್ನ ಕಣ್ಣುಗಳಿಂದ ಸೂರ್ಯನೂ, ಕಿವಿಯಿಂದ ಗಾಳಿಯೂ, ಮನಸ್ಸಿನಿಂದ ಚಂದ್ರನೂ ಒಳಗಿನ ರಂಧ್ರದಿಂದ ಪ್ರಾಣವೂ, ಮುಖದಿಂದ ಬೆಂಕಿಯೂ ಹುಟ್ಟಿದುವು.

೧೨೨. ಆ ಬ್ರಹ್ಮನ ಹೊಕ್ಕಳಿನಿಂದ ಗಗನವೂ, ತಲೆಯಿಂದ ಆಕಾಶವೂ, ಕಿವಿಗಳಿಂದ ದಿಕ್ಕುಗಳೂ, ಕಾಲಿನಿಂದ ಭೂಮಿಯೂ, ಈ ರೀತಿ ಎಲ್ಲವೂ ನಿನ್ನಿಂದ ಉಂಟಾದುವು.

ನ್ಯಗ್ರೋಧಸ್ಸುಮಹಾನಲ್ಪೇ ಯಥಾ ಬೀಜೇ ವ್ಯವಸ್ಥಿತಃ ।
ಸಸರ್ಜ ವಿಶ್ವಮಖಿಲಂ ಬೀಜಭೂತೇ ತಥಾ ತ್ವಯಿ ॥ ೧೨೩ ॥

ಬೀಜಾಂಕುರಸಮುದ್ಭೂತೋ ನ್ಯಗ್ರೋಧಸ್ಸಮುಪಸ್ಥಿತಃ ।
ವಿಸ್ತಾರಂ ಚ ಯಥಾ ಯಾತಿ ತ್ವತ್ತಸ್ಸೃಷ್ಟೌ ತಥಾ ಜಗತ್ ॥ ೧೨೪ ॥

ಯಥಾ ಕದಲ್ಯಾ ನಾನ್ಯತ್ವಂ ತ್ವಕ್ಪತ್ರೇಣಾಥ ದೃಶ್ಯತೇ ।
ಏವಂ ವಿಶ್ವಮಿದಂ ನಾನ್ಯತ್ತ್ವತ್ಸ್ಥಂ ಸಂಪ್ರತಿ ದೃಶ್ಯತೇ ॥ ೧೨೫ ॥

ಹ್ಲಾದಿನೀ ಸುವಿಶುದ್ಧಿಸ್ಸ್ಯಾತ್ತ್ವಯ್ಯೇಕಾ ಸರ್ವಭಾವಿನೀ ।
ಹ್ಲಾದತಾಪಕರೀ ಮಿಶ್ರಾ ತ್ವಯಿ ನೋ ಗುಣವರ್ಜಿತೇ ॥ ೧೨೬ ॥

ಪೃಥಗ್ಭೂತೈಕಭೂತಾಯ ಸರ್ವಭೂತಾತ್ಮನೇ ನಮಃ ।
ಪ್ರಭೂತಭೂತಭೂತಾಯ ತುಭ್ಯಂ ಭೂತಾತ್ಮಕ ಪ್ರಭೋ ॥ ೧೨೭ ॥

---

೧೨೩. ಸಣ್ಣ ಆಲದ ಬೀಜದಲ್ಲಿ ದೊಡ್ಡದಾದ ಆಲದಮರವು ಅಡಗಿರುವಂತೆ ಬೀಜಭೂತನಾದ ನಿನ್ನಲ್ಲಿ ಎಲ್ಲವೂ ತುಂಬಿಕೊಂಡಿದೆ, ಅದರಂತೆ ಎಲ್ಲವೂ ಉತ್ಪನ್ನವಾಯಿತು.

೧೨೪. ಆಲದಬೀಜದಿಂದ ಮೊಳಕೆ ಹುಟ್ಟಿ ಬೆಳೆದು ದೊಡ್ಡದಾಗಿ ಹೇಗೆ ವಿಸ್ತಾರವನ್ನು ಹೊಂದುತ್ತದೆಯೋ ಹಾಗೆ ಈ ಜಗತ್ತು ನಿನ್ನಿಂದ ಹುಟ್ಟಿ ಬೆಳೆದು ದೊಡ್ಡದಾಗಿ ವಿಸ್ತಾರವಾಗುತ್ತದೆ.

೧೨೫. ಬಾಳೆಯಲ್ಲಿ ನಾರು, ಎಲೆ ಮುಂತಾದುವುಗಳಿಂದ ಬೇರೆಯಾಗುವಿಕೆಯು ಕಾಣುವುದಿಲ್ಲವೋ ಹಾಗೆ ಈ ಪ್ರಪಂಚದಲ್ಲಿ ನಿನ್ನಿಂದ ಬೇರೆಯಾಗಿರುವಿಕೆಯು ಕಾಣುವುದೇ ಇಲ್ಲ.

೧೨೬. ನಿನ್ನಲ್ಲಿ ಎಲ್ಲರಲ್ಲಿಯೂ ಬರಬೇಕೆಂದಪೇಕ್ಷಿತವಾದ ಶುದ್ಧವಾದ ಸಂತೋಷವಿರುತ್ತದೆ. ತಾಪಾಹ್ಲಾದಗಳಿಂದ ಮಿಶ್ರವಾದ ಆ ಗುಣವು ಗುಣರಹಿತನಾದ ನಿನ್ನಲ್ಲಿ ಇರುವುದೇ ಇಲ್ಲ.

೧೨೭. ನೀನು ಒಬ್ಬನೇ ಒಬ್ಬನು, ಆದರೂ ಬೇರೆಬೇರೆಯಾಗಿದ್ದೀಯೆ. ಅಲ್ಲದೆ ಎಲ್ಲಾ ಪ್ರಾಣಿಗಳಲ್ಲೂ ಇದ್ದೀಯೆ, ಇಂತಹ ನಿನಗೆ ನಮಸ್ಕಾರವು, ನೀನು ದೊಡ್ಡ ವಸ್ತುಗಳಿಗೆಲ್ಲಾ ದೊಡ್ಡವನು, ಇಂತಹ ನಿನಗೆ ನಮಸ್ಕಾರವು.

ವ್ಯಕ್ತಃ ಪ್ರಧಾನಪುರುಷೋ ವಿರಾಟ್ಸಂಮ್ರಾಟ್ತಥಾ ಭವಾನ್ ।
ವಿಭಾವ್ಯಮಂತಃಕರಣಂ ಪುರುಷೇಷ್ವಕ್ಷಯೋ ಭವಾನ್ ॥ ೧೨೮ ॥

ಸರ್ವಸ್ಮಿನ್ಸರ್ವಭೂತಸ್ತ್ವಂ ಸರ್ವಸ್ಸರ್ವಸ್ವರೂಪಧೃಕ್ ।
ಸರ್ವಂ ತ್ವತ್ತಸ್ಸಮುದ್ಭೂತಂ ನಮಸ್ಸರ್ವಾತ್ಮನೇಽಸ್ತು ತೇ ॥ ೧೨೯ ॥

ಸರ್ವಾತ್ಮಕೋಽಸಿ ಸರ್ವೇಶ ಸರ್ವಭೂತಸ್ಥಿತೋ ಯತಃ ।
ಕಥಯಾಮಿ ತತಃ ಕಿಂ ತೇ ಸರ್ವಂ ವೇತ್ಸಿ ಹೃದಿ ಸ್ಥಿತಂ ॥ ೧೩೦ ॥

ಯೋ ಮೇ ಮನೋರಥೋ ದೇವ ಸಫಲಸ್ಸ ತ್ವಯಾ ಕೃತಃ ।
ತಪಶ್ಚ ತಪ್ತಂ ಸಫಲಂ ಯದ್ದೃಷ್ಟೋಽಸಿ ಜಗತ್ಪತೇ ॥ ೧೩೧ ॥

॥ ಬ್ರಹ್ಮೋವಾಚ ॥

ತಪಸಸ್ತತ್ಫಲಂ ಪುತ್ರ ಯದ್ದೃಷ್ಟೋಽಹಂ ತ್ವಯಾಧುನಾ ।
ಮದ್ದರ್ಶನಂ ಹಿ ವಿಫಲಂ ನಾರದೇಹ ನ ಜಾಯತೇ ॥ ೧೩೨ ॥

---

೧೨೮. ನೀನು ಎಲ್ಲರಿಗೂ ಕಾಣುವಂತಿರುವವನು, ಮುಖ್ಯ ಪುರುಷನು, ವಿರಾಟ್ಪುರುಷನು, ರಾಜಭೂತನು, ಅಂತಃಕರಣವನ್ನು ಎಲ್ಲರಲ್ಲಿಯೂ ಭಾಗ ಮಾಡಿಟ್ಟಿದ್ದೀಯೆ, ನೀನು ನಾಶರಹಿತನು.

೧೨೯. ನೀನು ಎಲ್ಲರಲ್ಲಿಯೂ ಇದ್ದೀಯೆ, ಎಲ್ಲವೂ ನೀನೇ ಆಗಿದ್ದೀಯೆ, ಸರ್ವ ಸ್ವರೂಪವನ್ನೂ ಹೊಂದಿದ್ದೀಯೆ, ಎಲ್ಲವೂ ನಿನ್ನಿಂದ ಹುಟ್ಟಿದೆ, ಸರ್ವಾತ್ಮನಾದ ನಿನಗೆ ನಮಸ್ಕಾರವು.

೧೩೦. ಸರ್ವರ ಆತ್ಮದಲ್ಲಿಯೂ ನೀನಿದ್ದೀಯೆ, ನೀನೇ ಸರ್ವೇಶನು, ಸರ್ವ ಭೂತಗಳಲ್ಲಿಯೂ ಇದ್ದೀಯೆ, ಆದ್ದರಿಂದ ನಿನಗೆ ಹೇಳಬೇಕಾದುದೇ ಇಲ್ಲ. ಮನಸ್ಸಿನಲ್ಲಿರುವುದೆಲ್ಲವನ್ನೂ ನೀನು ತಿಳಿದಿದ್ದೀಯೆ.

೧೩೧. ಎಲೈ ಸ್ವಾಮಿಯೇ ನನ್ನ ಮನೋರಥಗಳೆಲ್ಲವನ್ನೂ ನೀನು ಈಡೇರಿಸಿದ್ದೀಯೆ. ನಾನು ಮಾಡಿದ ತಪಸ್ಸೆಲ್ಲವೂ ನಿನ್ನನ್ನು ನೋಡಿದುದರಿಂದ ಸಫಲವಾದುವು.

೧೩೨. ಬ್ರಹ್ಮನು ಹೇಳಿದನು :—ಎಲೈ ಪುತ್ರನೇ, ನೀನು ಈಗ ನನ್ನನ್ನು ನೋಡಿದುದರಿಂದ ಅದೇ ನಿನ್ನ ತಪಸ್ಸಿಗೆ ಫಲವು, ಆದರೆ ಎಲೈ ನಾರದನೇ, ನನ್ನ ದರ್ಶನವು ಫಲವಿಲ್ಲದೇ ಹೋಗುವುದಿಲ್ಲ.

ವರಂ ವರಯ ತಸ್ಮಾತ್ತ್ವಂ ಯಥಾಭಿಮತಮಾತ್ಮನಃ ।
ಸರ್ವಂ ಸಪದ್ಯತೇ ವತ್ಸ ಮಯಿ ದೃಷ್ಟಿಪಥಂ ಗತೇ ॥ ೧೩೩ ॥

॥ ನಾರದ ಉವಾಚ ॥

ಭಗವನ್ಸರ್ವಭೂತೇಶ ಸರ್ವಸ್ಯಾಸ್ತೇ ಭವಾನ್ಹೃದಿ ।
ಕಿಮಜ್ಞಾತಂ ತವ ಸ್ವಾಮಿನ್ಮನಸಾ ಯನ್ಮಯೇಪ್ಸಿತಂ ॥ ೧೩೪ ॥

ಕೃತ್ವಾ ತ್ವಯಾ ತಥಾ ಸೃಷ್ಟಿರ್ಮಯಾ ದೃಷ್ಟಾ ತಥಾ ವಿಭೋ ।
ತೇನ ಮೇ ಕೌತುಕಂ ಜಾತಂ ದೃಷ್ಟ್ವಾ ದೇವರ್ಷಿದಾನವಾನ್ ॥ ೧೩೫ ॥

॥ ಪುಲಸ್ತ್ಯ ಉವಾಚ ॥

ನಾರದಸ್ಯ ಪಿತಾ ತುಷ್ಟೋ ಬ್ರಹ್ಮಾ ದೇವೋ ದಿವಸ್ಪತಿಃ ।
ನಾರದಾಯ ವರಂ ಪ್ರಾದಾದೃಷೀಣಾಮುತ್ತಮೋ ಭವಾನ್ ॥ ೧೩೬ ॥

ಭವಿತಾ ಮತ್ಪ್ರಸಾದೇನ ಕಲಿಕೇಳಿಕಥಾಪ್ರಿಯಃ ।
ಗತಿಶ್ಚ ತೇಽಪ್ರತಿಹತಾ ದಿವಿ ಭೂಮೌ ರಸಾತಲೇ ॥ ೧೩೭ ॥

---

೧೩೩. ಆದ್ದರಿಂದ ಎಲೈ ವತ್ಸನೇ, ನಿನಗೆ ಬೇಕಾದ ವರವನ್ನು ಕೇಳಿಕೋ. ನಾನು ನಿನ್ನ ಕಣ್ಣಿಗೆ ಗೋಚರನಾದ ಮೇಲೆ ನಿನಗೆ ಎಲ್ಲವೂ ಸಿದ್ಧಿಸುತ್ತದೆ.

೧೩೪. ನಾರದನು ಹೇಳಿದನು:—ಪೂಜ್ಯನಾದ, ಸರ್ವ ಭೂತೇಶನಾದ ಸ್ವಾಮಿಯೇ, ನೀನು ಎಲ್ಲರ ಹೃದಯದಲ್ಲಿಯೂ ಇದ್ದೀಯೆ. ನನ್ನ ಮನಸ್ಸಿನಲ್ಲಿರುವುದು ಯಾವುದು ತಾನೇ ನಿನಗೆ ತಿಳಿಯದು?

೧೩೫. ನೀನು ಮಾಡಿದ ಸೃಷ್ಟಿಯೆಲ್ಲವನ್ನೂ ನಾನು ನೋಡಿದೆನು. ಆ ದೇವತೆಗಳೂ, ಋಷಿಗಳೂ, ದಾನವರೂ ಇವರನ್ನು ನೋಡಿ ನನಗೆ ಆಶೆಯುಂಟಾಗಿದೆ.

೧೩೬. ಪುಲಸ್ತ್ಯನು ಹೇಳಿದನು :—ದೇವನೂ, ಸ್ವರ್ಗಕ್ಕೆ ಒಡೆಯನೂ, ತಂದೆಯೂ ಆದ ಬ್ರಹ್ಮನು ನಾರದನ ವಿಷಯದಲ್ಲಿ ಸಂತೋಷಪಟ್ಟು ನಾರದನಿಗೆ ವರವನ್ನು ಕೊಟ್ಟನು.

೧೩೭. ಎಲೈ ನಾರದನೇ, ನೀನು ಉತ್ತಮವಾದ ಋಷಿಯಾಗುತ್ತೀಯೆ. ಅಂತಹ ನೀನು ನನ್ನ ಅನುಗ್ರಹದಿಂದ ಜಗಳದ ಕಥೆಗಳಲ್ಲಿ ಪ್ರೀತಿಯುಳ್ಳವನಾಗಿ ಆಗುತ್ತೀಯೆ. ನಿನ್ನ ಗಮನವು ಭೂಮಿಗಳಲ್ಲಿಯೂ ಅಂತರಿಕ್ಷ ಮತ್ತು ಪಾತಾಳಗಳಲ್ಲಿಯೂ ತಡೆಯಿಲ್ಲದೆ ಇರುತ್ತದೆ.

ಯಜ್ಞೋಪವೀತಸೂತ್ರೇಣ ಯೋಗಪಟ್ಟಾವಲಂಬಿಕಾ ।
ಛತ್ರಿಕಾ ಚ ತಥಾ ವೀಣಾ ಅಲಂಕಾರಾಯ ತೇಽನಘ ॥ ೧೩೮ ॥

ವಿಷ್ಣೋಸ್ಸಮೀಪೇ ರುದ್ರಸ್ಯ ತಥಾ ಶಕ್ರಸ್ಯ ನಾರದ ।
ದ್ವೀಪೇಷು ಪಾರ್ಥಿವಾನಾಂ ತು ಸರ್ವತ್ರಾಸ್ಖಲಿತಾ ಗತಿಃ ॥ ೧೩೯ ॥

ತ್ವಾಂ ದೃಷ್ಟ್ವಾ ತು ಸದಾ ಪ್ರೀತಿಂ ಲಪ್ಸ್ಯಂತಿ ಭುವಿ ಪಾರ್ಥಿವಾಃ ।
ವರ್ಣಾನಾಂ ತು ಭವಾನ್ ಶಾಸ್ತಾ ವರೋ ದತ್ತೋ ಮಯಾ ತವ ।
ತಿಷ್ಠ ಪುತ್ರ ಯಥಾಕಾಮಂ ಸೇವ್ಯಮಾನಸ್ಸುರಾದಿಭಿಃ ॥ ೧೪೦ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ
ವಿಷ್ಣುಲಕ್ಷ್ಮ್ಯುತ್ಪತ್ತಿರ್ನಾಮ ಚತುರ್ಥೋಽಧ್ಯಾಯಃ

---

೧೩೮. ಯಜ್ಞೋಪವೀತವೂ, ಯೋಗಪಟ್ಟವೂ, ಛತ್ರಿಯೂ, ವೀಣೆಯೂ ಇವು ನಿನಗೆ ಗುರುತಾಗಿರಲಿ.

೧೩೯. ವಿಷ್ಣು, ರುದ್ರ, ಇಂದ್ರರುಗಳಲ್ಲಿಯೂ ಎಲ್ಲಾ ದ್ವೀಪಗಳಲ್ಲಿಯೂ, ಎಲ್ಲಾ ರಾಜರುಗಳಲ್ಲಿಯೂ, ಎಲ್ಲಾ ಸ್ಥಳಗಳಲ್ಲಿಯೂ, ನಿನ್ನ ಗಮನವು ತಡೆಯಿಲ್ಲದೆ ಇರಲಿ.

೧೪೦. ನಿನ್ನನ್ನು ನೋಡಿ ಭೂಮಿಯಲ್ಲಿ ರಾಜರುಗಳೆಲ್ಲಾ ಪ್ರೀತಿಯನ್ನು ಹೊಂದಲಿ, ವರ್ಣಗಳಿಗೆ ನೀನೇ ಶಿಕ್ಷಕನಾಗು. ಎಲೈ ಮಗನೇ, ದೇವತೆಗಳಿಂದ ಸೇವಿಸಲ್ಪಡುತ್ತಾ ಸುಖವಾಗಿರು ಇದೇ ನನ್ನ ವರವು.

ಇಲ್ಲಿಗೆ ಶ್ರೀಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ವಿಷ್ಣು ಲಕ್ಷ್ಮಿಯರ
ಉತ್ಪತ್ತಿಯೆಂಬ ನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## ಪಂಚಮೋಽಧ್ಯಾಯಃ

॥ ಭೀಷ್ಮ ಉವಾಚ ॥

ಕಥಂ ಸತೀ ದಕ್ಷಸುತಾ ದೇಹಂ ತ್ಯಕ್ತವತೀ ಶುಭಾ ।
ದಕ್ಷಯಜ್ಞಸ್ತು ರುದ್ರೇಣ ವಿಧ್ವಸ್ತಃ ಕೇನ ಹೇತುನಾ ॥ ೧ ॥

ಏತನ್ಮೇ ಕೌತುಕಂ ಬ್ರಹ್ಮನ್ಕಥಂ ದೇವೋ ಮಹೇಶ್ವರಃ ।
ಜಗಾಮಾತಿಕ್ರೋಧವಶಂ ತ್ರಿಪುರಾರಿರ್ಮಹಾಯಶಾಃ ॥ ೨ ॥

॥ ಪುಲಸ್ತ್ಯ ಉವಾಚ ॥

ಗಂಗಾದ್ವಾರೇ ಪುರಾ ಭೀಷ್ಮ ದಕ್ಷೋ ಯಜ್ಞಮಥಾಕರೋತ್ ।
ತತ್ರ ದೇವಾ ಸುರಗಣಾಃ ಪಿತರೋಽಥ ಮಹರ್ಷಯಃ ॥ ೩ ॥

## ಐದನೆಯ ಅಧ್ಯಾಯವು.

೧. ಭೀಷ್ಮನು ಕೇಳಿದನು :—ದಕ್ಷನ ಮಗಳಾದ ಸತಿಯು ದೇಹವನ್ನು ಹೇಗೆ ಬಿಟ್ಟಳು? ರುದ್ರನು ಏತಕ್ಕೋಸ್ಕರ ದಕ್ಷನ ಯಜ್ಞವನ್ನು ನಾಶಮಾಡಿದನು?

೨. ಮಹಾಯಶಸ್ಕನಾದ ಈ ರುದ್ರನು ಬಹು ಕೋಪವನ್ನು ಹೊಂದಿದನಷ್ಟೆ. ಆ ಮಹೇಶ್ವರನು ಹಾಗೆ ಮಾಡಿದುದನ್ನು ಕೇಳಿ ನನಗೆ ಬಹು ಆಶ್ಚರ್ಯವಾಗಿದೆ.

೩-೫. ಪುಲಸ್ತ್ಯನು ಹೇಳಿದನು :—ಎಲೈ ಭೀಷ್ಮನೇ. ಗಂಗಾದ್ವಾರದಲ್ಲಿ ದಕ್ಷನು ಪೂರ್ವದಲ್ಲಿ ಯಜ್ಞವನ್ನು ಮಾಡಿದನು. ಅಲ್ಲಿಗೆ ದೇವತೆಗಳು, ಅಸುರರು. ಪಿತೃಗಳು, ಋಷಿಗಳು, ನಾಗರು, ಯಕ್ಷರು, ಸುಪರ್ಣರು, ಮರುತ್ತುಗಳು, ಔಷಧಿ

**ಸಮಾಜಗ್ಮುರ್ಮುದಾ ಯುಕ್ತಾಃ ಸರ್ವೇ ದೇವಾಸ್ಸವಾಸವಾಃ ।**
**ನಾಗಾ ಯಕ್ಷಾಸ್ಸುಪರ್ಣಾಶ್ಚ ವೀರುಧೌಷಧಯಸ್ತಥಾ ॥ ೪ ॥**

**ಕಶ್ಯಪೋ ಭಗವಾನತ್ರಿಃ ಪುಲಸ್ತ್ಯಃ ಪುಲಹಃ ಕ್ರತುಃ ।**
**ಪ್ರಾಚೇತಸೋಽಂಗಿರಾಶ್ಚೈವ ವಸಿಷ್ಠಶ್ಚ ಮಹಾತಪಾಃ ॥ ೫ ॥**

**ತತ್ರ ವೇದಿಂ ಸಮಾಂ ಕೃತ್ವಾ ಚಾತುರ್ಹೋತ್ರಂ ನ್ಯವೇಶಯತ್ ।**
**ಹೋತಾ ವಸಿಷ್ಠಸ್ತತ್ರಾಸೀದಂಗಿರಾಧ್ವರ್ಯುಸತ್ತಮಃ ॥ ೬ ॥**

**ಬೃಹಸ್ಪತಿಸ್ತಥೋದ್ಗಾತಾ ಬ್ರಹ್ಮಾ ವೈ ನಾರದಃ ಸ್ಮೃತಃ ।**
**ಯಜ್ಞಕರ್ಮಪ್ರವೃತ್ತೇಷು ಹೂಯಮಾನೇಷು ಚಾಗ್ನಿಷು ॥ ೭ ॥**

**ದೇವೇಷ್ವಾಗಚ್ಛಮಾನೇಷು ಸ್ಥಾವರೇ ಜಂಗಮೇ ತಥಾ ।**
**ಸದಸ್ಯೋಽಥಾಭವದ್ಬ್ರಹ್ಮಾ ಪುತ್ರೈಸ್ಸಹ ಸಮನ್ವಿತಃ ॥ ೮ ॥**

**ಯಜ್ಞಸ್ಯ ರಕ್ಷಣಾರ್ಥಾಯ ಸ್ವಯಂ ವಿಷ್ಣುರುಪಾಗತಃ ।**
**ಆಗತಾ ವಸವಸ್ಸರ್ವ ಆದಿತ್ಯಾ ದ್ವಾದಶೈವ ತು ।**
**ಅಶ್ವಿನೌ ಮರುತಶ್ಚೈವ ಮನವಶ್ಚ ಚತುರ್ದಶ ॥ ೯ ॥**

---

ಗಳು, ಕಶ್ಯಪ, ಅತ್ರಿ, ಪುಲಸ್ತ್ಯ, ಪುಲಹ, ಕ್ರತು, ವಾಲ್ಮೀಕಿ, ಅಂಗಿರಸ್ಸು, ವಸಿಷ್ಠ ಇವರೆಲ್ಲರೂ ಅಲ್ಲಿಗೆ ಬಂದರು.

೬. ಅಲ್ಲಿ ಸಮವಾಗಿ ಯಜ್ಞವೇದಿಕೆಯನ್ನು ಕಟ್ಟಿ ಅಲ್ಲಿ ಅಗ್ನಿಪ್ರತಿಷ್ಠೆಯನ್ನು ಮಾಡಿದರು, ವಸಿಷ್ಠನು ಹೋತೃವೂ, ಅಂಗಿರಸ್ಸು ಅಧ್ವರ್ಯುವೂ, ಬೃಹಸ್ಪತಿಯು ಉದ್ಗಾತೃವೂ, ನಾರದನು ಬ್ರಹ್ಮನೂ ಆಗಿ ವರಣವನ್ನು ತೆಗೆದುಕೊಂಡರು.

೭-೮ ಯಜ್ಞವು ಮೊದಲಾಯಿತು, ಅಗ್ನಿಯಲ್ಲಿ ಹೋಮಮಾಡಲು ಮೊದಲು ಮಾಡಿದರು, ದೇವತೆಗಳು ಸ್ಥಾವರಜಂಗಮಗಳು ಎಲ್ಲವೂ ಬಂದುವು, ಮಕ್ಕಳಿಂದ ಕೂಡಿಕೊಂಡ ಬ್ರಹ್ಮನೇ ಸದಸ್ಯನಾದನು, ವಿಷ್ಣುವು ಯಜ್ಞವನ್ನು ಕಾಪಾಡಲು ತಾನೇ ನಿಂತನು.

೯. ವಸುಗಳೂ, ದ್ವಾದಶಾದಿತ್ಯರು, ಅಶ್ವಿನೀದೇವತೆಗಳು, ಮರುತ್ತುಗಳು, ಹದಿನಾಲ್ಕು ಜನ ಮನುಗಳು ಕೂಡ ಬಂದರು.

ಏವಂ ಯಜ್ಞೇ ಪ್ರವೃತ್ತೇ ಚ ಹೂಯಮಾನೇಷು ಚಾಗ್ನಿಷು ।
ವಿಭೂತಿಂ ತಾಂ ಪರಾಂ ತತ್ರ ಭಕ್ಷ್ಯಭೋಜ್ಯಕೃತಾಂ ಶುಭಾಂ ॥ ೧೦ ॥

ಆಲೋಕ್ಯ ಸರ್ವತೋ ಭೂಮಿಂ ಸಮಂತಾದ್ದಶಯೋಜನಾಂ ।
ಮಹಾವೇದಿಃ ಕೃತಾ ತತ್ರ ಸರ್ವೈಸ್ತತ್ರ ಸಮನ್ವಿತೈಃ ॥ ೧೧ ॥

ಸರ್ವಯಜ್ಞಸಮೂಹಂ ತು ಯಜ್ಞೇ ದೃಷ್ಟ್ವಾ ಸತೀ ಶುಭಾ ।
ತದಾ ಸಾನುನಯಂ ವಾಕ್ಯಂ ಪಿತರಂ ಸಾಭ್ಯಭಾಷತ ॥ ೧೨ ॥

॥ ಸತ್ಯುವಾಚ ॥

ಬ್ರಹ್ಮಾ ಸುರಗಣಾಸ್ಸರ್ವ ಋಷಯಶ್ಚ ಸಮಾಗತಾಃ ।
ಪದ್ಮಾಲಯಃ ಪದ್ಮಜನ್ಮಾ ದೇವದೇವಃ ಪಿತಾಮಹಃ ॥ ೧೩ ॥

ವಿಮಾನವರಮಾರೂಢಃ ಸಾವಿತ್ರ್ಯಾ ಕಾಂತಯಾ ಸಹ ।
ಅಸ್ಮಿಂಸ್ತವ ಮಖೇ ಸ್ವಾಮಿಂಸ್ತಪಸ್ವಿಗಣಸೇವಿತೇ ॥ ೧೪ ॥

ಸಹ ಲಕ್ಷ್ಮ್ಯಾ ಶಾರ್ಙ್ಗಧನ್ವಾ ಪೀತವಾಸಾ ಜಗತ್ಪತಿಃ ।
ಕೌಸ್ತುಭೇನೋದ್ಭಾಸಿತಾಂಗಶ್ಶ್ರೀವತ್ಸಾಂಕೋಪಶೋಭಿತಃ ॥ ೧೫ ॥

---

೧೦-೧೧. ಈ ರೀತಿ ಯಜ್ಞವು ನಡೆಸುತ್ತ ಹೋಮಮಾಡುತ್ತಿರಲು ಅಲ್ಲಿ ಭಕ್ಷ್ಯಭೋಜ್ಯಗಳ ಆಧಿಕ್ಯವನ್ನು ನೋಡಿ ಸುತ್ತಲೂ ಹತ್ತು ಯೋಜನದಗಲಕ್ಕೆ ಎಲ್ಲರೂ ಸೇರಿ ಮಹಾವೇದಿಕೆಯನ್ನು ಮಾಡಿದರು.

೧೨. ಆಗ ಮಗಳಾದ ಸತಿಯು ಆ ಯಜ್ಞದಲ್ಲಿ ಬಹುವಾದ ವಿಸ್ತಾರವನ್ನು ನೋಡಿ ತಂದೆಯನ್ನು ಕುರಿತು ವಿನಯದಿಂದ ಇಂತೆಂದಳು.

೧೩-೧೪. ಎಲೈ ತಂದೆಯೇ, ತಪಸ್ವಿಗಳ ಗುಂಪಿನಿಂದ ಕೂಡಿದ ಈ ನಿನ್ನ ಮಹಾಯಜ್ಞದಲ್ಲಿ ಬ್ರಹ್ಮನೇ ಮುಂತಾದ ದೇವತೆಗಳೂ, ಋಷಿಗಳೂ ಸಹ ಬಂದಿದ್ದಾರೆ. ಅಲ್ಲದೇ ಪದ್ಮವೇ ಮನೆಯಾಗಿವುಳ್ಳ, ಪದ್ಮದಲ್ಲಿ ಹುಟ್ಟಿದ ದೇವದೇವನೂ. ಪಿತಾಮಹನೂ ಆದ ಬ್ರಹ್ಮನು ಉತ್ತಮವಾದ ವಿಮಾನದಲ್ಲಿ ಸಾವಿತ್ರಿಯೊಡನೆ ಕುಳಿತುಕೊಂಡು ಬಂದನು.

೧೫. ಶಾರ್ಙ್ಗವೆಂಬ ಬಿಲ್ಲುಳ್ಳ, ಹೊಂಬಣ್ಣದ ಬಟ್ಟೆಯನ್ನುಟ್ಟ ಕೌಸ್ತುಭ ಮಣಿಯಿಂದ ಪ್ರಕಾಶಿತನಾದ, ಶ್ರೀವತ್ಸವೆಂಬ ಮಚ್ಚೆಯುಳ್ಳ ಲಕ್ಷ್ಮೀಪತಿಯು ಲಕ್ಷ್ಮಿಯೊಡನೆ ಈ ನಿನ್ನ ಯಜ್ಞಕ್ಕೆ ಬಂದಿದ್ದಾನೆ.

ಲಕ್ಷ್ಮೀಪತಿರಿಹಾಯಾತಃ ಸತ್ರೇ ತೇ ಚ ಪ್ರಜಾಪತೇ ।
ಐರಾವತಸಮಾರೂಢೋ ದೇವರಾಜಶ್ಶತಕ್ರತುಃ ।
ಪತ್ನ್ಯಾ ಶಚ್ಯಾ ಸಹಾಯಾತಃ ಕೃತಾನಾಸಶ್ಶತಕ್ರತುಃ ॥ ೧೬ ॥

ಪಾಪಾನಾಂ ಯೋ ದಮಯಿತಾ ಧರ್ಮಿಣಾಂ ಧಾರ್ಮಿಕಃ ಪ್ರಭುಃ ।
ಧೂಮ್ರೋರ್ಣಯಾ ಯಮಸ್ಸಾರ್ಧಮಿಹಾಯಾತಸ್ಸ ದೃಶ್ಯತೇ ॥ ೧೭ ॥

ಯಾದಸಾಂ ಚ ಪತಿರ್ದೇವೋ ವರುಣೋ ಲೋಕಪಾವನಃ ।
ಗೌರ್ಯಾ ಪತ್ನ್ಯಾ ಸಹಾಯಾತಃ ಪ್ರಚೇತಾ ಮಂಟಪೇ ತ್ವಿಹ ॥ ೧೮ ॥

ಸರ್ವಯಕ್ಷಾಧಿಪೋ ದೇವಃ ಪುತ್ರೋ ವಿಶ್ರವಸೋ ಮುನೇಃ ।
ಪತ್ನ್ಯಾ ಸಹ ಸಮಾಯಾತಃ ಸ ದೇವೋಸ್ಮಿನ್ಧನೇಶ್ವರಃ ॥ ೧೯ ॥

ಮುಖಂ ಯಸ್ಸರ್ವದೇವಾನಾಂ ಜಂತೂನಾಮುದರೇ ಸ್ಥಿತಃ ।
ವೇದಾ ಯಸ್ಯಾರ್ಥಮುತ್ಪನ್ನಾಃ ಸೋಽಯಂ ಯಜ್ಞ ಉಪಸ್ಥಿತಃ ॥ ೨೦ ॥

---

೧೬. ದೇವರಾಜನೂ ಶತಕ್ರತುವೂ ಆದ ಇಂದ್ರನು ಐರಾವತವನ್ನು ಹತ್ತಿ ಹೆಂಡತಿಯಾದ ಶಚಿಯೊಡನೆ ಕುಳಿತುಕೊಂಡು ಬಂದಿದ್ದಾನೆ.

೧೭. ಪಾಪಿಗಳನ್ನು ಶಿಕ್ಷಿಸುವವನೂ, ಧರ್ಮಮಾಡುವವರಲ್ಲಿ ಧರ್ಮಿಷ್ಠನಾದ ಯಮನು ಧೂಮ್ರೋರ್ಣೆಯೆಂಬ ಹೆಂಡತಿಯೊಡನೆ ಬಂದಿದ್ದಾನೆ.

೧೮. ಜಲಜಂತುಗಳಿಗೆ ಒಡೆಯನಾದ ವರುಣನು ಗೌರಿಯೆಂಬ ಹೆಂಡತಿಯೊಡನೆ ಬಂದಿದ್ದಾನೆ.

೧೯. ಯಕ್ಷರಿಗೆಲ್ಲಾ ಒಡೆಯನಾದ ವಿಶ್ರವಸ್ಸೆಂಬ ಋಷಿಯ ಮಗನಾದ ಧನೇಶ್ವರನಾದ ಕುಬೇರನು ಇಲ್ಲಿಗೆ ಹೆಂಡತಿಯೊಡನೆ ಬಂದಿದ್ದಾನೆ.

೨೦. ದೇವತೆಗಳಿಗೆಲ್ಲಾ ಮುಖವಾದ, ಪ್ರಾಣಿಗಳ ಹೊಟ್ಟೆಯಲ್ಲಿರುವ, ವೇದಗಳೆಲ್ಲವೂ ಯಾರಿಗೋಸ್ಕರ ಉತ್ಪನ್ನವಾಗಿವೆಯೋ ಅಂತಹ ಅಗ್ನಿಯೂ ಕೂಡ ಇಲ್ಲಿಗೆ ಬಂದಿದ್ದಾನೆ.

ನಿರ್ಋತಿರ್ನಾಮ ಯಕ್ಷೇಶೋ ದಿಶಾಪತ್ಯೇ ನಿಯೋಜಿತಃ ।
ಸ ಚ ತ್ವಿಹಾಗತಸ್ತಾತ ಪತ್ನ್ಯಾ ಸಾರ್ಧಂ ಕ್ರತಾವಿಹ ॥ ೨೧ ॥

ಆಯುಷ್ಪ್ರದೋ ಜಗತ್ಯಸ್ಮಿನ್ಬ್ರಹ್ಮಣಾ ನಿರ್ಮಿತಃ ಪುರಾ ।
ಪ್ರಾಣೋಽಪಾನಸ್ಸಮಾನಶ್ಚ ಉದಾನೋ ವ್ಯಾನಸಂಜ್ಞಿತಃ ॥ ೨೨ ॥

ಏಕೋನಪಂಚಾಶತ್ಕೇನ ಗಣೇನ ಪರಿಕೀರ್ತ್ಯತೇ ।
ಯಜ್ಞೇ ಪ್ರಜಾಪತಿಶ್ಚಾಸೌ ವಾಯುರ್ದೇವಸ್ಸಮಾಗತಃ ॥ ೨೩ ॥

ದ್ವಾದಶಾತ್ಮಾ ಗ್ರಹಾಧ್ಯಕ್ಷಶ್ಚಕ್ಷುಷೀ ಜಗತಸ್ತ್ವಿಹ ।
ಪಾತಿ ವೈ ಭುವನಂ ಸರ್ವಂ ದೇವಾನಾಂ ಯಃ ಪರಾಯಣಃ ॥ ೨೪ ॥

ಆಯುಷಶ್ಚ ಧನಾನಾಂ ಚ ದಿವಸಾನಾಂ ಪತಿರ್ಹಿಯಃ ।
ಸಂಜ್ಞಾಪತಿರಿಹಾಯಾತೋ ಭಾಸ್ಕರೋ ಲೋಕಪಾವನಃ ॥ ೨೫ ॥

ಅತ್ರಿವಂಶಸಮುದ್ಭೂತೋ ದ್ವಿಜರಾಜೋ ಮಹಾಯಶಾಃ ।
ನಯನಾನಂದಜನನಾ ಲೋಕನಾಥೋ ಧರಾತಲೇ ॥ ೨೬ ॥

---

೨೧. ನಿರ್ಋತಿಯೆಂಬ ದಿಕ್ಪಾಲಕನಾದ ಯಕ್ಷನು ಹೆಂಡತಿಯೊಡನೆ ಈ ಯಾಗಕ್ಕೆ ಬಂದಿದ್ದಾನೆ.

೨೨. ಪ್ರಪಂಚದಲ್ಲಿ ಆಯುಸ್ಸನ್ನು ಕೊಡತಕ್ಕವರೆಂದು ಬ್ರಹ್ಮನಿಂದ ನಿರ್ಮಿತರಾದ ಪ್ರಾಣ, ಅಪಾನ, ಸಮಾನ, ಉದಾನ, ವ್ಯಾನರುಗಳು ನಲವತ್ತೊಂಬತ್ತು ಗಣಗಳೊಳಗೆ ಗಣಿಸಲ್ಪಟ್ಟಿದ್ದಾರೆ. ಅವರೂ ಬಂದಿದ್ದಾರೆ.

೨೩. ಪ್ರಜೆಗಳಿಗೆ ಒಡೆಯನಾದ ವಾಯುದೇವನು ಈ ಯಜ್ಞದಲ್ಲಿ ಬಂದಿರುವನು.

೨೪-೨೫. ಹನ್ನೆರಡು ಭಾಗವನ್ನು ಹೊಂದಿರುವ, ಗ್ರಹಗಳಿಗೆ ಒಡೆಯನಾದ, ಜಗತ್ತಿಗೆಲ್ಲಾ ಕಣ್ಣಾದ, ಪ್ರಪಂಚವನ್ನೆಲ್ಲಾ ಕಾಪಾಡುವ, ದೇವತೆಗಳಿಗೆ ಮುಖ್ಯನಾದ, ಆಯುಸ್ಸು, ಧನ ಮತ್ತು ಹಗಲುಗಳಿಗೆ ಒಡೆಯನಾದ ಲೋಕವನ್ನು ಪಾವನಮಾಡುವ ಭಾಸ್ಕರನು ಸಂಜ್ಞೆಯೆಂಬ ಹೆಂಡತಿಯೊಡನೆ ಇಲ್ಲಿಗೆ ಬಂದಿರುವನು.

೨೬-೨೭. ಅತ್ರಿಮಹಾಮುನಿಯ ವಂಶದಲ್ಲಿ ಹುಟ್ಟಿದವನೂ, ತನ್ನ ಶೀತಕಿರಣಗಳಿಂದ ಲೋಕದ ಜನರಿಗೆಲ್ಲಾ ಆನಂದವನ್ನುಂಟುಮಾಡುವವನೂ, ಕೀರ್ತಿವಂತನೂ, ಓಷಧಿವನಸ್ಪತಿಗಳಿಗೆ ಒಡೆಯನೂ, ನಕ್ಷತ್ರಾಧಿಪತಿಯೂ, ಆದ ಚಂದ್ರನೂ ಇಲ್ಲಿಗೆ ಬಂದಿರುವನು.

ಓಷಧೀನಾಂ ಪತಿಶ್ಚಾಪಿ ವೀರುಧಾನಾಂ ಪತಿಸ್ತಥಾ ।
ಋಕ್ಷನಾಥಃ ಸಪತ್ನೀಕ ಇಹಾಯಾತಃ ಸ ಶೀತಗುಃ ॥ ೨೭ ॥

ವಸವೋಽಷ್ಟೌ ಸಮಾಯಾತಾ ಅಶ್ವಿನೌ ಚ ಸಮಾಗತೌ ।
ವೃಕ್ಷೋ ವನಸ್ಪತಿಶ್ಚಾಪಿ ಗಂಧರ್ವಾಪ್ಸರಸಾಂ ಗಣಾಃ ॥ ೨೮ ॥

ವಿದ್ಯಾಧರಾ ಭೂತಸಂಘಾ ವೇತಾಳಾ ಯಕ್ಷರಾಕ್ಷಸಾಃ ।
ಪಿಶಾಚಾಶ್ಚೋಗ್ರಕರ್ಮಾಣಸ್ತಥಾನ್ಯೇ ಜೀವಹಾರಕಾಃ ॥ ೨೯ ॥

ನದ್ಯೋ ನದಾಸ್ಸಮುದ್ರಾಶ್ಚ ದ್ವೀಪಾಶ್ಚ ಸಹ ಪರ್ವತೈಃ ।
ಗ್ರಾಮ್ಯಾರಣ್ಯಾಶ್ಚ ಪಶವೋ ಯಶ್ಚಾನ್ಯಶ್ಚ ನೇಜತಿ ॥ ೩೦ ॥

ಕಶ್ಯಪೋ ಭಗವಾನತ್ರ ವಸಿಷ್ಠಶ್ಚಾಪರೈಸ್ಸಹ ।
ಪುಲಸ್ತ್ಯಃ ಪುಲಹಶ್ಚೈವ ಸನಕಾದ್ಯಾ ಮಹರ್ಷಯಃ ॥ ೩೧ ॥

ಪುಣ್ಯಾ-ರಾಜನ್ಯಕಾಶ್ಚೈವ ಪೃಥಿವ್ಯಾಂ ಯೇಽಚ ಪಾರ್ಥಿವಾಃ ।
ವರ್ಣಾಶ್ಚಾಶ್ರಮಿಣಸ್ಸರ್ವೇ ಸ್ವಕರ್ಮಕಾರಿಣಶ್ಚ ಯೇ ॥ ೩೨ ॥

ಕಿಂ ತು ಮೇ ಬಹುನೋಕ್ತೇನ ಬ್ರಾಹ್ಮೀ ಸೃಷ್ಟಿರಿಹಾಗತಾ ।
ಭಗಿನ್ಯೋ ಭಾಗಿನೇಯಾಶ್ಚ ಭಗಿನೀಪತಯಸ್ತ್ವಿಮೇ ॥ ೩೩ ॥

---

೨೮. ಅಷ್ಟವಸುಗಳೂ, ಅಶ್ವಿನೀದೇವತೆಗಳೂ, ವೃಕ್ಷಗಳೂ, ವನಸ್ಪತಿಗಳೂ, ಗಂಧರ್ವರೂ, ಅಪ್ಸರಸ್ತ್ರೀಯರೂ ಇವೆಲ್ಲರೂ ಬಂದಿರುವರು.

೨೯. ವಿದ್ಯಾಧರರು, ಭೂತಗಳು, ವೇತಾಳಗಳು, ಯಕ್ಷರು, ರಾಕ್ಷಸರು, ಪಿಶಾಚಿಗಳೂ, ಭಯಂಕರವಾದ ಕೆಲಸಗಳನ್ನು ಮಾಡುವ ಮತ್ತು ಜೀವವನ್ನು ನಾಶ ಮಾಡುವವರೆಲ್ಲರೂ ಬಂದಿದ್ದಾರೆ.

೩೦. ನದಿಗಳು, ನದಗಳು, ಸಮುದ್ರಗಳು, ದ್ವೀಪಗಳು, ಪರ್ವತಗಳು, ಗ್ರಾಮದವರು, ಅರಣ್ಯದವರು, ಪಶುಗಳು ಮತ್ತು ಇಲ್ಲಿಗೆ ಬರಲು ಯೋಗ್ಯರೂ ಯೋಗ್ಯರಲ್ಲದವರೂ ಕೂಡ ಬಂದಿದ್ದಾರೆ.

೩೧-೩೨. ಕಶ್ಯಪ, ವಸಿಷ್ಠ, ಪುಲಸ್ತ್ಯ, ಪುಲಹ, ಸನಕಾದಿ ಋಷಿಗಳು, ಪುಣ್ಯವಂತರಾದ ರಾಜರುಗಳು ಮತ್ತು ಈ ಭೂಮಿಯಲ್ಲಿರುವ ಮಿಕ್ಕರಾಜರುಗಳೂ ಚತುರ್ವರ್ಣದವರೂ ಸಕಲಾಶ್ರಮದವರೂ ತಮ್ಮ ತಮ್ಮ ಕೆಲಸದಲ್ಲಿ ಆಸಕ್ತರಾಗಿರುವವರೂ ಕೂಡ ಬಂದಿದ್ದಾರೆ.

೩೩-೩೪. ಬಹಳ ಹೇಳುದುವರಿಂದ ಪ್ರಯೋಜನವೇನು ? ಬ್ರಹ್ಮನ ಸೃಷ್ಟಿಯೇ ಇಲ್ಲಿಗೆ ಬಂದಿದೆ. ಸೋದರಳಿಯರು, ಸೋದರಿಯರ ಗಂಡಂದಿರು, ಅವರ ಮಕ್ಕಳು

ಸ್ವಭಾರ್ಯಾಸಹಿತಾಸ್ಸರ್ವೇ ಸಪುತ್ರಾಸ್ಸಹಬಾಂಧವಾಃ ।
ಇಮೇ ಗ್ರಹಾಸ್ಸಮಾಯಾತಾ ನಕ್ಷತ್ರೈಸ್ಸಹ ಚಂದ್ರಮಾಃ ॥ ೩೪ ॥

ಲೋಕಪಾಲಾಸ್ಸಮಾಯಾತಾಃ ಕ್ರತಾವಸ್ಮಿನ್ಸಿತಾಸ್ತವ ।
ಶೋಭಮಾನಾಸ್ಸಪತ್ನೀಕಾಃ ಸರ್ವಾಲಂಕಾರಭೂಷಿತಾಃ ॥ ೩೫ ॥

ತ್ವಯಾ ಸಮರ್ಚಿತಾಸ್ಸರ್ವೇ ದಾನಮಾನಪರಿಗ್ರಹೈಃ ।
ಆಮಂತ್ರಣಾಮಂತ್ರಿತಾನಾಂ ಸರ್ವೇಷಾಂ ಮಾನನಾ ಕೃತಾ ॥ ೩೬ ॥

ಏಕ ಏವಾತ್ರ ಭಗವಾನ್ಪತಿರ್ನಾಮಂತ್ರಿತಸ್ತ್ವಿಹ ।
ವಿನಾ ತೇನ ತ್ವಿದಂ ಶೂನ್ಯಂ ಭಗವನ್ಪ್ರತಿಭಾತಿ ಮೇ ॥ ೩೭ ॥

ಮನ್ಯೇ ಚಾಹಂ ತು ಭವತಾ ಪತಿರ್ಮೇ ನ ನಿಮಂತ್ರಿತಃ ।
ವಿಸ್ಮೃತಸ್ತೇ ಭವೇನ್ನೂನಂ ಸರ್ವೇಷಾಂ ಭಗವಾನ್ಪ್ರಭುಃ ॥ ೩೮ ॥

---

ಇವರೆಲ್ಲರೂ ತಮ್ಮ ಹೆಂಡಿರು ಮಕ್ಕಳು ಬಂಧುಗಳೊಡನೆ ಇಲ್ಲಿಗೆ ಬಂದಿದ್ದಾರೆ. ಈ ಗ್ರಹಗಳೆಲ್ಲವೂ ಬಂದಿವೆ. ನಕ್ಷತ್ರಗಳೊಡನೆ ಚಂದ್ರನೂ ಬಂದಿರುವನು.

೩೫. ಎಲೈ ತಂದೆಯೇ, ಈ ನಿನ್ನ ಯಜ್ಞಕ್ಕೆ ಲೋಕಪಾಲಕರೂ ಕೂಡ ಎಲ್ಲರೂ ಬಂದಿದ್ದಾರೆ. ಅವರೆಲ್ಲರೂ ಎಲ್ಲ ಅಲಂಕಾರಗಳಿಂದ ಭೂಷಿತರಾಗಿ ಹೆಂಡತಿಯ ರೊಡನೆ ಪ್ರಕಾಶಿಸುತ್ತಿದ್ದಾರೆ.

೩೬. ದಾನದಿಂದಲೂ, ಗೌರವದಿಂದಲೂ ಎಲ್ಲರನ್ನೂ ಪೂಜಿಸಿದ್ದೀಯೆ. ಕರೆಸಿಕೊಂಡು ಬಂದಿರುವವರೆಲ್ಲರಿಗೂ ಸರಿಯಾದ ಗೌರವವನ್ನು ಕೊಟ್ಟಿದ್ದೀಯೆ.

೩೭. ಪೂಜ್ಯನಾದ ಆ ನನ್ನ ಗಂಡನೊಬ್ಬನನ್ನು ಇಲ್ಲಿಗೆ ಕರೆದಿಲ್ಲ. ಎಲೈ ಪೂಜ್ಯನಾದ ತಂದೆಯೇ, ಅವನಿಲ್ಲದಿದ್ದರೆ ಈ ಯಜ್ಞವೇ ಶೂನ್ಯವೆಂದು ನನಗೆ ಕಾಣುತ್ತಿದೆ.

೩೮. ಬಹುಶಃ ನೀನು ನನ್ನ ಗಂಡನನ್ನು ಕರೆದಿಲ್ಲವೆಂದು ತೋರುತ್ತದೆ. ಎಲ್ಲರಿಗೂ ಪ್ರಭುವಾದ ಆ ಭಗವಂತನ ಜ್ಞಾಪಕವು ನಿನಗೆ ಬರಲಿಲ್ಲವೆಂದು ಕಾಣುತ್ತದೆ.

॥ ಪುಲಸ್ತ್ಯ ಉವಾಚ ॥

ಸತ್ಯಾಂ ತದುಕ್ತಂ ವಚನಂ ಶ್ರುತ್ವಾ ದಕ್ಷಃ ಪ್ರಜಾಪತಿಃ ।
ಪತಿಸ್ನೇಹಸಮಾಯುಕ್ತಾಂ ಪ್ರಾಣೇಭ್ಯೋಽಪಿ ಗರೀಯಸೀಂ ॥ ೩೯ ॥

ಅಂಕಮಾರೋಪ್ಯ ತಾಂ ಬಾಲಾಂ ಸಾಧ್ವೀಂ ಪತಿಪರಾಯಣಾಂ ।
ಪತಿವ್ರತಾಂ ಮಹಾಭಾಗಾಂ ಪತಿಪ್ರಿಯಹಿತೈಷಿಣೀಂ ॥ ೪೦ ॥

ಪ್ರಾಹ ಗಂಭೀರಭಾವೇನ ಶೃಣು ವತ್ಸೇ ಯಥಾತಥಂ ।
ಯೇನಾದ್ಯ ಕಾರಣೇನೇಹ ಪತಿಸ್ತೇ ನ ನಿಮಂತ್ರಿತಃ ॥ ೪೧ ॥

ತಚ್ಛೃಣುಷ್ವ ವರಾರೋಹೇ ಕಾರಣಂ ಮಮ ಯತ್ನತಃ ।
ಕಪಾಲಪಾತ್ರಧೃಕ್ಚರ್ಮೀ ಭಸ್ಮಚ್ಛನ್ನತನುಸ್ತಥಾ ॥ ೪೨ ॥

ಶೂಲೀ ದಂಡೀ ಚ ನಗ್ನಶ್ಚ ಶ್ಮಶಾನೇ ರಮತೇ ಸದಾ ।
ವಿಭೂತ್ಯಾಂಗಾನಿ ಸರ್ವಾಣಿ ಪರಿಮಾರ್ಷ್ಟಿ ಚ ನಿತ್ಯಶಃ ॥ ೪೩ ॥

ವ್ಯಾಘ್ರಚರ್ಮಪರೀಧಾನೋ ಹಸ್ತಿಚರ್ಮೋತ್ತರಚ್ಛದಃ ।
ಕಪಾಲಮಾಲಾಂ ಶಿರಸಿ ಖಟ್ವಾಂಗಂ ಚ ಕರೇ ಸ್ಥಿತಂ ॥ ೪೪ ॥

---

೩೯-೪೧. ಪುಲಸ್ತ್ಯನು ಹೇಳಿದನು:—ಆ ದಕ್ಷಬ್ರಹ್ಮನು ಸತಿಯು ಹೇಳಿದ ಈ ಮಾತನ್ನು ಕೇಳಿ ಪತಿಸ್ನೇಹದಿಂದ ಕೂಡಿದ, ತನ್ನ ಪ್ರಾಣಕ್ಕಿಂತ ಹೆಚ್ಚಾದವಳಾದ, ಸಾಧ್ವಿಯಾದ, ಪತಿಯಲ್ಲಿ ಆಸಕ್ತಳಾದ, ಪತಿವ್ರತೆಯಾದ, ಪುಣ್ಯಶಾಲಿನಿಯಾದ, ಗಂಡನಿಗೆ ಒಳ್ಳೆಯದನ್ನು ಮಾಡುವುದರಲ್ಲಿ ಆಸಕ್ತಳಾದ, ಆ ಸತೀದೇವಿಯನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಗಂಭೀರವಾದ ಮಾತಿನಿಂದ ಅಮ್ಮಾ, ನಿನ್ನ ಗಂಡನನ್ನು ಕರೆಯದಿರುವುದಕ್ಕೆ ನಿಶ್ಚಯವಾದ ಕಾರಣವನ್ನು ಹೇಳುತ್ತೇನೆ ಕೇಳು.

೪೨-೪೩. ಅಮ್ಮಾ, ಆ ವಿಷಯದಲ್ಲಿ ಸಮಾಧಾನವಾಗಿ ನಾನು ಹೇಳುವ ಕಾರಣವನ್ನು ಕೇಳು. ಅವನು ಕಪಾಲಪಾತ್ರೆಯನ್ನು ಹಿಡಿದಿರುತ್ತಾನೆ. ಚರ್ಮವನ್ನು ಹೊದೆದಿರುತ್ತಾನೆ, ಮೈಗೆಲ್ಲಾ ಬೂದಿಯನ್ನು ಬಳಿದುಕೊಂಡಿರುತ್ತಾನೆ.

೪೪. ಹುಲಿಯ ಚರ್ಮವನ್ನು ಉಟ್ಟಿದ್ದಾನೆ. ಆನೆಯ ಚರ್ಮವನ್ನು ಹೊದೆದಿದ್ದಾನೆ. ಕಪಾಲಗಳ ಮಾಲೆಯನ್ನು ಕತ್ತಿಗೆ ಹಾಕಿಕೊಂಡಿದ್ದಾನೆ. ಖಟ್ವಾಂಗ (ಮಂಚದಕಾಲು) ವನ್ನೂ ಕೈಲಿ ಹಿಡಿದಿದ್ದಾನೆ.

ಕಟ್ಯಾಂ ವೈ ಗೋನಸಂ ಬಧ್ವಾ ಲಿಂಗಸ್ಥಾನ್ವಲಯಾನ್ಬಹೂನ್ ।
ಪನ್ನಗಾನಾಂ ತು ರಾಜಾನಮುಪವೀತಂ ಚ ವಾಸುಕಿಂ ॥ ೪೫ ॥

ಕೃತ್ವಾ ಭ್ರಮತಿ ಚಾನೇನ ರೂಪೇಣ ಚ ಸದಾ ಕ್ಷಿತೌ ।
ನಗ್ನೋ ಗಣಪರೀವಾರೋ ಭೂತಸಂಘೈರನೇಕಶಃ ॥ ೪೬ ॥

ತ್ರಿಣೇತ್ರಶ್ಚ ತ್ರಿಶೂಲೀ ಚ ಗೀತನೃತ್ಯರತಸ್ಸದಾ ।
ಕುತ್ಸಿತಾನಿ ತಥಾನ್ಯಾನಿ ಸದಾ ಕುರ್ವೀತ ತೇ ಪತಿಃ ॥ ೪೭ ॥

ತ್ರಪಾಕರಂ ಭವೇನ್ಮಹ್ಯಂ ದೇವಾನಾಂ ಸನ್ನಿಧೌ ಕಥಂ ।
ಯಾದೃಗ್ವಾ ವಸನಂ ತಸ್ಯ ಕೇತನಂ ಪ್ರತಿ ನಾರ್ಹತಿ ॥ ೪೮ ॥

ಏತೈರ್ದೋಷೈರ್ಮಯಾ ವತ್ಸೇ ಲೋಕಾನಾಂ ಚೈವ ಲಜ್ಜಯಾ ।
ನಾಹ್ವಾನಾಂ ತು ಕೃತಂ ತಸ್ಯ ಕಾರಣೇನ ಮಯಾ ಶುಭೇ ॥ ೪೯ ॥

---

೪೫-೪೬. ಸೊಂಟದಲ್ಲಿ ಗೋನಸವೆಂಬ ಹಾವನ್ನು ಕಟ್ಟಿಕೊಂಡು ಇರು ತ್ತಾನೆ, ಗುರುತಿಗೋಸ್ಕರ ಅಂತಹ ಹಾವನ್ನು ಬಹುವಾಗಿ ಕಟ್ಟಿಕೊಂಡಿರುವನು, ಸರ್ಪ ಗಳಿಗೆ ಅಧಿಪತಿಯಾದ ವಾಸುಕಿಯನ್ನು ಜನಿವಾರವನ್ನಾಗಿ ಹಾಕಿಕೊಂಡಿದ್ದಾನೆ, ಈ ರೀತಿಯಾದ ವೇಷವನ್ನು ಹಾಕಿಕೊಂಡು ಯಾವಾಗಲೂ ಲೋಕದಲ್ಲಿ ಸುತ್ತುತ್ತಿರು ತ್ತಾನೆ, ಬೆತ್ತಲೆ ಇದ್ದುಕೊಂಡು ಗಣಗಳನ್ನು ಜೊತೆಯಲ್ಲಿ ಕಟ್ಟಿಕೊಂಡು, ಭೂತಗಳ ಗುಂಪಿನಿಂದ ಕೂಡಿಕೊಂಡು ಸುತ್ತುತ್ತಿರುತ್ತಾನೆ.

೪೭. ಅವನಿಗೆ ಮೂರು ಕಣ್ಣು, ಯಾವಾಗಲೂ ಕೈಯಲ್ಲಿ ತ್ರಿಶೂಲವಿರು ವುದು, ಯಾವಾಗಲೂ ಕುಣಿತಗಳಲ್ಲೇ ಆಸಕ್ತನು, ಇವಲ್ಲದೆ ಅನೇಕವಾದ ಅಯೋಗ್ಯ ವಾದ ಕೆಲಸಗಳನ್ನೇ ನಿನ್ನ ಗಂಡನು ಮಾಡುತ್ತಿರುವನು.

೪೮. ಯಾವ ಬಟ್ಟೆಯು ಮನೆಗೆ ಯೋಗ್ಯವಲ್ಲವೋ ಅದನ್ನೇ ಹೊದ್ದಿರು ತ್ತಾನೆ, ಇವೆಲ್ಲವೂ ಕೂಡ ಈ ದೇವತೆಗಳು ಬಂದಿರುವಾಗ ನನ್ನನ್ನು ನಾಚಿಕೆಗೆ ಗುರಿ ಮಾಡುವುದಿಲ್ಲವೇ?

೪೯. ಅವನಲ್ಲಿ ಈ ದೋಷಗಳಿರುವುದರಿಂದಲೂ, ಲೋಕದಲ್ಲಿ ಇವರಿಂದ ನನಗೆ ನಾಚಿಕೆಯಾಗುವುದರಿಂದಲೂ, ಈ ಕಾರಣಗಳಿಂದ ಅವನನ್ನು ನಾನು ಕರೆಯಲಿಲ್ಲವಮ್ಮಾ.

ಯಜ್ಞಸ್ಯಾಸ್ಯ ಸಮಾಪ್ತೌ ಚ ಪೂಜಾಂ ಕೃತ್ವಾ ತ್ವಯಾ ಸಹ ।
ಆನಯಿಷ್ಯಾಮಿ ಭರ್ತಾರಂ ತ್ವಯಾ ಸಹ ತ್ರಿಲೋಚನಂ ॥ ೫೦ ॥

ತ್ರೈಲೋಕ್ಯಾಭ್ಯಧಿಕಾಂ ಪೂಜಾಂ ಕರಿಷ್ಯಾಮಿ ಚ ಸತ್ಕೃತಃ ।
ಏತತ್ತೇ ಸರ್ವಮಾಖ್ಯಾತಂ ತ್ರಪಾಯಾಃ ಕಾರಣಂ ಮಹತ್ ॥ ೫೧ ॥

ನಾತ್ರ ಮನ್ಯುಸ್ತ್ವಯಾ ಕಾರ್ಯಃ ಸರ್ವಸ್ವಂ ಭಾಗಮರ್ಹಸಿ ।
ಅನ್ಯಜನ್ಮನಿ ಯದ್ಯೇನ ಯಾದೃಕ್ಕರ್ಮ ಪುರಾ ಕೃತಂ ॥ ೫೨ ॥

ಇಹ ಜನ್ಮನಿ ಸ ತಾದೃಕ್ಫಲಂ ಭುನಕ್ತಿ ಪುತ್ರಿಕೇ ।
ಪರಿತಾಪಂ ಮಾ ಕೃಥಾಸ್ತ್ವಂ ಫಲಂ ಭುಂಕ್ಷ್ವ ಯಥಾಕೃತಂ ॥ ೫೩ ॥

ಪ್ರಿಯಂ ವರಕೃತಾಂ ದೃಷ್ಟ್ವಾ ರೂಪಸೌಭಾಗ್ಯಶೋಭನಾಂ ।
ರೂಪಂ ಚ ಕೀರ್ತಿಸ್ಸೌಭಾಗ್ಯಂ ರಮ್ಯಾಣ್ಯಾಭರಣಾನಿ ಚ ॥ ೫೪ ॥

ಕುಲೇ ಮಹತಿ ವೈ ಜನ್ಮ ವಪುಶ್ಚಾತೀವ ಸುಂದರಂ ।
ಪೂರ್ವಭಾಗ್ಯೈಸ್ತು ಲಭ್ಯಂತೇ ನರೈರೇತಾನಿ ಸುವ್ರತೇ ॥ ೫೫ ॥

---

೫೦. ಈ ಯಜ್ಞವು ಮುಗಿದ ಮೇಲೆ ನಿಮ್ಮ ಬಳಿಗೆ ಬಂದು ನಿನ್ನ ಗಂಡನನ್ನು ಗೌರವಿಸಿ, ನಿನ್ನೊಡನೆ ಆತನನ್ನೂ ಗೌರವಿಸುತ್ತೇನೆ

೫೧. ಮೂರು ಲೋಕಕ್ಕಿಂತಲೂ ಉತ್ಕೃಷ್ಟವಾದ ರೀತಿಯಲ್ಲಿ ನಿಮ್ಮನ್ನು ಗೌರವಿಸಿ ಪೂಜಿಸುತ್ತೇನೆ, ಇದೇನೆ ನಾಚಿಕೆಗೆ ದೊಡ್ಡ ಕಾರಣವು, ನಿನಗೆ ತಿಳಿಸಿದ್ದೇನೆ

೫೨. ಈ ವಿಷಯದಲ್ಲಿ ನೀನು ಕೋಪಮಾಡಬೇಡ, ಎಲ್ಲಾ ವಿಷಯದಲ್ಲೂ ನಿನಗೆ ಭಾಗವನ್ನು ಕೊಡುತ್ತೇನೆ.

೫೩. ಎಲೈ ಮಗಳೇ, ಹಿಂದಿನ ಜನ್ಮದಲ್ಲಿ ಯಾವನು ಯಾವ ಕರ್ಮವನ್ನು ಮಾಡಿರುತ್ತಾನೋ ಅವನು ಅಂತಹ ಫಲವನ್ನು ಈ ಜನ್ಮದಲ್ಲಿ ಅನುಭವಿಸುತ್ತಾನೆ.

೫೪. ನೀನು ಮಾಡಿದ ಕರ್ಮಫಲವನ್ನು ಅನುಭವಿಸಬೇಕು, ವರನಲ್ಲಿರುವ ಸ್ಥಿತಿಯನ್ನು ನೋಡಿ ದುಃಖಿಸಬೇಡ.

೫೫. ರೂಪು, ಕೀರ್ತಿ, ಸೌಭಾಗ್ಯ, ರಮ್ಯವಾದ ಒಡವೆಗಳು, ಉತ್ಕೃಷ್ಟವಾದ ವಂಶದಲ್ಲಿ ಜನ್ಮ, ಸುಂದರವಾದ ದೇಹ ಇವನ್ನು ಮನುಜರು ಪೂರ್ವಪುಣ್ಯ-ಭಾಗ್ಯದಿಂದ ಹೊಂದುತ್ತಾರೆ.

ಮಾತ್ಮಾನಂ ಪರಿನಿಂದೇಥಾ ಮಾ ಚ ಭಾಗ್ಯಾನಿ ಶೋಭನೇ ।
ಪೂರ್ವಕರ್ಮಫಲಂ ಭುಂಕ್ತೇ ದಾತುಂ ಕಸ್ಯ ಕುತಃ ಕ್ಷಮಃ ॥ ೫೬ ॥

ನಾಸ್ತಿ ವೈ ಬಲವಾನ್ಕಶ್ಚಿನ್ನ ಶೂರೋ ನ ಚ ಪಂಡಿತಃ ।
ಪಾಂಡಿತ್ಯಂ ಚ ಬಲಂ ಚೈವ ಜಾಯತೇ ಪೂರ್ವಕರ್ಮಣಃ ॥ ೫೭ ॥

ಏತೇ ದೇವಾ ದಿವಂ ಪ್ರಾಪ್ತಾಃ ಶೋಭಮಾನಾಃ ಸ್ಥಿತಾಶ್ಚಿರಂ ।
ಬ್ರಹ್ಮಾ ವಿಷ್ಣುಶ್ಚ ಭಗವಾನಿಂದ್ರಾದ್ಯಾಶ್ಚ ಸುರಾ ಅಪಿ ॥ ೫೮ ॥

ಪುಣ್ಯೇನ ತಪಸಾ ಚೈವ ಕ್ಷೇತ್ರೇಷು ವಿವಿಧೇಷು ಚ ।
ಯದೇಭಿರರ್ಜಿತಂ ಪುಣ್ಯಂ ತಸ್ಯೈತೇ ಫಲಭಾಗಿನಃ ॥ ೫೯ ॥

ಏವಮುಕ್ತ್ವಾ ತತಸ್ತಾ ತು ಸತೀ ಭೀಷ್ಮ ಶುಚಾನ್ವಿತಾ ।
ವಿನಿಂದಮಾನಾ ಪಿತರಂ ಕ್ರೋಧೇನಾರುಣಿತೇಕ್ಷಣಾ ॥ ೬೦ ॥

---

೫೬. ಅಮ್ಮಾ ಮಗಳೇ, ನೀನು ನಿನ್ನನ್ನು ನಿಂದಿಸಿಕೊಳ್ಳಬೇಡ. ನಿನ್ನ ಭಾಗ್ಯವನ್ನೂ ನಿಂದಿಸಿಕೊಳ್ಳಬೇಡ, ಮನುಷ್ಯನು ಪೂರ್ವದ ಕರ್ಮಫಲವನ್ನೇ ಅನುಭವಿಸುತ್ತಾನೆ, ಯಾವನಿಗೆ ಯಾವನು ಏನನ್ನೂ ಕೊಡಲು ಸಮರ್ಥನಲ್ಲ.

೫೭. ಬಲಿಷ್ಠನು ಒಬ್ಬನೂ ಇಲ್ಲ, ಶೂರನೂ ಇಲ್ಲ, ಪಂಡಿತನೂ ಇಲ್ಲ. ಪಾಂಡಿತ್ಯವಾಗಲಿ ಬಲವಾಗಲಿ ಪೂರ್ವ ಕರ್ಮದಿಂದಲೇ ಉಂಟಾಗುತ್ತದೆ.

೫೮-೫೯. ಈ ದೇವತೆಗಳು ಸ್ವರ್ಗವನ್ನು ಹೊಂದಿದ್ದಾರೆ, ಅಲ್ಲಿ ಪ್ರಕಾಶಿಸುತ್ತಾ ಬಹಳ ಕಾಲದಿಂದಿದ್ದಾರೆ, ಬ್ರಹ್ಮ, ವಿಷ್ಣು, ಇಂದ್ರಾದಿ ದೇವತೆಗಳೂ ಕೂಡ ನಾನಾ ವಿಧವಾದ ಕ್ಷೇತ್ರಗಳಲ್ಲಿ ಮಾಡಿದ ಪುಣ್ಯಕರವಾದ ತಪಸ್ಸಿನಿಂದ ಯಾವ ಪುಣ್ಯವನ್ನು ಮಾಡಿದ್ದಾರೆಯೋ ಅದರ ಫಲವನ್ನು ಅನುಭವಿಸುತ್ತಿದ್ದಾರೆ.

೬೦. ತಂದೆಯು ಹೀಗೆ ಹೇಳಲು, ಎಲೈ ಭೀಷ್ಮನೇ, ಯೋಗ್ಯಳಾದ ಸತೀದೇವಿಯು ಕೋಪದಿಂದ ಕಣ್ಣುಗಳನ್ನು ಕೆಂಪಗೆಮಾಡಿಕೊಂಡು ತಂದೆಯನ್ನು ನಿಂದಿಸಿದಳು.

॥ ಸತ್ಯುವಾಚ ॥

ಏವಮೇತದ್ಯಥಾ ತಾತ ತ್ವಯಾ ಚೋಕ್ತಂ ಮಮಾಗ್ರತಃ ।
ಸರ್ವೋ ಜನಃ ಪುಣ್ಯಭಾಗೀ ಪುಣ್ಯೇನ ಲಭತೇ ಶ್ರಿಯಂ ॥ ೬೧ ॥

ಪುಣ್ಯೇನ ಲಭತೇ ಜನ್ಮ ಪುಣ್ಯೇ ಭೋಗಾಃ ಪ್ರತಿಷ್ಠಿತಾಃ ।
ಸ ಏವ ಜಗತಾಮೀಶಃ ಸರ್ವೇಷಾಮುತ್ತಮೋ ಮತಃ ॥ ೬೨ ॥

ಸ್ಥಾನಾನ್ಯೇತಾನಿ ಸರ್ವೇಷಾಂ ದತ್ತಾನ್ಯೇತಾನಿ ಧೀಮತಾ ।
ಯೇ ಗುಣಾಸ್ತಸ್ಯ ದೇವಸ್ಯ ವಕ್ತುಂ ಜಿಹ್ವಾಪಿ ವೇಧಸಃ ॥ ೬೩ ॥

ನ ಶಕ್ತಾ ಖ್ಯಾಪನೇ ತಸ್ಯ ದೇವಸ್ಯ ಪರಮೇಷ್ಠಿನಃ ।
ಭಸ್ಮಾಸ್ಥಿ ಚ ಕಪಾಲಾನಿ ಶ್ಮಶಾನೇ ವಸತಿಶ್ಚ ಯಾ ॥ ೬೪ ॥

ದ್ಯೋತಮಾನಾಶ್ಚ ವೈ ಸರ್ಪಾಃ ಪಿಶಾಚಾ ಗುಹ್ಯಕಾಸ್ತಥಾ ।
ರತ್ನಾನಾಂ ಭೂಷಣಾನಾಂ ಚ ಸ್ಥಾನಾನಾಂ ಪ್ರಭುರೀಶ್ವರಃ ॥ ೬೫ ॥

---

೬೧. ಸತಿಯು ಹೇಳಿದಳು :— ಎಲೈ ತಂದೆಯೇ ಪುಣ್ಯಕ್ಕೆ ಭಾಗಿಯಾಗಿರುವವರೆಲ್ಲರೂ ಪುಣ್ಯದಿಂದಲೇ ಸಂಪತ್ತನ್ನು ಹೊಂದುತ್ತಾರೆಂದು ನನ್ನ ಎದುರಿಗೆ ನೀನು ಹೇಳಿದೆಯಲ್ಲ, ಇದೆಲ್ಲವೂ ಸರಿಯೆ.

೬೨. ಪುಣ್ಯದಿಂದ ಉತ್ತಮಜನ್ಮವನ್ನು ಹೊಂದುತ್ತಾನೆ, ಪುಣ್ಯದಲ್ಲಿಯೇ ಭೋಗಗಳೂ ನೆಲೆಮಾಡಿಕೊಂಡಿವೆ. ಆ ಈಶ್ವರನಾದವನೋ ಜಗತ್ತಿಗೆಲ್ಲಕ್ಕೂ ಒಡೆಯನು. ಎಲ್ಲರಿಗಿಂತಲೂ ಉತ್ತಮನೆಂಬುದಾಗಿ ಗಣಿಸಲ್ಪಟ್ಟಿದ್ದಾನೆ.

೬೩. ಬ್ರಹ್ಮ, ವಿಷ್ಣು, ಇಂದ್ರಾದಿಗಳೆಲ್ಲರಿಗೂ ಆ ಈಶ್ವರನೇ ಸ್ಥಾನಗಳನ್ನು ಕೊಟ್ಟಿದ್ದಾನೆ ಆ ಸ್ವಾಮಿಯಾದ, ಎಲ್ಲರಿಗಿಂತಲೂ ಉಚ್ಚಸ್ಥಾನದಲ್ಲಿರುವ ಈಶ್ವರನ ಗುಣಗಳನ್ನೆಲ್ಲಾ ಹೇಳಲು ಬ್ರಹ್ಮನ ನಾಲಿಗೆಯೂ ಕೂಡ ಸಮರ್ಥವಾಗಲಾರದು.

೬೪-೬೫. ಬೂದಿ, ಕಪಾಲ, ಸ್ಮಶಾನದಲ್ಲಿ ವಾಸ, ಹೆಟ್ಟಿಕೊಂಡಿರುವ ಈ ಸರ್ಪಗಳು, ಪಿಶಾಚಿಗಳು, ಗುಹ್ಯಕರು, ರತ್ನಗಳು, ಒಡವೆಗಳು, ಸ್ಥಾನಗಳು ಇವೆಲ್ಲಕ್ಕೂ ಆ ಈಶ್ವರನೇ ಒಡೆಯನು.

ಏಷ ಧಾತಾ ವಿಧಾತಾ ಚ ಏಷ ಪಾಲಯಿತಾ ದಿಶಃ ।
ಪ್ರಸಾದೇನ ಚ ರುದ್ರಸ್ಯ ಪ್ರಾಪ್ತಸ್ಸ್ವರ್ಗಂ ಪುರಂದರಃ ॥ ೬೬ ॥

ಅನುಜ್ಞಯಾ ಚ ರುದ್ರಸ್ಯ ಸೃಷ್ಟಿಂ ಬ್ರಹ್ಮಾ ಚಕಾರ ಹ ।
ಕಾ ಶಕ್ತಿಃ ಪಾಲನೇ ವಿಷ್ಣೋರ್ವರಾಕಸ್ಯೇಹ ದೃಶ್ಯತೇ ॥ ೬೭ ॥

ಪ್ರಭುತ್ವೇ ತು ಗುಣೋತ್ಕರ್ಷೇ ಕೋ ರುದ್ರಸ್ಯಾಧಿಕಸ್ಸ್ಮೃತಃ ।
ಏತನ್ಮತ್ವಾ ತು ವಿಭುನಾ ಸ್ವಯಂ ದೇವೇನ ಶಂಭುನಾ ॥ ೬೮ ॥

ಜಗತ್ಯಸ್ಮಿನ್ಸ್ಥಿತೇರರ್ಥೇ ಧಾತ್ರೀ ಚೈಷಾ ನಿವೇಶಿತಾ ।
ಯದಿ ರುದ್ರೇಽಸ್ತಿ ದೇವತ್ವಂ ಯದಿ ಸರ್ವಗತಶ್ಶಿವಃ ॥ ೬೯ ॥

ಸತ್ಯೇನಾನೇನ ತೇ ಯಜ್ಞಂ ವಿಧ್ವಂಸಯತು ಶಂಕರಃ ।
ಯದ್ಯಸ್ತಿ ಮೇ ತಪಃ ಕಿಂಚಿತ್ಕಶ್ಚಿದ್ಧರ್ಮೋಽಥವಾ ಕೃತಃ ॥ ೭೦ ॥

---

೬೬. ಈ ಈಶ್ವರನೇ ಕಾಪಾಡತಕ್ಕವನು, ಆತನೇ ಕೊಡತಕ್ಕವನು, ಈತನೇ ದಿಕ್ಕುಗಳನ್ನು ಕಾಪಾಡತಕ್ಕವನು, ಆ ಇಂದ್ರನೂ ಕೂಡ ಈ ರುದ್ರನ ಅನುಗ್ರಹ ದಿಂದಲೇ ಸ್ವರ್ಗವನ್ನು ಹೊಂದಿದ್ದಾನೆ.

೬೭. ಈ ರುದ್ರನ ಒಪ್ಪಿಗೆಯಿಂದಲೇ ಬ್ರಹ್ಮನು ಸೃಷ್ಟಿಯನ್ನು ಮಾಡುತ್ತಾನೆ ಈ ರುದ್ರನ ಕೃಪೆಯಿಲ್ಲದಿದ್ದರೆ ಈ ಬಲಹೀನನಾದ ವಿಷ್ಣುವಿಗೆ ಪ್ರಪಂಚವನ್ನು ಕಾಪಾಡುವುದಕ್ಕೆ ಶಕ್ತಿ ಎಲ್ಲಿಂದ ಬಂದಿತು ?

೬೮. ಪ್ರಭುತ್ವದಲ್ಲಿಯೂ ಅಧಿಕಗುಣದಲ್ಲಿಯೂ ರುದ್ರನಿಗಿಂತಲೂ ಹೆಚ್ಚಿ ನವನು ಯಾವನಿದ್ದಾನೆ ? ಇದನ್ನು ತಿಳಿದೇ ವಿಭುವಾದ ಶಂಭುವು ಈ ಪ್ರಪಂಚವು ನಿಲ್ಲುವುದಕ್ಕೋಸ್ಕರ ಭೂಮಿಯನ್ನು ಇಟ್ಟಿದ್ದಾನೆ.

೬೯. ರುದ್ರನಲ್ಲಿ ದೇವತ್ವವಿದ್ದು, ಅವನು ಎಲ್ಲಾ ಕಡೆಯಲ್ಲಿಯೂ ಇರುವವ ನಾದರೆ ಆ ಸತ್ಯದಿಂದಲೇ ರುದ್ರನು ನಿನ್ನ ಈ ಯಜ್ಞವನ್ನು ನಾಶಮಾಡಲಿ.

೭೦. ನನ್ನಲ್ಲಿ ತಪಸ್ಸೇನಾದರೂ ಇದ್ದರೆ, ನಾನೇನಾದರೂ ಧರ್ಮವನ್ನು ಮಾಡಿ ದ್ದರೆ ಆ ಫಲದಿಂದ ನಿನ್ನ ಯಜ್ಞವು ನಾಶವಾಗಲಿ.

**ಫಲೇನ ತಸ್ಯ ಧರ್ಮಸ್ಯ ಯಜ್ಞಸ್ತೇ ನಾಶಮೃಚ್ಛತು ।**
**ಪ್ರಿಯಾಹಂ ಯದಿ ದೇವಸ್ಯ ಯದಿ ಮಾಂ ತಾರಯಿಷ್ಯತಿ ।**
**ತೇನ ಯಜ್ಞೋ ನ ತೇ ಗನ್ತಾ ಸಮಾಪ್ತಿಮಿಹ ಕರ್ಹಿಚಿತ್ ॥ ೨೦ ॥**

**ಇತ್ಯುಕ್ತ್ವಾ ಯೋಗಮಾಸ್ಥಾಯ ಸ್ವದೇಹೋದ್ಭವತೇಜಸಾ ॥ ೨೧ ॥**

**ನಿರ್ದಹನ್ತೀ ತದಾತ್ಮಾನಂ ಸದೇವಾಸುರಪನ್ನಗೈಃ ।**
**ಕಿಂ ಕಿಮೇತದಿತಿಪ್ರೋಕ್ತಂ ಗಂಧರ್ವಗಣಗುಹ್ಯಕೈಃ ॥ ೨೩ ॥**

**ಗಂಗಾಕೂಲೇ ತದಾ ಮುಕ್ತಂ ದೇಹಂ ವೈ ಕ್ರುದ್ಧಯಾ ತಯಾ ।**
**ಮಲ್ಲಕಂ ನಾಮ ತತ್ತೀರ್ಥಂ ಗಂಗಾಯಾಃ ಪಶ್ಚಿಮೇ ತಟೇ ॥ ೨೪ ॥**

**ಶ್ರುತ್ವಾ ರುದ್ರಸ್ತು ವೃತ್ತಾಂತಂ ಪತ್ನ್ಯಾ ನಾಶೇನ ದುಃಖಿತಃ ।**
**ಹನ್ತುಂ ಯಜ್ಞಂ ವೀರಭದ್ರೋ ದೇವಾನಾಮಿಹ ಪಶ್ಯತಾಂ ॥ ೨೫ ॥**

೨೦. ನಾನು ಆ ರುದ್ರನಿಗೆ ಹೆಂಡತಿಯಾಗಿದ್ದರೆ, ಅವನು ನನ್ನನ್ನು ಉದ್ಧಾರ ಮಾಡುವುದಾಗಿದ್ದರೆ ಅದರಿಂದಲೇ ನಿನ್ನ ಯಜ್ಞವು ಕೊನೆಯನ್ನು ಮುಟ್ಟಬೇಡ.

೨೧-೨೩. ಆ ಸತಿಯು ಹೀಗೆಂದು ಹೇಳಿ, ಯೋಗವನ್ನು ಧರಿಸಿ ತನ್ನ ದೇಹದಿಂದ ಹುಟ್ಟಿದ ಬೆಂಕಿಯಿಂದಲೇ ದೇಹವನ್ನು ಸುಟ್ಟುಕೊಳ್ಳುತ್ತಿರಲು ದೇವತೆಗಳು, ಅಸುರರು, ಪನ್ನಗರು, ಗಂಧರ್ವರು, ಗುಹ್ಯಕರು ಇವರೆಲ್ಲರೂ ಇದೇನು ? ಇದೇನು ಎನ್ನುತ್ತಿದ್ದರು.

೨೪. ಕೋಪಗೊಂಡ ಆ ಸತೀದೇವಿಯು ತನ್ನ ಆ ದಕ್ಷಬ್ರಹ್ಮನ ಸಂಬಂಧವಾದ ದೇಹವನ್ನು ಅಲ್ಲಿಯೇ ಗಂಗೆಯ ದಡದಲ್ಲಿ ತ್ಯಜಿಸಿದಳು. ಗಂಗೆಯ ಪಶ್ಚಿಮ ದಡದಲ್ಲಿ ಆಕೆಯು ದೇಹವನ್ನು ಬಿಟ್ಟ ಜಾಗವು ಮಲ್ಲಕತೀರ್ಥವೆಂಬ ಹೆಸರನ್ನು ಹೊಂದಿತು.

೨೫. ಈ ಸಮಾಚಾರವನ್ನು ರುದ್ರನು ಕೇಳಿ, ಹೆಂಡತಿಯ ಸಾವಿನಿಂದ ದುಃಖಗೊಂಡು, ಆ ಯಜ್ಞವನ್ನು ದೇವತೆಗಳೆದುರಿಗೆ ನಾಶಮಾಡಲು ವೀರಭದ್ರನಿಗೆ ಹೇಳಿದನು.

ಗಣಕೋಟಿಃ ಸಮಾದಿಷ್ಟಾ ಗ್ರಹಾ ವೈನಾಯಕಾಸ್ತಥಾ ।
ಭೂತಪ್ರೇತಪಿಶಾಚಾಶ್ಚ ದಕ್ಷಯಜ್ಞವಿನಾಶನೇ ॥ ೭೬ ॥

ಪ್ರೇಷಿತಾಸ್ತೇ ಚ ರುದ್ರೇಣ ತಸ್ಯ ಯಜ್ಞಕ್ಷಯಾಯ ಹಿ ।
ತೈರ್ಗತ್ವಾ ವಿಬುಧಾಸ್ಸರ್ವೇ ಯಜ್ಞೇ ನಿರ್ಜಿತ್ಯ ನಾಶಿತಾಃ ॥ ೭೭ ॥

ಹತೇ ಯಜ್ಞೇ ತದಾ ದಕ್ಷೋ ನಿರುತ್ಸಾಹೋ ನಿರುದ್ಯಮಃ ।
ಉಪಗಮ್ಯಾಬ್ರವೀದ್ದಕ್ಷೋ ದೇವದೇವಂ ಪಿನಾಕಿನಂ ॥ ೭೮ ॥

॥ ದಕ್ಷ ಉವಾಚ ॥

ನ ಜ್ಞಾತೋಽಸಿ ಮಯಾ ದೇವ ದೇವಾನಾಂ ಪ್ರಭುರೀಶ್ವರಃ
ತ್ವಮಸ್ಯ ಜಗತೋಽಧೀಶಃ ಸುರಾಸ್ಸರ್ವೇ ತ್ವಯಾ ಜಿತಾಃ ॥ ೭೯ ॥

ಕೃಪಾಂ ಕುರು ಮಹೇಶಾನ ಗಣಾನ್ಸರ್ವಾನ್ನಿವರ್ತಯ ।
ಗಣೈರ್ನಾನಾವಿಧೈರ್ದೇವ ನಾನಾಭೂಷಣಭೂಷಿತೈಃ ॥ ೮೦ ॥

---

೭೬-೭೭. ವೀರಭದ್ರನೇ ಮುಂತಾದ ಗಣಗಳನ್ನೂ, ವೈನಾಯಕ ಗ್ರಹಗಳನ್ನೂ, ಭೂತಪ್ರೇತ ಪಿಶಾಚಗಳನ್ನೂ, ದಕ್ಷಯಜ್ಞವನ್ನು ನಾಶಮಾಡುವುದಕ್ಕೋಸ್ಕರಲೂ ಮತ್ತು ಆ ದಕ್ಷನನ್ನು ಕೊಲ್ಲುವುದಕ್ಕೂ ರುದ್ರನು ಕಳುಹಿಸಿದನು. ಅವರೆಲ್ಲರೂ ಹಾಗೆಯೇ ಹೋಗಿ ಆ ಯಜ್ಞದಲ್ಲಿದ್ದವರನ್ನೆಲ್ಲಾ ಜಯಿಸಿ ಯಜ್ಞವನ್ನು ನಾಶಮಾಡಿದರು.

೭೮. ಯಜ್ಞವೆಲ್ಲವೂ ನಾಶವಾಗಲು ದಕ್ಷಬ್ರಹ್ಮನು ಉತ್ಸಾಹವಿಲ್ಲದವನೂ ಉದ್ಯೋಗರಹಿತನೂ ಆಗಿ ದೇವದೇವನಾದ ಈಶ್ವರನ ಬಳಿಗೆ ಹೋಗಿ ಇಂತೆಂದನು.

೭೯. ದಕ್ಷನು ಹೇಳಿದನು:—ಎಲೈ ಪ್ರಭುವೇ, ನೀನು ದೇವತೆಗಳಿಗೆಲ್ಲಾ ಒಡೆಯನು, ಈಶ್ವರನು. ನೀನೇ ಈ ಪ್ರಪಂಚಕ್ಕೆಲ್ಲಾ ಒಡೆಯನು, ದೇವತೆಗಳೆಲ್ಲರನ್ನೂ ನೀನು ಜಯಿಸಿದ್ದೀಯೆ.

೮೦. ನಾನಾಬಗೆಯಾಗಿರುವ, ಬಗೆಬಗೆಯಾದ ಅಲಂಕಾರಗಳನ್ನು ಹೊಂದಿರುವ ಗಣಗಳೆಲ್ಲವೂ ಯಜ್ಞವನ್ನು ನಾಶಮಾಡುತ್ತಿವೆ, ಎಲೈ ಈಶನೇ ಕೃಪೆಮಾಡು ಈ ಗಣಗಳನ್ನೆಲ್ಲಾ ಹಿಂತಿರುಗಿಸು.

**ನಾನಾವದನದಂತೋಷ್ಠೈರ್ನಾನಾಪ್ರಹರಣೋದ್ಯತೈಃ ।**
**ನಾನಾನಾಗೇಂದ್ರಸಂದರ್ಶಜಟಾಭಾರೋಪಶೋಭಿತೈಃ ॥ ೮೧ ॥**

**ಮತ್ಯಾ ಸ್ವಯೋದ್ವೃತ್ತದರ್ಪೈರ್ಘೋರೈರ್ಘೋರೈರವಿಘ್ನಾತಿಭಿಃ ।**
**ಕಾಮರೂಪೈರಕಾಮ್ಯೈಶ್ಚ ಸರ್ವಕಾಮಸಮನ್ವಿತೈಃ ॥ ೮೨ ॥**

**ಅನಿವಾರ್ಯಬಲೈಶ್ಚೈವ ಯೋಗಿಭಿರ್ಯೋಗಗಾಮಿಭಿಃ ।**
**ವ್ಯಾಲೋಲಕೇಸರಸಟಾದಂಷ್ಟ್ರೋತ್ಕಟಹಠೋದ್ಭಟೈಃ ॥ ೮೩ ॥**

**ಕರೀಂದ್ರಕರಟಾಟೋಪಸಾಟನ್ಯೈಃ ಸಿಂಹದೇಹಿಭಿಃ ।**
**ಕೈಶ್ಚಿತ್ಪಟುಮದಾಘ್ರಾಣಪೂರ್ಣಧ್ಯಾನಘನಪ್ರಭೈಃ ॥ ೮೪ ॥**

**ವಿಚಿತ್ರಚಿತ್ರವಸನೈರ್ವೀರಧೀರರವಾದಿಭಿಃ ।**
**ಮೃಗವ್ಯಾಘ್ರಸಿಂಹರುತೈಸ್ತರಕ್ಷಾಜಿನಧಾರಿಭಿಃ । ॥ ೮೫ ॥**

೮೧. ಬಗೆಬಗೆಯಾದ ಮುಖವೂ ಹಲ್ಲೂ, ತುಟಿಗಳೂ ಉಳ್ಳ, ನಾನಾವಿಧವಾದ ಹೊಡೆತಗಳನ್ನು ಹೊಡೆಯುತ್ತಿರುವ, ಸರ್ಪರಾಜರುಗಳಂತೆ ಕಾಣುತ್ತಿರುವ, ಜಟೆಗಳಿಂದ ಕೂಡಿರುವ ಈ ಗಣಗಳನ್ನು ನಿವಾರಿಸು.

೮೨. ತಮ್ಮ ಬುದ್ಧಿಯಿಂದಲೇ ಅಗಾಧವಾದ ಹೆಮ್ಮೆಯನ್ನು ಹೊಂದಿರುವ, ಘೋರವಾದ ವಿಘ್ನಗಳನ್ನು ಮಾಡುವ, ಇಷ್ಟವಾದ ರೂಪಗಳನ್ನು ಹೊಂದುವ, ಆಪಾದಹಿತವಾದ, ಸಕಲವಾದ ಇಷ್ಟಗಳಿಂದ ಕೂಡಿರುವ ಈ ಗಣಗಳನ್ನು ನಿವಾರಿಸು.

೮೩. ಇತರರಿಂದ ತಡೆಯಲು ಆಗದಷ್ಟಿರುವ ಬಲವುಳ್ಳ, ಯೋಗಿಗಳಾದ, ಯೋಗವನ್ನು ಹೊಂದಿರುವ, ಜೋಲಾಡುತ್ತಿರುವ ಕೇಸರದ ಜಟೆಗಳುಳ್ಳ, ಕ್ರೂರವಾದ ಕೋರೆದಾಡೆಗಳುಳ್ಳ, ಆ ಗಣಗಳನ್ನು ನಿವಾರಿಸು.

೮೪. ಆನೆಗಳ ಕುಂಭಸ್ಥಳವನ್ನು ನಾಶಮಾಡುವ ಸಿಂಹದ ದೇಹವನ್ನು ಹೊಂದಿರುವ, ಮದೋದಕದ ವಾಸನೆಯಿಂದ ಕೂಡಿರುವ, ಏಕಾಗ್ರತೆಯಿಂದ ಬಹುವಾದ ಪರಾಕ್ರಮವುಳ್ಳ ಆ ಗಣಗಳನ್ನು ನಿವಾರಿಸು.

೮೫. ಬಗೆಬಗೆಯಾದ ಬಣ್ಣದ ಬಟ್ಟೆಗಳನ್ನು ಹೊದ್ದಿರುವ, ವೀರರ ಗಂಭೀರ ಧ್ವನಿಯುಳ್ಳ, ಮೃಗ, ಹುಲಿ, ಸಿಂಹಗಳ ಗರ್ಜನೆಯುಳ್ಳ, ಹುಲಿಯ ಚರ್ಮವನ್ನು ಹೊದ್ದಿರುವ ಆ ಗಣಗಳನ್ನು ನಿವಾರಿಸು

**ಭುಜಂಗಹಾರಧವಲಕೃತಯಜ್ಞೋಪವೀತಕೈಃ ।**
**ಶೂಲಾಸಿಪಟ್ಟಿಶಧರೈಃ ಪರಶುಪಾಶಹಸ್ತಕೈಃ ॥ ೮೬ ॥**

**ಶಸ್ತ್ರಕ್ರಕಚಕೋದಂಡಚಂಡದಂಡಾಸ್ತ್ರಧಾರಿಭಿಃ ।**
**ಗದಾಮುದ್ಗರಪಾಷಾಣಮುಸಲಾಲಾತಹಸ್ತಕೈಃ ॥ ೮೭ ॥**

**ವಜ್ರಶಕ್ತ್ಯಶನಿಪ್ರಾಸಕುಂತಕರ್ತರ್ಕಧಾರಿಭಿಃ ।**
**ಗಣೇಶ್ವರೈಃ ಸುದುರ್ಧರ್ಷೈರ್ವೃತಸ್ಸೂರ್ಯೋ ಗ್ರಹೈರಿವ ॥ ೮೮ ॥**

**ಏತಾನ್ನಿವಾರಯೋದ್ದೇವೋ ನಷ್ಟೋ ಯಜ್ಞೋ ದಿವಂ ಗತಃ ।**
**ಮೃಗರೂಪಧರೋ ಭೂತ್ವಾ ಭಯಭೀತಸ್ತು ಶಂಕರ ॥ ೮೯ ॥**

**ನಮಶ್ಶಂಖಾಭದೇವಾಯ ಸಗಣಾಯ ಸನಂದಿನೇ ।**
**ವೃಷಾಸನಾಯ ಸೋಮಾಯ ಶೂಲಶಕ್ತ್ಯೃಷ್ಟಿಧಾರಿಣೇ ॥ ೯೦ ॥**

---

೮೬. ಸರ್ಪಗಳ ಹಾರವುಳ್ಳ, ಬೆಳ್ಳಗಿರುವ ಯಜ್ಞೋಪವೀತವನ್ನು ಹಾಕಿಕೊಂಡಿರುವ, ತ್ರಿಶೂಲ, ಕತ್ತಿ, ಗದೆಗಳನ್ನು ಧರಿಸಿರುವ, ಕೊಡಲಿ, ಹಗ್ಗಗಳನ್ನು ಹಿಡಿದಿರುವ ಆ ಗಣಗಳನ್ನು ನಿವಾರಿಸು.

೮೭. ಶಸ್ತ್ರಗಳು. ಗರಗಸ, ಬಿಲ್ಲು, ಭಯಂಕರ ದೊಣ್ಣೆಗಳು. ಅಸ್ತ್ರಗಳು ಇವನ್ನು ಹಿಡಿದಿರುವ. ಗದೆ, ಮುದ್ಗರ, ಕಲ್ಲು, ಮುಸಲ, ಕೊಳ್ಳಿಗಳನ್ನು ಹಿಡಿದಿರುವ ಈ ಗಣಗಳನ್ನು ನಿವಾರಿಸು.

೮೮. ವಜ್ರಾಯುಧ, ಶಕ್ತ್ಯಾಯುಧ, ಅಶನಿ, ಪ್ರಾಸ, ಕುಂತ, ಕತ್ತರಿಸುವ ಕತ್ತಿ ಮುಂತಾದವುಗಳನ್ನು ಧರಿಸಿರುವ, ತಡೆಯಲು ಅಸಾಧ್ಯವಾದ ಗಣಗಳು ನನ್ನ ಯಜ್ಞವನ್ನು, ಗ್ರಹಗಳು ಸೂರ್ಯನನ್ನು ಆಕಾಶದಲ್ಲಿ ಆವರಿಸುವಂತೆ ಆವರಿಸಿಕೊಂಡಿವೆ, ಅವನ್ನು ನಿವಾರಿಸು.

೮೯. ಇಂತಹ ಇವರೆಲ್ಲರನ್ನೂ ಹಿಂದಕ್ಕೆ ಕರೆದುಕೋ. ಎಲೈ ಶಂಕರನೇ ಯಜ್ಞವು ಭಯದಿಂದ ಹೆದರಿ ಜಿಂಕೆಯ ರೂಪವನ್ನು ಹೊಂದಿ ಸ್ವರ್ಗಕ್ಕೆ ಹೊರಟು ಹೋಯಿತು.

೯೦. ಶಂಖದಂತೆ ಕಾಂತಿಯುಳ್ಳ ದೇವನಿಗೆ ನಮಸ್ಕಾರವು, ಗಣಗಳೊಡನೆಯೂ, ನಂದಿಯೊಡನೆಯೂ ಕೂಡಿರುವ, ವೃಷಭವಾಹನನಾದ, ಚಂದ್ರಧಾರಿಯಾದ, ಶೂಲ, ಶಕ್ತಿ ಋಷ್ಟಿಗಳನ್ನು ಧರಿಸಿರುವ ಸ್ವಾಮಿಯೇ, ನಿನಗೆ ನಮಸ್ಕಾರವು.

ನಮೋ ದಿಕ್ಚರ್ಮವಸ್ತ್ರಾಯ ಯಶಸೇ ತೀವ್ರರೇತಸೇ ।
ಬ್ರಹ್ಮಣೇ ಬ್ರಹ್ಮದೇವಾಯ ಬ್ರಾಹ್ಮಣಾಯಾಜಿತಾಯ ಚ ॥ ೯೧ ॥

ನಮೋಂಧಕವಿನಾಶಾಯ ಕ್ರತುವಲ್ಕಲಧಾರಿಣೇ ।
ರುದ್ರಾಯ ಪ್ರತಿವಜ್ರಾಯ ಶಿವಾಯ ಕ್ರಥನಾಯ ಚ ॥ ೯೨ ॥

ಗಿರೀಶಾಯ ಸುರೇಶಾಯ ಈಶಾನಾಯ ನಮೋ ನಮಃ ।
ಧೂಮ್ರೋಗ್ರಾಯ ವಿರೂಪಾಯ ಗದಿನೇ ದಿವ್ಯರೂಪಿಣೇ ॥ ೯೩ ॥

ಸುರಾಸುರಾಧಿಪತಯೇ ಯತೀನಾಂ ಪತಯೇ ನಮಃ ।
ದೇವದೇವಾಧಿದೇವಾಯ ವ್ಯಾಘ್ರಚರ್ಮಾಸಿಧಾರಿಣೇ ॥ ೯೪ ॥

ವಿರೂಪಾಕ್ಷಶುಭಾಕ್ಷಾಯ ಸಹಸ್ರಾಕ್ಷಾಯ ತೇ ನಮಃ ।
ಈಶಾನಾಯ ವಿಶಾಲಾಯ ತ್ರಿನೇತ್ರಾಯ ಚ ಧನ್ವಿನೇ ॥ ೯೫ ॥

---

೯೧. ದಿಗಂಬರನಾದ ಸ್ವಾಮಿಯೇ, ನಿನಗೆ ನಮಸ್ಕಾರವು. ಯಶಸ್ವಿಯೂ, ಒಪುಬಲವೂ ಇರುವ ಸ್ವಾಮಿಯೇ ನಿನಗೆ ನಮಸ್ಕಾರವು. ಬ್ರಹ್ಮನೂ, ಬ್ರಹ್ಮದೇವನೂ ಆದ, ಬ್ರಾಹ್ಮಣನೂ ಜಯಿಸಲು ಅಶಕ್ತನೂ ಆದ ಸ್ವಾಮಿಗೆ ನಮಸ್ಕಾರವು.

೯೨. ಅಂಧಕಾಸುರಸಂಹಾರಿಯಾದ, ಯಾಗಧಾರಿಯಾದ, ನಾರುಬಟ್ಟೆಯನ್ನು ಧರಿಸಿರುವ, ರುದ್ರನಾದ, ವಜ್ರಾಯುಧಕ್ಕೆ ಪ್ರತಿಯಾದ ಶಕ್ತಿಯುಳ್ಳ, ಮಂಗಳಕರನಾದ, ಎಲ್ಲವನ್ನೂ ನಾಶಮಾಡುವ ಆ ಸ್ವಾಮಿಯಾದ ನಿನಗೆ ನಮಸ್ಕಾರವು.

೯೩. ಗಿರಿಗಳಿಗೆ ಈಶನಾದ, ಸುರರಿಗೆ ಒಡೆಯನಾದ ಇಷ್ಟಾರ್ಥಗಳನ್ನು ಕೊಡುವ ನಿನಗೆ ನಮಸ್ಕಾರವು. ಧೂಮವರ್ಣವುಳ್ಳ, ಉಗ್ರನಾದ, ಲೋಕವಿಲಕ್ಷಣವಾದ ರೂಪವುಳ್ಳ, ಗದೆಯನ್ನು ಹೊಂದಿರುವ, ದಿವ್ಯರೂಪವನ್ನೂ ಹೊಂದಿರುವ ನಿನಗೆ ನಮಸ್ಕಾರವು

೯೪. ದೇವದಾನವರಿಗೆ ಒಡೆಯನಾದ, ಯತಿಗಳಿಗೆ ಅಧಿಪತಿಯಾದ, ದೇವತೆಗಳಿಗೂ ದೇವನಾದ ವ್ಯಾಘ್ರಚರ್ಮವನ್ನು ಹೊದೆದಿರುವ, ಕತ್ತಿಯನ್ನು ಹಿಡಿದಿರುವ ನಿನಗೆ ನಮಸ್ಕಾರವು.

೯೫. ವಿರೂಪಾಕ್ಷನಾದ, ಒಳ್ಳೆಯ ಕಣ್ಣುಳ್ಳ, ಸಾವಿರ ಕಣ್ಣುಗಳುಳ್ಳ ನಿನಗೆ ನಮಸ್ಕಾರವು. ಈಶಾನನಾದ, ವಿಶಾಲನಾದ, ಮುಕ್ಕಣ್ಣನಾದ, ಧನುಸ್ಸನ್ನು ಹಿಡಿದಿರುವ ನಿನಗೆ ನಮಸ್ಕಾರವು.

ವರ್ಷಾಹತಾಯ ದೇವಾಯ ಸರ್ವಸಂಹಾರಿಣೇ ನಮಃ ।
ಭಕ್ತಾನುಕಂಪಿನೇ ತುಭ್ಯಂ ರುದ್ರಜಾಪ್ಯಸ್ತುತಾಯ ಚ ॥ ೯೬ ॥

ವಿರೂಪಾಯ ಸ್ವರೂಪಾಯ ರೂಪಾಣಾಂ ಶತಧಾರಿಣೇ ।
ಪಂಚಾಸ್ಯಾಯ ಶುಭಾಸ್ಯಾಯ ಚಂದ್ರಾಸ್ಯಾಯ ನಮೋ ನಮಃ ॥ ೯೭ ॥

ವರದಾಯ ವರಾರ್ಹಾಯ ಮೃಗಾಯ ಕೂರ್ಮಧಾರಿಣೇ ।
ನೀಲಾಲಕಶಿಖಂಡಾಯ ಕಮಂಡಲುಧರಾಯ ಚ ॥ ೯೮ ॥

ವಿಶ್ವನಾಮ್ನೇ ಚ ವಿಶ್ವಾಯ ವಿಶ್ವೇಶಾಯ ನಮೋ ನಮಃ ।
ತ್ರಿನೇತ್ರ ತ್ರಾಣಮಸ್ಮಾಕಂ ತ್ರಿಪುರಘ್ನ ವಿಧೀಯತಾಂ ॥ ೯೯ ॥

ವಾಙ್ಮನಃಕಾಯಭಾವೈಸ್ತ್ವಾಂ ಪ್ರಪನ್ನೋಽಸ್ಮಿ ಮಹೇಶ್ವರಃ ।
ಏವಂ ಸ್ತುತಸ್ತದಾ ದೇವೋ ದಕ್ಷೇಣಾಪನ್ನದೇಹಿನಾ ॥ ೧೦೦ ॥

---

೯೬. ಕೊಬ್ಬಿದವರನ್ನು ನಾಶಮಾಡುವ, ದೇವನಾದ, ಎಲ್ಲವನ್ನೂ ಸಾಂ ಮಾಡುವ ನಿನಗೆ ನಮಸ್ಕಾರವು. ಭಕ್ತರಿಗೆ ದಯೆ ತೋರಿಸುವ ರುದ್ರರಲ್ಲಿ ಸ್ತೋತ್ರ ಮಾಡಲ್ಪಟ್ಟಿರುವ ನಿನಗೆ ನಮಸ್ಕಾರವು.

೯೭. ವಿರೂಪನಾದ, ಒಳ್ಳೆಯ ರೂಪನೂ ಆದ, ಅನೇಕ ರೂಪಗಳನ್ನು ಧರಿಸಿರುವ ನಿನಗೆ ನಮಸ್ಕಾರವು. ಐದು ಮುಖವುಳ್ಳ, ಶುಭವಾದ ಮುಖವುಳ್ಳ. ಚಂದ್ರನಂತೆ ಮುಖವುಳ್ಳ ನಿನಗೆ ನಮಸ್ಕಾರವು.

೯೮. ವರವನ್ನು ಕೊಡತಕ್ಕ, ವರಕ್ಕೆ ಅರ್ಹನಾದ, ಮೃಗವನ್ನು ಧರಿಸಿರುವ, ಆಮೆಯ ಅವತಾರಿಯಾದ, ಕಪ್ಪಾದ ಕೂದಲನ್ನ ಮುಂದಲೆಯಲ್ಲಿ ಹೊಂದಿರುವ, ಕಮಂಡಲುವನ್ನು ಹಿಡಿದಿರುವ ನಿನಗೆ ನಮಸ್ಕಾರವು.

೯೯. ಅನೇಕವಾದ ಹೆಸರಗಳುಳ್ಳ, ಪ್ರಪಂಚಸ್ವರೂಪನಾದ, ಎಲ್ಲಕ್ಕೂ ಒಡೆಯನಾದ ನಿನಗೆ ನಮಸ್ಕಾರವು. ಮೂರು ಕಣ್ಣುಳ್ಳ, ತ್ರಿಪುರಗಳನ್ನು ನಾಶಮಾಡಿದ ಎಲೈ ಸ್ವಾಮಿಯೇ, ನೀನೇ ನಮಗೆ ರಕ್ಷಕನು.

೧೦೦. ಮನಸ್ಸು, ಮಾತು ದೇಹಗಳಿಂದ ಎಲೈ ಮಹೇಶ್ವರನೇ, ನಿನ್ನನ್ನು ಶರಣುಹೊಂದಿದ್ದೇನೆ ಎಂಬುದಾಗಿ ಕಷ್ಟವನ್ನು ಹೊಂದಿರುವ ಆ ದಕ್ಷನು ಈಶ್ವರನನ್ನು ಸ್ತುತಿಸಿದನು.

ದಿವ್ಯೇನಾನೇನ ಸ್ತೋತ್ರೇಣ ಭೃಶಮಾರಾಧಿತಸ್ತದಾ
ಸಮಗ್ರಂ ತೇ ಯಜ್ಞಫಲಂ ಮಯಾ ದತ್ತಂ ಪ್ರಜಾಪತೇ　　॥ ೧೦೧ ॥

ಸರ್ವಕಾಮಾರ್ಥಸಿದ್ಧ್ಯರ್ಥಂ ಯಜ್ಞಂ ಪ್ರಾಪ್ಸ್ಯಸಿ ಚೋತ್ತಮಂ ।
ಏವಮುಕ್ತೋ ಭಗವತಾ ಪ್ರಣಮ್ಯಾಶು ಸುರೇಶ್ವರಂ　　॥ ೧೦೨ ॥

ಜಗಾಮ ಸ್ವಂ ನಿಕೇತಂ ತು ಗಣಾನಾಮೇವ ಪಶ್ಯತಾಂ ।
ಪತ್ನ್ಯಾಃ ಶೋಕೇನ ವೈ ದೇವೋ ಗಂಗಾದ್ವಾರೇ ತದಾ ಸ್ಥಿತಃ　　॥ ೧೦೩ ॥

ತಾಂ ಸತೀಂ ಚಿಂತಯಾನಸ್ತು ಕ್ವ ನು ಸಾ ಮೇ ಪ್ರಿಯಾ ಗತಾ ।
ತಸ್ಯ ಶೋಕಾಭಿಭೂತಸ್ಯ ನಾರದೋಽಭವತ್ಸಂನಿಧೌ　　॥ ೧೦೪ ॥

॥ ನಾರದ ಉವಾಚ ॥

ಯಾ ಸಾ ಸತೀ ತೇ ದೇವೇಶ ಭಾರ್ಯಾ ಪ್ರಾಣಸಮಾ ಮೃತಾ ।
ಹಿಮವದ್ದುಹಿತಾ ಸಾ ಚ ಮೇನಾಗರ್ಭಸಮುದ್ಭವಾ　　॥ ೧೦೫ ॥

---

೧೦೧. ಈರೀತಿಯಾದ ದಿವ್ಯವಾದ ಸ್ತೋತ್ರದಿಂದ ಸ್ತುತಿಸಲ್ಪಟ್ಟು, ಆ ಈಶ್ವರನು ದಕ್ಷನಿಗೆ ಎಲೈ ಪ್ರಜಾಪತಿಯೇ, ನಿನಗೆ ನಾನು ನಿನ್ನ ಯಜ್ಞದ ಸಂಪೂರ್ಣವಾದ ಫಲವನ್ನು ಕೊಟ್ಟಿದ್ದೇನೆ ಎಂದು ಹೇಳಿದನು.

೧೦೨. ಅಲ್ಲದೆ ಸರ್ವ ಇಷ್ಟಗಳನ್ನೂ ಸಿದ್ಧಿಸುವಂತಹ ಉತ್ತಮವಾದ ಯಜ್ಞವನ್ನು ಹೊಂದುತ್ತೀಯೆ ಎಂದೂ ಹೇಳಿದನು. ಹೀಗೆ ಆ ಸ್ವಾಮಿಯು ಹೇಳಲು ಆ ಸ್ವಾಮಿಯನ್ನು ದಕ್ಷನು ನಮಸ್ಕರಿಸಿದನು.

೧೦೩. ಹಾಗೆ ನಮಸ್ಕರಿಸಿ ದಕ್ಷಪ್ರಜಾಪತಿಯು ಎಲ್ಲಾ ಗಣಗಳೂ ನೋಡುತ್ತಿರುವಂತೆಯೇ ತನ್ನ ಮನೆಗೆ ಹೋದನು. ಆ ಈಶ್ವರನೂ ಕೂಡ ಹೆಂಡತಿಯ ದುಃಖದಿಂದ ಗಂಗಾದ್ವಾರದಲ್ಲಿಯೇ ನಿಂತನು.

೧೦೪. ನನ್ನ ಪ್ರೀತಿಪಾತ್ರಳಾದ ಆ ಸತಿಯು ಎಲ್ಲಿಹೋದಳು ಎಂದು ಆ ಸತೀದೇವಿಯನ್ನೇ ಚಿಂತಿಸುತ್ತಿರುವ ಆ ಸ್ವಾಮಿಯ ಹತ್ತಿರಕ್ಕೆ ನಾರದನು ಬಂದನು.

೧೦೫. ನಾರದನು ಹೇಳಿದನು : ನಿನ್ನ ಪ್ರಾಣಪ್ರಿಯಳಾದ ಆ ಸತೀದೇವಿಯು ಎಲೈ ಸ್ವಾಮಿಯೇ, ಹಿಮವಂತನಿಗೆ ಮಗಳಾಗಿ ಮೇನೆಯ ಗರ್ಭದಲ್ಲಿ ಹುಟ್ಟಿದ್ದಾಳೆ.

ಜಗ್ರಾಹ ದೇಹಮನ್ಯಂ ಸಾ ಲೋಕತತ್ವಾರ್ಥವೇದಿನೀ ।
ಶ್ರುತ್ವಾ ದೇವಸ್ತದಾ ಧ್ಯಾನಮವತೀರ್ಣಾಮಪಶ್ಯತ ॥ ೧೦೬ ॥

ಕೃತಕೃತ್ಯಮಥಾತ್ಮಾನಂ ಕೃತ್ವಾ ದೇವಸ್ತದಾಸ್ಥಿತಃ ।
ಸಂಪ್ರಾಪ್ತಯೌವನಾ ದೇವೀ ಪುನರೇವ ವಿವಾಹಿತಾ ॥ ೧೦೭ ॥

ಏವಂ ಮಯಾ ತೇ ಕಥಿತಂ ಯಥಾ ಯಜ್ಞೋ ಹತಃ ಪುರಾ ॥ ೧೦೮ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಪುಲಸ್ತ್ಯ
ಸಹಿತಾಯಾಂ ದಕ್ಷಯಜ್ಞವಿಧ್ವಂಸನಂ ನಾಮ
ಪಂಚಮೋಽಧ್ಯಾಯಃ

---

೧೦೬. ಲೋಕದಲ್ಲಿರುವ ತತ್ವಗಳನ್ನು ಬಲ್ಲ ಆಕೆಯು ಬೇರೆಯ ದೇಹವನ್ನು ಹೊಂದಿದ್ದಾಳೆ ಎಂಬುದನ್ನು ಕೇಳಿ ಈಶ್ವರನು ಧ್ಯಾನದಿಂದ ಆಕೆಯು ಹುಟ್ಟಿರುವುದನ್ನು ತಿಳಿದನು.

೧೦೭. ಆಗ ಸ್ವಾಮಿಯು ತನ್ನ ಕೆಲಸವು ನೆರವೇರಿತೆಂದು ತಿಳಿದುಕೊಂಡನು. ಮತ್ತು ಆಕೆಗೆ ಯೌವನವು ಬರಲು ಮತ್ತೆ ಆಕೆಯನ್ನು ಮದುವೆಯಾದನು.

೧೦೮. ಈರೀತಿಯಾಗಿ ಪೂರ್ವದಲ್ಲಿ ದಕ್ಷಬ್ರಹ್ಮನ ಯಜ್ಞವು ನಾಶವಾದ ರೀತಿಯನ್ನು ನಿನಗೆ ಹೇಳಿರುತ್ತೇನೆ.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ದಕ್ಷಯಜ್ಞವಿಧ್ವಂಸನವೆಂಬ
ಐದನೆಯ ಅಧ್ಯಾಯವು ಮುಗಿದುದು



॥ ಶ್ರೀಃ ॥

---

# ಅಥ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## ಷಷ್ಠೋಽಧ್ಯಾಯಃ

---

॥ ಭೀಷ್ಮ ಉವಾಚ ॥

ದೇವಾನಾಂ ದಾನವಾನಾಂ ಚ ಗಂಧರ್ವೋರಗರಕ್ಷಸಾಂ ।
ಉತ್ಪತ್ತಿಂ ವಿಸ್ತರೇಣೇಮಾಂ ಗುರೋ ಬ್ರೂಹಿ ಯಥಾ ವಿಧಿ ॥ ೧ ॥

॥ ಪುಲಸ್ತ್ಯ ಉವಾಚ ॥

ಸಂಕಲ್ಪಾದ್ದರ್ಶನಾತ್ಸ್ಪರ್ಶಾತ್ಸರ್ವೇಷಾಂ ಸೃಷ್ಟಿರುಚ್ಯತೇ ।
ದಕ್ಷಾತ್ಪ್ರಾಚೇತಸಾದೂರ್ಧ್ವಂ ಪ್ರಜಾ ಮೈಥುನಸಂಭವಾಃ ॥ ೨ ॥

ಯಥಾ ಸಸರ್ಜ ಚೈವಾದೌ ತಚ್ಚೈವ ಶೃಣು ಕೌರವ ।
ಯದಾ ತು ಸೃಜತಸ್ತಸ್ಯ ದೇವರ್ಷಿಗಣಪನ್ನಗಾನ್ ॥ ೩ ॥

---

## ಆರನೆಯ ಅಧ್ಯಾಯವು.

೧. ಭೀಷ್ಮನು ಕೇಳಿದನು:--ಎಲೈ ಗುರುವೇ, ದೇವತೆಗಳು, ದಾನವರು, ಗಂಧರ್ವರು, ರಾಕ್ಷಸರು, ಇವರ ಉತ್ಪತ್ತಿಯನ್ನು ಕ್ರಮವಾಗಿ ವಿಸ್ತಾರವಾಗಿ ನನಗೆ ಹೇಳು.

೨. ಪುಲಸ್ತ್ಯನು ಹೇಳಿದನು:—ದಕ್ಷಪ್ರಜಾಪತಿಗಿಂತಲೂ ಹಿಂದೆ ಸಂಕಲ್ಪದಿಂದಲೂ ನೋಟದಿಂದಲೂ ಮುಟ್ಟುವಿಕೆಯಿಂದಲೂ, ಪ್ರಜೆಗಳು ಸೃಷ್ಟಿಸಲ್ಪಟ್ಟರು. ಅವನಿಗಿಂತ ಈಚೆಗೆ ಗಂಡ ಹೆಂಡಿರು ಸೇರಿ ಮೈಥುನ ಮಾಡುವುದರಿಂದ ಹುಟ್ಟಿದರು.

೩-೪. ಪೂರ್ವದಲ್ಲಿ ಪ್ರಪಂಚವನ್ನು ಯಾವರೀತಿಯಾಗಿ ಸೃಷ್ಟಿಸಿದನೆಂಬುದನ್ನು ಹೇಳುತ್ತೇನೆ ಕೇಳು ದಕ್ಷಬ್ರಹ್ಮನು, ದೇವತೆಗಳು, ಋಷಿಗಳು, ಸರ್ಪಗಳು,

ನ ವೃದ್ಧಿಮಗಮಲ್ಲೋಕಸ್ತದಾ ಮೈಥುನಯೋಗತಃ ।
ದಕ್ಷಃ ಪುತ್ರಸಹಸ್ರಾಣಿ ಅಸಿಕ್ನ್ಯಾಮಜೀಜನತ್ ॥ ೪ ॥

ತಾಂಸ್ತು ದೃಷ್ಟ್ವಾ ಮಹಾಭಾಗ ಸಿಸೃಕ್ಷೂನ್ವಿವಿಧಾಃ ಪ್ರಜಾಃ ।
ನಾರದಃ ಪ್ರಾಹ ಹರ್ಯಶ್ವಾನ್ದಕ್ಷಪುತ್ರಾನ್ಸಮಾಗತಾನ್ ॥ ೫ ॥

॥ ನಾರದ ಉವಾಚ ॥

ಭುವಃ ಪ್ರಮಾಣಂ ಸರ್ವತ್ರ ಜ್ಞಾತ್ವೋರ್ಧ್ವಮಧ ಏವ ವಾ ।
ತತಸ್ಸೃಷ್ಟಿಂ ವಿಶೇಷೇಣ ಕುರುಧ್ವಮೃಷಿಸತ್ತಮಾಃ ॥ ೬ ॥

ತೇ ತು ತದ್ವಚನಂ ಶ್ರುತ್ವಾ ಪ್ರಯಾತಾಃ ಸರ್ವತೋ ದಿಶಂ ।
ಅದ್ಯಾಪಿ ನ ನಿವರ್ತಂತೇ ಸಮುದ್ರಾದಿವ ಸಿಂಧವಃ ॥ ೭ ॥

ಹರ್ಯಶ್ವೇಷು ಪ್ರಣಷ್ಟೇಷು ಪುನರ್ದಕ್ಷಃ ಪ್ರಜಾಪತಿಃ ।
ವೀರಿಣ್ಯಾಮೇವ ಪುತ್ರಾಣಾಂ ಸಹಸ್ರಮಸೃಜತ್ಪ್ರಭುಃ ॥ ೮ ॥

---

ಇವರನ್ನು ಸೃಷ್ಟಿಸಲು ಲೋಕಗಳು ಪೂರ್ತಿಯಾಗಲಿಲ್ಲ. ಆಗ ದಕ್ಷಬ್ರಹ್ಮನು ಅಸಿಕ್ನಿಯಲ್ಲಿ ಮೈಥುನದಿಂದ ಸಾವಿರಜನ ಮಕ್ಕಳನ್ನು ಸೃಷ್ಟಿಮಾಡಿದನು.

೫. ದಕ್ಷಬ್ರಹ್ಮನಿಂದುತ್ಪನ್ನರಾದ ಸಾವಿರ ಮಕ್ಕಳು ಹರ್ಯಶ್ವರೆಂದು ಪ್ರಸಿದ್ಧರಾಗಿ ಅವರೂ ಕೂಡ ಪ್ರಜೆಗಳನ್ನು ಸೃಷ್ಟಿಮಾಡಲು ಯತ್ನಿಸಿದರು. ಆಗ ಅವರನ್ನು ನೋಡಿ ನಾರದನು ಇಂತೆಂದನು.

೬. ನಾರದನು ಹೇಳಿದನು:—ಎಲೈ ಋಷಿಶ್ರೇಷ್ಠರೇ, ಭೂಮಿಯ ಅಗಲ, ಉದ್ದ, ಎತ್ತರಗಳನ್ನು ಎಲ್ಲಾಕಡೆಯಲ್ಲಿಯೂ ತಿಳಿದು, ಆಮೇಲೆ ಹೆಚ್ಚಿಗೆ ಸೃಷ್ಟಿಯನ್ನು ಮಾಡಿರಿ.

೭. ಅವರು ಆ ಮಾತನ್ನು ಕೇಳಿ ಭೂಮಿಯನ್ನು ನೋಡಲು ಎಲ್ಲಾಕಡೆಗೂ ಹೊರಟರು. ಸಮುದ್ರಕ್ಕೆ ಹೋಗುತ್ತಿರುವ ನದಿಗಳು ಹೇಗೆ ಹಿಂತಿರುಗುವುದಿಲ್ಲವೋ ಹಾಗೆ ಅವರು ಇದುವರೆಗೂ ಹಿಂತಿರುಗಲಿಲ್ಲ.

೮. ದಕ್ಷಪ್ರಜಾಪತಿಯು ಹರ್ಯಶ್ವರು ಬಾರದುದನ್ನು ತಿಳಿದು ಮತ್ತೆ ವೀರಿಣಿ ಎಂಬುವಳಲ್ಲಿ ಸಾವಿರ ಮಕ್ಕಳನ್ನು ಸೃಷ್ಟಿಸಿದನು.

**ಶಬಲಾ ನಾಮ ತೇ ವಿಪ್ರಾಃ ಸಮೇತಾಃ ಸೃಷ್ಟಿಕರ್ಮಣಿ ।**
**ನಾರದೋಽನುಗತಾನ್ಪ್ರಾಹ ಪುನಸ್ತಾನ್ಪೂರ್ವವನ್ಮುನಿಃ ॥ ೯ ॥**

**॥ ನಾರದ ಉವಾಚ ॥**

**ಭುವಃ ಪ್ರಮಾಣಂ ಸರ್ವತ್ರ ಜ್ಞಾತ್ವಾ ಭ್ರಾತೄಂಸ್ತಥೈವ ಚ ।**
**ಆಗತ್ಯ ಚ ಪುನಸ್ಸೃಷ್ಟಿಂ ಕರಿಷ್ಯಥ ವಿಶೇಷತಃ ॥ ೧೦ ॥**

**ತೇಽಪಿ ತೇನೈವ ಮಾರ್ಗೇಣ ಜಗ್ಮುರ್ಭ್ರಾತೄನ್ಯಥಾ ತದಾ ।**
**ತತಃ ಪ್ರಭೃತಿ ನ ಭ್ರಾತುಃ ಕನೀಯಾನ್ಮಾರ್ಗಮಿಚ್ಛತಿ ॥ ೧೧ ॥**

**ಅನ್ವೇಷದುಃಖಮಾಪ್ನೋತಿ ತೇನ ತತ್ಪರಿವರ್ಜಯೇತ್ ।**
**ತತಸ್ತೇಷ್ವಪಿ ನಷ್ಟೇಷು ಷಷ್ಟಿಂ ಕನ್ಯಾಃ ಪ್ರಜಾಪತಿಃ ॥ ೧೨ ॥**

**ವೀರಿಣ್ಯಾಂ ಜನಯಾಮಾಸ ದಕ್ಷಃ ಪ್ರಾಚೇತಸಸ್ತದಾ ।**
**ಪ್ರಾದಾತ್ಸ ದಶ ಧರ್ಮಾಯ ಕಶ್ಯಪಾಯ ತ್ರಯೋದಶ ॥ ೧೩ ॥**

---

೯. ಅವರೆಲ್ಲರಿಗೂ ಶಬಳರೆಂದು ಹೆಸರು. ಅವರೆಲ್ಲರೂ ಸೃಷ್ಟಿಯಲ್ಲಿ ತೊಡಗಲು, ನಾರದನು ಅವರನ್ನು ಕುರಿತು ಮತ್ತೆ ಇಂತೆಂದನು.

೧೦. ನಾರದನು ಹೇಳಿದನು:—ಎಲ್ಲಾ ಕಡೆಯಲ್ಲಿಯೂ ಹೋಗಿ ಭೂಮಿಯ ಪ್ರಮಾಣವನ್ನೂ, ನಿಮ್ಮ ಸಹೋದರರ ವಿಚಾರವನ್ನೂ ತಿಳಿದುಬಂದು ಅನಂತರ ಹೆಚ್ಚಿಗೆ ಸೃಷ್ಟಿಯನ್ನು ಮಾಡಿರಿ.

೧೧. ಆ ಶಬಳರೂ, ಅಣ್ಣಂದಿರು ಹೋದಮಾರ್ಗದಲ್ಲಿಯೇ ಹೋದರು. ಆಗಿನಿಂದ ಮೊದಲುಗೊಂಡು ಚಿಕ್ಕವರು ದೊಡ್ಡವರು ಹೋದ ಮಾರ್ಗದಲ್ಲಿಯೇ ಹೋಗುವುದಿಲ್ಲ. ಅಂದು ಮೊದಲುಗೊಂಡು ದೊಡ್ಡವರು ಚಿಕ್ಕವರು ಹೋದರೆ ದುಃಖಿಗಳಾಗುತ್ತಾರೆ. ಆದ್ದರಿಂದ ಹೀಗೆ ಹೋಗಬಾರದು.

೧೨. ಹಾಗೆ ಆ ಶಬಳರು ನಾಶವಾಗಲು ಆ ದಕ್ಷಬ್ರಹ್ಮನು ಅರವತ್ತು ಜನ ಹೆಣ್ಣು ಮಕ್ಕಳುಗಳನ್ನು ವೀರಿಣಿಯಲ್ಲಿ ಹುಟ್ಟಿಸಿದನು.

೧೩-೧೫. ಆ ಅರವತ್ತು ಜನರಲ್ಲಿ ಹತ್ತು ಜನರನ್ನು ಧರ್ಮನಿಗೂ, ಹದಿಮೂರು ಜನರನ್ನು ಕಶ್ಯಪನಿಗೂ, ಇಪ್ಪತ್ತೇಳು ಜನರನ್ನು ಸೋಮನಿಗೂ, ನಾಲ್ವರನ್ನು

ಸಪ್ತವಿಂಶತಿಂ ಸೋಮಾಯ ಚತಸ್ರೋಽರಿಷ್ಟನೇಮಿನೇ ।
ದ್ವೇ ಚೈವ ಭೃಗುಪುತ್ರಾಯ ದ್ವೇ ಕೃಶಾಶ್ವಾಯ ಧೀಮತೇ ॥ ೧೪ ॥

ದ್ವೇ ವೈ ಚಾಂಗಿರಸೇ ಪ್ರಾದಾತ್ತಾಸಾಂ ನಾಮಾನಿ ವಿಸ್ತರಾತ್ ।
ಶೃಣುಷ್ವ ದೇವಮಾತೄಣಾಂ ಪ್ರಜಾವಿಸ್ತಾರಮಾದಿತಃ ॥ ೧೫ ॥

ಅರುಂಧತೀ ವಸುರ್ಜಾಮೀ ಲಂಬಾ ಭಾನುರ್ಮರುತ್ವತೀ ।
ಸಂಕಲ್ಪಾ ಚ ಮುಹೂರ್ತಾ ಚ ಸಾಧ್ಯಾ ವಿಶ್ವಾ ಚ ಭಾವಿತಾ ॥ ೧೬ ॥

ಧರ್ಮಪತ್ನ್ಯಸ್ಸಮಾಖ್ಯಾತಾಸ್ತಾಸಾಂ ಪುತ್ರಾನ್ನಿಬೋಧ ಮೇ ।
ವಿಶ್ವೇದೇವಾಸ್ತು ವಿಶ್ವಾಯಾಂ ಸಾಧ್ಯಾ ಸಾಧ್ಯಾನಜೀಜನತ್ ॥ ೧೭ ॥

ಮರುತ್ವತ್ಯಾಂ ಮರುತ್ವಂತೋ ವಸೋಸ್ತು ವಸವಸ್ಸ್ಮೃತಾಃ ।
ಭಾನೋಸ್ತು ಭಾನವೋ ಜಾತಾ ಮುಹೂರ್ತಾಯಾಂ ಮುಹೂರ್ತಜಾಃ ।

ಲಂಬಾಯಾಂ ಘೋಷನಾಮಾನೋ ನಾಗವೀಥೀ ತು ಜಾಮಿಜಾ ।
ಪೃಥಿವೀತಳಸಂಭೂತಮರುಂಧತ್ಯಾಂ ವ್ಯಜಾಯತ ॥ ೧೯ ॥

---

ಅರಿಷ್ಟನೇಮಿಗೂ, ಇಬ್ಬರನ್ನು ಶುಕ್ರನಿಗೂ, ಇಬ್ಬರನ್ನು ಕೃಶಾಶ್ವನಿಗೂ, ಇಬ್ಬರನ್ನು ಆಂಗಿರಸನಿಗೂ ಕೊಟ್ಟನು. ಅವರ ಹೆಸರನ್ನು ವಿಸ್ತಾರವಾಗಿ ಹೇಳುತ್ತೇನೆ. ಅವರೆಲ್ಲರೂ ದೇವತೆಗಳ ತಾಯಿಯರು ಕೇಳು.

೧೬. ಅರುಂಧತೀ, ವಸು, ಜಾಮಿ, ಲಂಬಾ, ಭಾನು, ಮರುತ್ವತೀ, ಸಂಕಲ್ಪಾ ಮುಹೂರ್ತಾ, ಸಾಧ್ಯಾ, ವಿಶ್ವಾ, ಎಂಬುದಾಗಿ ಹತ್ತುಜನರು ಧರ್ಮ ಪತ್ನಿಯರು ಅವರ ಮಕ್ಕಳನ್ನು ಹೇಳುತ್ತೇನೆ ಕೇಳು.

೧೭. ವಿಶ್ವೆಯು ವಿಶ್ವೇದೇವರನ್ನೂ ಸಾಧ್ಯೆಯು ಸಾಧ್ಯರನ್ನೂ ಹೆತ್ತರು.

೧೮. ಮರುತ್ವತಿಯಲ್ಲಿ ಮರುತ್ವಂತರೂ, ವಸುವಿನಲ್ಲಿ ವಸುಗಳೂ, ಭಾನುವಿನಲ್ಲಿ ಭಾನುಗಳೂ, ಮುಹೂರ್ತೆಯಲ್ಲಿ ಮುಹೂರ್ತಜರೂ, ಲಂಬೆಯಲ್ಲಿ ಘೋಷರೂ, ಜಾಮಿಯಲ್ಲಿ ನಾಗವೀಥಿಯೂ, ಅರುಂಧತಿಯಲ್ಲಿ ಪೃಥಿವೀತಳರೂ. ಹುಟ್ಟಿದರು.

೧೯. ಸಂಕಲ್ಪೆಯಲ್ಲಿ ಸಂಕಲ್ಪರೂ ಹುಟ್ಟಿದರು. ವಸುವಿನ ಸೃಷ್ಟಿಯನ್ನು ಹೇಳುವೆನು ಕೇಳು.

ಸಂಕಲ್ಪಾಯಾಂ ತು ಸಂಕಲ್ಪಾ ವಸೋಽಸ್ಸೃಷ್ಟಿಂ ನಿಬೋಧ ಮೇ ।
ಜ್ಯೋತಿಷ್ಮಂತಸ್ತು ಯೇ ದೇವಾ ವ್ಯಾಪಕಾಸ್ಸರ್ವತೋ ದಿಶಂ ॥ ೨೦ ॥

ವಸವಸ್ತೇ ಸಮಾಖ್ಯಾತಾಸ್ತೇಷಾಂ ನಾಮಾನಿ ವೈ ಶೃಣು ।
ಆಪೋ ಧ್ರುವಶ್ಚ ಸೋಮಶ್ಚ ಧರಶ್ಚೈವಾನಿಲೋಽನಲಃ ॥ ೨೧ ॥

ಪ್ರತ್ಯೂಷಶ್ಚ ಪ್ರಭಾಸಶ್ಚ ವಸವೋಽಷ್ಟೌ ಪ್ರಕೀರ್ತಿತಾಃ ।
ಆಪಸ್ಯ ಪುತ್ರಾಶ್ಚತ್ವಾರಃ ಶಾಂತೋ ವೈತಂಡ ಏವ ಚ ॥ ೨೨ ॥

ಶಾಂಬೋಽಥ ಮುನಿಬಭ್ರುಶ್ಚ ಯಜ್ಞರಕ್ಷಾಧಿಕಾರಿಣಃ ।
ಧ್ರುವಸ್ಯ ಕಾಲಃ ಪುತ್ರಶ್ಚ ವರ್ಚಾಸ್ಸೋಮಾದಜಾಯತ ೨೩ ॥

ದ್ರವಿಣೋ ಹವ್ಯವಾಹಶ್ಚ ಧರಪುತ್ರಾವಿಮೌ ಸ್ಮೃತೌ ।
ಕಲ್ಪಾಂತಸ್ಥಸ್ತತಃ ಪ್ರಾಣೋ ರಮಣಶ್ಶಿಶಿರೋಽಪಿ ಚ ॥ ೨೪ ॥

ಮನೋಹರೋ ಧವಶ್ಚಾಥ ಶಿವೋ ವಾಥ ಹರೇಸ್ಸುತಾಃ ।
ಶಿವೋ ಮನೋಜವಂ ಪುತ್ರಮವಿಜ್ಞಾತಗತಿಂ ತಥಾ ॥ ೨೫ ॥

---

೨೦. ಎಲ್ಲಾ ದಿಕ್ಕುಗಳನ್ನೂ ವ್ಯಾಪಿಸಿಕೊಂಡಿರುವ ಜ್ಯೋತಿಷ್ಮಂತರೆಂಬ ದೇವತೆಗಳು ವಸುಗಳೆಂದು ಹೆಸರನ್ನು ಪಡೆದಿದ್ದಾರೆ. ಅವರ ಹೆಸರನ್ನು ಕೇಳು.

೨೧. ಆಪ, ಧ್ರುವ, ಸೋಮ, ಧರ, ಅನಿಲ, ಅನಲ, ಪ್ರತ್ಯೂಷ, ಪ್ರಭಾಸ ಈ ಎಂಟು ಜನರೂ ವಸುಗಳೆಂದು ಹೆಸರನ್ನು ಹೊಂದಿದ್ದಾರೆ.

೨೨. ಆಪನೆಂಬುವನಿಗೆ ಶಾಂತ, ವೈತಂಡ, ಶಾಂಬ, ಬಭ್ರು ಎಂಬವರಾಗಿ ನಾಲ್ವರು ಮಕ್ಕಳು ಇವರ ಯಜ್ಞವನ್ನು ರಕ್ಷಿಸತಕ್ಕವರು.

೨೩. ಧ್ರುವನೆಂಬವನಿಗೆ ಕಾಲನೆಂಬ ಮಗನೂ, ಸೋಮನಿಗೆ ವರ್ಚಸ್ಸೆಂಬ ಮಗನೂ, ಧರನಿಗೆ ದ್ರವಿಣ ಹವ್ಯವಾಹರೂ ಮಕ್ಕಳಾದರು.

೨೪. ಕಲ್ಪದ ಕೊನೆಯಲ್ಲಿ ಬೀಸುವ ಗಾಳಿಯೂ, ರಮಣನೂ, ಶಿಶಿರನೂ, ಮನೋಹರ, ಧವ ಇವರು ಹರಿಯ ಮಕ್ಕಳು.

೨೫. ಶಿವನಿಗೆ ಸಂಚಾರವನ್ನೇ ಶೀಘ್ರಯುಲಸಾಧ್ಯನಾದ ಮನೋಜವ, ಅವಿಜ್ಞಾತಗತಿಗಳೆಂಬ ಮಕ್ಕಳು ಆದರು, ಅನಿಲನಿಗೆ ಅಗ್ನಿಯುಂತಿರುವ ಮಕ್ಕಳು ಹುಟ್ಟಿದರು.

**ಅವಾಪ ಚಾನಿಲಃ ಪುತ್ರಾನಗ್ನಿಸ್ತ್ರಾಯುಗುಣಾಂಸ್ತತಃ ।**
**ಅಗ್ನಿಪುತ್ರಃ ಕುಮಾರಸ್ತು ಶರಸ್ತಂಬೇ ವ್ಯಜಾಯತ ॥ ೨೬ ॥**

**ತಸ್ಯ ಶಾಖೋಪಶಾಖಶ್ಚ ನೈಗಮೇಯಃ ಸ್ವಯಂಭುವಃ ।**
**ಅಪತ್ಯಂ ಕೃತ್ತಿಕಾನಾಂ ಚ ಕಾರ್ತಿಕೇಯಸ್ತತಃ ಸ್ಮೃತಃ ॥ ೨೭ ॥**

**ಪ್ರತ್ಯೂಷಸ್ಯ ವಿಭುಃ ಪುತ್ರೋ ಮುನಿರ್ನಾಮಾಥ ದೇವಲಃ ।**
**ವಿಶ್ವಕರ್ಮಾ ಪ್ರಭಾಸಸ್ಯ ಪುತ್ರಶ್ಶಿಲ್ಪೀ ಪ್ರಜಾಪತಿಃ ॥ ೨೮ ॥**

**ಪ್ರಸಾದಭವನೋದ್ಯಾನಪ್ರತಿಮಾಭೂಷಣಾದಿಷು ।**
**ತಟಾಗಾರಾಮಕೂಪೇಷು ಸ್ಥಿತಸ್ಸೋಽಮರವರ್ಧಕಿಃ ॥ ೨೯ ॥**

**ಅಜೈಕಪಾದರ್ಹಿಬುಧ್ನ್ಯೋ ವಿರೂಪಾಕ್ಷೋಽಥ ರೈವತಃ ।**
**ಹರಶ್ಚ ಬಹುರೂಪಶ್ಚ ತ್ರ್ಯಂಬಕಶ್ಚ ಸುರೇಶ್ವರಃ ॥ ೩೦ ॥**

---

೨೬. ಅಗ್ನಿಗೆ ಮಗನಾದ ಕುಮಾರನೆಂಬವನು ಜೊಂಡಿನಲ್ಲಿ ಹುಟ್ಟಿದನು.

೨೭. ಆ ಅಗ್ನಿಯ ವಂಶವು ಶಾಖೋಪಶಾಖೆಗಳಾಗಿ ವೇದಪ್ರಸಿದ್ಧವಾಯಿತು. ಈ ಕುಮಾರನಿಗೆ ಕೃತ್ತಿಕಾದೇವಿಯರು ರಕ್ಷಕರಾದುದರಿಂದ ಅನಂತರ ಆವನಿಗೆ ಕಾರ್ತಿಕೇಯನೆಂದು ಹೆಸರುಬಂದಿತು.

೨೮. ಪ್ರತ್ಯೂಷನೆಂಬ ಮನುವಿಗೆ ವಿಭುವೆಂಬ ಮಗನಾದನು, ಅವನೇನೇ ದೇವಲನೆಂಬ ಹೆಸರಿನ ಋಷಿಯಾದನು, ಪ್ರಭಾಸನಿಗೆ ವಿಶ್ವಕರ್ಮನೆಂಬ ಹೆಸರಿನ ಮಗನಾದನು, ಅವನು ಸೃಷ್ಟಿಕರ್ತನೂ, ಶಿಲ್ಪಿಯೂ ಆದನು.

೨೯. ಅವನು ದೊಡ್ಡ ಮನೆಗಳನ್ನೂ, ಉದ್ಯಾನಗಳನ್ನೂ, ಪ್ರತಿಮೆಗಳನ್ನೂ, ಒಡವೆಗಳನ್ನೂ ಕೆರೆ, ತೋಟ, ಭಾವಿಗಳನ್ನೂ ದೇವತೆಗಳಿಗೆ ಮಾಡಿಕೊಡುವ ಬಡಗಿಯಾದನು.

೩೦-೩೧. ಅಜೈಕಪಾತ್, ಅಹಿರ್ಬುಧ್ನ್ಯ, ವಿರೂಪಾಕ್ಷ, ರೈವತ, ಹರ, ತ್ರ್ಯಂಬಕ, ಸಾವಿತ್ರ, ಜಯಂತ, ಪಿನಾಕೀ, ಅಪರಾಜಿತ, ಸುರೇಶ್ವರನೆಂಬುದಾಗಿ

ಸಾವಿತ್ರಶ್ಚ ಜಯಂತಶ್ಚ ಪಿನಾಕೀ ಚಾಪರಾಜಿತಃ ।
ಏತೇ ರುದ್ರಾಸ್ಸಮಾಖ್ಯಾತಾ ಏಕಾದಶ ಗಣೇಶ್ವರಾಃ ॥ ೩೧ ॥

ಏತೇಷಾಂ ಮಾನಸಾನಾಂ ತು ತ್ರಿಶೂಲವರಧಾರಿಣಾಂ ।
ಕೋಟಿಯಶ್ಚತುರಶೀತಿರ್ಮತ್ಪುತ್ರಾಶ್ಚಾಕ್ಷಯಾ ಮತಾಃ ॥ ೩೨ ॥

ದಿಕ್ಷು ಸರ್ವಾಸು ಯೇ ರಕ್ಷಾಂ ಪ್ರಕುರ್ವಂತಿ ಗಣೇಶ್ವರಾಃ ।
ಏತೇ ವೈ ಪುತ್ರಪೌತ್ರಾಶ್ಚ ಸುರಭೀಗರ್ಭಸಂಭವಾಃ ॥ ೩೩ ॥

ಕಶ್ಯಪಸ್ಯ ಪ್ರವಕ್ಷ್ಯಾಮಿ ಪತ್ನೀಭ್ಯಃ ಪುತ್ರಪೌತ್ರಕಾನ್ ।
ಅದಿತಿರ್ದಿತಿರ್ದನುಶ್ಚೈವ ಅರಿಷ್ಟಾ ಸುರಸಾ ತಥಾ ॥ ೩೪ ॥

ಸುರಭಿರ್ವಿನತಾ ತದ್ವತ್ತಾಮ್ರಾ ಕ್ರೋಧವಶಾ ಇರಾ ।
ಕದ್ರೂಶ್ಶುಕೀ ಶುನೀ ತದ್ವತ್ತಾಸ್ತು ಪುತ್ರಾನ್ನಿಬೋಧ ಮೇ ॥ ೩೫ ॥

---

ಹನ್ನೊಂದು ಗಣಗಳಿಗೆ ಅಧಿಪತಿಗಳಾಗಿ ಹನ್ನೊಂದು ಜನ ರುದ್ರರು ಪ್ರಸಿದ್ಧರಾಗಿರುವರು.

೩೨. ಇವರೆಲ್ಲರೂ ಬ್ರಹ್ಮಮಾನಸಪುತ್ರರು. ಯಾವಾಗಲೂ ತ್ರಿಶೂಲವನ್ನು ಧರಿಸಿರುವರು. ಇವರುಗಳಸಮೂಹವು ಎಂಭತ್ತುನಾಲ್ಕುಕೋಟಿಗಳಿರುವುವು. ನನ್ನ ( ಪುಲಸ್ತ್ಯನ ) ವಂಶದವರು ನಾಶರಹಿತರಾದ ಅನಂತಜರಿರುವರು.

೩೩. ಇವರೆಲ್ಲರೂ ದಿಕ್ಕು ವಿದಿಕ್ಕುಗಳಲ್ಲಿದ್ದುಕೊಂಡು ಗಣಗಳಿಗೆ ಅಧಿಪತಿಗಳಾಗಿ ರಕ್ಷಣೆಯನ್ನು ಮಾಡುತ್ತಿರುವರು. ಇವರೂ, ಇವರಿಗೆ ಸುರಭಿಯಲ್ಲಿ ಉತ್ಪನ್ನರಾದ ಮಕ್ಕಳು ಮೊಮ್ಮಕ್ಕಳೂ ಬಹುಜನರಿರುವರು.

೩೪-೩೫. ಕಶ್ಯಪನಿಗೆ ಅವನ ಹೆಂಡತಿಯರಲ್ಲಿ ಹುಟ್ಟಿದ ಮಕ್ಕಳು ಮೊಮ್ಮಕ್ಕಳನ್ನು ಹೇಳುತ್ತೇನೆ. ಅದಿತಿ, ದಿತಿ, ದನು, ಅರಿಷ್ಟೆ, ಸುರಸೆ, ಸುರಭಿ. ವಿನತೆ, ತಾಮ್ರಾ, ಕ್ರೋಧವಶೆ, ಇರೆ, ಕದ್ರೂ, ಶುಕ್ರೀ, ಶುನೀ, ಎಂಬುವಾಗಿ ಕಶ್ಯಪನ ಹೆಂಡತಿಯರು. ಇವರಲ್ಲಿ ಹುಟ್ಟಿದ ಮಕ್ಕಳನ್ನು ಕೇಳು.

**ತುಷಿತಾ ನಾಮ ಯೇ ದೇವಾಶ್ಚಾಕ್ಷುಷಸ್ಯಾಂತರೇ ಮನೋಃ ।**
**ವೈವಸ್ವತೇಽಂತರೇ ತೇ ವಾ ಆದಿತ್ಯಾ ದ್ವಾದಶ ಸ್ಮೃತಾಃ ॥ ೩೬ ॥**

**ಇಂದ್ರೋ ಧಾತಾ ಭಗಸ್ತ್ವಷ್ಟಾ ಮಿತ್ರೋಽಥ ವರುಣೋಽರ್ಯಮಾ ।**
**ವಿವಸ್ವಾನ್ಸವಿತಾ ಪೂಷಾ ಅಂಶುಮಾನ್ವಿಷ್ಣುರೇವ ಚ ॥ ೩೭ ॥**

**ಏತೇ ಸಹಸ್ರಕಿರಣಾ ಆದಿತ್ಯಾ ದ್ವಾದಶ ಸ್ಮೃತಾಃ ।**
**ಮಾರೀಚಾತ್ಕಶ್ಯಪಾಜ್ಜಜ್ಞೇ ಪುತ್ರಾನದಿತಿರುತ್ತಮಾನ್ ॥ ೩೮ ॥**

**ಕೃಶಾಶ್ವಸ್ಯ ಋಷೇಃ ಪುತ್ರಾ ದೇವಪ್ರಹರಣಾಃ ಸ್ಮೃತಾಃ ।**
**ಏತೇ ದೇವಗಣಾ ವಿಪ್ರಾಃ ಪ್ರತಿಮನ್ವಂತರೇಷು ಚ ॥ ೩೯ ॥**

**ಉತ್ಪದ್ಯಂತೇ ಪ್ರಲೀಯಂತೇ ಕಲ್ಪೇ ಕಲ್ಪೇ ತಥೈವ ಚ ।**
**ದಿತಿಃ ಪುತ್ರದ್ವಯಂ ಲೇಭೇ ಕಶ್ಯಪಾದಿತಿ ನಃ ಶ್ರುತಂ ॥ ೪೦ ॥**

---

೩೬. ಚಾಕ್ಷುಷಮನುವಿನ ಕಾಲದಲ್ಲಿ ತುಷಿತರೆಂದು ಪ್ರಸಿದ್ಧರಾದ ದೇವತೆಗಳೇ ವೈವಸ್ವತ ಮನ್ವಂತರದಲ್ಲಿ ದ್ವಾದಶಾದಿತ್ಯರೆಂದು ಪ್ರಸಿದ್ಧರಾದರು.

೩೭. ಇಂದ್ರ, ಧಾತಾ, ಭಗ, ತ್ವಷ್ಟಾ, ಮಿತ್ರ, ವರುಣ, ಅರ್ಯಮಾ, ವಿವಸ್ವಾನ್, ಸವಿತಾ, ಪೂಷಾ, ಅಂಶುಮಾನ್, ವಿಷ್ಣು, ಇವರಿಷ್ಟುಜನರೂ ದ್ವಾದಶಾದಿತ್ಯರೆಂದು ಹೆಸರುಗೊಂಡಿದ್ದಾರೆ.

೩೮. ಮರೀಚನ ಮಗನಾದ ಕಶ್ಯಪನಿಗೆ ಅದಿತಿಯಲ್ಲಿ ಉತ್ತಮರಾದ ಮಕ್ಕಳು ಹುಟ್ಟಿದರು.

೩೯. ಕೃಶಾಶ್ವನೆಂಬ ಋಷಿಗೆ ದೇವಪ್ರಹರಣವೆಂಬ ಮಕ್ಕಳಾದರು. ಈ ದೇವತೆಗಳು ಪ್ರತಿಯೊಂದು ಮನ್ವಂತರದಲ್ಲಿಯೂ, ಕಲ್ಪ ಕಲ್ಪಗಳಲ್ಲಿಯೂ ಹುಟ್ಟುತ್ತಾರೆ. ಸಾಯುತ್ತಾರೆ.

೪೦. ಆ ಕಶ್ಯಪನಿಂದ ದಿತಿಯು ಇಬ್ಬರು ಮಕ್ಕಳನ್ನು ಹೊಂದಿದಳು ಎಂದು ಕೇಳಿದ್ದೇನೆ.

ಹಿರಣ್ಯಕಶಿಪುಶ್ಚೈವ ಹಿರಣ್ಯಾಕ್ಷಸ್ತಥೈವ ಚ ।
ಹಿರಣ್ಯಕಶಿಪೋಸ್ತದ್ವಜ್ಜಾತಂ ಪುತ್ರಚತುಷ್ಟಯಂ ॥ ೪೧ ॥

ಪ್ರಹ್ಲಾದಶ್ಚಾನುಹ್ರಾದಶ್ಚ ಸಂಹ್ರಾದೋ ಹ್ರಾದ ಏವ ಚ ।
ಪ್ರಹ್ಲಾದಪುತ್ರ ಆಯುಷ್ಮಾನ್ಶಿಬಿರ್ಬಾಷ್ಕಲಿರೇವ ಚ ॥ ೪೨ ॥

ವಿರೋಚನಶ್ಚತುರ್ಥಸ್ತು ಸ ಬಲಿಂ ಪುತ್ರಮಾಪ್ತವಾನ್ ।
ಬಲೇಃ ಪುತ್ರಶತಂ ತ್ವಾಸೀದ್ಬಾಣಜ್ಯೇಷ್ಠಂ ತಥೈವ ಚ ॥ ೪೩ ॥

ಧೃತರಾಷ್ಟ್ರಸ್ತಥಾ ಸೂರ್ಯೋ ವಿವಸ್ವಾನಂಶುತಾಪನಃ ।
ನಿಕುಂಭನಾಮಾ ಗುರ್ವಕ್ಷಃ ಕುಲೀ ಭೀಮೋಽಥ ಭೀಷಣಃ ॥ ೪೪ ॥

ಏವಮಾದ್ಯಾಸ್ತೇ ಬಹವೋ ಬಾಣೋ ಜ್ಯೇಷ್ಠೋ ಗುಣಾಧಿಕಃ ।
ಬಾಣಸ್ಸಹಸ್ರಬಾಹುಭ್ಯಾಂ ಸರ್ವಾಸ್ತ್ರಗುಣಸಂಯುತಃ ॥ ೪೫ ॥

ತಪಸಾ ತೋಷಿತೋ ಯಸ್ಯ ಪುರೇ ವಸತಿ ಶೂಲಧೃಕ್ ।
ಮಹಾಕಾಲತ್ವಮಗಮತ್ಸಾಮ್ಯಂ ಯಸ್ಯ ಪಿನಾಕಿನಃ ॥ ೪೬ ॥

---

೪೧. ಹಿರಣ್ಯಕಶಿಪು, ಹಿರಣ್ಯಾಕ್ಷರೆಂಬುವರೇ ಅವರು. ಹಿರಣ್ಯಕಶಿಪುವಿಗೆ ಪ್ರಹ್ಲಾದ, ಅನುಹ್ರಾದ, ಸುಹ್ರಾದ, ಹ್ರಾದ ಎಂಬ ನಾಲ್ವರು ಮಕ್ಕಳು.

೪೨-೪೩. ಪ್ರಹ್ಲಾದನಿಗೆ, ಆಯುಷ್ಮಾನ್, ಶಿಬಿ, ಬಾಷ್ಕಲಿ, ವಿರೋಚನ ಎಂಬದಾಗಿ ನಾಲ್ಕು ಜನ ಮಕ್ಕಳಾದರು. ನಾಲ್ಕನೆಯವನಾದ ವಿರೋಚನನಿಗೆ ಬಲಿಯೆಂಬ ಮಗನಾದನು. ಬಲಿಗೆ ನೂರು ಜನ ಮಕ್ಕಳಾದರು. ಅವರಲ್ಲೆಲ್ಲಾ ದೊಡ್ಡವನು ಬಾಣನೆಂಬುವನು.

೪೪-೪೫. ಧೃತರಾಷ್ಟ್ರ, ಸೂರ್ಯ, ವಿವಸ್ವಾನ್, ಅಂಶುತಾಪನ, ನಿಕುಂಭ, ಗುರ್ವಕ್ಷ, ಕುಲಿ, ಭೀಮ, ಭೀಷಣ, ಎಂದು ಅನೇಕರಾದರು. ಇವರಿಗೆಲ್ಲಾ ದೊಡ್ಡವನಾದ ಬಾಣನು ಬಹು ಗುಣವಂತನು. ಸಾವಿರ ತೋಳುಗಳುಳ್ಳವನು. ಸಕಲವಾದ ಅಸ್ತ್ರಗಳನ್ನೂ ಹೊಂದಿದ್ದನು.

೪೬. ಆ ಬಾಣನ ತಪಸ್ಸಿಗೆ ಸಂತೋಷಪಟ್ಟು ಈಶ್ವರನು ಆತನ ಪಟ್ಟಣದಲ್ಲಿಯೇ ವಾಸಮಾಡತೊಡಗಿದನು. ಮಹಾಕಾಲ ಎಂಬುದೆ [illegible] ಸಂದರ್ಭವು. ಹೀಗಿರುವ ಈಶ್ವರನ ಹೆಸರನ್ನ ಅನ್ವರ್ಥವಾಗಿ ಈ ಬಾಣನು ಹೊಂದಿದನು.

ಹಿರಣ್ಯಾಕ್ಷಸ್ಯ ಪುತ್ರಾಃಉಲೂಕಃ ಶಕುನಿಸ್ತಥಾ ।
ಭೂತಸಂತಾಪನಶ್ಚೈವ ಮಹಾಭೀಮಸ್ತಥೈವ ಚ ॥ ೪೭ ॥

ಏತೇಭ್ಯಃ ಪುತ್ರಪೌತ್ರಾಣಾಂ ಕೋಟಯಸ್ಸಪ್ತವಿಂಶತಿಃ ।
ಮಹಾಬಲಾ ಮಹಾಕಾಯಾ ನಾನಾರೂಪಾ ಮಹೌಜಸಃ ॥ ೪೮ ॥

ದನುಃ ಪುತ್ರಶತಂ ಲೇಭೇ ಕಶ್ಯಪಾದ್ವರದರ್ಪಿತಂ ।
ವಿಪ್ರಚಿತ್ತಿಃ ಪ್ರಧಾನೋಽಭೂತ್ತೇಷಾಂ ಮಧ್ಯೇ ಮಹಾಬಲಃ ॥ ೪೯ ॥

ದ್ವಿರಷ್ಟಮೂರ್ಧಾ ಶಕುನಿಸ್ತಥಾ ಶಂಕುಶಿರೋಧರಃ ।
ಅಯೋಮುಖಶ್ಶಂಬರಶ್ಚ ಕಪಿಲೋ ವಾಮನಸ್ತಥಾ ॥ ೫೦ ॥

ಮರೀಚಿರ್ಮಾಗಧಶ್ಚೈವ ಹರಗರ್ಜಶಿರಾಸ್ತಥಾ ।
ನಿದ್ರಾಧರಶ್ಚ ಕೇತುಶ್ಚ ಕೇತುವೀರ್ಯಶ್ಶತಕ್ರತುಃ ॥ ೫೧ ॥

ಇಂದ್ರಮಿತ್ರಗ್ರಹಶ್ಚೈವ ವಜ್ರನಾಭಸ್ತಥೈವ ಚ ।
ಏಕವಸ್ತ್ರೋ ಮಹಾಬಾಹುರ್ವಜ್ರಾಕ್ಷಸ್ತಾರಕಸ್ತಥಾ ॥ ೫೨ ॥

---

೪೭. ಹಿರಣ್ಯಾಕ್ಷನಿಗೆ, ಉಲೂಕ, ಶಕುನಿ, ಭೂತಸಂತಾಪನ, ಮಹಾಭೀಮ ಎಂಬದಾಗಿ ಆರು ಮಕ್ಕಳಾದರು.

೪೮. ಈ ನಾಲ್ವರಿಗೆ ಮಕ್ಕಳು ಮೊಮ್ಮಕ್ಕಳು ಇಪ್ಪತ್ತೇಳು ಕೋಟಿ ಸಂಖ್ಯೆಯುಳ್ಳವರಾದರು, ಬಹು ಬಲಿಷ್ಠರು, ದೊಡ್ಡ ದೇಹವುಳ್ಳವರು, ನಾನಾಬಗೆಯಾದ ರೂಪವುಳ್ಳವರು, ಬಹುವಾದ ತೇಜಸ್ಸುಳ್ಳವರು.

೪೯. ದನು ಎಂಬವಳು ಕಶ್ಯಪನಿಂದ ಬಹು ಬಲಿಷ್ಠರಾದ, ವರದಿಂದ ಕೊಬ್ಬಿದ ನೂರು ಜನ ಮಕ್ಕಳನ್ನು ಪಡೆದಳು. ಅವರೊಳಗೆ ವಿಪ್ರಚಿತ್ತಿ ಎಂಬುವನು ಮುಖ್ಯನಾಗಿಯೂ ಬಲಿಷ್ಠನಾಗಿಯೂ ಇದ್ದನು.

೫೦-೫೩. ದ್ವಿರಷ್ಟಮೂರ್ಧಾ (ಹದಿನಾರು ತಲೆಯವನು) ಶಕುನಿ, ಶಂಕುಶಿರೋಧರ ಅಯೋಮುಖ, ಶಂಬರ, ವಾಮನ, ಮರೀಚಿ, ಮಾಗಧ, ಹರಗಜಶಿರ, ನಿದ್ರಾಧರ, ಕೇತು, ಕೇತುವೀರ್ಯ, ಶತಕ್ರತು, ಇಂದ್ರಮಿತ್ರಗ್ರಹ, ವಜ್ರನಾಭ,

ಅಸಿಲೋಮಾ ಪುಲೋಮಾ ಚ ಬಿಂದುರ್ಬಾಣೋ ಮಹಾಸುರಃ ।
ಸ್ವರ್ಭಾನುರ್ವೃಷಪರ್ವಾ ಚ ಏವಮಾದ್ಯಾ ದನೋಸ್ಸುತಾಃ ॥ ೩೩ ॥

ಸ್ವರ್ಭಾನೋಸ್ಸುಪ್ರಭಾ ಕನ್ಯಾ ಶಚೀ ಚೈವ ಪುಲೋಮಜಾ ।
ಉಪದಾನವೀ ಮಯಸ್ಯಾಸೀತ್ತಥಾ ಮಂಡೋದರೀ ಕುಹೂಃ ॥ ೩೪ ॥

ಶರ್ಮಿಷ್ಠಾ ಸುಂದರೀ ಚೈವ ಚಂದ್ರಾ ಚ ವೃಷಪರ್ವಣಃ ।
ಪುಲೋಮಾಕಾಲಕೇ ಚೈವ ವೈಶ್ವಾನರಸುತೇ ಹಿ ತೇ ॥ ೩೫ ॥

ಬಹ್ವಪತ್ಯೇ ಮಹಾಸತ್ತ್ವೇ ಮಾರೀಚಸ್ಯ ಪರಿಗ್ರಹೇ ।
ತತೋಷ್ಟಷಷ್ಟಿಃ ಸಹಸ್ರಾಣಾಂ ದಾನವಾನಾಮಭೂತ್ಪುರಾ ॥ ೩೬ ॥

ಪೌಲೋಮಾನ್ಕಾಲಖಂಜಾಂಶ್ಚ ಮಾರೀಚೋಽಜನಯತ್ಪುರಾ ।
ಅವಧ್ಯಾ ಯೇ ನರಾಣಾಂ ವೈ ಹಿರಣ್ಯಪುರವಾಸಿನಃ ॥ ೩೭ ॥

---

ಏಕವಕ್ತ್ರ, ಮಹಾಬಾಹು, ವಜ್ರಾಕ್ಷ, ತಾರಕ, ಅಸಿಲೋಮಾ, ಪುಲೋಮ, ಬಿಂದು, ಬಾಣ, ಸ್ವರ್ಭಾನು, ವೃಷಪರ್ವ, ಇವರೇ ಮುಂತಾದವರು ದನುವಿನ ಮಕ್ಕಳು.

೩೪. ಸ್ವರ್ಭಾನುವಿಗೆ ಸುಪ್ರಭೆ, ಪುಲೋಮನಿಗೆ ಶಚೀ. ಮಯನಿಗೆ ಉಪದಾನವೀ, ಮಂಡೋದರಿ, ಕುಹೂ ಎಂಬವರು, ಹೆಣ್ಣು ಮಕ್ಕಳಾದರು.

೩೫. ವೃಷಪರ್ವನಿಗೆ ಶರ್ಮಿಷ್ಠೆ, ಸುಂದರಿ, ಚಂದ್ರೆ, ಎಂಬವರೂ ವೈಶ್ವಾನರನಿಗೆ, ಪುಲೋಮ, ಕಾಲಿಕೆ ಎಂಬದಾಗಿಯೂ ಹೆಣ್ಣುಮಕ್ಕಳಾದರು.

೩೬. ಮರೀಚನ ಮಗನಾದ ಕಶ್ಯಪನಿಗೆ ಈ ರೀತಿಯಾಗಿ ಅನೇಕ ಮಕ್ಕಳೂ, ಮತ್ತೂ ಬಲಿಷ್ಠರೂ ಆದ ದನುವಿನಲ್ಲಿ ಅರವತ್ತು ಸಾವಿರ ಜನ ದಾನವರು ಹುಟ್ಟಿದರು.

೩೭. ಪೂರ್ವದಲ್ಲಿ ಈ ಮರೀಚಿಯ ಮಗನಾದ ಕಶ್ಯಪನು ಪೌಲೋಮರನ್ನೂ ಕಾಲಖಂಜರನ್ನೂ ಸೃಷ್ಟಿಸಿದನು. ಅವರು ಹಿರಣ್ಯಪುರದಲ್ಲಿದ್ದುಕೊಂಡು ಕೊಲ್ಲುವುದಕ್ಕೆ ಅಸದಳರಾಗಿದ್ದರು.

ಚತುರ್ಮುಖಾಲ್ಲಬ್ಧವರಾ ಯೇ ಹತಾ ವಿಜಯೇನ ತು ।
ವಿಪ್ರಚಿತ್ತಿಸ್ಸೈಂಹಿಕೇಯಮುಗ್ರಂ ಪುತ್ರಮಜೀಜನತ್ ॥ ೫೮ ॥

ಹಿರಣ್ಯಕಶಿಪೋರ್ಯೇ ವೈ ಭಾಗಿನೇಯಾಸ್ತ್ರಯೋದಶ ।
ಕಂಸಶ್ಶಂಖಶ್ಚ ರಾಜೇಂದ್ರ ನಲೋ ವಾತಾಪಿರೇವ ಚ ॥ ೫೯ ॥

ಇಲ್ವಲೋ ನಮುಚಿಶ್ಚೈವ ಖಸೃಮಶ್ಚಾಂಜನಸ್ತಥಾ ।
ನರಕಃ ಕಾಲನಾಭಶ್ಚ ಪರಮಾಣುಸ್ತಥೈವ ಚ ॥ ೬೦ ॥

ಕಲ್ಪವೀರ್ಯಶ್ಚ ವಿಖ್ಯಾತೋ ದನುವಂಶವಿವರ್ಧನಃ ।
ಸಂಹ್ರಾದಸ್ಯ ತು ದೈತ್ಯಸ್ಯ ನಿವಾತಕವಚಾಃ ಕುಲೇ ॥ ೬೧ ॥

ಅವಧ್ಯಾಸ್ಸರ್ವಭೂತಾನಾಂ ಗಂಧರ್ವೋರಗರಕ್ಷಸಾಂ ।
ಯೇ ಹತಾ ಬಲಮಾಶ್ರಿತ್ಯ ಅರ್ಜುನೇನ ರಣಾಜಿರೇ ॥ ೬೨ ॥

ಷಟ್ಕನ್ಯಾ ಜನಯಾಮಾಸ ತಾಮ್ರಾ ಮಾರೀಚಬೀಜತಃ ।
ಶುಕೀ ಶ್ಯೇನೀ ಚ ಭಾಸೀ ಚ ಸುಗೃಧ್ರೀ ಗೃಧ್ರಿಕಾ ಶುಚಿಃ ॥ ೬೩ ॥

---

೫೮. ಅವರೆಲ್ಲರೂ ಬ್ರಹ್ಮನಿಂದ ವರವನ್ನು ಹೊಂದಿದ್ದರು ಅವರೆಲ್ಲರನ್ನೂ ವಿಜಯನು (ವಿಷ್ಣುವು) ಕೊಂದನು. ವಿಪ್ರಚಿತ್ತಿಗೆ ಸೈಂಹಿಕೇಯನೆಂಬ ಒಬ್ಬ ಕ್ರೂರನಾದ ಮಗನಾದನು.

೫೯-೬೦. ಹಿರಣ್ಯಕಶಿಪುವಿನ ಸೋದರಿಯ ಮಕ್ಕಳು ಹದಿಮೂರು ಜನರಾದರು. ಕಂಸ, ಶಂಖ, ನಳ, ವಾತಾಪಿ, ಇಲ್ವಲ, ನಮುಚಿ, ಖಸೃಮ, ಅಂಜನ, ನರಕ, ಕಾಲನಾಭ, ಪರಮಾಣು, ಕಲ್ಪವೀರ್ಯ, ಎಂಬ ಹೆಸರಿನಿಂದ ದನುವಿನ ವಂಶವನ್ನು ಬೆಳೆಸಿದರು.

೬೧-೬೨. ಸಂಹ್ರಾದನೆಂಬವನ ವಂಶದಲ್ಲಿ ನಿವಾತಕವಚರು ಹುಟ್ಟಿದರು. ಅವರು ಗಂಧರ್ವರು. ಸರ್ಪಗಳು, ರಾಕ್ಷಸರು ಮತ್ತು ಮತ್ತಾವ ಪ್ರಾಣಿಯಿಂದಲೂ ಕೊಲ್ಲಲಸಾಧ್ಯರಾಗಿದ್ದರು. ಅವರನ್ನು ಅರ್ಜುನನು ಯುದ್ಧದಲ್ಲಿ ಶೌರ್ಯದಿಂದ ಸಂಹರಿಸಿದನು.

೬೩. ಆ ಮರೀಚಿಪುತ್ರನಾದ ಕಶ್ಯಪನಿಂದಲೇ ತಾಮ್ರೆ ಎಂಬವಳು ಶುಕಿ, ಶ್ಯೇನಿ, ಭಾಸಿ, ಸುಗೃಧ್ರಿ, ಗೃಧ್ರಿಕೆ, ಶುಚಿ ಎಂಬದಾಗಿ ಆರು ಜನ ಹೆಣ್ಣುಮಕ್ಕಳನ್ನೂ ಹೊಂದಿದಳು.

ಶುಕೀ ಶುಕಾನುಲೂಕಾಂಶ್ಚ ಜನಯಾಮಾಸ ಧರ್ಮತಃ ।
ಶ್ಯೇನೀ ಶ್ಯೇನಾಂಶ್ಚ ಭಾಸೀ ಚ ಕುರರಾನಪ್ಯಜೀಜನತ್ ॥ ೬೪ ॥

ಗೃಧ್ರೀ ಗೃಧ್ರಾನ್ಸ್ಸುಗೃಧ್ರೀ ಚ ಪಾರಾವತವಿಹಂಗಮಾನ್ ।
ಹಂಸಸಾರಸಕಾರಂಡಪ್ಲವಾನ್ ಶುಚಿರಜೀಜನತ್ ॥ ೬೫ ॥

ಏಷ ತಾಮ್ರಾನ್ವಯಃ ಪ್ರೋಕ್ತೋ ವಿನೀತೀಯಾ ನಿಬೋಧತ ।
ಗರುಡಃ ಪತತಾಂ ಶ್ರೇಷ್ಠೋ ಅರುಣಸ್ತು ಪತತ್ರಿಣಾಂ ॥ ೬೬ ॥

ಸೌದಾಮಿನೀ-ತಥಾ ಕನ್ಯಾ ಯೇಯಂ ನಭಸಿ ವಿಶ್ರುತಾ ।
ಸಂಪಾತಿಶ್ಚ ಜಟಾಯುಶ್ಚ ಅರುಣಸ್ಯ ಸುತಾವುಭೌ ॥ ೬೭ ॥

ಸಂಪಾತಿಪುತ್ರೋ ಬಭ್ರುಶ್ಚ ಶೀಘ್ರಗಶ್ಚಾಪಿ ವಿಶ್ರುತಃ ।
ಜಟಾಯೋಃ ಕರ್ಣಿಕಾರಶ್ಚ ಶತಗಾಮೀ ಚ ವಿಶ್ರುತೌ ॥ ೬೮ ॥

ತೇಷಾಮಸಂಖ್ಯನಾಮಾನಃ ಪಕ್ಷಿಣಾಂ ಪುತ್ರಪೌತ್ರಕಾಃ ।
ಸುರಸಾಯಾಂ ಸಹಸ್ರಂ ತು ಸರ್ಪಾಣಾಮಭವತ್ಪುರಾ ॥ ೬೯ ॥

---

೬೪-೬೫. ಶುಕಿಯು ಗಿಳಿಗಳನ್ನೂ, ಉಲೂಕಿಯು ಗೂಬೆಗಳನ್ನೂ ಹೆತ್ತರು. ಶ್ಯೇನಿಯು ಗಿಡಗಗಳನ್ನೂ, ಭಾಸಿಯು ಕುರರಗಳನ್ನು ಹೆತ್ತರು. ಗೃಧ್ರಿಯು ಹದ್ದುಗಳನ್ನೂ, ಸುಗೃಧ್ರಿಯು ಪಾರಿವಾಳ ಮುಂತಾದ ಪಕ್ಷಿಗಳನ್ನೂ ಹೆತ್ತರು. ಶುಚಿಯು ಹಂಸಸಾರಸ ಕಾರಂಡವೆಂಬ ಬಕಗಳು, ಪ್ಲವ ಎಂದರೆ ನೀರು ಪಕ್ಷಿಗಳನ್ನೂ ಹೆತ್ತಳು.

೬೬-೬೭. ಇವಿಷ್ಟೂ ತಾಮ್ರೆಯ ವಂಶವಾಯಿತು. ವಿನೀಯಳ ವಂಶವನ್ನು ಕೇಳು ಪಕ್ಷಿಶ್ರೇಷ್ಠನಾದ ಗರುಡನೂ, ಅರುಣನೂ, ಗಂಡುಮಕ್ಕಳಾದರು. ಆಕಾಶದಲ್ಲಿ ಕಾಣುವ ಸೌದಾಮಿನಿ (ಮಿಂಚು) ಆಕೆಯ ಮಗಳು. ಸಂಪಾತಿಯೂ ಜಟಾಯುವೂ ಅರುಣನ ಮಕ್ಕಳುಗಳು.

೬೮. ಸಂಪಾತಿಗೆ ಬಭ್ರುವೆಂಬ ಮಗನಾದನು. ಅವನು ಪ್ರಪಂಚದಲ್ಲಿ ಬಹು ವೇಗವಾಗಿ ಹೋಗುವನೆಂದು ಪ್ರಸಿದ್ಧನಾಗಿದ್ದಾನೆ. ಜಟಾಯುವಿಗೆ ಕರ್ಣಿಕಾರ, ಶತಗಾಮಿ ಎಂದು ಇಬ್ಬರು ಮಕ್ಕಳಾದರು.

೬೯. ಆ ಪಕ್ಷಿಗಳಿಗೆ ಅನೇಕವಾದ ಹೆಸರುಳ್ಳ ಮಕ್ಕಳು, ಮೊಮ್ಮಕ್ಕಳು ರೂಪವಾದ ಪಕ್ಷಿಗಳು ಹುಟ್ಟಿದುವು. ಸುರಸೆಯಲ್ಲಿ ಅನೇಕ ಸರ್ಪಗಳು ಹುಟ್ಟಿದುವು.

ಸಹಸ್ರಶಿರಸಾಂ ಕದ್ರೂಃ ಸಹಸ್ರಂ ಪ್ರಾಪ ಸುವ್ರತಾ ।
ಪ್ರಧಾನಾಸ್ತೇಷು ವಿಖ್ಯಾತಾ ಷಡ್ವಿಂಶತಿರರಿಂದಮ ॥ ೭೦ ॥

ಶೇಷವಾಸುಕಿಕರ್ಕೋಟಶಂಖೈರಾವತಕಂಬಲಾಃ ।
ಧನಂಜಯಮಹಾನೀಲಪದ್ಮಾಶ್ವತರತಕ್ಷಕಾಃ ॥ ೭೧ ॥

ಏಲಾಪತ್ರಮಹಾಪದ್ಮಧೃತರಾಷ್ಟ್ರಬಲಾಹಕಾಃ ।
ಶಂಖಪಾಲಮಹಾಶಂಖಪುಷ್ಪದಂತಸುಭಾವನಾಃ ॥ ೭೨ ॥

ಶಂಖರೋಮಾ ಚ ನಹುಷೋ ರಮಣಃ ಪಾಣಿನಿಸ್ತಥಾ ।
ಕಪಿಲೋ ದುರ್ಮುಖಶ್ಚಾಪಿ ಪಾತಂಜಲಿಮುಖಸ್ತಥಾ ॥ ೭೩ ॥

ಏಷಾಮನಂತಮಭವತ್ಸರ್ವೇಷಾಂ ಪುತ್ರಪೌತ್ರಕಂ ।
ಪ್ರಾಯಶೋ ಯತ್ಪುರಾ ದಗ್ಧಂ ಜನಮೇಜಯಮಂದಿರೇ ॥ ೭೪ ॥

ರಕ್ಷೋಗಣಂ ಕ್ರೋಧವಶಾ ಸುನಾಮಾನಮಜೀಜನತ್ ।
ದಂಷ್ಟ್ರಿಣಾಂ ನಿಯುತಂ ತೇಷಾಂ ಭೀಮಸೇನಾದಗಾತ್ಕ್ಷಯಂ ॥ ೭೫ ॥

---

೭೦. ಕದ್ರೂ ಎಂಬವಳು ಸಾವಿರ ಹಾವುಗಳನ್ನು ಹೊಂದಿದಳು. ಅವರಲ್ಲಿ ಇಪ್ಪತ್ತಾರು ಜನರು ಪ್ರಧಾನರಾದರು.

೭೧-೭೩. ಶೇಷ, ವಾಸುಕಿ, ಕರ್ಕೋಟ, ಶಂಖ, ಐರಾವತ, ಕಂಬಳ, ಧನಂಜಯ, ಮಹಾನೀಲ, ಪದ್ಮ, ಅಶ್ವತರ, ತಕ್ಷಕ, ಏಲಾಪತ್ರ, ಮಹಾಪದ್ಮ, ಧೃತರಾಷ್ಟ್ರ, ಬಲಾಹಕ, ಶಂಖಪಾಲ, ಮಹಾಶಂಖ, ಪುಷ್ಪದಂತ, ಸುಭಾನು, ಶಂಖರೋಮ, ನಹುಷ, ರಮಣ, ಪಾಣಿನಿ, ಕಪಿಲ, ದುರ್ಮುಖ, ಪಾತಂಜಲಿ, ಇವರೇ ಇಪ್ಪತ್ತಾರು ಜನರು.

೭೪. ಇವರೆಲ್ಲರಿಗೂ ಮಕ್ಕಳು, ಮೊಮ್ಮಕ್ಕಳು ಮರಿಮಕ್ಕಳಾಗಿ ಬೇಕಾದಷ್ಟು ಜನರು ಹುಟ್ಟಿದರು. ಸಾಧಾರಣವಾಗಿ ಇವೆಲ್ಲವೂ ಜನಮೇಜಯನ ಯಾಗದಲ್ಲಿ ಸುಟ್ಟುಹೋದುವು.

೭೫. ಕ್ರೋಧವಶಳು ಸುನಾಮಾ ಎಂಬ ಹೆಸರುಳ್ಳ ರಾಕ್ಷಸರ ತಂಡವನ್ನು ಹೆತ್ತಳು. ಕೋರೆದಾಡೆಯುಳ್ಳ ಅವರಲ್ಲಿ ಬಹು ಜನರನ್ನು ಭೀಮಸೇನನು ಕೊಂದನು.

ರುದ್ರಾಣಾಂ ಚ ಗಣಾಂಸ್ತದ್ವದ್ಗೋಮಹಿಷ್ಯೌ ವರಾಂಗನಾಂ ।
ಸುರಭಿರ್ಜನಯಾಮಾಸ ಕಶ್ಯಪಾನ್ನೃಪ ತತ್ಪರಾ್ ॥ ೭೬ ॥

ಮುನಿರ್ಮುನೀನಾಂ ಚ ಗಣಂ ಗಣಮಪ್ಸರಸಾಂ ತಥಾ ।
ತಥಾ ಕಿನ್ನರಗಂಧರ್ವಾನರಿಷ್ಟಾ್ ಜನಯದ್ಬಹೂ್ ॥ ೭೭ ॥

ತೃಣವೃಕ್ಷಲತಾಗುಲ್ಮಮಿರಾ ಸರ್ವಮಜೀಜನತ್ ।
ಖಸಾ ತು ಯಕ್ಷರಕ್ಷಾಂಸಿ ಜನಯಾಮಾಸ ಕೋಟಿಶಃ ॥ ೭೮ ॥

ಏತೇ ಕಶ್ಯಪದಾಯಾದಾಃ ಶತಶೋಽಥ ಸಹಸ್ರಶಃ ।
ಏಷ ಮನ್ವಂತರೇ ಭೀಷ್ಮ ಸರ್ಗಸ್ಸ್ವಾರೋಚಿಷಸ್ಸ್ಮೃತಃ ॥ ೭೯ ॥

ತತಸ್ತ್ವೇಕೋನಪಂಚಾಶನ್ಮರುತಃ ಕಶ್ಯಪಾದ್ದಿತಿಃ
ಜನಯಾಮಾಸ ಧರ್ಮಜ್ಞಾನ್ಸರ್ವಾನಮರವಲ್ಲಭಾ್ ॥ ೮೦ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಷಷ್ಠೋಽಧ್ಯಾಯಃ

---

೭೬. ರುದ್ರಗಣಗಳನ್ನೂ, ಗೋವು (ಹಸು) ಎಮ್ಮೆ, ಉತ್ತಮವಾದ ಹೆಂಗಸರು ಇವರನ್ನೂ ಸುರಭಿಯು ಕಶ್ಯಪನಿಂದ ಹೊಂದಿದಳು. ಅವರೆಲ್ಲರೂ ಆಕೆಗೆ ವಿಧೇಯರಾಗಿದ್ದರು.

೭೭. ಮುನಿಯು, ಮುನಿಗಣಗಳನ್ನೂ, ಅಪ್ಸರಸ್ಸುಗಳ ಗುಂಪನ್ನೂ ಕಿನ್ನರರು, ಗಂಧರ್ವರು, ಅರಿಷ್ಟರು, ಇವರೆಲ್ಲರನ್ನೂ ಹೆತ್ತಳು.

೭೮. ಇರಾ ಎಂಬುವಳು ಹುಲ್ಲು, ಮರ, ಬಳ್ಳಿಗಳು, ಪೊದರು ಮುಂತಾದುವನ್ನೂ, ಖಸೆಯು ಅನೇಕ ಜನ ಯಕ್ಷರನ್ನೂ ರಾಕ್ಷಸರನ್ನೂ ಹೆತ್ತರು.

೭೯. ಈ ರೀತಿ ಸಾವಿರಾರು ಜನ ಕಶ್ಯಪನ ವಂಶದವರು ಹುಟ್ಟಿದರು. ಎಲೈ ಭೀಷ್ಮನೇ, ಇದು ಸ್ವಾರೋಚಿಷಮನ್ವಂತರದ ಸೃಷ್ಟಿಯು.

೮೦. ಅನಂತರ ದಿತಿಯು ನಲವತ್ತೊಂಭತ್ತು ಜನ ಮರುತ್ತುಗಳನ್ನು ಹೆತ್ತಳು. ಅವರೆಲ್ಲರೂ ಧರ್ಮಜ್ಞರು, ಮತ್ತು ದೇವತೆಗಳಿಗೆಲ್ಲಾ ಪ್ರೀತಿಪಾತ್ರರು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ಆರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## ಸಪ್ತಮೋಽಧ್ಯಾಯಃ

॥ ಭೀಷ್ಮ ಉವಾಚ ॥

ದಿತೇಃ ಪುತ್ರಾಃ ಕಥಂ ಜಾತಾ ಮರುತೋ ದೇವವಲ್ಲಭಾಃ ।
ದೇವೈರ್ಜಗ್ಮುಶ್ಚ ಸಾಪತ್ನ್ಯೈರ್ಕಸ್ಮಾತ್ಸಖ್ಯಮನುತ್ತಮಂ ॥ ೧ ॥

॥ ಪುಲಸ್ತ್ಯ ಉವಾಚ ॥

ಪುರಾ ದೇವಾಸುರೇ ಯುದ್ಧೇ ಹತೇಷು ಹರಿಣಾ ಸುರೈಃ ।
ಪುತ್ರಪೌತ್ರೇಷು ಶೋಕಾರ್ತಾ ಗತ್ವಾ ಭೂರ್ಲೋಕಮುತ್ತಮಂ ॥ ೨ ॥

ಪುಷ್ಕರೇ ತು ಮಹಾತೀರ್ಥೇ ಸರಸ್ವತ್ಯಾಸ್ತಟೇ ಶುಭೇ ।
ಭಾನುಮಾರಾಧಯಾಮಾಸ ತಪ ಉಗ್ರಂ ಚಕಾರ ಹ ॥ ೩ ॥

---

### ಏಳನೆಯ ಅಧ್ಯಾಯವು.

೧. ಭೀಷ್ಮನು ಹೇಳಿದನು :—ಎಲೈ ಪುಲಸ್ತ್ಯಋಷಿಯೇ, ದಿತಿಯ ಮಕ್ಕಳಿಗೂ ದೇವತೆಗಳಿಗೂ ಯಾವಾಗಲೂ ಶತ್ರುತ್ವವಷ್ಟೆ. ಅದಲ್ಲದೆ ಸವತಿಯ ಮಕ್ಕಳೂ ಆಗಿದ್ದಾರೆ. ಇಂತಹವರು ದೇವತೆಗಳೊಡನೆ ಸ್ನೇಹವನ್ನು ಹೊಂದಿ ಅವರಿಗೆ ಹೇಗೆ ಪ್ರಿಯರಾದರು.

೨-೩. ಪುಲಸ್ತ್ಯನು ಹೇಳಿದನು :—ಪೂರ್ವದಲ್ಲಿ ದೇವಾಸುರ ಯುದ್ಧದಲ್ಲಿ ವಿಷ್ಣುವಿನಿಂದಲೂ ದೇವತೆಗಳಿಂದಲೂ ತನ್ನ ಮಕ್ಕಳೂ ಮೊಮ್ಮಕ್ಕಳೂ ಕೊಲ್ಲಲ್ಪಡಲಾಗಿ, ದಿತಿಯು ಪುತ್ರಶೋಕದಿಂದ ಕೂಡಿದವಳಾಗಿ ಉತ್ತಮವಾದ ಭೂಲೋಕಕ್ಕೆ ಬಂದು ಸರಸ್ವತೀನದಿಯ ದಡದಲ್ಲಿರುವ ಪುಷ್ಕರ ತೀರ್ಥದಲ್ಲಿ ಸೂರ್ಯನನ್ನು ಕುರಿತು ಋಷಿಗಳಿಗೆ ಉಕ್ತವಾದ ನಿಯಮದಿಂದ ಉಗ್ರವಾದ ತಪಸ್ಸನ್ನು ಮಾಡಿದಳು.

ದಿತಿರ್ವೈ ದೈತ್ಯಮಾತಾ ತು ಶುಷ್ಕಿಕಾಶ್ಯೇಣ ಸುವ್ರತ ।
ಫಲಾಹಾರಾ ತಪಸ್ತೇಪೇ ಕೃಚ್ಛ್ರಚಾಂದ್ರಾಯಣಾದಿಭಿಃ ॥ ೪ ॥

ಯಾವದ್ವರ್ಷಶತಂ ಸಾಗ್ರಂ ಜರಾಶೋಕಸಮಾಕುಲಾ ।
ಅತಸ್ಸಾ ತಪ್ತತಪಸಾ ವಸಿಷ್ಠಾದೀನಪೃಚ್ಛತ ॥ ೫ ॥

ಕಥಯಂತು ಭವಂತೋ ಮೇ ಪುತ್ರಶೋಕವಿನಾಶನಂ ।
ವ್ರತಂ ಸೌಭಾಗ್ಯಫಲದಮಿಹ ಲೋಕೇ ಪರತ್ರ ಚ ॥ ೬ ॥

ಊಚುರ್ವಸಿಷ್ಠಪ್ರಮುಖಾ ಜ್ಯೇಷ್ಠಸ್ಯ ಪೂರ್ಣಿಮಾವ್ರತಂ ।
ಯಸ್ಯ ಪ್ರಸಾದಾದಭವತ್ಪುತ್ರಶೋಕವಿವರ್ಜಿತಾ ॥ ೭ ॥

॥ ಭೀಷ್ಮ ಉವಾಚ ॥

ಶ್ರೋತುಮಿಚ್ಛಾಮ್ಯಹಂ ಬ್ರಹ್ಮನ್ಜ್ಯೇಷ್ಠಸ್ಯ ಪೂರ್ಣಿಮಾವ್ರತಂ ।
ಸುತಾನೇಕೋನಪಂಚಾಶದ್ಯೇನ ಲೇಭೇ ಮುನಿರ್ದಿತಿಃ ॥ ೮ ॥

---

೪. ಆಕೆಯು ಹಣ್ಣು ಹಂಪಲುಗಳನ್ನು ತಿಂದು ಕೃಚ್ಛ್ರವ್ರತಗಳಿಂದಲೂ, ಚಾಂದ್ರಾಯಣಾದಿಗಳಿಂದಲೂ, ಮೈಗಳಿತವಾಗಿ ಶೋಕದಿಂದ ಕೂಡಿಕೊಂಡು ನೂರು ವರ್ಷಗಳು ಪೂರ್ತಿಯಾಗಿ ಉಗ್ರವಾದ ತಪಸ್ಸನ್ನು ಮಾಡಿದಳು.

೫-೬. ಹೀಗೆ ತಪಸ್ಸು ಮಾಡುತ್ತಿದ್ದ ಆಕೆಯು ವಸಿಷ್ಠಾದಿ ಋಷಿಗಳನ್ನು ಕುರಿತು ಎಲೈ ವಸಿಷ್ಠಾದಿಗಳೇ, ಪುತ್ರಶೋಕನಾಶಕವಾದ, ಇಹಪರಗಳಲ್ಲಿ ಸೌಖ್ಯವನ್ನೂ ಕೊಡುವ ಯಾವುದಾದರೂ ವ್ರತವನ್ನು ಹೇಳಿರಿ.

೭. ಆಗ ವಸಿಷ್ಠನೇ ಮುಂತಾದವರು ಯಾವ ವ್ರತವನ್ನು ಆಚರಿಸುವುದರಿಂದ ಪುತ್ರಶೋಕವು ನಾಶವಾಗುವುದೋ ಅಂತಹ ಜ್ಯೇಷ್ಠಶುದ್ಧ ಪೂರ್ಣಿಮಾವ್ರತವನ್ನು ದಿತಿಗೆ ಉಪದೇಶಮಾಡಿದರು.

೮. ಭೀಷ್ಮನು ಹೇಳಿದನು :— ಎಲೈ ಬ್ರಾಹ್ಮಣನಾದ ಪುಲಸ್ತ್ಯನೇ, ಋಷಿ ವ್ರತದಿಂದಿದ್ದ ದಿತಿಯು ಯಾವ ವ್ರತದ ಮಹಿಮೆಯಿಂದ ನಾಲ್ವತ್ತೊಂಭತ್ತು ಜನ ಮಕ್ಕಳನ್ನು ಪಡೆದಳೋ ಅಂತಹ ಜ್ಯೇಷ್ಠಮಾಸದ ಹುಣ್ಣಿಮೆಯ ವ್ರತವನ್ನು ಕೇಳಲು ಇಚ್ಛಿಸುವೆನು.

॥ ಪುಲಸ್ತ್ಯ ಉವಾಚ ॥

ಯದ್ವಸಿಷ್ಠಾದಿಭಿಃ ಪೂರ್ವಂ ದಿತೇಃ ಕಥಿತಪೂರ್ವಕಂ ।
ವಿಸ್ತರೇಣ ತದೇವೇದಂ ಮತ್ಸಕಾಶಾನ್ನಿಬೋಧ ವೈ ॥ ೯ ॥

ಜ್ಯೈಷ್ಠೇ ಮಾಸಿ ಸಿತೇ ಪಕ್ಷೇ ಪೌರ್ಣಮಾಸ್ಯಾಂ ಯತವ್ರತಾ ।
ಸ್ಥಾಪಯೇದವ್ರಣಂ ಕುಂಭಂ ಸಿತತಂಡುಲಪೂರಿತಂ ॥ ೧೦ ॥

ನಾನಾಫಲಯುತಂ ತದ್ವದಿಕ್ಷುದಂಡಸಮನ್ವಿತಂ ।
ಸಿತವಸ್ತ್ರಯುಗಚ್ಛನ್ನಂ ಸಿತಚಂದನಚರ್ಚಿತಂ ॥ ೧೧ ॥

ನಾನಾಭಕ್ಷ್ಯಸಮೋಪೇತಂ ಸಹಿರಣ್ಯಂ ತು ಶಕ್ತಿತಃ ।
ತಾಮ್ರಪಾತ್ರಂ ಗುಡೋಪೇತಂ ಸಹಿರಣ್ಯಂ ನಿವೇಶಯೇತ್ ॥ ೧೨ ॥

ತಸ್ಮಾದುಪರಿ ಬ್ರಹ್ಮಾಣಂ ಸೌವರ್ಣಂ ಪದ್ಮಕೋಟರೇ ।
ಕುರ್ಯಾಚ್ಛರ್ಕರಯೋಪೇತಂ ಸಾವಿತ್ರೀಂ ತಸ್ಯ ವಾಮತಃ ॥ ೧೩ ॥

---

೯. ಪುಲಸ್ತ್ಯನು ಹೇಳಿದನು :—ಎಲೈ ಭೀಷ್ಮನೇ, ವಸಿಷ್ಠಾದಿಗಳು ಪೂರ್ವದಲ್ಲಿ ದಿತಿಗೆ ಹೇಳಿದುದನ್ನೇ ನಾನು ನಿನಗೆ ವಿಸ್ತಾರವಾಗಿ ಹೇಳುತ್ತೇನೆ ಕೇಳು.

೧೦. ಜ್ಯೇಷ್ಠಮಾಸದ ಶುಕ್ಲಪಕ್ಷದ ಹುಣ್ಣಿಮೆಯದಿನ ನಿಯಮದಿಂದ ಛಿದ್ರವಾಗದಿರುವ ಕಲಶವನ್ನು ಇಡಬೇಕು. ಅದರೊಳಗೆ ಬೆಳ್ಳಗಿರುವ ಅಕ್ಕಿಯನ್ನು ತುಂಬಿರಬೇಕು.

೧೧. ಅದರ ಸುತ್ತಲೂ ಬಗೆಬಗೆಯ ಹಣ್ಣುಗಳನ್ನಿಟ್ಟಿರಬೇಕು. ಕಬ್ಬಿನಜಲ್ಲೆಯನ್ನು ಇಟ್ಟಿರಬೇಕು. ಬಿಳಿಯ ಎರಡು ಬಟ್ಟೆಗಳನ್ನು ಆ ಕಲಶಕ್ಕೆ ಹೊದ್ದಿಸಿರಬೇಕು. ಬಿಳಿಯ ಗಂಧವನ್ನು ಬಳಿದಿರಬೇಕು.

೧೨. ಅದರ ಸುತ್ತಲೂ ಬಗೆಬಗೆಯ ಭಕ್ಷ್ಯಗಳನ್ನು ಶಕ್ತ್ಯನುಸಾರ ದಕ್ಷಿಣೆಯೊಂದಿಗೆ ಇಟ್ಟಿರಬೇಕು. ಆ ಕಲಶವು ತಾಮ್ರದ್ದಾಗಿರಬೇಕು. ಅದರಲ್ಲಿ ದಕ್ಷಿಣೆಯನ್ನು ಹಾಕಿರಬೇಕು.

೧೩. ಆ ಕಲಶದಮೇಲೆ ಚಿನ್ನದಲ್ಲಿ ಪದ್ಮವನ್ನು ಮಾಡಿಸಿ ಅದರೊಳಗಡೆ ಬ್ರಹ್ಮವಿಗ್ರಹವನ್ನೂ ನಿರ್ಮಿಸಿ ಅದನ್ನಿಡಬೇಕು. ಆ ಬ್ರಹ್ಮನ ಬಲಗಡೆಯಲ್ಲಿ ಸಕ್ಕರೆಯಲ್ಲಿ ಸಾವಿತ್ರಿಯನ್ನು ಮಾಡಿಟ್ಟಿರಬೇಕು.

ಗಂಧಧೂಪಂ ತಯೋರ್ದದ್ಯಾದ್ಗೀತವಾದ್ಯಂ ಚ ಕಾರಯೇತ್ ।
ತದಭಾವೇ ಕಥಂ ಕುರ್ಯಾದ್ಯಥಾ ಪದ್ಮೇ ಪಿತಾಮಹಃ ॥ ೧೪ ॥

ಬ್ರಹ್ಮನಾಮ್ನೀಂ ಚ ಪ್ರತಿಮಾಂ ಕೃತ್ವಾ ಗುಡಮಯೀಂ ಶುಭಾಂ ।
ಶುಕ್ಲಪುಷ್ಪಾಕ್ಷತತಿಲೈರರ್ಚಯೇತ್ಪುಷ್ಪಸಂಭವಂ ॥ ೧೫ ॥

ಬ್ರಹ್ಮಾಯ ಪಾದೌ ಸಂಪೂಜ್ಯ ಜಂಘೇ ಸೌಭಾಗ್ಯದಾಯಿನೇ ।
ವಿರಿಂಚಾಯೋರುಯುಗ್ಮಂ ಚ ಮನ್ಮಥಾಯೇತಿ ವೈ ಕಟಿಂ ॥ ೧೬ ॥

ವೃಕೋದರಾಯೇತ್ಯುದರಮನಂತಾಯೇತ್ಯುರೋ ಹರೇಃ ।
ಮುಖಂ ಪದ್ಮಮುಖಾಯೇತಿ ಬಾಹುಂ ವೈ ಪದ್ಮಬಾಹವೇ ॥ ೧೭ ॥

ನಮಸ್ಸರ್ವಾತ್ಮನೇ ಮೌಳಿಂ ಪೂಜಯೇಚ್ಚಾಪಿ ಕಂಜಜಂ ।
ತತಃ ಪ್ರಭಾತೇ ತಂ ಕುಂಭಂ ಬ್ರಾಹ್ಮಣಾಯ ನಿವೇದಯೇತ್ ॥ ೧೮ ॥

---

೧೪. ಗಂಧ, ಧೂಪ, ದೀಪಗಳಿಂದ ಪೂಜಿಸಿ ಗೀತವಾದ್ಯಗಳನ್ನು ಅದರಮುಂದೆ ಮಾಡಬೇಕು. ಒಂದುವೇಳೆ ಮೇಲೆ ಹೇಳಿದ ರೀತಿಯಲ್ಲಿ ಸಾಧ್ಯವಿಲ್ಲದಿದ್ದರೆ ಬ್ರಹ್ಮ-ಪ್ರತಿಮೆಯನ್ನು ಹೇಗೆ ಮಾಡಬೇಕು? ಎಂದನು.

೧೫. ಬ್ರಹ್ಮಪ್ರತಿಮೆಯನ್ನು ಬೆಲ್ಲದಲ್ಲಿ ಮಾಡಬೇಕು. ಬಿಳಿಯ ಹೂವು, ಬಿಳಿಯ ಅಕ್ಷತೆ, ಬಿಳಿ ಎಳ್ಳುಗಳಿಂದ ಆ ಬ್ರಹ್ಮನನ್ನು ಪೂಜಿಸಬೇಕು.

೧೬-೧೭. ಬ್ರಹ್ಮನಿಗೋಸ್ಕರ ನಮಸ್ಕಾರವೆಂದು ಹೇಳಿ ಪಾದಗಳನ್ನೂ, ಸೌಭಾಗ್ಯವನ್ನು ಕೊಡುವವನಿಗೋಸ್ಕರ ನಮಸ್ಕಾರವೆಂದು ಆ ಪ್ರತಿಮೆಯ ಜಂಘೆಗಳನ್ನೂ, ವಿರಂಚಿಗೋಸ್ಕರ ನಮಸ್ಕಾರವೆಂದು ಎರಡು ತೊಡೆಗಳನ್ನೂ, ಮನ್ಮಥನಿಗೋಸ್ಕರ ನಮಸ್ಕಾರವೆಂದು ಸೊಂಟವನ್ನೂ, ವೃಕೋದರನಿಗೋಸ್ಕರ ನಮಸ್ಕಾರವೆಂದು ಹೊಟ್ಟೆಯನ್ನೂ, ಅನಂತನಿಗೋಸ್ಕರ ನಮಸ್ಕಾರವೆಂದು ಎದೆಯನ್ನೂ, ಪದ್ಮಮುಖನಿಗೋಸ್ಕರ ನಮಸ್ಕಾರವೆಂದು ಮುಖವನ್ನೂ, ಪದ್ಮಬಾಹುವಿಗೋಸ್ಕರ ನಮಸ್ಕಾರವೆಂದು ತೋಳುಗಳನ್ನೂ, ಸರ್ವಾತ್ಮನಿಗೋಸ್ಕರ ನಮಸ್ಕಾರವೆಂದು ತಲೆಯನ್ನೂ ಪೂಜಿಸಬೇಕು.

೧೮. ಇದು ರಾತ್ರಿಯಲ್ಲಿ ಮಾಡುವ ಪೂಜೆ. ಬೆಳಗಾದನಂತರ ಆ ಕಲಶ ಪ್ರತಿಮೆಗಳನ್ನು ಬ್ರಾಹ್ಮಣನಿಗೆ ಕೊಡಬೇಕು.

ಬ್ರಾಹ್ಮಣಾನ್ಭೋಜಯೇದ್ಭಕ್ತ್ಯಾ ಸ್ವಯಂ ತು ಲವಣಂ ವಿನಾ ।
ಭಕ್ತ್ಯಾ ಪ್ರದಕ್ಷಿಣಾಂ ದದ್ಯಾದಿಮಂ ಮಂತ್ರಮುದೀರಯೇತ್ ॥ ೧೯ ॥

ಪ್ರೀಯತಾಮತ್ರ ಭಗವಾನ್ಸರ್ವಲೋಕಪಿತಾಮಹಃ ।
ಹೃದಯೇ ಸರ್ವಲೋಕಾನಾಂ ಯಸ್ತ್ವಾನಂದೋಽಭಿಧೀಯತೇ ॥ ೨೦ ॥

ಅನೇನ ವಿಧಿನಾ ಯಸ್ತು ಮಾಸಿ ಮಾಸಿ ಸಮಾಚರೇತ್ ।
ಉಪವಾಸೀ ಪೌರ್ಣಮಾಸ್ಯಾಮರ್ಚಯೇದ್ಬ್ರಹ್ಮಮವ್ಯಯಂ ॥ ೨೧ ॥

ಫಲಮೇಕಂ ಚ ಸಂಪ್ರಾಶ್ಯ ಶಯ್ಯಾಯಾಂ ಭೂತಳೇ ಸ್ವಪೇತ್ ।
ತತ್ರಸ್ತ್ರಯೋದಶೇ ಮಾಸಿ ಘೃತಧೇನುಸಮನ್ವಿತಾಂ ॥ ೨೨ ॥

ಶಯ್ಯಾಂ ದದ್ಯಾದ್ವಿರಿಂಚಾಯ ಸರ್ವೋಪಸ್ಕರಸಂಯುತಾಂ
ಬ್ರಹ್ಮಾಣಂ ಕಾಂಚನಂ ಕೃತ್ವಾ ಸಾವಿತ್ರೀಂ ರಾಜತೀಂ ತಥಾ ॥ ೨೩ ॥

---

೧೯-೨೦. ಭಕ್ತಿಯಿಂದ ಬ್ರಾಹ್ಮಣರಿಗೆ ಅನ್ನವನ್ನು ಹಾಕಿ ಊಟಮಾಡಿಸ ಬೇಕು. ತಾನು ಆ ದಿನ ಉಪ್ಪುಹಾಕದಿರುವ ಪದಾರ್ಥಗಳನ್ನು ತಿನ್ನಬೇಕು. ಭಕ್ತಿಯಿಂದ ಪ್ರದಕ್ಷಿಣೆಮಾಡಿ ಎಲ್ಲಾ ಪ್ರಾಣಿಗಳ ಹೃದಯದಲ್ಲಿಯೂ ಇರುವ, ಆನಂದ ಸ್ವರೂಪನೆಂದು ಯಾವನನ್ನು ಹೇಳುತ್ತೇವೆಯೋ ಅಂತಹ ಸರ್ವಲೋಕಪಿತಾಮಹ ನಾದ ಭಗವಂತನು ಪ್ರೀತಿಹೊಂದಲಿ ಎಂಬ ಮಂತ್ರವನ್ನು ಹೇಳಬೇಕು.

೨೧. ಪ್ರತಿತಿಂಗಳಿನ ಹುಣ್ಣಿಮೆಯಲ್ಲೂ ಉಪವಾಸ ಮಾಡುತ್ತ ಈ ರೀತಿಯಿಂದ ನಿಯಮದಿಂದ ಆ ಬ್ರಹ್ಮನನ್ನು ಪೂಜಿಸಬೇಕು.

೨೨. ಹಣ್ಣನ್ನುಮಾತ್ರ ತಿಂದು, ನೆಲದಮೇಲೆ ಹಾಸಿಗೆಹಾಸಿಕೊಂಡು ಮಲಗ ಬೇಕು. ಹೀಗೆ ಹದಿಮೂರುತಿಂಗಳು ಮಾಡಿ ಕೊನೆಯತಿಂಗಳಲ್ಲಿ ಘೃತಧೇನುವಿನಿಂದ ಕೂಡಿದ ಹಾಸಿಗೆಯನ್ನು ಅದಕ್ಕೆ ಬೇಕಾದ ಸಾಮಗ್ರಿಗಳೊಡನೆ ಬ್ರಹ್ಮನ ಪ್ರೀತ್ಯರ್ಥ ವಾಗಿ ಕೊಡಬೇಕು.

೨೩. ಚಿನ್ನದಲ್ಲಿ ಬ್ರಹ್ಮನ ಪ್ರತಿಮೆಯನ್ನೂ, ಬೆಳ್ಳಿಯಲ್ಲಿ ಸಾವಿತ್ರಿಯ ಪ್ರತಿಮೆ ಯನ್ನೂ ಮಾಡಬೇಕು.

ಯ ಏವ ವಿಶ್ವಕರ್ತಾ ಚ ಸಾವಿತ್ರೀ ಚ ಫಲಸ್ಯ ತು ।
ವಸ್ತ್ರೈರ್ದ್ವಿಜಂ ಸಪತ್ನೀಕಂ ಪೂಜ್ಯ ಶಕ್ತ್ಯಾ ವಿಭೂಷಣೈಃ ॥ ೨೪ ॥

ಶಕ್ತ್ಯಾ ಗವಾದಿಕಂ ದದ್ಯಾತ್ಪ್ರೀಯತಾಮಿತ್ಯುದೀರಯೇತ್ ।
ಹೋಮಂ ಶುಕ್ಲೈಸ್ತಿಲೈಃ ಕುರ್ಯಾದ್ಬ್ರಹ್ಮನಾಮಾನಿ ಕೀರ್ತಯೇತ್ ॥ ೨೫ ॥

ಗವ್ಯೇನ ಸರ್ಪಿಷಾ ತದ್ವತ್ಪಾಯಸೇನ ಚ ಧರ್ಮವಿತ್
ದ್ವಿಜೇಭ್ಯೋ ಭೋಜನಂ ದದ್ಯಾದ್ವಿತ್ತಶಾಠ್ಯವಿವರ್ಜಿತಃ ॥ ೨೬ ॥

ಇಕ್ಷುದಂಡಂ ತತೋ ದದ್ಯಾತ್ಪುಷ್ಪಮಾಲ್ಯಂ ಚ ಶಕ್ತಿತಃ ।
ಯಃ ಕುರ್ಯಾದ್ವಿಧಿನಾನೇನ ಪೌರ್ಣಮಾಸ್ಯಾಂ ಸ್ತ್ರಿಯೋಽಪಿ ವಾ ॥ ೨೭ ॥

ಸರ್ವಪಾಪವಿನಿರ್ಮುಕ್ತಃ ಪ್ರಾಪ್ನೋತಿ ಬ್ರಹ್ಮ ಸಾಂಪ್ರತಂ ।
ಇಹಲೋಕೇ ಶ್ರಿಯಂ ಪುತ್ರಾನ್ಧರ್ಮಂ ಸೌಭಾಗ್ಯಮಶ್ನುತೇ ॥ ೨೮ ॥

---

೨೪. ಈ ಪ್ರತಿಮೆಯು ಬಹು ಸ್ವಲ್ಪವೆಂದರೆ ಒಂದು ಸಲಕ್ಕಾದರೂ ಮಾಡಿಸ ಬೇಕು. ಅದನ್ನು ದಾನತೆಗೆದುಕೊಳ್ಳುವ ಮನುಷ್ಯನನ್ನೂ, ಅವನ ಹೆಂಡತಿಯನ್ನೂ, ವಸ್ತ್ರಗಳಿಂದಲೂ, ಶಕ್ತ್ಯನುಗುಣವಾಗಿ ಒಡವೆಗಳಿಂದಲೂ ಪೂಜಿಸಬೇಕು. ಅವನಿಗೆ ದಾನಮಾಡಬೇಕು.

೨೫. ಶಕ್ತ್ಯನುಗುಣವಾಗಿ ಗೋವು ಮುಂತಾದುವನ್ನ ದಾನಮಾಡಿ ಬ್ರಹ್ಮನು ತೃಪ್ತನಾಗಲೆಂದು ಹೇಳಬೇಕು.

೨೬. ಬಿಳಿಯ ಎಳ್ಳಿನಿಂದ ಹೋಮವನ್ನು ಮಾಡಬೇಕು. ಬ್ರಹ್ಮನ ನಾಮಗಳನ್ನು ಕೀರ್ತನೆಮಾಡುತ್ತಿರಬೇಕು. ಹಸುವಿನ ಹಾಲು ತುಪ್ಪಗಳಿಂದ ಬ್ರಾಹ್ಮಣರಿಗೆ ಭೋಜನಮಾಡಿಸಬೇಕು. ದುಡ್ಡಿನಲ್ಲಿ ಲೋಭತನ ಮಾಡಬಾರದು.

೨೭-೨೮. ಕಬ್ಬಿನಜಲ್ಲೆಯನ್ನೂ ಹೂವಿನಮಾಲೆಯನ್ನೂ ಶಕ್ತ್ಯನುಸಾರ ಕೊಡಬೇಕು. ಹುಣ್ಣಿಮೆಯ ದಿನ ಗಂಡಸಾಗಲಿ ಹೆಂಗಸಾಗಲಿ ಈ ರೀತಿ ಮಾಡಿದರೆ ಎಲ್ಲಾ ವಿಧವಾದ ಪಾಪಗಳಿಂದಲೂ ಮುಕ್ತರಾಗಿ ಬ್ರಹ್ಮನನ್ನು ಹೊಂದುತ್ತಾರೆ. ಈ ಲೋಕದಲ್ಲಿಯೂ ಸಂಪತ್ತನ್ನೂ, ಮಕ್ಕಳನ್ನೂ, ಧರ್ಮವನ್ನೂ, ಸೌಭಾಗ್ಯವನ್ನೂ ಹೊಂದುತ್ತಾರೆ

ಯೋ ಬ್ರಹ್ಮಾ ಸ ಸ್ಮೃತೋ ವಿಷ್ಣುಃ ಸೋಽನಂತಾತ್ಮಾ ಮಹೇಶ್ವರಃ ।
ಸುಖಾರ್ಥೀ ಕಾಮರೂಪೇಣ ಸ್ಮರೇದ್ದೇವಂ ಪಿತಾಮಹಂ ॥ ೨೯ ॥

ಏವಂ ಶ್ರುತ್ವಾ ಚಕಾರಾಸೌ ದಿತಿಸ್ಸರ್ವಮಶೇಷತಃ ।
ಕಶ್ಯಪೋ ವ್ರತಮಾಹಾತ್ಮ್ಯಾದಾಗತ್ಯ ಪರಯಾ ಮುದಾ ॥ ೩೦ ॥

ಚಕಾರ ಕರ್ಕಶಾಂ ಭೂಯೋ ರೂಪಲಾವಣ್ಯಸಂಯುತಾಂ ।
ಪರ್ಣೈರಾಚ್ಛಾದಯಾಮಾಸ ಸಾ ತು ವವ್ರೇ ವರಂ ಪರಂ ॥ ೩೧ ॥

ಪುತ್ರಂ ಶಕ್ರವಧಾರ್ಥಾಯ ಸಮೃದ್ಧಮಮಿತೌಜಸಂ ।
ವರಯಾಮಿ ಮಹಾತ್ಮಾನಂ ಸರ್ವಾಮರನಿಷೂದನಂ ॥ ೩೨ ॥

ಉವಾಚ ಕಶ್ಯಪೋ ವಾಕ್ಯಮಿಂದ್ರಹಂತಾರಮೂರ್ಜಿತಂ ।
ಪ್ರದಾಸ್ಯಾಮ್ಯಹಮೇತೇನ ಕಿಂ ತ್ವೇತತ್ಕ್ರಿಯತಾಂ ಶುಭೇ ॥ ೩೩ ॥

---

೨೯. ಯಾವನನ್ನು ಬ್ರಹ್ಮನೆಂದೆನ್ನುತ್ತೇವೋ ಅವನೇ ವಿಷ್ಣುವು. ಅವನೇ ಎಲ್ಲೆಡೆಯಲ್ಲೂ ಇರುವ ಮಹೇಶ್ವರನು. ಸುಖವನ್ನಪೇಕ್ಷಿಸುವವನು, ಬೇಕಾದ ಆಕಾರದಿಂದ ಸ್ವಾಮಿಯಾದ ಬ್ರಹ್ಮನನ್ನು ಸ್ಮರಿಸಬೇಕು.

೩೦-೩೧. ದಿತಿಯು ಈ ವಿಷಯಗಳನ್ನು ತಿಳಿದುಕೊಂಡು ಸ್ವಲ್ಪವೂ ಕುಂದು ಬರದಂತೆ ಜ್ಯೇಷ್ಠಪೂರ್ಣಿಮಾವ್ರತವನ್ನು ಮಾಡಿದಳು. ಆ ವ್ರತದಮಹಿಮೆಯಿಂದ ಕಶ್ಯಪನು ಬಹು ಸಂತೋಷದಿಂದ ಬಂದು, ಆಕೆಯನ್ನು ಮತ್ತೆ ರೂಪು, ಲಾವಣ್ಯ ಗಳುಳ್ಳವಳನ್ನಾಗಿ ಮಾಡಿದನು. ಮತ್ತು ಬೇಕಾದ ವರಗಳನ್ನು ಕೊಟ್ಟನು. ಆಕೆಯು ಬೇಕಾದ ವರಗಳನ್ನು ಕೇಳಿಕೊಂಡಳು.

೩೨. ಆಕೆಯು ಇಂದ್ರನನ್ನು ಕೊಲ್ಲತಕ್ಕ, ವಿಜಯಿಯಾದ, ಬಲಿಷ್ಠನಾದ, ಮಹಾತ್ಮನಾದ, ಎಲ್ಲ ದೇವತೆಗಳನ್ನೂ ಕೊಲ್ಲತಕ್ಕ ಮಗನನ್ನು ಕೊಡೆಂದು ಕೇಳಿ ಕೊಂಡಳು.

೩೩. ಆಗ ಕಶ್ಯಪನು ಇಂದ್ರನನ್ನು ಕೊಲ್ಲತಕ್ಕ ಬಲಿಷ್ಠನಾದ ಮಗನನ್ನು ಈ ವ್ರತದಿಂದ ಕೊಡುತ್ತೇನೆ. ಆದರೆ ಇನ್ನೊಂದು ಕೆಲಸವನ್ನು ಮಾಡಬೇಕು ಎಂದನು.

**ಆಪಸ್ತಂಬಃ ಕರೋತ್ವಿಷ್ಟಿಂ ಪುತ್ರೀಯಾಮದ್ಯ ಸುಸ್ತನಿ ।**
**ವಿಧಾಸ್ಯಾಮಿ ತತೋ ಗರ್ಭಂ ಸ್ಪೃಷ್ಟ್ವಾಹಂ ತೇ ತತಶ್ಶುಭಂ ॥ ೩೪ ॥**

**ಭವಿಷ್ಯತ್ಯೇವ ತೇ ಗರ್ಭೋ ದಿವಿ ಇಂದ್ರನಿಷೂದನಃ ।**
**ಆಪಸ್ತಂಬಸ್ತತಶ್ಚಕ್ರೇ ಪುತ್ರೇಷ್ಟಿಂ ದ್ರವಿಣಾಧಿಕಾಂ ॥ ೩೫ ॥**

**ಇಂದ್ರಶತ್ರೋ ಭವಸ್ವೇತಿ ಜುಹಾವ ಬಹುವಿಸ್ತರಂ ।**
**ದೇವಾಶ್ಚ ಮುಮುಹುರ್ದೈತ್ಯಾ ವಿಮುಖಾಶ್ಚೈವ ದಾನವಾಃ**
**ದಿತ್ಯಾಂ ಗರ್ಭಮಥಾಧತ್ತ ಕಶ್ಯಪಃ ಪ್ರಾಹ ತಾಂ ಪುನಃ ॥ ೩೬ ॥**

**॥ ಕಶ್ಯಪ ಉವಾಚ ॥**

**ಮುಖಂ ತೇ ಚಂದ್ರಪ್ರತಿಮಂ ಸ್ತನೌ ಬಿಲ್ವಫಲೋಪಮೌ ।**
**ಅಧರೌ ವಿದ್ರುಮಾಕಾರೌ ವರ್ಣಶ್ಚಾತೀವ ಶೋಭನಃ ॥ ೩೭ ॥**

**ತ್ವಾಂ ದೃಷ್ಟ್ವಾಹಂ ವಿಶಾಲಾಕ್ಷಿ ವಿಸ್ಮರಾಮಿ ಸ್ವಕಾಂ ತನುಂ ।**
**ತದೇವಂ ಗರ್ಭಸ್ಸುಶ್ರೋಣಿ ಹಸ್ತೇನೋಪ್ತಸ್ತನೌ ತವ ॥ ೩೮ ॥**

---

೩೪. ಎಲೈ ಒಳ್ಳೆಯ ಸ್ತನಗಳುಳ್ಳವಳೇ, ಆಪಸ್ತಂಬಮುನಿಯು ನನಗೋಸ್ಕರ ಪುತ್ರಕಾಮೇಷ್ಟಿಯನ್ನು ಮಾಡಲಿ. ಅನಂತರ ನಿನ್ನನ್ನು ರಮಿಸಿ ಒಳ್ಳೆಯ ಗರ್ಭವು ಆಗುವಂತೆ ಮಾಡುತ್ತೇನೆ.

೩೫. ಆಗ ಸ್ವರ್ಗದಲ್ಲಿನ ಇಂದ್ರನನ್ನು ಕೊಲ್ಲುವಂತಹ ಗರ್ಭವು ನಿನ್ನಲ್ಲಿ ಖಂಡಿತವಾಗಿಯೂ ಉತ್ಪನ್ನವಾಗುತ್ತದೆ. ಎನ್ನಲು ಆಪಸ್ತಂಬನು ಬಹುವಾಗಿ ದ್ರವ್ಯವನ್ನು ವ್ಯಯಮಾಡಿ ಪುತ್ರೇಷ್ಟಿಯನ್ನು ಮಾಡಿದನು.

೩೬. ಆ ಆಪಸ್ತಂಬನು ಇಂದ್ರಶತ್ರುವಾಗಿ ಆಗು ಎಂದು ಹೇಳಿ ದೊಡ್ಡದಾಗಿ ಹೋಮವನ್ನು ಮಾಡಿದನು. ದೇವತೆಗಳು ಮೂರ್ಛೆಹೋದರು. ದೈತ್ಯರೂ, ದಾನವರೂ ಕ್ಲೇಶಗೊಂಡರು. ಅನಂತರ ದಿತಿಯಲ್ಲಿ ಕಶ್ಯಪನು ಗರ್ಭವನ್ನು ಉತ್ಪಾದಿಸಿ ಇಂತೆಂದನು.

೩೭-೩೮. ಎಲೈ ದಿತಿಯೇ, ನಿನ್ನ ಮುಖವು ಚಂದ್ರನಂತೆ ಪ್ರಕಾಶಮಾನವಾಗಿದೆ. ಮೊಲೆಗಳು ಬಿಲ್ವಪತ್ರೆಯ ಕಾಯಿನಂತೆ ದುಂಡಾಗಿವೆ. ತುಟಿಗಳು ಹವಳದ ಬಣ್ಣವನ್ನು ಹೊಂದಿವೆ. ನಿನ್ನ ಬಣ್ಣವೂ, ಸೌಂದರ್ಯವೂ ಬಹುಚೆನ್ನಾಗಿದೆ. ಎಲೈ ವಿಶಾಲಾಕ್ಷಿಯೇ, ನಿನ್ನನ್ನು ನೋಡಿ ನಾನು ನನ್ನನ್ನೇ ಮರೆತವನಂತಾಗಿದ್ದೇನೆ. ಈ ರೀತಿಯಾಗಿ ನಿನ್ನ ದೇಹದಲ್ಲಿ ಗರ್ಭವನ್ನು ಸೃಷ್ಟಿಮಾಡಿದ್ದೇನೆ.

ಪ್ರಿಯಾ ಯತ್ನೋ ವಿಧಾತವ್ಯೋ ಅಸ್ಮಿನ್ಗರ್ಭೇ ವರಾನನೇ ।
ಸಂವತ್ಸರಶತಂ ತ್ವೇಕಮಸ್ಮಿನ್ನೇವ ತಪೋವನೇ ॥ ೬೯ ॥

ಸಂಧ್ಯಾಯಾಂ ನೈವ ಭೋಕ್ತವ್ಯಂ ಗರ್ಭಿಣ್ಯಾ ವರವರ್ಣಿನಿ ।
ನ ಸ್ಥಾತವ್ಯಂ ನ ಗನ್ತವ್ಯಂ ವೃಕ್ಷಮೂಲೇ ಕದಾಚನ ॥ ೭೦ ॥

ನೋಪಸ್ಕರೇಷೂಪವಿಶೇನ್ಮುಸಲೋಲೂಖಲಾದಿಷು ।
ಜಲಂ ಚ ನಾವಗಾಹೇತ ಶೂನ್ಯಾಗಾರಂ ಚ ನೋ ವಿಶೇತ್ ॥ ೭೧ ॥

ವಲ್ಮೀಕೇಷು ನ ತಿಷ್ಠೇತ ನ ಚೋದ್ವಿಗ್ನಮನಾ ಭವೇತ್ ।
ವಿಲಿಖೇನ್ನ ನಖೈರ್ಭೂಮಿಂ ಶೂನ್ಯಾಗಾರೇ ನ ಭಸ್ಮನಾ ॥ ೭೨ ॥

ನ ಚಾಲಸಾ ಸದಾ ತಿಷ್ಠೇದ್ವ್ಯಾಯಾಮಂ ಚೈವ ವರ್ಜಯೇತ್ ।
ನ ತುಷಾಂಗಾರಭಸ್ಮಾಸ್ಥಿಕಪಾಲೇಷು ಸಮಾವಿಶೇತ್ ॥ ೭೩ ॥

---

೬೯. ನೀನು ಒಂದುನೂರು ವರ್ಷಗಳವರೆಗೂ ಈ ಗರ್ಭವನ್ನು ಈ ವನದಲ್ಲಿಯೇ ಇದ್ದು ಕಾಪಾಡುವುದರಲ್ಲಿ ಪ್ರಯತ್ನಪಡು.

೭೦-೭೧. ಎಲೈ ಉತ್ತಮ ಶರೀರಳೇ, ಗರ್ಭಿಣಿಯಾಗಿರುವಾಗ ಸಂಧ್ಯಾಕಾಲಗಳಲ್ಲಿ ಊಟಮಾಡಬಾರದು. ಯಾವಾಗಲೂ ಮರದ ಬುಡದಲ್ಲಿ ಕೂರಲೂಬಾರದು ಹೋಗಲೂ ಬಾರದು. ಮನೆ ಕೆಲಸದ ಸಾಮಾನುಗಳಾದ ಒನಕೆ, ಒರಳು ಮುಂತಾದುವುಗಳ ಮೇಲೆ ಕುಳಿತುಕೊಳ್ಳಬಾರದು. ನೀರಿನಲ್ಲಿ ಮುಳುಗಿ ಸ್ನಾನ ಮಾಡಬಾರದು. ಪಾಳುಮನೆಗೆ ಹೋಗಬಾರದು.

೭೨. ಹುತ್ತದಮೇಲೆ ನಿಲ್ಲಬಾರದು. ಕೂತುಕೊಳ್ಳಲೂ ಬಾರದು. ಮನಸ್ಸಿನಲ್ಲಿ ಖೇದವನ್ನಾಗಲಿ, ಕೋಪವನ್ನಾಗಲಿ ಹೊಂದಬಾರದು. ಉಗುರಿನಿಂದ ಭೂಮಿಯನ್ನು ಕೆರೆಯಬಾರದು, ಪಾಳುಮನೆಯಲ್ಲಿರಬಾರದು, ಬೂದಿಯಿಂದ ಬರೆಯಬಾರದು.

೭೩. ಸೋಮಾರಿಯಾಗಿ ಯಾವಾಗಲೂ ಕುಳಿತಿರಬಾರದು. ಕೆಲಸವನ್ನು ಮಾಡಬಾರದು ಹೊಟ್ಟು, ಇದ್ದಲು, ಬೂದಿ, ಮೂಳೆ, ಬಡಕಲಮಡಕೆ ಚೂರುಗಳ ಮೇಲೆ ನಿಲ್ಲಬಾರದು. ಕೂತುಕೊಳ್ಳಲೂ ಬಾರದು.

ದತ್ತೋಽತ್ರಿಶ್ಚ್ಯವನಸ್ತಂಬಃ ಪ್ರಾಣಃ ಕಶ್ಯಪ ಏವ ಚ ।
ಅರ್ವಾ ಬೃಹಸ್ಪತಿಶ್ಚೈವ ಸಪ್ತ ಸಪ್ತರ್ಷಯೋಽಭವನ್ ॥ ೮೭ ॥

ತದಾ ದೇವಾಶ್ಚ ತುಷಿತಾಃ ಸ್ಮೃತಾಃ ಸ್ವಾರೋಚಿಷೇಂತರೇ ।
ಹವೀಂದ್ರಸ್ಸುಕೃತೋ ಮೂರ್ತಿರಾಪೋ ಜ್ಯೋತೀರಥಸ್ಸ್ಮೃತಃ ॥ ೮೮ ॥

ವಸಿಷ್ಠಸ್ಯ ಸುತಾಃ ಪಂಚ ಯೇ ಪ್ರಜಾಪತಯಸ್ತದಾ ।
ದ್ವಿತೀಯಮೇತತ್ಕಥಿತಂ ಮನ್ವಂತರಮತಃ ಪರಂ ॥ ೮೯ ॥

ಅನ್ಯಚ್ಚೈವ ಪ್ರವಕ್ಷ್ಯಾಮಿ ತಥಾ ಮನ್ವಂತರಂ ಶುಭಂ ।
ಮನುರ್ನಾಮೌತ್ತಮಿಸ್ತತ್ರ ದಶ ಪುತ್ರಾನಜೀಜನತ್ ॥ ೯೦ ॥

ಈಷ ಊರ್ಜಸ್ತನೂಜಶ್ಚ ಶುಚಿಶ್ಶುಕ್ರಸ್ತಥೈವ ಚ ।
ಮಧುಶ್ಚ ಮಾಧವಶ್ಚೈವ ನಭಸ್ಯೋಽಥ ನಭಸ್ತಥಾ ॥ ೯೧ ॥

---

೮೭. ದತ್ತ, ಅತ್ರಿ, ಚ್ಯವನಸ್ತಂಬ, ಪ್ರಾಣ, ಕಶ್ಯಪ, ಅರ್ವಾ, ಬೃಹಸ್ಪತಿ ಈ ಏಳು ಜನರು ಸಪ್ತರ್ಷಿಗಳಾದರು.

೮೮-೮೯. ಆ ಸ್ವಾರೋಚಿಷ ಮನ್ವಂತರದಲ್ಲಿ ದೇವತೆಗಳು ಸಂತೋಷದಿಂದಿದ್ದರು. ಹವೀಂದ್ರ, ಸುಕೃತ, ಮೂರ್ತಿ, ಆಪ, ಜ್ಯೋತೀರಥ ಎಂಬದಾಗಿ ಈ ಐದು. ಜನ ವಸಿಷ್ಠನ ಮಕ್ಕಳು ಪ್ರಜಾಪತಿಗಳಾಗಿದ್ದರು. ಇದು ಎರಡನೆಯ ಮನ್ವಂತರವು ಅನಂತರ ಕೇಳು.

೯೦. ಮತ್ತೊಂದಾದ ಯೋಗ್ಯವೂ, ಶುಭವೂ, ಆದ ಮನ್ವಂತರವನ್ನು ಹೇಳುತ್ತೇನೆ. ಈ ಮನ್ವಂತರದಲ್ಲಿ ಔತ್ತಮಿ ಎಂಬ ಮನುವು ಅಧಿಪತಿಯು. ಆದ್ದರಿಂದ ಇದಕ್ಕೆ ಔತ್ತಮಿ ಮನ್ವಂತರವೆಂದು ಹೆಸರು ಈತನಿಗೆ ಹತ್ತು ಜನರು ಮಕ್ಕಳಾದರು.

೯೧. ಈಷ, ಊರ್ಜ, ತನೂಜ, ಶುಚಿ, ಶುಕ್ರ, ಮಧು, ಮಾಧವ, ನಭಸ್ಯ, ನಭ, ಸಹ, ಎಂಬದಾಗಿ ಈ ಹತ್ತು ಜನ ಕೀರ್ತಿಕರರಾಗಿಯೂ ಉದಾರಿಗಳಾಗಿಯೂ ಇದ್ದರು.

ಕೃಶಾಹಂ ದುರ್ಭಗಾ ಚೈವ ವಾರ್ಧಕ್ಯಂ ಮಮ ಚಾಗತಂ ।
ಸ್ತನೌ ಮೇ ಚಲಿತೌ ಸ್ಥಾನಾನ್ಮುಖಂ ಚ ವಲಿಭಂಗುರಂ ॥ ೪೯ ॥

ಏವಂವಿಧಾ ತ್ವಯಾ ಚಾಹಂ ಕೃತಾಹಂ ನ ವದೇತ್ಕ್ವಚಿತ್ ।
ಸ್ವಸ್ತ್ಯಸ್ತು ತೇ ಗಮಿಷ್ಯಾಮಿ ತಥೇತ್ಯುಕ್ತಸ್ತ್ವಯಾ ಪುನಃ ॥ ೫೦ ॥

ಪಶ್ಯತಾಂ ಸರ್ವಭೂತಾನಾಂ ತತ್ರೈವಾಂತರಧೀಯತ ।
ತತೋ ಭರ್ತೃರ್ವಚಶ್ಶ್ರುತ್ವಾ ವಿಧಿನಾ ಸಮತಿಷ್ಠತ ॥ ೫೧ ॥

ಅಥ ಭೀತಸ್ತಥೇಂದ್ರೋಽಪಿ ದಿತೇಃ ಪಾರ್ಶ್ವಮುಪಾಗತಃ ।
ವಿಹಾಯ ದೇವಸದನಂ ತಾಂ ಶುಶ್ರೂಷುರವಸ್ಥಿತಃ ॥ ೫೨ ॥

ದಿತೇಶ್ಛಿದ್ರಂ ಪರಿಪ್ರೇಪ್ಸುರಭವತ್ಪಾಕಶಾಸನಃ ।
ವಿಪರೀತೋ ದರವ್ಯಗ್ರಃ ಪ್ರಸನ್ನವದನೋ ಬಹಿಃ ॥ ೫೩ ॥

೪೯-೫೦. ನಾನು ಬಡಕಲಾಗಿದ್ದೇನೆ, ದರಿದ್ರಳೂ ವಿಕಾರಿಣಿಯೂ ಆದೆನು. ನನಗೆ ಮುಪ್ಪು ಬಂದಿತು, ನನ್ನ ಮೊಲೆಗಳು ತಮ್ಮ ಜಾಗಗಳನ್ನು ಬಿಟ್ಟು ಜೋಲು ಬಿದ್ದುವು, ಮುಖದಲ್ಲಿ ಸುಕ್ಕು ಬಂದಿತು, ಈ ರೀತಿ ನನಗಾಗುವಂತೆ ನೀನು ಮಾಡಿದ್ದೀಯೆ ಎಂದು ನನ್ನನ್ನು ನಿಂದಿಸಬೇಡ.

೫೧. ನಿನಗೆ ಮಂಗಳವಾಗಲಿ. ನಾನು ಹೋಗುತ್ತೇನೆ, ಎನ್ನಲು ಆಕೆಯು ಹಾಗೇ ಆಗಲಿ ಎಂದಳು. ಅನಂತರ ಎಲ್ಲರೂ ನೋಡುತ್ತಿರುವಂತೆಯೇ ಆತನು ಹೊರಟುಹೋದನು. ಅನಂತರ ಆ ದಿತಿಯು ಗಂಡನು ಹೇಳಿದಂತೆ ನಿಯಮದಿಂದಿದ್ದಳು.

೫೨. ಅನಂತರ ಇಂದ್ರನು ಹೆದರಿಕೊಂಡು ಸ್ವರ್ಗವನ್ನು ಬಿಟ್ಟು ಆಕೆಯ ಶುಶ್ರೂಷೆಗೋಸ್ಕರ ಆಕೆಯ ಬಳಿಗೆ ಬಂದು ಸಿದ್ಧನಾಗಿದ್ದನು.

೫೩. ಆ ಇಂದ್ರನು ದಿತಿಯ ತಪ್ಪನ್ನೇ ಹುಡುಕುತ್ತಾ ನಿಂತನು. ಒಳಗೆ ಹೆದರುತ್ತ ಹೊರಗೆ ಸುಮುಖನಾಗಿ ಕಾಣುತ್ತ ಕಪಟಿಯಾಗಿದ್ದನು.

ಅಜಾನನ್ಸ್ವಿಂತು ತತ್ಕಾರ್ಯಮಾತ್ಮಾನಶ್ಶುಭಮಾಚರನ್ ।
ತತೋ ವರ್ಷಶತಾಂತೇ ಸಾ ನ್ಯೂನೇ ತು ದಿವಸೈಸ್ತ್ರಿಭಿಃ ॥ ೩೪ ॥

ಮೇನೇ ಕೃತಾರ್ಥಮಾತ್ಮಾನಂ ಪ್ರೀತ್ಯಾ ವಿಸ್ಮಿತಮಾನಸಾ ।
ಅಕೃತ್ವಾ ಪಾದಯೋಶ್ಶೌಚಂ ಶಯಾನಾ ಮುಕ್ತಮೂರ್ಧಜಾ ॥ ೩೫ ॥

ನಿದ್ರಾಭರಸಮಾಕ್ರಾಂತಾ ದಿವಾಽಪರಶಿರಾಃ ಕ್ವಚಿತ್ ।
ತತಸ್ತದಂತರಂ ಲಬ್ಧ್ವಾ ಪ್ರವಿಶ್ಯಾಂತಶ್ಶಚೀಪತಿಃ ॥ ೩೬ ॥

ವಜ್ರೇಣ ಸಪ್ತಧಾ ಚಕ್ರೇ ತಂ ಗರ್ಭಂ ತ್ರಿದಶಾಧಿಪಃ ।
ತತಸ್ಸಪ್ತೈವ ತೇ ಜಾತಾಃ ಕುಮಾರಾಸ್ಸೂರ್ಯವರ್ಚಸಃ ॥ ೩೭ ॥

ರುದಂತಸ್ಸಪ್ತ ತೇ ಬಾಲಾ ನಿಷಿದ್ಧಾ ದಾನವಾರಿಣಾ ।
ಭೂಯೋಽಪಿ ರುದಮಾನಾಂಸ್ತಾನೇಕೈಕಂ ಸಪ್ತಧಾ ಹರಿಃ ॥ ೩೮ ॥

---

೩೪-೩೫. ತನಗೆ ಒಳ್ಳೆಯದನ್ನು ಮಾಡಿಕೊಳ್ಳಲು ಸಮಯ ನೋಡುತ್ತಾ, ತಪಕ್ಕೆ ಏನು ಮಾಡಬೇಕೆಂಬುದನ್ನು ತಿಳಿಯದೆ ಇದ್ದನು. ಹೀಗಿರಲು ಗರ್ಭಕ್ಕೆ ನೂರು ವರ್ಷಗಳು ತುಂಬಿದುವು. ಮೂರು ದಿನಗಳು ಮಾತ್ರ ಕಮ್ಮಿಯಾಗಿದ್ದುವು. ಹೀಗಾಗಲು ಆ ದಿತಿಯು ತನ್ನ ಕೆಲಸವು ಕೈಗೂಡಿತೆಂದು ಸಂತೋಷಪಟ್ಟುಕೊಂಡಳು.

೩೬. ಇನ್ನು ನೂರು ವರ್ಷಕ್ಕೆ ಮೂರು ದಿನಗಳು ಇರುವಾಗ ಕಾಲುಗಳನ್ನು ತೊಳೆದುಕೊಳ್ಳದೆ ನಿದ್ದೆಮಾಡಲಿಚ್ಛಿಸಿ ಕೂದಲನ್ನು ಕೆದರಿಕೊಂಡು ಹಗಲಿನಲ್ಲಿ ನಿದ್ದೆಯ ಭರದಿಂದ ಸೆಳೆಯಲ್ಪಟ್ಟು, ಮಂಡಿಗಳ ಮಧ್ಯದಲ್ಲಿ ತೂಕಡಿಕೆಯಿಂದ ತಲೆಯನ್ನು ಬಗ್ಗಿಸಿಕೊಂಡು ನಿದ್ರಿಸಿದಳು.

೩೭. ಇದೇ ಸಮಯವನ್ನು ಕಾಯುತ್ತಿದ್ದ ಆ ಇಂದ್ರನು ಆಕೆಯ ಹೊಟ್ಟೆಯೊಳಕ್ಕೆ ಸೂಕ್ಷ್ಮರೂಪದಿಂದ ನುಗ್ಗಿ ವಜ್ರಾಯುಧದಿಂದ ಆ ಗರ್ಭವನ್ನು ಏಳು ಭಾಗವಾಗಿ ಸೀಳಿದನು. ಅನಂತರ ಆ ಗರ್ಭವು ಸೂರ್ಯನಂತೆ ಪ್ರಕಾಶವುಳ್ಳ ಏಳು ಮಕ್ಕಳಾಗಿ ಆಯಿತು.

೩೮. ಆ ಏಳು ಮಕ್ಕಳು ಅಳುತ್ತಿರಲು ಇಂದ್ರನು ಬೇಡಬೇಡವೆಂದು ಹೆದರಿಸುತ್ತಾ ಮತ್ತೆ ಆ ಏಳು ಮಕ್ಕಳನ್ನೂ ಒಂದೊಂದನ್ನೂ ಏಳೇಳು ಭಾಗವಾಗಿ ಮತ್ತೆ ಕತ್ತರಿಸಿದನು.

ಟಚ್ಛೇದ ವೃತ್ರಹನ್ತಾ ವೈ ಪುನಸ್ತೂದರಸಂಸ್ಥಿತಾನ್ ।
ಏವಮೇಕೋನಪಂಚಾಶದ್ಭೂತಾಸ್ತೇ ರುರುದುರ್ಭೃಶಂ । ॥ ೫೯ ॥

ಇಂದ್ರೋ ನಿವಾರಯಾಮಾಸ ಮಾ ರುದಧ್ವಂ ಪುನಃ ಪುನಃ ।
ತತಸ್ಸ ಚಿಂತಯಾಮಾಸ ಕಿಮೇತದಿತಿ ವೃತ್ರಹಾ ॥ ೬೦ ॥

ಧರ್ಮಸ್ಯ ಕಸ್ಯ ಮಾಹಾತ್ಮ್ಯಾತ್ಪುನಃ ಸಂಜೀವಿತಾಸ್ತ್ವಮೀ ।
ವಿದಿತ್ವಾ ಪುಣ್ಯಯೋಗೇನ ಪೌರ್ಣಮಾಸೀಫಲಂ ತ್ವಿದಂ ॥ ೬೧ ॥

ನೂನಮೇತತ್ಪರಿಣತಮಥವಾ ಬ್ರಹ್ಮಪೂಜನಂ ।
ವಜ್ರೇಣಾಪಿ ಹತಾಸ್ಸನ್ತೋ ನ ವಿನಾಶಮುಪಾಯಯುಃ ॥ ೬೨ ॥

ಏಕೋಽಪ್ಯನೇಕತಾಮಾಪ ಯಸ್ಮಾದುದರಗೋಪನಂ ।
ಅವಧ್ಯಾ ನೂನಮೇತೇ ವೈ ತಸ್ಮಾದ್ದೇವಾ ಭವನ್ತ್ವಿತಿ ॥ ೬೩ ॥

ಯಸ್ಮಾನ್ಮಾ ರುದ ಇತ್ಯುಕ್ತಾ ರುದಂತೋ ಗರ್ಭಸಂಭವಾಃ ।
ಮರುತೋ ನಾಮ ತೇ ನಾಮ್ನಾ ಭವಂತು ಶುಭಭಾಗಿನಃ ॥ ೬೪ ॥

---

೫೯. ಈ ರೀತಿ ಚೂರುಮಾಡಲ್ಪಟ್ಟ ಅವು ನಾಲ್ವತ್ತೊಂಭತ್ತು ಭಾಗಗಳಾಗಿ ಬಹುವಾಗಿ ಅತ್ತುವು.

೬೦. ಇಂದ್ರನು ಅವನ್ನು ಮತ್ತೆ ಮತ್ತೆ ಬೇಡಬೇಡವೆಂದು ತಡೆಯುತ್ತ ನಾನು ಇವನ್ನು ಚೂರು ಚೂರಾಗಿ ಕತ್ತರಿಸಿದರೂ ಯಾವ ಧರ್ಮದ ಮಹಿಮೆಯಿಂದ ಇವು ಜೀವದಿಂದಿವೆ ಎಂದು ಯೋಚಿಸಿದನು.

೬೧-೬೨. ಕೊನೆಗೆ ತಿಳಿದು ಇದು ಹುಣ್ಣಿಮೆಯ ಪೂಜೆಯ ಫಲವಾಗಿರಬೇಕು ಖಂಡಿತ. ಅದಿಲ್ಲದಿದ್ದರೆ ಆ ಬ್ರಹ್ಮಪೂಜೆಯ ಫಲವಾದರೂ ಆಗಿರಬೇಕು. ಇಲ್ಲದಿದ್ದರೆ ನಾನು ವಜ್ರಾಯುಧದಿಂದ ಕತ್ತರಿಸಿದರೂ ಈ ರೀತಿ ನಾಶವಾಗದೆ ಇರುತ್ತಿರಲಿಲ್ಲ.

೬೩. ಹೊಟ್ಟೆಯಲ್ಲಿರುವಾಗಲೇ ಬಂದಿದ್ದುದು ಕತ್ತರಿಸಿದುದರಿಂದ ಬಹುವಾಯಿತಲ್ಲ. ಇವು ಖಂಡಿತವಾಗಿಯೂ ಕೊಂದರೆ ಸಾಯತಕ್ಕವಲ್ಲ. ಆದುದರಿಂದ ಇವೂ ದೇವತೆಗಳಾಗಲಿ.

೬೪. ಈ ಮಕ್ಕಳು ಅಳುತ್ತಿರುವಾಗ ಮಾರುದ (ಅಳಬೇಡ) ಎಂದು ನಾನು ಹೇಳಿದುದರಿಂದ ಅದೇ ಹೆಸರಿನಿಂದ ಮರುತ್ತುಗಳು ಎಂಬ ಹೆಸರನ್ನು ಹೊಂದಿ ಶುಭದಲ್ಲಿ ಭಾಗವನ್ನು ಹೊಂದಲಿ.

**ತತಃ ಪ್ರಸಾದ್ಯ ದೇವೇಶಃ ಕ್ಷಮಸ್ವೇತಿ ದಿತಿಂ ಪುನಃ ।**
**ಅರ್ಥಶಾಸ್ತ್ರಂ ಸಮಾಸ್ಥಾಯ ಮಯ್ಯೈತದ್ದುಷ್ಕೃತಂ ಕೃತಂ ॥ ೬೫ ॥**

**ಕೃತ್ವಾ ಮರುದ್ಗಣಂ ದೇವೈಃ ಸಮಾನಮಮರಾಧಿಪಃ ।**
**ದಿತಿಂ ವಿಮಾನಮಾರೋಪ್ಯ ಸಸುತಾಮಗಮದ್ದಿವಂ ॥ ೬೬ ॥**

**ಯಜ್ಞಭಾಗಭುಜಃ ಕೃತ್ವಾ ಮರುತಸ್ತೇ ತತೋಽಭವನ್ ।**
**ನ ಜಗ್ಮುರೈಕ್ಯಮಸುರೈರತಸ್ತೇ ಸುರವಲ್ಲಭಾಃ ॥ ೬೭ ॥**

**॥ ಭೀಷ್ಮ ಉವಾಚ ॥**

**ಆದಿಸರ್ಗಸ್ತ್ವಯಾ ಬ್ರಹ್ಮನ್ಕಥಿತೋ ವಿಸ್ತರೇಣ ಮೇ ।**
**ಪ್ರತಿಸರ್ಗಶ್ಚ ಯೇ ಯೇಷಾಮಧಿಪಾಂಸ್ತಾನ್ವದಸ್ವ ಮೇ ॥ ೬೮ ॥**

**॥ ಪುಲಸ್ತ್ಯ ಉವಾಚ ॥**

**ಯದಾಭಿಷಿಕ್ತಸ್ಸಕಲೇಽಪಿ ರಾಜ್ಯೇ**
**ಪೃಥುರ್ಧರಿತ್ರ್ಯಾಮಧಿಪೋ ಬಭೂವ ।**

---

೬೫. ಆಗ ಇಂದ್ರನು ಅರ್ಥಶಾಸ್ತ್ರದಿಂದ ಹೇಳಿರುವಂತೆ ನನ್ನ ಹಿತವನ್ನು ಸಾಧಿಸಿಕೊಳ್ಳಲು ನಿನಗೆ ಕೇಡನ್ನು ಎಣಿಸಿ ಈ ಪಾಪವನ್ನು ಮಾಡಿದೆನು. ಇದನ್ನು ಕ್ಷಮಿಸೆಂದು ಪದೇ ಪದೇ ಹೇಳುತ್ತ ಆಕೆಯನ್ನು ಪ್ರಸನ್ನಳನ್ನಾಗಿಮಾಡಿಕೊಂಡನು.

೬೬. ಆಗ ಆ ಇಂದ್ರನು ಈ ಮರುತ್ತಿನ ಗುಂಪನ್ನು ದೇವತೆಗಳೊಡನೆ ಸಮರನ್ನಾಗಿಮಾಡಿ ದಿತಿಯನ್ನೂ ಆಕೆಯ ಮಕ್ಕಳನ್ನೂ ವಿಮಾನದಲ್ಲಿ ಕೂರಿಸಿಕೊಂಡು ಸ್ವರ್ಗಕ್ಕೆ ಹೋದನು.

೬೭. ಅವರಿಗೆ ಯಜ್ಞದಲ್ಲಿ ಭಾಗವನ್ನು ಕೊಟ್ಟು ಸ್ಥಾನವನ್ನು ಕೊಟ್ಟನು. ಅದರಿಂದ ಅವರು ಅಸುರರೊಡನೆ ಸೇರದೆ ದೇವತೆಗಳಿಗೆ ಪ್ರಿಯರಾದರು.

೬೮. ಭೀಷ್ಮನು ಹೇಳಿದನು :—ಎಲೈ ಬ್ರಾಹ್ಮಣನೇ, ಆದಿಸರ್ಗವನ್ನು ನೀನು ನನಗೆ ವಿಸ್ತಾರವಾಗಿ ತಿಳಿಸಿದೆ. ಪ್ರತಿಸರ್ಗವಾವುದು ? ಆ ಪ್ರತಿಸರ್ಗದವರಾರು ? ಅವರಿಗೆ ಒಡೆಯರಾರು ಎಂಬುದನ್ನು ದಯವಿಟ್ಟು ಹೇಳು.

೬೯. ಪುಲಸ್ತ್ಯನು ಹೇಳಿದನು :—ಪೃಥುವನ್ನು ಎಲ್ಲರೂ ಸೇರಿ ಭೂಮಿಗೆ ಒಡೆಯನನ್ನಾಗಿಮಾಡಿ ಭೂರಾಜ್ಯದಲ್ಲಿ ಯಾವಾಗ ಅಭಿಷೇಕಮಾಡಿದರೋ ಆಗಲೇ

ತಥೌಷಧೀನಾಮಧಿಪಂ ಚಕಾರ
ದ್ವಿಜವ್ರತಾನಾಂ ತಪಸಾಂ ಚ ಸೋಮಂ ॥ ೬೯ ॥

ನಕ್ಷತ್ರತಾರಾದ್ವಿಜವೃಕ್ಷಗುಲ್ಮ-
ಲತಾವಿತಾನಸ್ಯ ಚ ರುಕ್ಮಗರ್ಭಂ ।
ಅಪಾಮಧೀಶಂ ವರುಣಂ ಧನಾನಾಂ
ರಾಜ್ಯಂ ಪ್ರಭುಂ ವೈಶ್ರವಣಂ ಚ ತದ್ವತ್ ॥ ೭೦ ॥

ವಿಷ್ಣುಂ ರವೀಣಾಮಧಿಪಂ ವಸೂನಾ-
ಮಗ್ನಿಂ ಚ ಲೋಕಾಧಿಪತಿಂ ಚಕಾರ ।
ಪ್ರಜಾಪತೀನಾಮಧಿಪಂ ಚ ದಕ್ಷಂ
ಚಕಾರ ಶಕ್ರಂ ಮರುತಾಮಧೀಶಂ ॥ ೭೧ ॥

ದೈತ್ಯಾಧಿಪಾನಾಮಥ ದಾನವಾನಾಂ
ಪ್ರಹ್ಲಾದಮೀಶಂ ಚ ಯಮಂ ಪಿತೄಣಾಂ ।
ಪಿಶಾಚರಕ್ಷಃಪಶುಭೂತಯಕ್ಷ-
ವೇತಾಲರಾಜ್ಞಾಮಥ ಶೂಲಪಾಣಿಂ ॥ ೭೨ ॥

ಚಂದ್ರನನ್ನು ಔಷಧಿಗಳಿಗೂ, ಬ್ರಾಹ್ಮಣರಿಗೂ, ಅವರ ವ್ರತಗಳಿಗೂ, ಅವರ ತಪಸ್ಸಿಗೂ ಒಡೆಯನನ್ನಾಗಿಮಾಡಿದರು.

೭೦. ಅದರಂತೆಯೇ ನಕ್ಷತ್ರ, ಗ್ರಹ, ಎರಡು ಸಾರಿ ಹುಟ್ಟುವ ಪ್ರಾಣಿಗಳು, ಮರ, ಪೊದೆ, ಬಳ್ಳಿ, ಹಂಬು ಇವುಗಳಿಗೆ ಬ್ರಹ್ಮನನ್ನೂ, ನೀರಿಗೆ ವರುಣನನ್ನೂ, ಹಣಕ್ಕೆ ಕುಬೇರನನ್ನೂ ಒಡೆಯರುಗಳನ್ನಾಗಿಮಾಡಿದರು.

೭೧. ಆದಿತ್ಯರಿಗೆ ವಿಷ್ಣುವನ್ನೂ, ವಸುಗಳಿಗೆ ಅಗ್ನಿಯನ್ನೂ, ಪ್ರಜಾಪತಿಗಳಿಗೆ ದಕ್ಷನನ್ನೂ, ಮರುತ್ತುಗಳಿಗೆ ಶಕ್ರನನ್ನೂ ಅಧಿಪರನ್ನಾಗಿಮಾಡಿದರು.

೭೨. ದೈತ್ಯರಿಗೂ, ದಾನವರಿಗೂ, ಪ್ರಹ್ಲಾದನನ್ನೂ, ಪಿತೃಗಳಿಗೆ ಯಮನನ್ನೂ, ಪಿಶಾಚಿ, ರಕ್ಷೋಗಣಗಳು, ಪಶು, ಭೂತ, ಯಕ್ಷ, ವೇತಾಳರು, ಇವರೆಲ್ಲರಿಗೂ, ಈಶ್ವರನನ್ನು ಒಡೆಯನನ್ನಾಗಿಮಾಡಿದರು.

ಪ್ರಾಲೇಯಶೈಲಂ ಚ ಪತಿಂ ಗಿರೀಣಾ-
ಮೀಶಂ ಸಮುದ್ರಂ ಸರಿತಾಮಧೀಶಂ ।
ಗಂಧರ್ವವಿದ್ಯಾಧರಕಿನ್ನರಾಣಾ-
ಮೀಶಂ ಪುನಶ್ಚಿತ್ರರಥಂ ಚಕಾರ ॥ ೭೩ ॥

ನಾಗಾಧಿಪಂ ವಾಸುಕಿಮುಗ್ರವೀರ್ಯಂ
ಸರ್ಪಾಧಿಪಂ ತಕ್ಷಕಮಾದಿದೇಶ ।
ದಿಗ್ವಾರಣಾನಾಮಧಿಪಂ ಚಕಾರ
ಗಜೇಂದ್ರಮೈರಾವಣನಾಮಧೇಯಂ ॥ ೭೪ ॥

ಸುಪರ್ಣಮೀಶಂ ಪತತಾಮಥಾರ್ವಣಾಂ
ರಾಜಾನಮುಚ್ಚೈಃಶ್ರವಸಂ ಚಕಾರ ।
ಸಿಂಹಂ ಮೃಗಾಣಾಮೃಷಭಂ ಗವಾಂ ಚ
ಪ್ಲಕ್ಷಂ ಪುನಃ ಸರ್ವವನಸ್ಪತೀನಾಂ ॥ ೭೫ ॥

ಪಿತಾಮಹಃ ಪೂರ್ವಮಥಾಭ್ಯಷಿಂಚ-
ದೇತಾನ್ಪುನಃ ಸರ್ವದಿಶಾಧಿನಾಥಾನ್ ।
ಪೂರ್ವೇಣ ದಿಕ್ಪಾಲಮಥಾಭ್ಯಷಿಂಚ-
ನ್ನಾಮ್ನಾ ಸುಧರ್ಮಾಣಮರಾತಿಕೇತುಂ ॥ ೭೬ ॥

೭೩. ಪರ್ವತಗಳಿಗೆ ಹಿಮವಂತನನ್ನೂ, ನದಿಗಳಿಗೆ ಸಮುದ್ರವನ್ನೂ, ಗಂಧರ್ವ, ವಿದ್ಯಾಧರ, ಕಿನ್ನರರುಗಳಿಗೆ ಚಿತ್ರರಥನನ್ನೂ ಒಡೆಯನನ್ನಾಗಿ ಮಾಡಿದರು.

೭೪. ನಾಗಗಳಿಗೆ ವಾಸುಕಿಯನ್ನೂ, ಸರ್ಪಗಳಿಗೆ ತಕ್ಷಕನನ್ನೂ, ದಿಗ್ಗಜಗಳಿಗೂ, ಆನೆಗಳಿಗೂ, ಐರಾವಣನನ್ನೂ ಒಡೆಯನನ್ನಾಗಿ ಮಾಡಿದರು.

೭೫. ಪಕ್ಷಿಗಳಿಗೆ ಗರುಡನನ್ನೂ, ಕುದುರೆಗಳಿಗೆ ಉಚ್ಚೈಃಶ್ರವಸ್ಸನ್ನೂ, ಮೃಗಗಳಿಗೆ ಸಿಂಹವನ್ನೂ, ವನಸ್ಪತಿಗಳಿಗೆ ಬಸುರಿಯಮರವನ್ನೂ ಅಧಿಪನನ್ನಾಗಿ ಮಾಡಿದರು.

೭೬. ಬ್ರಹ್ಮನು ಮತ್ತೆ ಕ್ರಮವಾಗಿ ಪೂರ್ವದಿಕ್ಕು ಮೊದಲುಗೊಂಡು ಎಲ್ಲಾ ದಿಕ್ಕುಗಳಿಗೂ ಮುಂದೆ ಹೇಳುವವರನ್ನು ಒಡೆಯನನ್ನಾಗಿ ಅಭಿಷೇಕಿಸಿದನು. ಪೂರ್ವದಿಕ್ಕಿಗೆ ಧರ್ಮಾತ್ಮನಾದ ಅರಾತಿಕೇತುವನ್ನು ಒಡೆಯನನ್ನಾಗಿ ಮಾಡಿದರು.

ತತೋಽಧಿಪಂ ದಕ್ಷಿಣತಶ್ಚಕಾರ
ಸರ್ವೇಶ್ವರಂ ಶಂಖಪದಾಭಿಧಾನಂ ।
ಸುಕೇತುಮನ್ತಂ ದಿಶಿ ಪಶ್ಚಿಮಾಯಾಂ
ಚಕಾರ ಪಶ್ಚಾದ್ಭುವನಾಂಡಗರ್ಭಃ ॥ ೭೭ ॥

ಹಿರಣ್ಯರೋಮಾಣಮುದಗ್ದಿಗೀಶಂ
ಪ್ರಜಾಪತಿರ್ಮೇಘಸುತಂ ಚಕಾರ ।
ಅದ್ಯಾಪಿ ಕುರ್ವಂತಿ ದಿಶಾಮಧೀಶಾಃ
ಸದಾ ವಹನ್ತಸ್ತು ಭುವೋಽಭಿರಕ್ಷಾಂ ॥ ೭೮ ॥

ಚತುರ್ಭಿರೇಭಿಃ ಪೃಥುನಾಮಧೇಯಃ
ಶ್ರಿಯಾಭಿಷಿಕ್ತಃ ಪ್ರಥಮಂ ಪೃಥಿವ್ಯಾಂ ।
ಮನ್ವಂತರೇ ಚಾಧಿಗತೇ ತ ಏವ
ವೈವಸ್ವತಂ ಚಕ್ರುರಿಮಂ ಪೃಥಿವ್ಯಾಂ ॥ ೭೯ ॥

ಗತೇಂತರೇ ಚಾಕ್ಷುಷನಾಮಧೇಯೇ
ವೈವಸ್ವತಾಖ್ಯೇ ಚ ಪುನಃ ಪ್ರವೃತ್ತೇ ।
ಪ್ರಜಾಪತಿಸ್ಸೋಽಸ್ಯ ಪರಾವರಸ್ಯ
ಬಭೂವ ಸೂರ್ಯಾವರಜಃ ಸಚಿಹ್ನಃ ॥ ೮೦ ॥

೭೭. ದಕ್ಷಿಣದಿಕ್ಕಿಗೆ ಶಂಖಪದನೆಂಬುವನನ್ನೂ, ಪಶ್ಚಿಮಕ್ಕೆ ಸುಕೇತುಮಂತನನ್ನೂ ಬ್ರಹ್ಮನು ಒಡೆಯರನ್ನಾಗಿಮಾಡಿದನು.

೭೮. ಉತ್ತರದಿಕ್ಕಿಗೆ ಮೇಘಸುತನಾದ ಹಿರಣ್ಯರೋಮನನ್ನು ಒಡೆಯನನ್ನಾಗಿಮಾಡಿದನು. ಇವರೆಲ್ಲರೂ ದಿಕ್ಕುಗಳಿಗೆ ರಕ್ಷೆಯನ್ನು ಈಗಲೂ ಕೂಡ ಮಾಡುತ್ತಿದ್ದಾರೆ.

೭೯. ಈ ಪೂರ್ವ, ಪಶ್ಚಿಮ ದಕ್ಷಿಣೋತ್ತರಾಧಿಪತಿಗಳು ಸೇರಿಕೊಂಡು ಪೃಥುವನ್ನು ಸಂಪತ್ತಿನೊಡನೆ ಭೂಮಿಯಲ್ಲಿ ಅಭಿಷೇಕಮಾಡಿದರು. ಅವರೇನೇ ಮನ್ವಂತರವು ಬರಲು ವೈವಸ್ವತನನ್ನೂ ಅಧಿಪನನ್ನಾಗಿಮಾಡಿದರು.

೮೦. ಚಾಕ್ಷುಷ ಮನ್ವಂತರವು ಹೊರಟುಹೋಗಿ ವೈವಸ್ವತಮನ್ವಂತರವು ಮತ್ತೆ ಬರಲು, ಸೂರ್ಯನ ತಮ್ಮನಾದ ಪ್ರಜಾಪತಿಯೇ ಒಡೆಯನಾದರು.

॥ ಪುಲಸ್ತ್ಯ ಉವಾಚ ॥

ಮನ್ವಂತರಾಣಿ ಸರ್ವಾಣಿ ಮನೂನಾಂ ಚರಿತಂ ಚ ಯತ್ ।
ಪ್ರವೃತ್ತಿಂ ಚೈವ ಕಾಲಸ್ಯ ತತ್ಸೃಷ್ಟಿಂ ಚ ಸಮಾಸತಃ ॥ ೮೧ ॥

ಏಕಚಿತ್ತಃ ಪ್ರಸನ್ನಾತ್ಮಾ ಶೃಣು ಕೌರವನಂದನ ।
ಯಾಮ್ಯಾ ನಾಮ ಪುರಾ ದೇವಾ ಆಸನ್ಸ್ವಾಯಂಭುವಾಂತರೇ ॥ ೮೨ ॥

ಸಪ್ತೈವ ಋಷಯಃ ಪೂರ್ವಂ ಯೇ ಮರೀಚ್ಯಾದಯಸ್ಸ್ಮೃತಾಃ ।
ಆಗ್ನೀಧ್ರಶ್ಚಾಗ್ನಿಬಾಹುಶ್ಚ ವಿಭುಸ್ಸವನ ಏವ ಚ ॥ ೮೩ ॥

ಜ್ಯೋತಿಷ್ಮಾನ್ದ್ಯುತಿಮಾನ್ಹವ್ಯೋ ಮೇಧಾ ಮೇಧಾತಿಥಿರ್ವಸುಃ ।
ಸ್ವಾಯಂಭುವಸ್ಯಾಸ್ಯ ಮನೋರ್ದಶೈತೇ ವಂಶವರ್ಧನಾಃ ॥ ೮೪ ॥

ಪ್ರತಿಸರ್ಗಮಮೀ ಕೃತ್ವಾ ಜಗ್ಮುಸ್ತೇ ಪರಮಂ ಪದಂ ।
ಏತತ್ಸ್ವಾಯಂಭುವಂ ಪ್ರೋಕ್ತಂ ಸ್ವಾರೋಚಿಷಮತಃ ಪರಂ ॥ ೮೫ ॥

ಸ್ವಾರೋಚಿಷಸ್ಯ ತನಯಾಶ್ಚತ್ವಾರೋ ದೇವವರ್ಚಸಃ ।
ನಭೋ ನಭಸ್ಯಃ ಪ್ರಸೃತಿರ್ಭಾನವಃ ಕೀರ್ತಿವರ್ಧನಃ ॥ ೮೬ ॥

೮೧. ಪುಲಸ್ತ್ಯನು ಹೇಳಿದನು:—ಎಲ್ಲಾ ಮನ್ವಂತರಗಳನ್ನು, ಮನುಗಳ ಚರಿತ್ರೆಯನ್ನೂ ಕಾಲನಡೆಯುವಿಕೆಯನ್ನೂ, ಅವುಗಳ ಸೃಷ್ಟಿಯನ್ನೂ ಸಂಗ್ರಹವಾಗಿ ಹೇಳುತ್ತೇನೆ. ಎಲೈ ಭೀಷ್ಮನೇ ಸಂತೋಷದಿಂದ ಕೇಳು.

೮೨-೮೪. ಸ್ವಯಂಭೂವಿನ ಮನುವಿನ ಅಂತರದಲ್ಲಿ ಯಾಮ್ಯರೆಂಬ ದೇವತೆಗಳಿದ್ದರು. ಮರೀಚ್ಯಾದಿ ಸಪ್ತ ಋಷಿಗಳು ಮೊದಲಿನಂತೆಯೇ ಇದ್ದರು. ಅಗ್ನೀಧ್ರ, ಅಗ್ನಿಬಾಹು, ವಿಭು, ಸವನ, ಜ್ಯೋತಿಷ್ಮಾನ್, ದ್ಯುತಿಮಾನ್, ಹವ್ಯ, ಮೇಧಾ, ಮೇಧಾತಿಥಿ, ವಸು, ಎಂಬದಾಗಿ ಮನುವಿಗೆ ಹತ್ತು ಜನ ವಂಶವರ್ಧಕರಾದ ಮಕ್ಕಳಾದರು.

೮೫. ಇವರೆಲ್ಲರೂ ಪ್ರತಿಸರ್ಗವನ್ನು ಮಾಡಿ ಸ್ವರ್ಗಕ್ಕೆ ಹೋದರು. ಇದೇ ಸ್ವಾಯಂಭುವ ಮನುವಿನ ಅಂತರವು. ಇನ್ನು ಮುಂದೆ ಸ್ವಾರೋಚಿಷ ಮನ್ವಂತರವನ್ನು ಕೇಳು.

೮೬. ಆ ಸ್ವಾರೋಚಿಷ ಮನುವಿಗೆ ನಭ, ನಭಸ್ಯ, ಪ್ರಸೃತಿ, ಭಾನು ಎಂಬ ದೇವತೆಗಳಂತಿರುವ ನಾಲ್ವರು ಕೀರ್ತಿಕರರಾದ ಮಕ್ಕಳಾದರು.

ದತ್ತೋಽತ್ರಿಶ್ಚ್ಯವನಸ್ತಂಬಃ ಪ್ರಾಣಃ ಕಶ್ಯಪ ಏವ ಚ ।
ಅರ್ವಾ ಬೃಹಸ್ಪತಿಶ್ಚೈವ ಸಪ್ತ ಸಪ್ತರ್ಷಯೋಽಭವನ್ ॥ ೮೭ ॥

ತದಾ ದೇವಾಶ್ಚ ತುಷಿತಾಃ ಸ್ಮೃತಾಃ ಸ್ವಾರೋಚಿಷೇಂತರೇ ।
ಹವೀಂಧ್ರಸ್ಸುಕೃತೋ ಮೂರ್ತಿರಾಪೋ ಜ್ಯೋತೀರಥಸ್ಸ್ಮೃತಃ ॥ ೮೮ ॥

ವಸಿಷ್ಠಸ್ಯ ಸುತಾಃ ಪಂಚ ಯೇ ಪ್ರಜಾಪತಯಸ್ತದಾ ।
ದ್ವಿತೀಯಮೇತತ್ಕಥಿತಂ ಮನ್ವಂತರಮತಃ ಪರಂ ॥ ೮೯ ॥

ಅನ್ಯಚ್ಚೈವ ಪ್ರವಕ್ಷ್ಯಾಮಿ ತಥಾ ಮನ್ವಂತರಂ ಶುಭಂ ।
ಮನುರ್ನಾಮೌತ್ತಮಿಸ್ತತ್ರ ದಶ ಪುತ್ರಾನಜೀಜನತ್ ॥ ೯೦ ॥

ಈಷ ಊರ್ಜಸ್ತನೂಜಶ್ಚ ಶುಚಿಶ್ಶುಕ್ರಸ್ತಥೈವ ಚ ।
ಮಧುಶ್ಚ ಮಾಧವಶ್ಚೈವ ನಭಸ್ಯೋಽಥ ನಭಸ್ತಥಾ ॥ ೯೧ ॥

---

೮೭. ದತ್ತ, ಅತ್ರಿ, ಚ್ಯವನಸ್ತಂಬ, ಪ್ರಾಣ, ಕಶ್ಯಪ, ಅರ್ವಾ, ಬೃಹಸ್ಪತಿ ಈ ಏಳು ಜನರು ಸಪ್ತರ್ಷಿಗಳಾದರು.

೮೮-೮೯. ಆ ಸ್ವಾರೋಚಿಷ ಮನ್ವಂತರದಲ್ಲಿ ದೇವತೆಗಳು ಸಂತೋಷದಿಂದಿದ್ದರು. ಹವೀಂಧ್ರ, ಸುಕೃತ, ಮೂರ್ತಿ, ಆಪ, ಜ್ಯೋತೀರಥ ಎಂಬದಾಗಿ ಈ ಐದು ಜನ ವಸಿಷ್ಠನ ಮಕ್ಕಳು ಪ್ರಜಾಪತಿಗಳಾಗಿದ್ದರು. ಇದು ಎರಡನೆಯ ಮನ್ವಂತರವು ಅನಂತರ ಕೇಳು.

೯೦. ಮತ್ತೊಂದಾದ ಯೋಗ್ಯವೂ, ಶುಭವೂ, ಆದ ಮನ್ವಂತರವನ್ನು ಹೇಳುತ್ತೇನೆ. ಈ ಮನ್ವಂತರದಲ್ಲಿ ಔತ್ತಮಿ ಎಂಬ ಮನುವು ಅಧಿಪತಿಯು. ಆದ್ದರಿಂದ ಇದಕ್ಕೆ ಔತ್ತಮಿ ಮನ್ವಂತರವೆಂದು ಹೆಸರು ಈತನಿಗೆ ಹತ್ತು ಜನರು ಮಕ್ಕಳಾದರು.

೯೧. ಈಷ, ಊರ್ಜ, ತನೂಜ, ಶುಚಿ, ಶುಕ್ರ, ಮಧು, ಮಾಧವ, ನಭಸ್ಯ, ನಭ, ಸಹ, ಎಂಬದಾಗಿ ಈ ಹತ್ತು ಜನ ಕೀರ್ತಿಕರರಾಗಿಯೂ ಉದಾರಿಗಳಾಗಿಯೂ ಇದ್ದರು.

ಸಹಃ ಕನೀಯಾನೇತೇಷಾಮುದಾರಾಃ ಕೀರ್ತಿವರ್ಧನಾಃ ।
ಭಾನವಸ್ತತ್ರ ದೇವಾಶ್ಚ ಊರ್ಜಾಸ್ಸಪ್ತರ್ಷಯಸ್ತಥಾ ॥ ೯೨ ॥

ಕೌಕಿಭಿಂಡಿಕತುಂಡಶ್ಚ ದಾಲ್ಭ್ಯಶ್ಶಂಖಃ ಪ್ರವಾಹಿನಃ ।
ಮಿತಶ್ಚ ಸಮ್ಮಿತಶ್ಚೈವ ಸಪ್ತೈತೇ ಯೋಗವರ್ಧನಾಃ ॥ ೯೩ ॥

ಮನ್ವಂತರಂ ಚತುರ್ಥಂ ತು ತಾಮಸಂ ನಾಮ ವಿಶ್ರುತಂ
ಕವಿಃ ಪೃಥುಸ್ತಥೈವಾಗ್ನಿರಕಪಿಃ ಕಪಿರೇವ ಚ ॥ ೯೪ ॥

ತಥೈವ ಜನ್ಯಧಾಮಾನೌ ಮುನಯಸ್ಸಪ್ತ ನಾಮ ತೇ ।
ಸಾಧ್ಯಾ ದೇವಗಣಾ ಯತ್ರ ಕಥಿತಾಸ್ತಾಮಸೇಂತರೆ ॥ ೯೫ ॥

ಅಕಲ್ಮಷಸ್ತಪೋಧನ್ವಾ ತಪೋಮೂಲಸ್ತಪೋಘನಃ ।
ತಪೋರಾಶಿಸ್ತಪಸ್ಯಶ್ಚ ಸುತಪಸ್ಯಃ ಪರಂತಪಃ ॥ ೯೬ ॥

ತಪೋಭಾಗೀ ತಪೋಯೋಗೀ ಧರ್ಮಾಚಾರರತಾಸ್ಸದಾ ।
ತಾಮಸಸ್ಯ ಸುತಾಸ್ಸರ್ವೇ ದಶ ವಂಶವಿವರ್ಧನಾಃ ॥ ೯೭ ॥

---

೯೨-೯೩. ಆ ಔತ್ತಮಿಕ ಮನ್ವಂತರದಲ್ಲಿ ಭಾನುಗಳೆಂಬುವರು ದೇವತೆಗಳು. ಊರ್ಜರೆಂಬುವರೇ ಸಪ್ತರ್ಷಿಗಳು, ಅವರ ಹೆಸರುಗಳು, ಕೌಕಿ, ಭಿಂಡಿಕತುಂಡ, ದಾಲ್ಭ್ಯ, ಶಂಖ. ಪ್ರವಾಹಿನ, ಮಿತ, ಸಮ್ಮಿತ, ಎಂಬುದಾಗಿ. ಅವರ ಮಹಾ ಯೋಗಿಗಳು.

೯೪. ನಾಲ್ಕನೆಯ ಮನ್ವಂತರವು ತಾಮಸ ಮನ್ವಂತರವು ಎಂದು ಪ್ರಸಿದ್ಧ ವಾದುವು. ಅದರಲ್ಲಿ ಕವಿ, ಪೃಥು, ಅಗ್ನಿ, ಕಪಿ, ಅಕಪಿ, ಜನ್ಯ, ಧಾಮ. ಎಂಬುದಾಗಿ ಸಪ್ತರ್ಷಿಗಳು.

೯೫-೯೭. ಈ ತಾಮಸ ಮನ್ವಂತರದಲ್ಲಿ ಸಾಧ್ಯರೆಂಬವರೇ ದೇವತೆಗಳು. ಅಕಲ್ಮಷ, ತಪೋಧನ್ವಾ, ತಪೋಮೂಲ, ತಪೋಘನ, ತಪೋರಾಶಿ. ತಪಸ್ಯ, ಸುತಪಸ್ಯ, ಪರಂತಪ, ತಪೋಭಾಗಿ. ತಪೋಯೋಗಿ, ಎಂಬದಾಗಿ ತಾಮಸನಿಗೆ ಹತ್ತು ಜನ ಮಕ್ಕಳು. ಇವರು ವಂಶವರ್ಧಕರೂ ಯಶಸ್ವಿಗಳೂ ಆದರು.

ಪಂಚಮಸ್ಯ ಮನೋಸ್ತ್ವಷ್ಟೈವತಸ್ಯಾಂತರಂ ಶೃಣು ।
ಪಪವಾಪಸ್ಸುಬಾಹುಶ್ಚ ಪರ್ಜನ್ಯಸ್ಸೋಮಪೋ ಮುನಿಃ ॥ ೯೮ ॥

ಹಿರಣ್ಯರೋಮಾ ಸಪ್ತಾಶ್ವಃ ಸಪ್ತೈತೇ ಋಷಯಃ ಸ್ಮೃತಾಃ ।
ದೇವಾಶ್ಚ ಭೂತರಜಸಸ್ತಥಾ ಪ್ರಕೃತಯಃ ಸ್ಮೃತಾಃ ॥ ೯೯ ॥

ವರುಣಸ್ತತ್ತ್ವದರ್ಶೀ ಚ ಚಿತಿಮಾನ್ಹವ್ಯಪಃ ಕವಿಃ ।
ಮುಕ್ತೋ ನಿರುತ್ಸುಕಃ ಸತ್ತ್ವೋ ವಿನೋಹೋಽಥ ಪ್ರಕಾಶಕಃ ॥ ೧೦೦ ॥

ಧರ್ಮವೀರ್ಯಬಲೋಪೇತಾ ದಶೈತೇ ರೈವತಾತ್ಮಜಾಃ ।
ಭೃಗುಸ್ಸುಧಾಮಾ ವಿರಜೋ ವಿಷ್ಣುರ್ನಾರದ ಏವ ಚ ।
ವಿವಸ್ವಾನಭಿಮಾನೀ ಚ ಸಪ್ತ ಸಪ್ತರ್ಷಯಃ ಪರೇ ॥ ೧೦೧ ॥

ಚಾಕ್ಷುಷಸ್ಯಾಂತರೇ ಜಾತಾ ಲೇಖಾ ನಾಮ ಪರಿಶ್ರುತಾಃ ।
ಋಭವೋಽಥ ಪೃಥಗ್ಭೂತಾ ವಾರಿಮೂಲಾ ದಿವೌಕಸಃ ॥ ೧೦೨ ॥

ಚಾಕ್ಷುಷಸ್ಯಾಂತರೇ ಪ್ರಾಪ್ತೇ ದೇವಾನಾಂ ಪಂಚಮೋ ನಯಃ ।
ರುರುಪ್ರಭೃತಯಸ್ತದ್ವಚ್ಚಾಕ್ಷುಷಸ್ಯ ಸುತಾ ದಶ ॥ ೧೦೩ ॥

---

೯೮-೯೯. ಐದನೆಯ ಮನ್ವಂತರವು ರೈವತ ಮನ್ವಂತರವು. ಇದರಲ್ಲಿ ಪಪವಾಪ, ಸುಬಾಹು, ಪರ್ಜನ್ಯ, ಸೋಮಪ, ಮುನಿ, ಹಿರಣ್ಯರೋಮಾ, ಸಪ್ತಾಶ್ವ ಎಂಬದಾಗಿ ಸಪ್ತರ್ಷಿಗಳು. ಭೂತರಜಸರೆಂಬುವರೇ ದೇವತೆಗಳೂ, ಪ್ರಜೆಗಳೂ, ಭೂತರಜಸ್ಸ ಗುಣವುಳ್ಳವರು.

೧೦೦. ವರುಣ, ತತ್ವದರ್ಶೀ, ಚಿತಿಮಾನ್, ಹವ್ಯಪ, ಕವಿ, ಮುಕ್ತ, ನಿರುತ್ಸುಕ, ಸತ್ವ, ವಿನೋಹ, ಪ್ರಕಾಶಕ ಎಂಬದಾಗಿ ಹತ್ತು ಜನ ರೈವತ ಮನುವಿನ ಮಕ್ಕಳು. ಇವರು ಧರ್ಮ, ವೀರ್ಯಬಲದಿಂದ ಕೂಡಿದವರಾಗಿದ್ದರು.

೧೦೧. ಭೃಗು, ಸುಧಾಮ, ವಿರಜ, ವಿಷ್ಣು, ನಾರದ, ವಿವಸ್ವಾನ್, ಅಭಿಮಾನೀ ಎಂಬುದಾಗಿ ಸಪ್ತರ್ಷಿಗಳು.

೧೦೨. ಚಾಕ್ಷುಷಮನ್ವಂತರದಲ್ಲಿ ಹುಟ್ಟಿದ ದೇವತೆಗಳಿಗೆ ಲೇಖರೆಂಬ ಹೆಸರು. ನೀರಿನಿಂದ ಉತ್ಪನ್ನರಾದ ಋಭುಗಳೆಂಬುವರೂ ಬೇರೆ ದೇವತೆಗಳಿದ್ದಾರೆ.

೧೦೩. ಐದನೆಯದಾದ ಚಾಕ್ಷುಷಮನ್ವಂತರದಲ್ಲಿ ದೇವತೆಗಳಿಗೆ ನಯವೆಂಬ ಹೆಸರು. ರುರುವೇ ಮುಂತಾದವರು ಆ ಚಾಕ್ಷುಷಮನುವಿಗೆ ಹತ್ತು ಜನ ಮಕ್ಕಳು.

**ಪ್ರೋಕ್ತಾಃ ಸ್ವಾಯಂಭುವೇ ವಂಶೇ ಯೇ ಮಯಾ ಪೂರ್ವಮೇವ ತೇ ।**
**ಅಂತರಂ ಚಾಕ್ಷುಷಂ ಚೈವ ಮಯಾ ತೇ ಪರಿಕೀರ್ತಿತಂ ॥ ೧೦೪ ॥**

**ಸಪ್ತಮಂ ಚ ಪ್ರವಕ್ಷ್ಯಾಮಿ ಯದ್ವೈವಸ್ವತಮುಚ್ಯತೇ ।**
**ಅತ್ರಿಶ್ಚೈವ ವಸಿಷ್ಠಶ್ಚ ಕಶ್ಯಪೋ ಗೌತಮಸ್ತಥಾ ॥ ೧೦೫ ॥**

**ಭರದ್ವಾಜಸ್ತಥಾ ಯೋಗೀ ವಿಶ್ವಾಮಿತ್ರಃ ಪ್ರತಾಪವಾನ್ ।**
**ಜಮದಗ್ನಿಶ್ಚ ಸಪ್ತೈತೇ ಸಾಂಪ್ರತಂ ತೇ ಮಹರ್ಷಯಃ ॥ ೧೦೬ ॥**

**ಕೃತ್ವಾ ಧರ್ಮವ್ಯವಸ್ಥಾನಂ ಪ್ರಯಾಂತಿ ಪರಮಂ ಪದಂ ।**
**ಸಾವರ್ಣ್ಯಸ್ಯ ಪ್ರವಕ್ಷ್ಯಾಮಿ ಮನೋರ್ಭಾವಿ ತಥಾಂತರಂ ॥ ೧೦೭ ॥**

**ಅಶ್ವತ್ಥಾಮಾ ಋಷ್ಯಶೃಂಗಃ ಕೌಶಿಕ್ಯೋ ಗಾಲವಸ್ತಥಾ ।**
**ಶತಾನಂದಃ ಕಾಶ್ಯಪಶ್ಚ ರಾಮಶ್ಚ ಋಷಯಸ್ಸ್ಮೃತಾಃ ॥ ೧೦೮ ॥**

---

೧೦೪. ಸ್ವಾಯಂಭುವಮನುವಿನ ವಂಶದವರನ್ನು ಮೊದಲೇ ನಿನಗೆ ಹೇಳಿದ್ದೇನೆ. ಚಾಕ್ಷುಷಮನ್ವಂತರ ವಿಷಯವನ್ನೂ ಮೊದಲೇನೆ ತಿಳಿಸಿದ್ದೇನೆ.

೧೦೫. ಏಳನೆಯ ಮನ್ವಂತರವೂ ಕೂಡ ವೈವಸ್ವತವೆಂದೇ ಹೆಸರನ್ನು ಹೊಂದಿದೆ.

೧೦೬. ಈ ಏಳನೆಯ ವೈವಸ್ವತಮನ್ವಂತರದಲ್ಲಿ ಅತ್ರಿ, ವಸಿಷ್ಠ, ಕಶ್ಯಪ, ಗೌತಮ, ಭರದ್ವಾಜ, ವಿಶ್ವಾಮಿತ್ರ, ಜಮದಗ್ನಿ ಎಂಬುವರು ಏಳು ಜನ ಮಹರ್ಷಿಗಳು.

೧೦೭. ಇವರೆಲ್ಲರೂ ಧರ್ಮದ ವ್ಯವಸ್ಥಾಪನೆಯನ್ನು ಮಾಡಿ ಪರಮಪದವನ್ನು ಹೊಂದುತ್ತಾರೆ. ಮುಂದೆ ಬರತಕ್ಕ ಸಾವರ್ಣ್ಯಮನ್ವಂತರವನ್ನು ಹೇಳುತ್ತೇನೆ.

೧೦೮. ಅಶ್ವತ್ಥಾಮ, ಋಷ್ಯಶೃಂಗ, ಕೌಶಿಕ್ಯ, ಗಾಲವ, ಶತಾನಂದ, ಕಾಶ್ಯಪ, ಪರಶುರಾಮ ಈ ಏಳುಜನರೂ ಸಪ್ತರ್ಷಿಗಳು.

ಧೃತಿರ್ವರೀಯಾನ್ಯವಸುಃ ಸುವರ್ಣೋ ಧೃತಿರೇವ ಚ ।
ಚರಿಷ್ಣುರಾದ್ಯಸ್ಸುಮತಿರ್ವಸುಶ್ಶುಕ್ರಶ್ಚ ವೀರ್ಯವಾನ್ ॥ ೧೦೯ ॥

ಭವಿಷ್ಯಸ್ಯಾರ್ಕಸಾವರ್ಣ್ಯಮನೋಃ ಪುತ್ರಾಃ ಪ್ರಕೀರ್ತಿತಾಃ ।
ರೌಚ್ಯಾದಯಸ್ತಥಾನ್ಯೇಽಪಿ ಮನವಃ ಪರಿಕೀರ್ತಿತಾಃ ॥ ೧೧೦ ॥

ರುಚೇಃ ಪ್ರಜಾಪತೇಃ ಪುತ್ರೋ ರೌಚ್ಯೋ ನಾಮ ಭವಿಷ್ಯತಿ ।
ಮನುರ್ಭೂತಿಸುತಸ್ತದ್ವದ್ಭೌತ್ಯೋ ನಾಮ ಭವಿಷ್ಯತಿ ॥ ೧೧೧ ॥

ತತಶ್ಚ ಮೇರುಸಾವರ್ಣಿರ್ಬ್ರಹ್ಮಸೂನುಃ ಸ್ಮೃತಶ್ಚ ಯಃ ।
ಋಭುಶ್ಚ ವೀತಧಾಮಾ ಚ ವಿಷ್ವಕ್ಸೇನೋ ಮನುಸ್ತಥಾ ॥ ೧೧೨ ॥

ಅತೀತಾನಾಗತಾಶ್ಚೈವ ಮನವಸ್ತವ ಕೀರ್ತಿತಾಃ ।
ವರ್ಷಾಣಾಂ ಯುಗಸಾಹಸ್ರಮೇಭಿರ್ವ್ಯಾಪ್ತಂ ನರಾಧಿಪ ॥ ೧೧೩ ॥

---

೧೦೯-೧೧೦. ಧೃತಿ, ವರೀಯಾನ್ ಯವಸುಃ ಸುವರ್ಣ, ಆಧೃತಿ, ಚರಿಷ್ಣು, ಆದ್ಯ, ಸುಮತಿ, ವಸು, ಶುಕ್ರ ಎಂಬದಾಗಿ ಮುಂದೆ ಬರುವ ಅರ್ಕಸಾವರ್ಣ್ಯಮನುವಿಗೆ ಈರೀತಿಯಾಗಿ ಹತ್ತುಜನ ಮಕ್ಕಳು. ರೌಚ್ಯ ಮುಂತಾದ ಮಿಕ್ಕ ಕೆಲವರು ಮನುಗಳು ಇದ್ದಾರೆ.

೧೧೧. ರುಚಿ ಎಂಬ ಪ್ರಜಾಪತಿಗೆ ರೌಚ್ಯನೆಂಬ ಮಗನಾಗುತ್ತಾನೆ. ಭೂತಿ ಯೆಂಬ ಮನುವಿಗೆ ಭೌತ್ಯನೆಂಬ ಮಗನಾಗುತ್ತಾನೆ.

೧೧೨. ಅನಂತರ ಮೇರುಸಾವರ್ಣಿಯೆಂಬುವನು ಬ್ರಹ್ಮನ ಮಗನು ಮನು ವಾಗುತ್ತಾನೆ. ಅನಂತರ ಋಭು, ವೀತಧಾಮ, ವಿಷ್ವಕ್ಸೇನ ಎಂಬುದಾಗಿ ಮನುಗಳಾ ಗುತ್ತಾರೆ.

೧೧೩. ಕಳೆದವರು, ಇರುವವರು, ಮುಂದೆ ಬರುವವರು ಆದ ಮನುಗಳನ್ನು ನಿನಗೆ ಹೇಳಿದೆನು. ಇವರೊಬ್ಬೊಬ್ಬರೂ ಸಾವಿರ ಯುಗಗಳ ವರ್ಷಗಳನ್ನು ಹೊಂದಿ ರುತ್ತಾರೆ.

ಸ್ವೇ ಸ್ವೇಂತರೇ ಸರ್ವಮಿದಂ ಸಮುತ್ಪಾದ್ಯ ಚರಾಚರಂ ।
ಕಲ್ಪಕ್ಷಯೇ ವಿನಿರ್ವೃತ್ತೇ ಮುಚ್ಯಂತೇ ಬ್ರಹ್ಮಣಾ ಸಹ ॥ ೧೧೪ ॥

ಅಮೀ ಯುಗಸಹಸ್ರಾಂತೇ ವಿನಶ್ಯಂತಿ ಪುನಃ ಪುನಃ ।
ಬ್ರಹ್ಮಾದ್ಯಾ ವಿಷ್ಣುಸಾಯುಜ್ಯಂ ತತೋ ಯಾಸ್ಯಂತಿ ವೈ ನೃಪ ॥ ೧೧೫ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ
ಮನ್ವಂತರವರ್ಣನಂ ನಾಮ ಸಪ್ತಮೋಽಧ್ಯಾಯಃ

---

೧೧೪. ಅವರುಗಳು ತಮ್ಮ ತಮ್ಮ ಮನ್ವಂತರಗಳಲ್ಲಿ ಚರಾಚರಗಳನ್ನು ಸೃಷ್ಟಿಸಿ ಕಲ್ಪವು ನಾಶವಾಗುತ್ತಲು ಬ್ರಹ್ಮನೊಡನೆ ಮುಕ್ತರಾಗುತ್ತಾರೆ.

೧೧೫. ಇವರೆಲ್ಲರೂ ಸಾವಿರ ಯುಗಗಳಾಗಲು ಮತ್ತೆಮತ್ತೆ ನಾಶವಾಗುತ್ತಲೇ ಇರುತ್ತಾರೆ. ಬ್ರಹ್ಮಾದಿಗಳು ವಿಷ್ಣುವಿನ ಸಮೀಪವನ್ನು ಹೊಂದುತ್ತಾರೆ.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ಮನ್ವಂತರವರ್ಣನೆಯೆಂಬ
ಏಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಅಷ್ಟಮೋಽಧ್ಯಾಯಃ

॥ ಭೀಷ್ಮ ಉವಾಚ ॥

ಬಹುಭಿರ್ಧರಣೀ ಭುಕ್ತಾ ಭೂಪಾಲೈಶ್ಶ್ರೂಯತೇ ಪುರಾ ।
ಪಾರ್ಥಿವಾಃ ಪೃಥಿವೀಯೋಗಾತ್ಪೃಥಿವೀ ಕಸ್ಯ ಯೋಗತಃ ॥ ೧ ॥

ಕಿಮರ್ಥಂ ಚ ಕೃತಾ ಸಂಜ್ಞಾ ಭೂಮೇಃ ಕಿಂ ಪಾರಿಭಾಷಿಕೀ ।
ಗೌರಿತೀಯಂ ಚ ಸಂಜ್ಞಾ ವಾ ಭುವಃ ಕಸ್ಮಾದ್ಬ್ರವೀಹಿ ಮೇ ॥ ೨ ॥

॥ ಪುಲಸ್ತ್ಯ ಉವಾಚ ॥

ವಂಶೇ ಸ್ವಾಯಂಭುವೇ ಚಾಸೀದಂಶೋ ನಾಮ ಪ್ರಜಾಪತಿಃ ।
ಮೃತ್ಯೋಸ್ತು ದುಹಿತಾ ತೇನ ಪರಿಣೀತಾತಿದುರ್ಮುಖೀ ॥ ೩ ॥

## ಎಂಟನೆಯ ಅಧ್ಯಾಯವು.

೧. ಭೀಷ್ಮನು ಹೇಳಿದನು:—ಪೂರ್ವದಲ್ಲಿ ಅನೇಕಜನ ರಾಜರು ಈ ಭೂಮಿಯನ್ನು ಅನುಭವಿಸಿದರೆಂದು ಕೇಳಿದ್ದೇನೆ. ಈ ಪೃಥಿವಿಯ ಸಂಬಂಧವಿರುವುದರಿಂದ ಅವರೆಲ್ಲರೂ ಪಾರ್ಥಿವರೆಂದು ಹೆಸರುಗೊಂಡರು. ಈ ಭೂಮಿಗೆ ಪೃಥಿವೀ ಎಂಬ ಯಾರಿಂದ ಹೆಸರು ಬಂದಿತು?

೨. ಭೂಮಿಗೆ ಪೃಥಿವೀ ಎಂದು ಹೆಸರು ಏತಕ್ಕೆ ಬಂದಿತು? ಅನ್ವರ್ಥನಾಮವೆ? ಅಥವಾ ಪಾರಿಭಾಷಿಕವೇ? ಎಂದರೆ ರೂಢನಾಮವೇ? ಅಲ್ಲದೆ ಈ ಭೂಮಿಗೆ ಗೌಃ ಎಂಬ ಹೆಸರೇಕೆ ಬಂದಿತು? ದಯವಿಟ್ಟು ಇವುಗಳನ್ನು ತಿಳಿಸು.

೩. ಪುಲಸ್ತ್ಯನು ಹೇಳಿದನು:—ಸ್ವಯಂಭುವಿನ ವಂಶದಲ್ಲಿ ಅಂಶನೆಂಬ ಪ್ರಜಾಪತಿ (ರಾಜ) ಇದ್ದನು. ಆತನು ಮೃತ್ಯುವಿನ ಅತ್ಯಂತ ಅಯೋಗ್ಯಳಾದ ಒಬ್ಬಳು ಮಗಳನ್ನು ಮದುವೆಯಾದನು.

ಸುನೀಥಾ ನಾಮ ತಸ್ಯಾಸ್ತು ವೇನೋ ನಾಮ ಸುತಃ ಪುರಾ ।
ಅಧರ್ಮನಿರತಃ ಕಾಮೀ ಬಲವಾನ್ವಸುಧಾಧಿಪಃ ॥ ೪ ॥

ಲೋಕಸ್ಯಾಧರ್ಮಕೃಚ್ಚಾಪಿ ಪರಭಾರ್ಯಾಪಹಾರಕಃ ।
ಅಥ ತಸ್ಯ ಪ್ರಸಿದ್ಧ್ಯರ್ಥಂ ಜಗತೋಽರ್ಥೇ ಮಹರ್ಷಿಭಿಃ ॥ ೫ ॥

ಅನುನೀತೋಽಪಿ ನ ದದಾವಶುದ್ಧಾತ್ಮಾಽಭಯಂ ತತಃ ।
ಶಾಪೇನ ಮಾರಯಿತ್ವೇಮಮರಾಜಕಭಯಾರ್ದಿತಾಃ ॥ ೬ ॥

ಮಮಂಥುರ್ಬ್ರಾಹ್ಮಣಾಸ್ತಸ್ತ ಬಲಾದ್ದೇಹಂ ತ್ವಕಲ್ಮಷಾಃ ।
ತತ್ಕಾಯಾನ್ಮಥ್ಯಮಾನಾತ್ತು ನಿಪೇತುರ್ಮ್ಲೇಚ್ಛಜಾತಯಃ ೭ ॥

ಶರೀರೇ ಮಾತುರಂಶೇನ ಕೃಷ್ಣಾಂಜನಸಮಪ್ರಭಾಃ ।
ಪಿತುರಂಶಸ್ಯ ಚಾಂಶೇನ ಧಾರ್ಮಿಕೋ ಧರ್ಮಕಾರಕಃ ॥ ೮ ॥

---

೪. ಆಕೆಯ ಹೆಸರು ಸುನೀಥೆ. ಅವಳಿಗೆ ವೇನನೆಂಬ ಮಗನು ಹುಟ್ಟಿದನು. ಆತನು ಅಧರ್ಮಾಸಕ್ತನಾಗಿಯೂ, ಕಾಮಿಯಾಗಿಯೂ ಬಲಿಷ್ಠನಾಗಿಯೂ ಇರುತ್ತಾ ರಾಜ್ಯಭಾರಮಾಡುತ್ತಿದ್ದನು. ಅವನು ಜನಗಳಿಗೆ ಕೆಟ್ಟದ್ದನ್ನೇ ಮಾಡುತ್ತ ಪರರ ಹೆಂಡಿರನ್ನೂ ಅಪಹರಿಸುತ್ತಿದ್ದನು.

೫-೬. ಹೀಗಿರಲು ಒಬ್ಬ ಋಷಿಯ ಹೆಂಡತಿಯನ್ನು ಕದ್ದುಕೊಂಡುಹೋದನು. ಆಗ ಆ ಋಷಿಗಳು ಆ ರಾಜನಿಗೆ ಬುದ್ಧಿಹೇಳುವುದಕ್ಕೂ ಲೋಕಕಲ್ಯಾಣಕ್ಕೂ ಆತನ ಬಳಿಗೆ ಬಂದು ಬಹುವಾಗಿ ಹೇಳಿದರೂ ಆಕೆಯನ್ನು ಪುನಃ ಕಳುಹಿಸಲಿಲ್ಲ. ಸ್ವಲ್ಪವೂ ಅವರಿಗೆ ಹೆದರಲೂ ಇಲ್ಲ. ಆಗ ಆ ಋಷಿಗಳು, ಶಾಪದಿಂದ ಆತನನ್ನು ಕೊಂದರು. ಲೋಕಕ್ಕೆಲ್ಲಾ ರಾಜನಾಗಿದ್ದ ಆತನು ಸಾಯಲು, ಲೋಕವು ಅರಾಜಕವಾಯಿತೆಂದು ಅವರಿಗೆ ಹೆದರಿಕೆಯುಂಟಾಯಿತು.

೭. ಆಗ ಆ ಋಷಿಗಳು ಆತನ ದೇಹವನ್ನು ಕಡೆದರು. ಆತನ ಶರೀರದಿಂದ ಮ್ಲೇಚ್ಛರು ಆಗ ಹೊರಬಿದ್ದರು.

೮-೯. [illegible] ತಾಯಿಯ ಅಂಶದಿಂದ ಕಪ್ಪುಬಣ್ಣದವರು. [illegible] ತಂದೆಯ ಅಂಶದಿಂದ ಧಾರ್ಮಿಕನೂ ಆದ ಒಬ್ಬನು ಧನುಸ್ಸು, ಬಾಣ, ಗದೆ, ಪದ್ಮ

ಉತ್ಪನ್ನೋ ದಕ್ಷಿಣಾದ್ಧಸ್ತಾತ್ಸಧನುಃ ಸಶರೋ ಗದೀ ।
ದಿವ್ಯತೇಜೋಮಯವಪುಃ ಸರತ್ನಕವಚಾಂಗದಃ ॥ ೯ ॥

ಪೃಥುರೇವಾಭವದ್ಯಸ್ಮಾನ್ನಾಮ್ನಾ ವಿಷ್ಣುರಜಾಯತ ।
ಸ ವಿಪ್ರೈರಭಿಷಿಕ್ತಸ್ತು ತಪಃ ಕೃತ್ವಾ ಸುದುಷ್ಕರಂ ॥ ೧೦ ॥

ವಿಷ್ಣೋರ್ವರೇಣ ಸರ್ವಸ್ಯ ಪ್ರಭುತ್ವಮಗಮತ್ಪ್ರಭುಃ ।
ನಿಸ್ಸ್ವಾಧ್ಯಾಯವಷಟ್ಕಾರಂ ನಿರ್ಧರ್ಮಂ ವೀಕ್ಷ್ಯ ಭೂತಳಂ ॥ ೧೧ ॥

ದಗ್ಧುಮೇವೋದ್ಯತಃ ಕೋಪಾಚ್ಛರೇಣಾಮಿತವಿಕ್ರಮಃ ।
ತತೋ ಗೋರೂಪಮಾಸ್ಥಾಯ ಭೂಃ ಪಲಾಯಿತುಮುದ್ಯತಾ ॥ ೧೨ ॥

ಪೃಷ್ಠತೋಽನುಗತಸ್ತಸ್ಯಾಃ ಪೃಥುರ್ದೀಪ್ತಶರಾಸನಃ ।
ತತಃ ಸ್ಥಿತ್ವೈಕದೇಶೇ ತು ಕಿಂ ಕರೋಮೀತಿ ಸಾಬ್ರವೀತ್ ॥ ೧೩ ॥

---

ಕವಚ, ಭುಜಕೀರ್ತಿಗಳನ್ನು ಧರಿಸಿ ದಿವ್ಯತೇಜಸ್ಸುಳ್ಳವನಾಗಿ ಆ ಹೆಣದ ಬಲಗೈಯಿಂದ ಹುಟ್ಟಿದನು.

೧೦. ಪೃಥುವೆಂಬ ಹೆಸರಿನಿಂದಾತನು ಪ್ರಸಿದ್ಧನಾದನು. ವಿಷ್ಣುವೇ ಅವನ ರೂಪದಿಂದ ಹುಟ್ಟಿದನು. ಆಗ ಆ ಬ್ರಾಹ್ಮಣರು ಅವನನ್ನು ರಾಜನನ್ನಾಗಿ ಅಭಿಷೇಕ ಮಾಡಿದರು. ಅನಂತರ ಅವನು ಉಗ್ರವಾದ ತಪಸ್ಸನ್ನು ಮಾಡಿದನು. ಅನಂತರ ವಿಷ್ಣುವಿನ ವರದಿಂದ ಅವನು ಎಲ್ಲಕ್ಕೂ ರಾಜನಾದನು.

೧೧. ಅಧ್ಯಯನ, ಯಾಗ, ಧರ್ಮರಹಿತವಾಗಿರುವ ಭೂಮಿಯನ್ನು ನೋಡಿ, ಕೋಪದಿಂದ ಭೂಮಿಯನ್ನು ಬಾಣದಿಂದ ಇರಿಯಲು ಹೋದನು.

೧೨-೧೩. ಹೀಗೆ ಹೊಡೆಯಲು ಬಾಣವನ್ನು ತೆಗೆದುದನ್ನು ನೋಡಿ ಭೂಮಿಯು ಹಸುವಿನ ವೇಷವನ್ನು ಹೊಂದಿ ತಪ್ಪಿಸಿಕೊಂಡು ಓಡಲು ಮೊದಲು ಮಾಡಿತು. ಈ ಪೃಥುವೂ ಧನುಸ್ಸನ್ನು ಸಿದ್ಧಮಾಡಿಕೊಂಡು ಅದರ ಹಿಂದೆಯೇ ಅಟ್ಟಿಸಿಕೊಂಡುಹೋದನು. ಆಗ ಆ ಭೂಮಿಯು ಒಂದು ಜಾಗದಲ್ಲಿ ನಿಂತುಕೊಂಡು ನನ್ನನ್ನು ಏನುಮಾಡಬೇಕೆಂದಿದ್ದೀಯೆ ಎಂದು ಕೇಳಿತು.

ಪೃಥುರಪ್ಯವದದ್ವಾಕ್ಯಮೀಪ್ಸಿತಂ ದೇಹಿ ಸುವ್ರತೇ ।
ಸರ್ವಸ್ಯ ಜಗತಶ್ಶ್ರೇಷ್ಠಂ ಸ್ಥಾವರಸ್ಯ ಚರಸ್ಯ ಚ ॥ ೧೪ ॥

ತಥೇತಿ ಚಾಬ್ರವೀದ್ಭೂಮಿಂ ದುದೋಹ ಸ ನರಾಧಿಪಃ ।
ಸ್ವಕೇ ಪಾಣೌ ಪೃಥುರ್ವತ್ಸಂ ಕೃತ್ವಾ ಸ್ವಾಯಂಭುವಂ ಮನುಂ ॥ ೧೫ ॥

ತದನ್ನಮಭವದ್ದುಗ್ಧಂ ಪ್ರಜಾ ಜೀವಂತಿ ತೇನ ತು ।
ತತಸ್ತು ಋಷಿಭಿರ್ದುಗ್ಧಾ ವತ್ಸಸ್ಸೋಮಸ್ತದಾಽಭವತ್ ॥ ೧೬ ॥

ದೋಗ್ಧಾ ವನಸ್ಪತಿರಭೂತ್ಪಾತ್ರಂ ವೇದಸ್ತಪೋ ರಸಃ ।
ದೇವೈಶ್ಚ ವಸುಧಾ ದುಗ್ಧಾ ದೋಗ್ಧಾ ಮಿತ್ರಸ್ತದಾಭವತ್ ॥ ೧೭ ॥

ಇಂದ್ರೋ ವತ್ಸಸ್ಸಮಭವತ್ಕ್ಷೀರಮೂರ್ಜಸ್ವಲಂ ಬಲಂ ।
ದೇವಾನಾಂ ಕಾಂಚನಂ ಪಾತ್ರಂ ಪಿತೄಣಾಂ ರಾಜತಂ ತಥಾ ॥ ೧೮ ॥

---

೧೪. ಆಗ ಪೃಥುವು ಎಲೈ ಮಂಗಳಾಂಗಿಯೇ, ಚರಾಚರಾತ್ಮಕವಾದ ಈ ಜಗತ್ತಿಗೆ ಬೇಕಾದುದೆಲ್ಲವನ್ನೂ ಕೊಡು ಎಂದನು.

೧೫. ಆಗ ಭೂಮಿಯು ಹಾಗೇ ಆಗಲಿ ಎನ್ನಲು, ಆ ಪೃಥುವು ಸ್ವಾಯಂಭುವ ಮನುವನ್ನು ಕರುವನ್ನಾಗಿ ಮಾಡಿಕೊಂಡು ತನ್ನ ಕೈಯಿಂದಲೇ ಕರೆದನು.

೧೬. ಆ ಹಾಲು ಅನ್ನವಾಗಿ ಆಯಿತು. ಆದರಿಂದಲೇ ಪ್ರಜೆಗಳು ಜೀವಿಸುತ್ತಾರೆ. ಆಗ ಋಷಿಗಳೆಲ್ಲರೂ ಸೇರಿ ಸೋಮನನ್ನು ಕರುವನ್ನಾಗಿಯೂ, ವನಸ್ಪತಿಯನ್ನು ಕರೆಯತಕ್ಕವನನ್ನಾಗಿಯೂ ಮಾಡಿಕೊಂಡು ಕರೆದರು. ವೇದವೇ ಪಾತ್ರೆಯಾಯಿತು, ರಸವೇ ತಪಸ್ಸಾಯಿತು.

೧೭-೧೮. ದೇವತೆಗಳು ಮಿತ್ರನನ್ನು ಕರೆಯತಕ್ಕವನನ್ನಾಗಿ ಮಾಡಿಕೊಂಡು ಇಂದ್ರನನ್ನು ಕರುವನ್ನಾಗಿ ಮಾಡಿಕೊಂಡು ಊರ್ಜಸ್ವಲವಾದ ಬಲವೆಂಬ ಹಾಲನ್ನು ಕರೆದರು. ದೇವತೆಗಳು ಚಿನ್ನದಪಾತ್ರೆಯನ್ನೂ, ಪಿತೃಗಳು ಬೆಳ್ಳಿಯ ಪಾತ್ರೆಯನ್ನೂ ಹಿಡಿದುಕೊಂಡರು. ಅಂತಕನು ಕರೆಯುವವನೂ ಯಮನು ಕರುವೂ ಆಗಿ ಸ್ವಧಾರಸವನ್ನು ಕರೆದರು.

ಅಂತಕಶ್ಚಾಭವದ್ದೋಗ್ಧಾ ಯಮೋ ವತ್ಸಃ ಸ್ವಧಾ ರಸಃ ।
ಅಲಾಬುಪಾತ್ರಂ ನಾಗಾನಾಂ ತಕ್ಷಕೋ ಬ್ರಹ್ಮಕೋಽಭವತ್ ॥ ೧೯ ॥

ವಿಷಂ ಕ್ಷೀರಂ ತತೋ ದೋಗ್ಧಾ ಧೃತರಾಷ್ಟ್ರೋಽಭವತ್ಪುನಃ ।
ಅಸುರೈರಪಿ ದುಗ್ಧೇಯಮಾಯಸೇ ಶತ್ರುಪೀಡನಂ ॥ ೨೦ ॥

ಪಾತ್ರೇ ಮಾಯಾಮಭೂದ್ವತ್ಸಃ ಪ್ರಾಹ್ಲಾದಿಸ್ತು ವಿರೋಚನಃ ।
ದೋಗ್ಧಾ ತ್ರಿಮೂರ್ಧಾ ತತ್ರಾಸೀನ್ಮಾಯಾ ಯೇನ ಪ್ರವರ್ತಿತಾ ॥ ೨೧ ॥

ಯಕ್ಷೈಶ್ಚ ವಸುಧಾ ದುಗ್ಧಾ ಪುರಾಂತರ್ಧಾನಮೀಪ್ಸುಭಿಃ ।
ಕೃತ್ವಾ ವೈಶ್ರವಣಂ ವತ್ಸಮಾಮಪಾತ್ರೇ ಮಹೀಪತೇ ॥ ೨೨ ॥

ಪ್ರೇತರಕ್ಷೋಗಣೈರ್ದುಗ್ಧಾ ವಸಾರುಧಿರಮುಲ್ಬಣಂ ।
ರೂಪ್ಯನಾಭೋಽಭವದ್ದೋಗ್ಧಾ ಸುಮಾಲೀ ವತ್ಸ ಏವ ತು ॥ ೨೩ ॥

---

೧೯. ನಾಗರುಗಳು ತಕ್ಷಕನನ್ನು ಕರುವನ್ನಾಗಿಯೂ, ಧೃತರಾಷ್ಟ್ರನನ್ನು ಕರೆಯುವವನನ್ನಾಗಿಯೂ ಮಾಡಿಕೊಂಡು ಸೋರೆಬುರುಡೆಯ ಪಾತ್ರೆಯಲ್ಲಿ ವಿಷವೆಂಬ ಹಾಲನ್ನು ಕರೆದರು

೨೦–೨೧. ಅಸುರರು ಕಬ್ಬಿಣದ ಪಾತ್ರೆಯಲ್ಲಿ ಶತ್ರುಪೀಡನವೆಂಬ ಮಾಯೆಯನ್ನು ಕರೆದರು. ಪ್ರಹ್ಲಾದನ ಮಗನಾದ ವಿರೋಚನನು ಕರುವಾದನು. ಮಾಯೆಯನ್ನು ಲೋಕದಲ್ಲಿ ಹರಡಿದ ತ್ರಿಮೂರ್ಧನು ಕರೆಯತಕ್ಕವನಾದನು.

೨೨. ಅಂತರ್ಧಾನವನ್ನು (ಕಣ್ಣಿಗೆ ಕಾಣದಿರುವಿಕೆ) ಅಪೇಕ್ಷಿಸುತ್ತಿದ್ದ ಯಕ್ಷರಿಂದ ವೈಶ್ರವಣನನ್ನು ಕರುವನ್ನಾಗಿ ಮಾಡಿಕೊಂಡು ಮಣ್ಣಿನಪಾತ್ರೆಯಲ್ಲಿ ಆ ಗೋವು ಕರೆಯಲ್ಪಟ್ಟಿತು.

೨೩. ಪ್ರೇತಗಳು, ರಕ್ಷೋಗಣಗಳು. ಇವುಗಳಿಂದ ಕ್ರೂರವಾದ ಮೇದಸ್ಸೂ ರಕ್ತವೂ ಕರೆಯಲ್ಪಟ್ಟಿತು. ಆಗ ರೂಪ್ಯನಾಭನು ಕರೆಯತಕ್ಕವನೂ ಸುಮಾಲಿಯು ಕರುವೂ ಆದರು.

**ಗಂಧರ್ವೈಶ್ಚ ಪುನರ್ದುಗ್ಧಾ ವಸುಧಾ ಸಾಪ್ಸರೋಗಣೈಃ ।**
**ವತ್ಸಂ ಚಿತ್ರರಥಂ ಕೃತ್ವಾ ಗಂಧಾನ್ಪದ್ಮದಳೇ ತಥಾ ।**
**ದೋಗ್ಧಾ ತು ಸುರುಚಿರ್ನಾಮಾಥರ್ವವೇದಸ್ಯ ಪಾರಗಃ ॥ ೨೪ ॥**

**ಗಿರಿಭಿರ್ವಸುಧಾ ದುಗ್ಧಾ ರತ್ನಾನಿ ವಿವಿಧಾನಿ ಚ ।**
**ಔಷಧಾನಿ ಚ ದಿವ್ಯಾನಿ ದೋಗ್ಧಾ ಮೇರುರ್ಮಹೀಧರಃ ॥ ೨೫ ॥**

**ವತ್ಸೋಽಭೂದ್ಧಿಮವಾಂಸ್ತತ್ರ ಪಾತ್ರಂ ಶೈಲಮಯಂ ಪುನಃ ।**
**ವೃಕ್ಷೈಶ್ಚ ವಸುಧಾ ದುಗ್ಧಾ ಕ್ಷೀರಂ ಛಿನ್ನಪ್ರರೋಹಣಂ ॥ ೨೬ ॥**

**ಪಾಲಾಶಪಾತ್ರೇ ದೋಗ್ಧಾ ತು ಶಾಲಃ ಪುಷ್ಪವನಾಕುಲಃ ।**
**ಪ್ಲಕ್ಷೋಽಭವತ್ತತ್ರ ವತ್ಸಃ ಸರ್ವವೃಕ್ಷವನಾಧಿಪಃ ॥ ೨೭ ॥**

**ಏವಮನ್ಯೈಶ್ಚ ವಸುಧಾ ತದಾ ದುಗ್ಧಾ ಯಥೇಪ್ಸಿತಂ ।**
**ಆಯುರ್ಧನಾನಿ ಸೌಖ್ಯಂ ಚ ಪೃಥೌ ರಾಜ್ಯಂ ಪ್ರಶಾಸತಿ ॥ ೨೮ ॥**

---

೨೪. ಗಂಧರ್ವರು ಅಪ್ಸರಗಣಗಳನ್ನು ಸೇರಿಸಿಕೊಂಡು ಪೃಥಿವಿಯನ್ನು ಕರೆದರು, ಚಿತ್ರರಥನು ಕರುವಾದನು. ಅಥರ್ವವೇದದಲ್ಲಿ ಪಾಂಡಿತ್ಯವನ್ನು ಪಡೆದ ಸುರುಚಿಯು ಕರೆಯುತಕ್ಕವನಾದನು. ಪದ್ಮದಳದ ಪಾತ್ರೆಯಲ್ಲಿ ಗಂಧವನ್ನು ಕರೆದರು.

೨೫. ಪರ್ವತಗಳು ಮೇರುವನ್ನು ಕರೆಯುವವನನ್ನಾಗಿಯೂ ಹಿಮವಂತನನ್ನು ಕರುವನ್ನಾಗಿಯೂ ಮಾಡಿಕೊಂಡು ಕಲ್ಲಿನ ಪಾತ್ರೆಯಲ್ಲಿ ನಾನಾಬಗೆಯಾದ ರತ್ನಗಳನ್ನೂ, ಔಷಧಗಳನ್ನೂ ಕರೆದವು.

೨೬-೨೭. ಮರಗಳು ಹೂವಿನಿಂದ ಕೂಡಿ ಮತ್ತಿಯ ಮರವನ್ನು ಕರೆಯುತಕ್ಕವನನ್ನಾಗಿಯೂ, ವೃಕ್ಷಗಳಿಗೆ ಒಡೆಯನಾದ ಬಸುರಿಯ ಮರವನ್ನು ಕರುವನ್ನಾಗಿಯೂ ಮಾಡಿಕೊಂಡು ಮುತ್ತುಗದೆಲೆಯ ಪಾತ್ರೆಯಲ್ಲಿ ಕತ್ತರಿಸಿದರೂ ಮತ್ತೆ ಚಿಗಿಯುವ ಶಕ್ತಿಯುಳ್ಳ ಹಾಲನ್ನು ಕರೆದರು.

೨೮. ಇನ್ನೂ ಮಿಕ್ಕವರು ಆ ಪೃಥುವು ರಾಜ್ಯಭಾರವನ್ನು ಮಾಡುತ್ತಿದ್ದಾಗ ಪೃಥಿವಿಯಲ್ಲಿ ಆಯುಸ್ಸು, ಧನ, ಸೌಖ್ಯ ಮುಂತಾದ ಇಷ್ಟಾರ್ಥಗಳನ್ನು ಕರೆದುಕೊಂಡರು.

ನ ದರಿದ್ರಸ್ತಥಾ ರೋಗೀ ನಾಧನೋ ನ ಚ ಪಾಪಕೃತ್ ।
ನೋಪಸರ್ಗೋ ನ ಚಾಘಾತಃ ಪೃಥೌ ರಾಜ್ಯ ಪ್ರಶಾಸತಿ ॥ ೨೯ ॥

ನಿತ್ಯಂ ಪ್ರಮುದಿತಾಸ್ಸರ್ವೇ ದುಃಖಶೋಕವಿವರ್ಜಿತಾಃ ।
ಧನುಷ್ಕೋಟ್ಯಾ ಚ ಶೈಲೇಂದ್ರಾನುತ್ಸಾರ್ಯ ಸ ಮಹಾಬಲಃ ॥ ೩೦ ॥

ಭುವಸ್ತಲಂ ಸಮಂ ಚಕ್ರೇ ಲೋಕಾನಾಂ ಹಿತಕಾಮ್ಯಯಾ ।
ನ ಪುನರ್ಗ್ರಾಮದುರ್ಗಾಣಿ ನ ಚಾಯುಧಧರಾ ನರಾಃ ॥ ೩೧ ॥

ಕ್ಷಯಾತಿಶಯದುಃಖಂ ಚ ನಾರ್ಥಶಾಸ್ತ್ರೇಷು ಚಾದರಃ ।
ಧರ್ಮೈಕತಾನಾಃ ಪುರುಷಾಃ ಪೃಥೌ ರಾಜ್ಯಂ ಪ್ರಶಾಸತಿ ॥ ೩೨ ॥

ಕಥಿತಾನಿ ಚ ಪಾತ್ರಾಣಿ ಯತ್ಕಿಂಚಿತ್ಪರಂ ಚ ಮಯಾ ತವ ।
ಯೇಷಾಂ ಯತ್ರ ರುಚಿಸ್ತತ್ರ ತೇಷಾಂ ದೇಯಂ ವಿಜಾನತಾ ॥ ೩೩ ॥

---

೨೯. ಪೃಥುವು ರಾಜ್ಯವನ್ನಾಳುತ್ತಿರುವಾಗ ದರಿದ್ರನಾಗಲಿ, ರೋಗಿಯಾಗಲಿ ಒಬ್ಬನೂ ಇರಲೇ ಇಲ್ಲ. ತೊಂದರೆಗಳಾಗಲಿ, ಕಾರಣವಿಲ್ಲದೇ ಸಂಭವಿಸುವ ತೊಂದರೆಗಳಾಗಲಿ ಇರಲೇ ಇಲ್ಲ.

೩೦. ಎಲ್ಲರೂ ಸಂತೋಷದಿಂದಿದ್ದರು. ದುಃಖಶೋಕಗಳೆಂಬುವೇ ಇರಲಿಲ್ಲ. ಆ ಮಹಾಬಲಶಾಲಿಯಾದ ಪೃಥುವು ಧನುಸ್ಸಿನ ತುದಿಯಿಂದ ಬೆಟ್ಟಗಳೆಲ್ಲವನ್ನೂ ಭೂಮಿಯನ್ನೂ ಲೋಕಹಿತಕ್ಕೋಸ್ಕರ ಸಮವಾಗಿ ಮಾಡಿದನು.

೩೧. ಆವರೆ ಗ್ರಾಮಗಳೂ, ದುರ್ಗಗಳೂ ಇವನ್ನು ಬಿಟ್ಟುಬಿಟ್ಟನು. ಜನಗಳು ಆಯುಧವನ್ನು ಹಿಡಿಯುತ್ತಲೇ ಇರಲಿಲ್ಲ.

೩೨. ಕ್ಷಯವೇ ಮುಂತಾದ ಬಹು ದುಃಖಗಳುಳ್ಳ ಜಾಡ್ಯಗಳೇ ಇರಲಿಲ್ಲ. ಅರ್ಥ ಶಾಸ್ತ್ರವನ್ನು ಯಾರೂ ಆದರಿಸುತ್ತಿರಲಿಲ್ಲ. ಪೃಥುವು ರಾಜ್ಯವಾಳುತ್ತಿರಲು ಜನರು ಧರ್ಮ ಒಂದರಲ್ಲೇ ಆಸಕ್ತರಾಗಿದ್ದರು.

೩೩. ಮೇಲೆ ಹೇಳಿದುದರಲ್ಲಿ ಯಾವ ಪಾತ್ರವನ್ನೂ ಯಾವ ಹಾಲನ್ನೂ ಹೇಳಿದ್ದೇವೆಯೋ ಯಾರಿಗೆ ಯಾವುದರಲ್ಲಿ ಆಸೆಯಿದೆಯೋ ಅವರಿಗೆ ಅದನ್ನು ತಿಳುವಳಿಕೆಯುಳ್ಳವನು ಕೊಡಬೇಕು.

ಯಜ್ಞಶ್ರಾದ್ಧೇಷು ಸರ್ವೇಷು ಮಯಾ ತುಭ್ಯಂ ನಿವೇದಿತಂ ।
ದುಹಿತೃತ್ವಂ ಗತಾ ಯಸ್ಮಾತ್ಪೃಥೋರ್ಧರ್ಮವತೋ ಮಹೀ ।
ತದಾನುರಾಗಯೋಗಾಚ್ಚ ಪೃಥಿವೀತಿ ಸ್ತುತಾ ಬುಧೈಃ ॥ ೩೪ ॥

॥ ಭೀಷ್ಮ ಉವಾಚ ॥

ಆದಿತ್ಯವಂಶಮಖಿಲಂ ವದ ಬ್ರಹ್ಮನ್ಯಥಾಕ್ರಮಂ ।
ಸೋಮವಂಶಂ ಚ ತತ್ತ್ವಜ್ಞ ಯಥಾವದ್ವಕ್ತುಮರ್ಹಸಿ ॥ ೩೫ ॥

॥ ಪುಲಸ್ತ್ಯ ಉವಾಚ ॥

ವಿವಸ್ವಾನ್ಕಶ್ಯಪಾತ್ಪೂರ್ವಮದಿತ್ಯಾಮಭವತ್ಸುತಃ ।
ತಸ್ಯ ಪತ್ನೀತ್ರಯಂ ತದ್ವತ್ಸಂಜ್ಞಾ ರಾಜ್ಞೀ ಪ್ರಭಾ ತಥಾ ॥ ೩೬ ॥

ರೈವತಸ್ಯ ಸುತಾ ರಾಜ್ಞೀ ರೈವತಂ ಸುಷುವೇ ಸುತಂ ॥ ೩೭ ॥

ಪ್ರಭಾ ಪ್ರಭಾತಂ ಸುಷುವೇ ತ್ವಾಷ್ಟ್ರೀ ಸಂಜ್ಞಾ ತಥಾ ಮನುಂ ।
ಯಮಶ್ಚ ಯಮುನಾ ಚೈವ ಯಮಳೌ ತು ಬಭೂವತುಃ ॥ ೩೮ ॥

---

೩೪. ಯಜ್ಞಗಳಲ್ಲಾಗಲಿ ಶ್ರಾದ್ಧಗಳಲ್ಲಾಗಲಿ ಅವರಿಗೆ ಆ ಪಾತ್ರೆಯನ್ನೂ ಹಾಲನ್ನೂ ಕೊಡಬೇಕು. ಈ ವಿಷಯವೆಲ್ಲವನ್ನೂ ಹೇಳಿದ್ದೇನೆ. ಪೃಥುವಿಗೆ ಭೂಮಿಯು ಧರ್ಮದಿಂದ ಮಗಳಾದುದರಿಂದಲೂ, ಅವನಲ್ಲಿ ಪ್ರೀತಿಯುಳ್ಳವಳಿಂದಲೂ ಪೃಥುವಿನ ಸಂಬಂಧಿಯಾದುದರಿಂದ ಪೃಥಿವೀ ಎಂದು ಹೆಸರು ಬಂದಿತು. ದೇವತೆಗಳೂ ಅದೇ ರೀತಿಯಾಗಿ ಸ್ತುತಿಸಿದರು.

೩೫. ಭೀಷ್ಮನು ಹೇಳಿದನು:—ಆದಿತ್ಯನ ವಂಶವೆಲ್ಲವನ್ನೂ ಕ್ರಮವಾಗಿ ಹೇಳು ಅಲ್ಲದೇ ಎಲೈ ಪುಲಸ್ತ್ಯನೇ, ಸೋಮನ ವಂಶವನ್ನೂ ಕೂಡ ಕ್ರಮವಾಗಿ ಹೇಳು.

೩೬-೩೭. ಪುಲಸ್ತ್ಯನು ಹೇಳಿದನು:—ಪೂರ್ವದಲ್ಲಿ ಕಶ್ಯಪನಿಂದ ಅದಿತಿಯಲ್ಲಿ ವಿವಸ್ವಂತನು ಹುಟ್ಟಿದನು. ಅವನಿಗೆ ಸಂಜ್ಞೆ, ರಾಜ್ಞಿ, ಪ್ರಭೆ ಎಂಬುವಾಗಿ ಮೂವರು ಹೆಂಡಿರು. ರೈವತನ ಮಗಳಾದ ರಾಜ್ಞಿ ಎಂಬುವಳಿಗೆ ರೈವತನೆಂಬ ಮಗನಾದನು.

೩೮. ಪ್ರಭೆಯು ಪ್ರಭಾತನನ್ನೂ ತ್ವಷ್ಟೃವಿನ ಮಗಳಾದ ಸಂಜ್ಞೆಯು ಮನುವನ್ನೂ ಯಮ, ಯಮುನೆಯರೆಂಬ ಅವಳಿ ಮಕ್ಕಳನ್ನೂ ಹೆತ್ತಳು.

ತತಸ್ತೇಜೋಮಯಂ ರೂಪಮಸಹಂತೀ ವಿವಸ್ವತಃ ।
ಸಾರೀಮುತ್ಪಾದಯಾಮಾಸ ಸ್ವಶರೀರಾದನಿಂದಿತಾ ॥ ೩೯ ॥

ತ್ವಾಷ್ಟ್ರೀ ಸ್ವರೂಪರೂಪೇಣ ನಾಮ್ನಾ ಛಾಯೇತಿ ಭಾಮಿನೀ ।
ಕಿಂ ಕರೋಮೀತಿ ಪುರತಃ ಸಂಸ್ಥಿತಾ ತಾಮಭಾಷತ ॥ ೪೦ ॥

ಛಾಯೇ ತ್ವಂ ಭಜ ಭರ್ತಾರಂ ಮದೀಯಂ ಚ ವರಾನನೇ ।
ಅಪತ್ಯಾನಿ ಮದೀಯಾನಿ ಮಾತೃಸ್ನೇಹೇನ ಪಾಲಯ ॥ ೪೧ ॥

ತಥೇತ್ಯುಕ್ತ್ವಾ ಚ ಸಾ ದೇವಮಗಾತ್ಕಾಮಾಯ ಸುವ್ರತಾ ।
ಕಾಮಯಾಮಾಸ ದೇವೋಽಪಿ ಸಂಜ್ಞೇಯಮಿತಿ ಚಾದರಾತ್ ॥ ೪೨ ॥

ಜನಯಾಮಾಸ ಸಾವರ್ಣಂ ಮನುಂ ಮನುಸ್ವರೂಪಿಣಂ ।
ಸವರ್ಣತ್ವಾಚ್ಚ ಸಾವರ್ಣೋ ಮನೋರ್ವೈವಸ್ವತಸ್ಯ ಚ ॥ ೪೩ ॥

---

೩೯. ಸಂಜ್ಞೆಯು ಆ ವಿವಸ್ವಂತನ ತೇಜೋಮಯವಾದ ರೂಪವನ್ನು ಸಹಿಸಲಾರದೆ ತನ್ನ ಶರೀರದಿಂದ ಒಳ್ಳೆಯ ಒಬ್ಬಳು ಹೆಂಗಸನ್ನು ಸೃಷ್ಟಿಸಿದಳು.

೪೦. ಹಾಗೆ ಉತ್ಪನ್ನಳಾದವಳು ಆ ತ್ವಷ್ಟೃವಿನ ಮಗಳ ರೂಪದಿಂದಲೇ ಹುಟ್ಟಿ, ಛಾಯೆಯೆಂಬ ಹೆಸರನ್ನು ಹೊಂದಿ, ಆಕೆಯ ಎದುರಿಗೆ ನಿಂತು ಏನುಮಾಡಲಿ ಎಂದು ಕೇಳಿದಳು.

೪೧. ಎಲೈ ಛಾಯೆಯೇ, ನೀನು ನನ್ನ ಗಂಡನನ್ನು ಹೊಂದಿ ರಮಿಸು. ನನ್ನ ಮಕ್ಕಳನ್ನು ತಾಯಿಯ ಸ್ನೇಹದಿಂದ ಕಾಪಾಡು ಎಂದು ಸಂಜ್ಞೆಯು ಹೇಳಿದಳು.

೪೨. ಹಾಗೇ ಆಗಲೆಂದು ಆಕೆಯು ಭೋಗಿಸುವುದಕ್ಕೋಸ್ಕರ ಆ ವಿವಸ್ವಂತನ ಬಳಿಗೆ ಹೋಗಲು ಆತನು ಸಂಜ್ಞೆಯೆಂದೇ ತಿಳಿದು ಆಕೆಯನ್ನು ರಮಿಸಿದನು.

೪೩. ಆಗ ಆಕೆಯು ತಾನು ಆ ಸಂಜ್ಞೆಗೆ ಸಮಾನವರ್ಣಳಾಗಿದ್ದುದರಿಂದ ಸಾವರ್ಣಮನುವನ್ನು ಹೆತ್ತಳು. ಸಮಾನವರ್ಣವುಳ್ಳವಳು ಹೆತ್ತುದರಿಂದಲೇ ಆ ವೈವಸ್ವತ ಮನುವಿಗೆ ಸಾವರ್ಣನೆಂದು ಹೆಸರಾಯಿತು.

**ಶನೈಶ್ಚರಂ ಚ ತಪತೀಂ ವಿಷ್ಟಿಂ ಚೈವ ಕ್ರಮೇಣ ತು ।**
**ಛಾಯಾಯಾಂ ಜನಯಾಮಾಸ ಸಂಜ್ಞೇಯಮಿತಿ ಭಾಸ್ಕರಃ ॥ ೪೪ ॥**

**ಛಾಯಾ ಸ್ವಪುತ್ರೇಭ್ಯಧಿಕಂ ಮನಶ್ಚಕ್ರೇ ಮನೌ ತದಾ ।**
**ಪೂರ್ವೋ ಮನುಸ್ತಚ್ಚಕ್ಷಮೇ ಯಮಸ್ತು ಕ್ರೋಧಮೂರ್ಛಿತಃ ॥ ೪೫ ॥**

**ತಾಂ ತರ್ಜಯಾಮಾಸ ತದಾ ಪಾದಮುತ್ಕ್ಷಿಪ್ಯ ದಕ್ಷಿಣಂ ।**
**ಶಶಾಪ ಚ ಯಮಂ ಛಾಯಾ ಸವ್ರಣಃ ಕೃಮಿಸಂಯುತಃ ॥ ೪೬ ॥**

**ಪಾದೋಽಯಮೇಕೋ ಭವಿತಾ ಪೂಯಶೋಣಿತವಿಸ್ರವಃ ।**
**ನಿವೇದಯಾಮಾಸ ಪಿತುರ್ಯಮಶ್ಶಾಪೇನ ಧರ್ಷಿತಃ ॥ ೪೭ ॥**

**ನಿಷ್ಕಾರಣಮಹಂ ಶಪ್ತೋ ಮಾತ್ರಾ ದೇವ ಸ ಕೋಪಯಾ ।**
**ಬಾಲಭಾವಾನ್ಮಯಾ ಕಿಂಚಿದುದ್ಯತಶ್ಚರಣಃ ಕ್ವಚಿತ್ ॥ ೪೮ ॥**

---

೪೪. ಸೂರ್ಯನು ಛಾಯೆಯಲ್ಲಿ ಸಂಜ್ಞೆಯೆಂದೇ ತಿಳಿದು ಶನೈಶ್ಚರ, ತಪತಿ, ವಿಷ್ಟಿಗಳೆಂಬ ಮಕ್ಕಳನ್ನು ಹುಟ್ಟಿಸಿದನು.

೪೫. ಛಾಯೆಯು ತಾನು ಹೆತ್ತ ಮಗನಾದ ಸಾವರ್ಣಿ ಮನುವಿನಲ್ಲಿ ಹೆಚ್ಚು ಪ್ರೀತಿಯಿಟ್ಟಳು. ಇದನ್ನು ನೋಡಿ ಹಿಂದಿನವನೂ ಮಗನಾದ ಯಮನೆಂಬ ಮನುವು ಸಹಿಸದೆ ಕೋಪಗೊಂಡನು.

೪೬. ಆರೀತಿ ಕೋಪಗೊಂಡ ಯಮನು ಒದೆಯಲು ಬಲಗಾಲನ್ನು ಎತ್ತಿ ಕೋಪಿಸಿದನು. ಆಗ ಛಾಯೆಯು ನೀನು ಒದೆಯಲು ಎತ್ತಿರುವ ಈ ಕಾಲು ಗಾಯವಾಗಿ ಹುಳುಬಿದ್ದು ರಕ್ತಕೀವುಗಳು ಸೋರುವುದಾಗಿ ಆಗಲಿ ಎಂದು ಶಪಿಸಿದಳು.

೪೭. ಆಗ ಯಮನು, ತಂದೆಗೆ ಎಲೈ ತಂದೆಯೇ ಕೋಪಗೊಂಡು ತಾಯಿ ಕಾರಣವಿಲ್ಲದೆ ನನ್ನನ್ನು ಶಪಿಸಿದಳು. ಎಂಬುದಾಗಿ ಶಾಪಹೊಂದಿರುವ ಯಮನು ಹೇಳಿದನು.

೪೮. ಹುಡುಗತನದಿಂದ ಏನೋ ತಪ್ಪಿ ಒಂದು ಬಾರಿ ಕಾಲನ್ನು ಎತ್ತಿದೆನು. ನನಗೆ ಜೀವವಿರುವವರೆಗೂ ತಪ್ಪದಿರುವ ಶಾಪಕೊಟ್ಟಳು.

ಮುಸುನಾ ವಾರ್ಯಮಾಣಾಪಿ ಮಾಂ ಶಶಾಪ ಮುಹುರ್ವಿಭೋ ।
ಪ್ರಾಯೋ ನ ಮಾತಾ ಸಾಸ್ಮಾಕಮುಸಮಾ ಸ್ನೇಹತೋ ಯತಃ ॥ ೪೯ ॥

ದೇವ್ಯೋ ಪ್ರಾಹ ಯಮಂ ಭೂಯಃ ಕಿಂ ಕರೋಮಿ ಮಹಾಮತೇ ।
ಸೌಖ್ಯಾತ್ಮಕಸ್ಯ ನ ದುಃಖಂ ಸ್ಯಾದಥವಾ ಕರ್ಮಸಂತತಿಃ ॥ ೫೦ ॥

ಅನಿವಾರ್ಯಾ ಭವಸ್ಯಾಪಿ ಕಾ ಕಥಾನ್ಯೇಷು ಜಂತುಷು ।
ಕೃಕವಾಕುಸ್ತ್ವ ಪದೇ ಸ ಕೃಮೀನ್ಭಕ್ಷಯಿಷ್ಯತಿ ॥ ೫೧ ॥

ಕ್ಲೇದಂ ಚ ರುಧಿರಂ ಚೈವ ವತ್ಸಾಯ ಪರಿಣೇಷ್ಯತಿ ।
ಏವಮುಕ್ತ್ವಾ ತು ಶಪ್ತಶ್ಚ ತಪಸ್ತೇಪ್ರಂಮಹಾಯಶಾಃ ॥ ೫೨ ॥

ವೈರಾಗ್ಯಾತ್ಪುಷ್ಕರೇ ತೀರ್ಥೇ ಫಲಫೇನಾನಿಲಾಶನಃ ।
ಪಿತಾಮಹಂ ಸಮಾರಾಧ್ಯ ಯಾವದ್ವರ್ಷಶತಂ ಪುನಃ ॥ ೫೩ ॥

---

೪೯. ಆಕೆಯು ನಮ್ಮೆಲ್ಲರಲ್ಲಿಯೂ ಒಂದೇ ರೀತಿಯಾದ ಸ್ನೇಹದಿಂದ ನಡೆದುಕೊಳ್ಳದೆ ಇರುವುದರಿಂದ ನನಗೆ ಬಹುಶಃ ತಾಯಿಯಲ್ಲದಿದ್ದರೂ ಇರಬಹುದು.

೫೦. ಆಗ ಆ ಸೂರ್ಯನು ಯಮನನ್ನು ಕುರಿತು ಎಲೈ ಬುದ್ಧಿಶಾಲಿಯೇ. ಸೌಖ್ಯದಲ್ಲಿರುವ ಯಾವನು ಈ ವಿಷಯವನ್ನು ಕೇಳಿ ದುಃಖಿಸದಿರುವನು? ಹೋಗಲಿ ಇದು ಪ್ರಾಚೀನಕರ್ಮವಿದ್ದರೂ ಇರಬಹುದು. ಈಗ ನಾನೇನು ಮಾಡಲಿ?

೫೧ ಸಾಕ್ಷಾನ್ಮಹೇಶ್ವರನಿಗೂ ಕೂಡ ಈ ರೀತಿಯಾದ ಪೂರ್ವಕರ್ಮಗಳು ತಡೆಯಲಸಾಧ್ಯವಾಗಿರುವಾಗ ಇತರ ಪ್ರಾಣಿಗಳ ವಿಷಯದಲ್ಲಿ ಹೇಳತಕ್ಕದ್ದೇನಿರು ವುದು? ಕೋಳಿಯು ನಿನ್ನ ಕಾಲಿನಲ್ಲಿರುವ ಹುಳುಗಳನ್ನು ತಿನ್ನುತ್ತದೆ. ಅದರಲ್ಲಿರುವ ಕೀವು ರಕ್ತಗಳನ್ನು ಈ ಕೋಳಿಯೇ ತೆಗೆದು ಶುದ್ಧಿಮಾಡುತ್ತದೆ ಎಂದನು.

೫೨-೫೩. ಶಾಪಹೊಂದಿದ ಯಮನಿಗೆ ತಂದೆಯು ಹೀಗೆನ್ನಲು ಆತನು ವೈರಾಗ್ಯದಿಂದ ಪುಷ್ಕರತೀರ್ಥಕ್ಕೆ ಹೋಗಿ ಅಲ್ಲಿ ಹಣ್ಣು, ನೊರೆ, ಗಾಳಿಗಳೇ ಆಹಾರ ವುಳ್ಳವನಾಗಿ ಬ್ರಹ್ಮನನ್ನು ಪೂಜಿಸುತ್ತಾ ನೂರು ವರ್ಷಗಳವರೆಗೂ ತಪಸ್ಸು ಮಾಡಿದನು. ಆತನ ತಪಸ್ಸಿನ ಪ್ರಭಾವದಿಂದ ಬ್ರಹ್ಮನು ಸಂತೋಷಪಟ್ಟು ಪ್ರತ್ಯಕ್ಷ ನಾದನು.

**ತಪಃ ಪ್ರಭಾವಾದ್ದೇವೇಶಃ ಸಂತುಷ್ಟಃ ಪದ್ಮಸಂಭವಃ ।**
**ವವ್ರೇ ಸ ಲೋಕಪಾಲತ್ವಂ ಪಿತೃಲೋಕಂ ತಥಾಕ್ಷಯಂ** ॥ ೫೪ ॥

**ಧರ್ಮಾಧರ್ಮಾತ್ಮಕಸ್ಯಾಸ್ಯ ಜಗತಸ್ತು ಪರೀಕ್ಷಣಂ ।**
**ಏವಂ ಸ ಲೋಕಪಾಲತ್ವಮಗಮತ್ಪದ್ಮಸಂಭವಾತ್** ॥ ೫೫ ॥

**ಪಿತೄಣಾಮಾಧಿಪತ್ಯಂ ಚ ಧರ್ಮಾಧರ್ಮಸ್ಯ ಚಾನಘ ।**
**ವಿವಸ್ವಾನಥ ತಜ್ಜ್ಞಾತ್ವಾ ಸಂಜ್ಞಾಯಾಃ ಕರ್ಮ ಚೇಷ್ಟಿತಂ** ॥ ೫೬ ॥

**ತ್ವಷ್ಟುಸ್ಸಮೀಪಮಾಗಮ್ಯ ಆಚಚಕ್ಷೇ ಸ ರೋಷವಾನ್ ।**
**ತಮುವಾಚ ತತಸ್ತ್ವಷ್ಟಾ ಸಾಂತ್ವಪೂರ್ವಂ ತದಾ ವಚಃ** ॥ ೫೭ ॥

**॥ ತ್ವಷ್ಟೋವಾಚ ॥**

**ತವಾಸಹಂತೀ ಭಗವಂಸ್ತೇಜಸ್ತೀವ್ರಂ ತಮೋನುದ ।**
**ಬಡಬಾರೂಪಮಾಸ್ಥಾಯ ಮತ್ಸಕಾಶಮಿಹಾಗತಾ** ॥ ೫೮ ॥

೫೪. ಆಗ ಯಮನು ಲೋಕಪಾಲನಾಗಿರುವಿಕೆಯನ್ನೂ ಅಕ್ಷಯವಾದ ಪಿತೃಲೋಕವನ್ನೂ, ಈ ಜಗತ್ತಿನ ಧರ್ಮಾಧರ್ಮಗಳ ಪರೀಕ್ಷೆಮಾಡುವಿಕೆಯನ್ನೂ ಕೇಳಿಕೊಂಡನು.

೫೫. ಈ ರೀತಿ ಆ ಯಮನು ಬ್ರಹ್ಮನಿಂದ ಲೋಕಪಾಲನಾಗಿರುವಿಕೆಯನ್ನೂ, ಪಿತೃಗಳಿಗೆ ಒಡೆಯನಾಗಿರುವಿಕೆಯನ್ನೂ, ಧರ್ಮ ಅಧರ್ಮಗಳಿಗೆ ಪರೀಕ್ಷೆಯ ಒಡೆತನವನ್ನೂ ಹೊಂದಿದನು.

೫೬-೫೭. ಅನಂತರ ಸೂರ್ಯನು ಸಂಜ್ಞೆಯು ಮಾಡಿದ ಕೆಟ್ಟ ಕೆಲಸವನ್ನು ತಿಳಿದು, ಅವಳ ತಂದೆಯಾದ ತ್ವಷ್ಟೃವಿನ ಬಳಿಗೆ ಹೋಗಿ ಕೋಪದಿಂದ ಕೆಲವು ಮಾತನ್ನಾಡಲು, ಆ ತ್ವಷ್ಟೃವು ಆ ಸೂರ್ಯನನ್ನು ಸಂತಯಿಸುತ್ತಾ ಕೆಲವು ಒಳ್ಳೆಯ ಮಾತುಗಳನ್ನಾಡಿದನು.

೫೮. ತ್ವಷ್ಟೃವು ಹೇಳಿದನು :—ಎಲೈ ಭಗವಂತನೇ, ನಿನ್ನ ಈ ತೀವ್ರವಾದ ತೇಜಸ್ಸನ್ನು ಸಹಿಸಲಾರದೆ ಆಕೆಯು ಹೆಣ್ಣು ಕುದುರೆಯ ರೂಪವನ್ನು ಹೊಂದಿ ನನ್ನ ಬಳಿಗೆ ಬಂದಳು.

ನಿವಾರಿತಾ ಮಯಾ ಸಂಜ್ಞಾ ತ್ವದ್ಭಯೇನ ದಿವಸ್ಪತೇ ।
ಯಸ್ಮಾದವಿಜ್ಞಾತಮನಾ ಮತ್ಸಕಾಶಮಿಹಾಗತಾ ॥ ೫೯ ॥

ತಸ್ಮಾನ್ಮದೀಯಂ ಭವನಂ ಪ್ರವೇಷ್ಟುಂ ನ ತವಾರ್ಹಿತಂ ।
ಏವಮುಕ್ತ್ವಾ ಜಗಾಮಾಥ ಮರುದೇಶಮನಿಂದಿತಾ ॥ ೬೦ ॥

ಬಡಬಾರೂಪಮಾಸ್ಥಾಯ ಭೂತಲೇ ಸಂಪ್ರತಿ ಸ್ಥಿತಾ ।
ತಸ್ಮಾತ್ಪ್ರಸಾದಂ ಕುರು ಮೇ ಯದನುಗ್ರಹಭಾಗಹಂ ॥ ೬೧ ॥

ಅಪನೇಷ್ಯಾಮಿ ತೇ ತೇಜಃ ಕೃತ್ವಾ ಯಂತ್ರೇ ದಿವಾಕರ ।
ರೂಪಂ ತವ ಕರಿಷ್ಯಾಮಿ ಲೋಕಾನಂದಕರಂ ಪ್ರಭೋ ॥ ೬೨ ॥

ತಥೇತ್ಯುಕ್ತಸ್ಸ ರವಿಣಾ ಭ್ರಮೌ ಕೃತ್ವಾ ದಿವಾಕರಂ ।
ಪೃಥಕ್ಚಕಾರ ತತ್ತೇಜಶ್ಚಕ್ರಂ ವಿಷ್ಣೋರಕಲ್ಪಯತ್ ॥ ೬೩ ॥

---

೫೯. ಎಲೈ ದಿವಸ್ಪತಿಯೇ, ನಿನಗೆ ತಿಳಿಯದಂತೆ ಆಕೆಯು ನನ್ನ ಬಳಿಗೆ ಬಂದುದರಿಂದ ನಿನ್ನ ಭಯದಿಂದ ಆಕೆಯನ್ನು ಮನೆಗೆ ಸೇರಿಸಿಕೊಳ್ಳದೆ ತಡೆದೆನು.

೬೦. ನೀನು ಗಂಡನಿಗೆ ತಿಳಿಯದಂತೆ ಬಂದುದರಿಂದ ನನ್ನ ಮನೆಗೆ ಪ್ರವೇಶಿಸಲು ಯೋಗ್ಯಳಲ್ಲ ಎನ್ನಲು, ಆಕೆಯು ದುಷ್ಟತನಕ್ಕೆ ಮನಸ್ಸುಕೊಡದೆ ಮರುಪ್ರದೇಶಕ್ಕೆ ಹೋದಳು.

೬೧. ಆಕೆಯು ಬಡಬಾರೂಪವನ್ನು ಹೊಂದಿ ಭೂತಳದಲ್ಲಿ ಈಗ ಇದ್ದಾಳೆ. ನಾನು ತಪ್ಪಿತಸ್ಥನಲ್ಲದುದರಿಂದ ನನ್ನಲ್ಲಿ ಅನುಗ್ರಹವಿಡು.

೬೨. ಎಲೈ ಸೂರ್ಯನೇ, ನಿನ್ನನ್ನು ಯಂತ್ರದಲ್ಲಿಟ್ಟು ನಿನ್ನ ಆ ತೇಜಸ್ಸನ್ನು ತೆಗೆದುಹಾಕಿ ನಿನ್ನ ರೂಪವು ಲೋಕಾನಂದಕರವಾಗುವ ರೀತಿಯಲ್ಲಿ ಮಾಡುತ್ತೇನೆ ಎಂದನು.

೬೩. ಅದಕ್ಕೆ ಸೂರ್ಯನು ಒಪ್ಪಿಕೊಳ್ಳಲು, ಅವನನ್ನು ಚಕ್ರದಲ್ಲಿಟ್ಟು ಅವನ ತೇಜಸ್ಸನ್ನು ಬೇರ್ಪಡಿಸಿದನು. ಆ ತೇಜಸ್ಸಿನಿಂದ ಕೂಡಿದ ಚಕ್ರವನ್ನು ವಿಷ್ಣುವಿಗೆ ಕೊಟ್ಟನು.

**ತ್ರಿಶೂಲಂ ಚಾಪಿ ರುದ್ರಸ್ಯ ವಜ್ರಮಿಂದ್ರಸ್ಯ ಚಾಧಿಕಂ ।**
**ದೈತ್ಯದಾನವಸಂಹರ್ತುಃ ಪ್ರಸನ್ನಕಿರಣಾತ್ಮಕಂ ।** ॥ ೬೪ ॥

**ರೂಪಂ ಚಾಪ್ರತಿಮಂ ಚಕ್ರೇ ತ್ವಷ್ಟಾ ಪದ್ಭ್ಯಾಮೃತೇ ಮಹತ್ ।**
**ನ ಶಶಾಕಾಥ ತಂ ದ್ರಷ್ಟುಂ ಪಾದರೂಪಂ ರವೇಃ ಪುನಃ** ॥ ೬೫ ॥

**ಅದ್ಯಾಪಿ ಚ ತತಃ ಪಾದೌ ನ ಕಶ್ಚಿತ್ಕಾರಯೇತ್ಕ್ವಚಿತ್ ।**
**ಯಃ ಕರೋತಿ ಸ ಪಾಪಿಷ್ಠಾಂ ಗತಿಂ ಪ್ರಾಪ್ನೋತಿ ನಿಂದಿತಾಂ** ॥ ೬೬ ॥

**ಕುಷ್ಠರೋಗಮವಾಪ್ನೋತಿ ಲೋಕೇಽಸ್ಮಿಂದುಃಖಸಂಯುತಂ ।**
**ತಸ್ಮಾಚ್ಚ ಧರ್ಮಕಾಮಾರ್ಥೀ ಚಿತ್ರೇಷ್ವಾಯತನೇಷು ಚ** ॥ ೬೭ ॥

**ನ ಕ್ವಚಿತ್ಕಾರಯೇತ್ಪಾದೌ ದೇವದೇವಸ್ಯ ಧೀಮತಃ ।**
**ತತಸ್ಸ ಭಗವಾನ್ಗತ್ವಾ ಭೂರ್ಲೋಕಮಮರಾಧಿಪಃ** ॥ ೬೮ ॥

---

೬೪-೬೫. ಆ ತೇಜಸ್ಸಿನಿಂದ ರುದ್ರನಿಗೆ ತ್ರಿಶೂಲವನ್ನು ಮಾಡಿಕೊಟ್ಟನು. ಇಂದ್ರನ ವಜ್ರಾಯುಧಕ್ಕೂ ಆ ತೇಜಸ್ಸನ್ನು ಸೇರಿಸಿ ಹೆಚ್ಚಿಸಿದನು. ದೈತ್ಯರನ್ನೂ ದಾನವರನ್ನೂ ಕೊಲ್ಲುವ ಆ ಸೂರ್ಯನ ರೂಪವನ್ನು ನೋಡಲು ಅರ್ಹನಾಗಿಯೂ, ಚೆನ್ನಾಗಿಯೂ ಇರುವಂತೆ ಮಾಡಿದನು. ಆದರೆ ಕಾಲಿನಲ್ಲಿ ಮಾತ್ರ ತೇಜಸ್ಸನ್ನು ತೆಗೆಯಲಿಲ್ಲ. ಆದರೂ ಕೂಡ ಆ ಸೂರ್ಯನ ಕಾಲಿನ ರೂಪವನ್ನು ನೋಡಲು ಸಾಧ್ಯವಾಗಲಿಲ್ಲ.

೬೬. ಈಗಲೂ ಕೂಡ ಆ ಕಾಲುಗಳನ್ನು ಯಾರೂ ನಿರ್ಮಾಣಮಾಡರು. ಯಾವನು ಕಾಲುಗಳನ್ನು ಮಾಡುತ್ತಾನೆಯೋ ಅವನು ನಿಂದಿತವಾದ ಪಾಪಗತಿಯನ್ನು ಹೊಂದುತ್ತಾನೆ.

೬೭. ಹಾಗೆ ಕಾಲನ್ನು ಮಾಡಿದರೆ ಕುಷ್ಠರೋಗವನ್ನು ಹೊಂದುತ್ತಾನೆ, ದುಃಖಗಳ ಪರಂಪರೆಯನ್ನು ಹೊಂದುತ್ತಾನೆ. ಆದ್ದರಿಂದ ಧರ್ಮವನ್ನೂ ಕಾಮವನ್ನೂ ಅಪೇಕ್ಷಿಸುವವನು ಚಿತ್ರಗಳಲ್ಲಿಯೂ, ಮನೆಗಳಲ್ಲಿಯೂ, ದೇವಸ್ಥಾನಗಳಲ್ಲಿಯೂ, ಆ ಸೂರ್ಯನ ಪಾದಗಳನ್ನು ಚಿತ್ರಿಸಬಾರದು.

೬೮-೬೯. ಆಮೇಲೆ ಅಮರಾಧಿಪನಾದ ಸೂರ್ಯನು ಭೂಲೋಕಕ್ಕೆ ಹೋಗಿ

ಕಾಮಯಾಮಾಸ ಕಾಮಾರ್ತಾಂ ಮುಖ ಏವ ದಿವಾಕರಃ ।
ಅಶ್ವರೂಪೇಣ ಮಹತಾ ತೇಜಸಾ ಚ ಸಮನ್ವಿತಃ ॥ ೧೯ ॥

ಸಂಜ್ಞಾ ಚ ಮನಸಾ ಕ್ಷೋಭಮಗಮದ್ಭಯವಿಹ್ವಲಾ ।
ನಾಸಾಪುಟಾಭ್ಯಾಮುತ್ಸೃಷ್ಟಂ ಪರೋಽಯಮಿತಿ ಶಂಕಯಾ ॥ ೨೦ ॥

ತಸ್ಯಾಥ ರೇತಸ್ತ್ರೋ ಜಾತಾವಶ್ವಿನಾವಿತಿ ನಶ್ಶ್ರುತಂ ।
ದಸ್ರೌ ಶ್ರುತಿತ್ವಾತ್ಸಂಜಾತೌ ನಾಸತ್ಯೌ ನಾಸಿಕಾಗ್ರತಃ ॥ ೨೧ ॥

ಜ್ಞಾತ್ವಾ ಚಿರಾಚ್ಚ ಸಾ ದೇವಂ ಸಂತೋಷಮಗಮತ್ಪರಂ ।
ವಿಮಾನೇನಾಗಮತ್ಸ್ವರ್ಗಂ ಪತ್ನ್ಯಾ ಸಹ ಮುದಾನ್ವಿತಃ ॥ ೨೨ ॥

ಸಾವರ್ಣೋಽಪಿ ಮನುರ್ಮೇರಾವದ್ಯಾಪಿ ತಪತೇ ತಪಃ ।
ಶನಿಸ್ತಪೋಬಲಾಚ್ಚಾಪಿ ಗ್ರಹಾಣಾಂ ಸಮತಾಂ ಗತಃ ॥ ೨೩ ॥

---

ಕಾಮದಿಂದ ಕೂಡಿದ ಆಕೆಯನ್ನು ಆ ಅಶ್ವರೂಪವನ್ನೇ ತಾಳಿ ಆ ತೇಜಸ್ಸಿನಿಂದಲೇ ಮುಖದಲ್ಲಿ ಕಾಮಿಸಿದನು.

೨೦. ಸಂಜ್ಞೆಯು ಭಯಪಟ್ಟು ಮನಸ್ಸಿನಲ್ಲಿ ಕಳವಳ ಹೊಂದಿದವಳು ಪರನೆಂಬ ಶಂಕೆಯಿಂದ ಆ ರೇತಸ್ಸು ಬರುವ ದಂಡವನ್ನು ಮೂಗಿನ ಹೊಳ್ಳೆಗಳಿಂದ ಎತ್ತಿದಳು.

೨೧. ಆ ಸೂರ್ಯನ ತೇಜಸ್ಸಿನಿಂದ ಹುಟ್ಟಿದವರೇ ಅಶ್ವಿನಿಗಳಾದರೆಂದು ಕೇಳಿದ್ದೇವೆ. ಶ್ರುತಿ (ಕಿವಿ) ಯಲ್ಲಿ ಹುಟ್ಟಿದುದರಿಂದ ದಸ್ರರೆಂದೂ, ನಾಸಿಕಾಗ್ರ (ಮೂಗಿನ ತುದಿ) ದಲ್ಲಿ ಹುಟ್ಟಿದುದರಿಂದ ನಾಸತ್ಯರೆಂದೂ ಹೆಸರಾಯಿತು.

೨೨. ಸ್ವಲ್ಪ ಹೊತ್ತಿನ ಮೇಲೆ ಅವನು ಸೂರ್ಯನೆಂಬುದನ್ನು ತಿಳಿದು ಸಂತೋಷಗೊಂಡಳು. ಅನಂತರ ಸೂರ್ಯನು ಹೆಂಡತಿಯೊಡನೆ ವಿಮಾನದಲ್ಲಿ ಕುಳಿತು ಸ್ವರ್ಗಕ್ಕೆ ಹೋದನು.

೨೩. ಸಾವರ್ಣಮನುವು ಈಗಲೂ ಕೂಡ ಮೇರು ಪರ್ವತದಲ್ಲಿಯೇ ತಪಸ್ಸು ಮಾಡುತ್ತಿದ್ದಾನೆ. ಶನಿಯು ತಪಸ್ಸಿನ ಬಲದಿಂದ ಗ್ರಹಗಳಿಗೆ ಸಮನಾದನು.

ಯಮುನಾ ತಪತೀ ಚೈವ ಉಭೇ ನದ್ಯೌ ಬಭೂವತುಃ ।
ವಿಷ್ಟಿರ್ಘೋರಾತ್ಮಿಕಾ ತದ್ವತ್ಕಾಲತ್ವೇನ ವ್ಯವಸ್ಥಿತಾ ॥ ೭೪ ॥

ಮನೋರ್ವೈವಸ್ವತಸ್ಯಾಸನ್ದಶ ಪುತ್ರಾ ಮಹಾಬಲಾಃ ।
ಇಲಸ್ತು ಪ್ರಥಮಸ್ತೇಷಾಂ ಪುತ್ರೇಷು ಸಮಜಾಯತ ॥ ೭೫ ॥

ಇಕ್ಷ್ವಾಕುಃ ಕುಶನಾಭಶ್ಚ ಅರಿಷ್ಟೋ ಧೃಷ್ಟ ಏವ ಚ ।
ನರಿಷ್ಯಂತಃ ಕರೂಷಶ್ಚ ಶರ್ಯಾತಿಶ್ಚ ಮಹಾಬಲಃ ॥ ೭೬ ॥

ಪೃಷಧ್ರಶ್ಚಾಥ ನಾಭಾಗಃ ಸರ್ವೇ ತೇ ದಿವ್ಯಮಾನುಷಾಃ ।
ಅಭಿಷಿಚ್ಯ ಮನುಃ ಪುತ್ರಮಿಲಂ ಜ್ಯೇಷ್ಠಂ ಸ ಧಾರ್ಮಿಕಂ ॥ ೭೭ ॥

ಜಗಾಮ ತಪಸೇ ಭೂಯಃ ಸ ಪುಷ್ಕರತಪೋವನಂ ।
ಅಥಾಜಗಾಮ ಸಿದ್ಧ್ಯರ್ಥಂ ತಸ್ಯ ಬ್ರಹ್ಮಾ ವರಪ್ರದಃ ॥ ೭೮ ॥

ವರಂ ವರಯ ಭದ್ರಂ ತೇ ಮನವೇ ಯದ್ಯಥೇಪ್ಸಿತಂ ।
ಉವಾಚ ಸ ತದಾ ದೇವಂ ಪದ್ಮಾಕ್ಷಂ ಪದ್ಮಜಂ ವಿಭುಂ ॥ ೭೯ ॥

---

೭೪. ಯಮುನೆಯೂ ತಪತಿಯೂ ನದಿಗಳಾಗಿ ಆದರು. ವಿಷ್ಟೆಯೆಂಬವಳು ಘೋರವಾದ ಕಾಲರೂಪದಿಂದ ನಿಂತಳು.

೭೫. ವೈವಸ್ವತಮನುವಿಗೆ ಹತ್ತು ಜನ ಮಹಾಬಲಿಷ್ಠರಾದ ಮಕ್ಕಳಾದರು. ಅವರೊಳಗೆ ಇಲನೆಂಬವನು ಹಿರಿಯ ಮಗನು,

೭೬. ಇಲ, ಇಕ್ಷ್ವಾಕು, ಕುಶನಾಭ, ಅರಿಷ್ಟ, ಧೃಷ್ಟ, ನರಿಷ್ಯಂತ, ಕರೂಷ ಶರ್ಯಾತಿ, ಪೃಷಧ್ರ, ನಾಭಾಗ, ಎಂಬುದಾಗಿ ಹತ್ತು ಜನ ಮಕ್ಕಳು. ಇವರು ದೇವತೆಗಳಾಗಿಯೂ ಮನುಷ್ಯರಾಗಿಯೂ ಇದ್ದಾರೆ.

೭೭. ಮನುವು ದೊಡ್ಡವನೂ, ಧಾರ್ಮಿಕನೂ ಆದ ಇಲನನ್ನು ರಾಜ್ಯದಲ್ಲಿ ಅಭಿಷೇಕಮಾಡಿ ಪುಷ್ಕರ ತಪೋವನಕ್ಕೆ ತಪಸ್ಸಿಗೆ ಹೋದನು.

೭೮-೭೯. ಅವನ ತಪಸ್ಸು ಸಿದ್ಧಿಯಾಗಲು, ಬ್ರಹ್ಮನು ವರವನ್ನು ಕೊಡುವುದಕ್ಕೋಸ್ಕರ ಬಂದು ಎಲೈ ಮನುವೇ, ಮನುವಿಗೆ ಏನೇನು ಇಷ್ಟವೋ ಅಂತಹ ವರಗಳೆಲ್ಲವನ್ನೂ ಕೇಳಿಕೋ ಎಂದನು. ಆಗ ಆತನು ಪದ್ಮದಂತೆ ಕಣ್ಣುಳ್ಳ ಆ ಪದ್ಮಜನಾದ ಬ್ರಹ್ಮನಿಗೆ ಇಂತೆಂದನು.

॥ ಮನುರುವಾಚ ॥

ಏತೇಮೇ ಧರ್ಮಸಂಯುಕ್ತಾಃ ಪೃಥಿವ್ಯಾಂ ಸರ್ವಪಾರ್ಥಿವಾಃ ।
ಭವಂತು ಈಶ್ವರಾಃ ಸ್ವಾಮಿನ್ಪ್ರಸಾದಾತ್ತವ ಕೇಂಜಜ ॥ ೮೦ ॥

ತಥೇತ್ಯುಕ್ತ್ವಾ ಚ ದೇವೇಶಸ್ತತ್ರೈವಾಂತರಧೀಯತ ।
ತತಶ್ಚ ಸ್ವಯಮಾಗಮ್ಯ ಸಮತಿಷ್ಠದ್ಯಥಾ ಪುರಾ ॥ ೮೧ ॥

ನಿರ್ಜಗಾಮಾಥ ಸಿದ್ಧ್ಯರ್ಥಮಿಲಃ ಪ್ರಾಯಾನ್ಮಹೀಮಿಮಾಂ
ಭ್ರಮನ್ ದ್ವೀಪಾನಿ ಸರ್ವಾಣಿ ಕ್ಷಮಾಭೃತಃ ಪ್ರಸಾಧಯನ್ ॥ ೮೨ ॥

ಜಗಾಮೋಪವನಂ ಶಂಭೋ ರಥಾಕೃಷ್ಟಃ ಪ್ರತಾಪವಾನ್ ।
ಕಲ್ಪದ್ರುಮಲತಾಕೀರ್ಣಂ ನಾಮ್ನಾ ಶರವಣಂ ಮಹತ್ ॥ ೮೩ ॥

ರಮತೇ ಯತ್ರ ದೇವೇಶಃ ಸೋಮಸ್ಸೋಮಾರ್ಧಶೇಖರಃ ।
ಉಮಯಾ ಸಮಯಸ್ತತ್ರ ಪುರಾ ಶರವಣೇ ಕೃತಃ ॥ ೮೪ ॥

೮೦. ಮನುವು ಹೇಳಿದನು.—ಎಲೈ ಬ್ರಹ್ಮನೇ, ಈ ನನ್ನ ಹತ್ತು ಜನ ಮಕ್ಕಳೂ ನಿನ್ನ ಅನುಗ್ರಹದಿಂದ ಭೂಮಿಗೆ ಒಡೆಯರಾಗಿ ಧರ್ಮದಿಂದ ಕೂಡಿಕೊಂಡು ಈಶ್ವರರಾಗಿ ಆಗಲಿ ಎಂದು ಕೇಳಿದನು.

೮೧. ಹಾಗೆ ಆಗಲೆಂದು ಹೇಳಿ ಆ ಬ್ರಹ್ಮನು ಅಂತರ್ಧಾನಹೊಂದಿದನು. ಅನಂತರ ಆ ಮನುವು ತಾನು ಹಿಂತಿರುಗಿ ಒಂದು ಮೊದಲಿನಂತೆ ಇದ್ದನು.

೮೨. ಅನಂತರ ಪ್ರಪಂಚವನ್ನು ತನ್ನ ಕೈಯಲ್ಲಿಟ್ಟುಕೊಳ್ಳಲು ಇಲನು ಭೂಮಿಯನ್ನು ಸುತ್ತುತ್ತಾ ದ್ವೀಪಗಳನ್ನೂ ಸುತ್ತುತ್ತಾ ರಾಜರುಗಳನ್ನೂ ಗೌರವಿಸುತ್ತ ಹೊರಟನು.

೮೩. ಹೀಗೆ ಹೋಗುತ್ತಿರಲು ರಥವು, ಕಲ್ಪವೃಕ್ಷಗಳಿಂದ ಕೂಡಿದ ಶರವಣವೆಂಬ ಶಂಭುವಿನ ಮಹಾವನವನ್ನು ಹೊಂದಿತು.

೮೪. ಅಲ್ಲಿ ಚಂದ್ರಶೇಖರನಾದ ಈಶ್ವರನು ಉಮೆಯೊಡನೆ ರಮಿಸುತ್ತಿರುತ್ತಾನೆ. ಉಮೆಯು ಆಶರವಣ ಉಪವನದಲ್ಲಿ ಒಂದು ನಿಯಮವನ್ನು ಮಾಡಿರುವಳು.

ಪುನ್ನಾಮ ಸತ್ತ್ವಂ ಯತ್ಕಿಂಚಿದಾಗಮಿಷ್ಯತಿ ನೋ ವನೇ ।
ಸ್ತ್ರೀತ್ವಮೇಷ್ಯತಿ ತತ್ಸರ್ವಂ ದಶಯೋಜನಮಂಡಲೇ ॥ ೮೫ ॥

ಅಜ್ಞಾತಸಮಯೋ ರಾಜಾ ಇಲಶ್ಶರವಣಂ ಗತಃ ।
ಸ್ತ್ರೀತ್ವಂ ಜಗಾಮ ಸಹಸಾ ಬಡಬಾಶ್ವೋಽಭವತ್ಕ್ಷಣಾತ್ ॥ ೮೬ ॥

ಯತ್ಕಿಂಚಿತ್ಪುರುಷಾಕಾರಂ ಸ್ತ್ರೀಭವದ್ವಿಸ್ಮೃತೋ ನೃಪಃ ।
ಇಲೇತಿ ಸಾಭವನ್ನಾರೀ ಪೀನೋನ್ನತಘನಸ್ತನೀ ॥ ೮೭ ॥

ಉನ್ನತಶ್ರೋಣಿಜಘನಾ ಪದ್ಮಪತ್ರಾಯತೇಕ್ಷಣಾ ।
ಪೂರ್ಣೇಂದುವದನಾ ನಾರೀ ವಿಶಾಲೋಲ್ಲಸಿತೇಕ್ಷಣಾ ॥ ೮೮ ॥

ಪೀನೋನ್ನತಾಯತಭುಜಾ ನೀಲಕುಂಚಿತಮೂರ್ಧಜಾ ।
ತನುಲೋಮಾ ಸುದಶನಾ ಮೃದುಗದ್ಗದಭಾಷಿಣೀ ॥ ೮೯ ॥

---

೮೫. ನಮ್ಮ ಈ ವನದ ಹತ್ತು ಯೋಜನದಗಲದಲ್ಲಿ ಗಂಡಾಗಿ ಯಾವ ಪ್ರಾಣಿ ಬಂದರೂ ಅದು ಹೆಣ್ಣಾಗಬೇಕು ಎಂಬುದೇ ಆ ನಿಯಮವು.

೮೬. ಈ ನಿಯಮವನ್ನು ತಿಳಿಯದೆ ಇಲನು ಶರವಣಕ್ಕೆ ಹೋಗಿ ಹೆಣ್ಣಾಗಿ ಬಿಟ್ಟನು. ಕುದುರೆಯೂ ಹೆಣ್ಣು ಕುದುರೆಯಾಯಿತು.

೮೭. ಆಗ ಆ ಇಲನು ಹೆಂಗಸಾಗಿ ತನ್ನ ಪುರುಷಾಕಾರದ ಚಿಹ್ನೆಯೊಂದೂ ಇಲ್ಲದೆ ಅದರ ಜ್ಞಾನವನ್ನೇ ಮರೆತುಬಿಟ್ಟನು. ಹೆಸರು ಇಲೆ ಎಂದೇ ಆಯಿತು. ದಪ್ಪವಾಗಿ ಎತ್ತರವಾದ ಸ್ತನಗಳು ಹುಟ್ಟಿದ್ದುವು.

೮೮-೯೦. ಮೇಲಕ್ಕೆ ಎದ್ದಿರುವಂತೆ ಕಾಣುವ ಸೊಂಟದ ಮುಂಭಾಗವೂ ಕುಂಡಿಗಳೂ ಇದ್ದುವು. ಪದ್ಮದಂತೆ ಮನೋಹರವಾದ ಕಣ್ಣುಗಳಿದ್ದುವು. ಪೂರ್ಣ ಚಂದ್ರನಂತೆ ಮುಖವಿದ್ದಿತು. ವಿಶಾಲವಾಗಿಯೂ, ಮನೋಹರವಾಗಿಯೂ, ಕಣ್ಣು ಗಳಿದ್ದುವು. ದಪ್ಪವಾಗಿಯೂ, ಅಗಲವಾಗಿಯೂ ಇರುವ ಭುಜಗಳಿದ್ದುವು. ಕಪ್ಪಗೂ ಗುಂಗುರು ಗುಂಗುರಾಗಿಯೂ ಕೂದಲುಗಳಿದ್ದುವು, ಕೂದಲುಗಳು ಸಣ್ಣಗೆ ಇದ್ದುವು. ಮುಖವು ಪ್ರಸನ್ನವಾಗಿದ್ದಿತು, ಮೆಲ್ಲಗೆ ಗದ್ಗದದಿಂದ ಮಾತನಾಡುತ್ತಿದ್ದಳು, ಯೌವನವು

ಶ್ಯಾಮಾ ಗೌರೇಣ ವರ್ಣೇನ ಹಂಸವಾರಣಗಾಮಿನೀ ।
ಕಾರ್ಮುಕಭ್ರೂಯುಗೋಪೇತಾ ತನುತಾಮ್ರನಖಾಂಕುರಾ ॥ ೯೦ ॥

ಭ್ರಮಮಾಣಾ ವನೇ ತಸ್ಮಿಂಶ್ಚಿಂತಯಾಮಾಸ ಭಾಮಿನೀ ।
ಕೋ ಮೇ ಪಿತಾ ಚ ಮಾತಾ ಚ ಕೋ ಮೇ ಭ್ರಾತಾ ಭವೇದಿಹ ॥ ೯೧ ॥

ಕಸ್ಯ ಭರ್ತುರಹಂ ದತ್ತಾ ಕಿಯದ್ವರ್ಣಸ್ಯ ಭೂತಲೇ ।
ಚಿಂತಯಂತೀ ಚ ದದೃಶೇ ಸೋಮಪುತ್ರೇಣ ಸಾಂಗನಾ ॥ ೯೨ ॥

ಇಲಾರೂಪಸಮಾಕ್ಷಿಪ್ತಮನಸಾ ವರವರ್ಣಿನೀ ।
ಬುಧಸ್ತದಾಪ್ತಯೇ ಯತ್ನಮಕರೋತ್ಕಾಮಪೀಡಿತಃ ॥ ೯೩ ॥

ವಿಶಿಷ್ಟಾಕಾರವಾನ್ಮುಂಡಃ ಸಕಮಂಡಲುಪುಸ್ತಕಃ ।
ವೇಣುದಂಡಕೃತಾವೇಶಃ ಪವಿತ್ರಕಖನಿತ್ರಕಃ ॥ ೯೪ ॥

---

ಮಧ್ಯಸ್ಥವಾಗಿದ್ದಿತು, ಹೊಂಬಣ್ಣವುಳ್ಳವಳಾಗಿದ್ದಳು, ಹಂಸದಂತೆಯೂ, ಆನೆಯಂತೆಯೂ ನಡಗೆಯುಳ್ಳವಳಾದಳು, ಬಿಲ್ಲಿನಂತಿರುವ ಎರಡು ಹುಬ್ಬುಗಳಿಂದ ಕೂಡಿಕೊಂಡಿದ್ದಳು, ಸೂಕ್ಷ್ಮವಾಗಿಯೂ ಕೆಂಪಗೂ ಇರುವ ಉಗುರುಳ್ಳವಳಾದಳು.

೯೧. ಆ ಕಾಡಿನಲ್ಲಿ ಸುತ್ತುತ್ತ ನನ್ನ ತಂದೆಯಾರು? ತಾಯಿಯಾರು? ನನ್ನ ಸಹೋದರರು ತಾನೇ ಇಲ್ಲಿ ಯಾರು? ಎಂದು ಆಕೆಯು ಯೋಚಿಸುತ್ತಿದ್ದಳು.

೯೨. ಯಾವ ಮನುಷ್ಯನನ್ನು ನಾನು ಮದುವೆಯಾಗಿದ್ದೇನೆ? ನನ್ನ ಜಾತಿಯಾವುದು? ಎಂದು ಯೋಚಿಸುತ್ತಿರುವ ಈಕೆಯನ್ನು ಚಂದ್ರನ ಮಗನಾದ ಬುಧನು ನೋಡಿದನು.

೯೩. ಇಲೆಯ ರೂಪಿನಿಂದ ಎಳೆಯಲ್ಪಟ್ಟ ಮನಸ್ಸುಳ್ಳ ಆ ಬುಧನು ಆಕೆಯನ್ನು ಹೊಂದಲು ತಾನು ಕಾಮಪೀಡಿತನಾಗಿ ಪ್ರಯತ್ನಪಟ್ಟನು.

೯೪-೯೫. ಆಚಾರಶೀಲರ ಆಕಾರವನ್ನು ಹೊಂದಿದ್ದನು. ಕ್ಷೌರಮಾಡಿಸಿಕೊಂಡಿದ್ದನು, ಕೈಯಲ್ಲಿ ಕಮಂಡಲುವೂ, ಪುಸ್ತಕವೂ ಇದ್ದುವು, ಬಿದಿರುಕೋಲನ್ನು ಹಿಡಿದಿದ್ದನು, ಬೆರಳಿನಲ್ಲಿ ಪವಿತ್ರವೂ, ಕೈಯಲ್ಲಿ ಗುದ್ದಲಿಯೂ ಇದ್ದುವು, ಬ್ರಾಹ್ಮಣಾಚಾರಕ್ಕೆ ಬೇಕಾದಷ್ಟು ಜುಟ್ಟನ್ನು ಬಿಟ್ಟುಕೊಂಡಿದ್ದನು, ವೇದವನ್ನು ಹೇಳುತ್ತಿದ್ದನು,

**ದ್ವಿಜರೂಪಶಿಖೀ ಬ್ರಹ್ಮ ನಿಗದಸ್ರುಕ್ಮಕುಂಡಲಃ ।**
**ವಟುಭಿಶ್ಚಾನ್ವಿತೋ ಯುಕ್ತಃ ಸಮಿತ್ಪುಷ್ಪಕುಶೋದಕೈಃ ॥ ೯೫ ॥**

**ಕಿಲಾನ್ವೇಷೀ ವನೇ ತ್ವಸ್ಮಿನ್ನಾಜುಹಾವ ಸ ತಾಮಿಲಾಂ ।**
**ಬಹಿರ್ವನಸ್ಯಾಂತರಿತಃ ಕಿಲ ಪಾದಪಮಂಡಲೇ ॥ ೯೬ ॥**

**ಸಸಂಭ್ರಮಮಕಸ್ಮಾಚ್ಚ ಸೋಽಪಾಲಂಭಮಿವಾವದತ್ ।**
**ತ್ಯಕ್ತ್ವಾಗ್ನಿಹೋತ್ರಶುಶ್ರೂಷಾಂ ಕ್ವ ಗತಾ ಮಂದಿರಾನ್ಮಮ ॥ ೯೭ ॥**

**ಇಯಂ ವಿಹಾರವೇಳಾ ತೇ ಅತಿಕ್ರಾಮತಿ ಸಾಂಪ್ರತಂ ।**
**ಏಹ್ಯೇಹಿ ಪೃಥುಸುಶ್ರೋಣಿ ಸಂಭ್ರಾಂತಾ ಕೇನ ಹೇತುನಾ ॥ ೯೮ ॥**

**ಇಯಂ ಸಾಯಂತನೀ ವೇಳಾ ವಿಹಾರಸ್ಯಾತಿವರ್ತತೇ ।**
**ಕೃತ್ವೋಪಲೇಪನಂ ಪುಷ್ಪೈರಲಂಕುರು ಗೃಹಂ ಮಮ ॥ ೯೯ ॥**

---

ಚಿನ್ನದ ಕುಂಡಲಗಳನ್ನು ಕಿವಿಯಲ್ಲಿ ಧರಿಸಿದ್ದನು, ಬ್ರಹ್ಮಚಾರಿಗಳಿಂದ ಕೂಡಿಕೊಂಡು ಅವರ ಜೊತೆಯಲ್ಲಿಯೇ ಇದ್ದನು, ಸಮಿತ್ತು, ದರ್ಭೆ ಹೂ. ನೀರುಗಳನ್ನು ಹಿಡಿದಿದ್ದನು, ಈ ವನದಲ್ಲಿ ಆ ದರ್ಭೆ ಮುಂತಾದುವನ್ನು ಇನ್ನೂ ಹುಡುಕುತ್ತಿದ್ದನು. ಇಂತಹ ಬುಧನು ಆ ಇಳೆಯನ್ನು ಕರೆದನು.

೯೬. ಆ ಶರವಣದ ಹೊರಗೆ ಮರಗಳ ಮರೆಯಲ್ಲಿ ಮುಚ್ಚಿಕೊಂಡು ಅವಸರದಿಂದ ಇದ್ದಕ್ಕಿದ್ದಂತೆ ತಿರಸ್ಕಾರದಿಂದ ಈ ಮಾತುಗಳನ್ನಾಡಿದನು.

೯೭-೯೮. ಅಗ್ನಿಹೋತ್ರದ ಅಗ್ನಿಯ ಸೇವೆಯನ್ನು ಬಿಟ್ಟು ನನ್ನ ಮನೆಯಿಂದ ಎಲ್ಲಿಗೆ ಹೊರಟುಬಂದಿದ್ದೀಯೆ? ಈ ನಿನ್ನ ವಿಹಾರದ ಕಾಲವು ಈಗ ಮೀರಿದೆ. ಎಲೈ ಶೋಭನೆಯೇ! ಬಾ, ಬಾ ಏತಕ್ಕೆ ಕಳವಳಪಡುತ್ತಾ ಭ್ರಾಂತಳಾಗಿದ್ದೀಯೆ?

೯೯. ಈಗ ಸಾಯಂಕಾಲವಾಗಿದೆ, ವಿಹಾರಕ್ಕೆ ಹೊತ್ತುಮೀರಿದೆ. ನನ್ನ ಮನೆಯನ್ನು ಸಾರಿಸಿ ಹೂವಿನಿಂದ ಅದನ್ನು ಅಲಂಕಾರಮಾಡು.

ಸ್ವಾಬ್ರವೀದ್ವಿಸ್ಮೃತಾಹಂ ಚ ಸರ್ವಮೇತತ್ತಪೋಧನ ।
ಆತ್ಮಾನಂ ತ್ವಾಂ ಚ ಭರ್ತಾರಂ ಕುಲಂ ಚ ವದ ಮೇಽನಘ ॥ ೧೦೦ ॥

ಬುಧಃ ಪ್ರೋವಾಚ ತಾಂ ತನ್ವೀಮಿಲಾ ತ್ವಂ ವರವರ್ಣಿನಿ ।
ಅಹಂ ಚ ಕಾಮುಕೋ ನಾಮ ಬಹುವಿದ್ಯೋ ಬುಧಸ್ಸ್ಮೃತಃ ॥ ೧೦೧ ॥

ತೇಜಸ್ವಿನಃ ಕುಲೇ ಜಾತಃ ಪಿತಾ ಮೇ ಬ್ರಾಹ್ಮಣಾಧಿಪಃ ।
ಇತಿ ಸಾ ತಸ್ಯ ವಚನಾತ್ಪ್ರವಿಷ್ಟಾ ಬುಧಮಂದಿರಂ ॥ ೧೦೨ ॥

ರತ್ನಸ್ತಂಭಸಮಾಕೀರ್ಣಂ ದಿವ್ಯಮಾಯಾವಿನಿರ್ಮಿತಂ ।
ಇಲಾ ಕೃತಾರ್ಥಮಾತ್ಮಾನಂ ಮೇನೇ ತದ್ಭವನೇ ಸ್ಥಿತಾ ॥ ೧೦೩ ॥

ಅಹೋ ವೃತ್ತಮಹೋ ರೂಪಮಹೋ ಧನಮಹೋ ಕುಲಂ ।
ಮಮ ಚಾಸ್ಯ ಚ ಭರ್ತುರ್ವೈ ಅಹೋ ಲಾವಣ್ಯಮುತ್ತಮಂ ॥ ೧೦೪ ॥

೧೦೦. ಅದಕ್ಕೆ ಆಕೆಯು ಎಲೈ ತಪಸ್ವಿಯೇ ನಾನು ಎಲ್ಲವನ್ನೂ ಮರೆತಿದ್ದೇನೆ, ನಾನಾರು? ನೀನು ಯಾರು? ಗಂಡನು ಹೇಗೆ? ಕುಲವಾವುದು? ಎಂಬುದೆಲ್ಲವನ್ನೂ ನನಗೆ ಹೇಳು.

೧೦೧. ಆಗ ಬುಧನು ಆಕೆಯನ್ನು ಕುರಿತು ಎಲೈ ತನ್ವಿಯೇ ನೀನು ಇಳೆಯು. ನಾನು ನಿನ್ನನ್ನು ಅಪೇಕ್ಷಿಸುವುದರಿಂದ ಕಾಮುಕನಾಗಿದ್ದೇನೆ, ನನ್ನನ್ನು ಬಹು ವಿದ್ಯೆಗಳನ್ನು ಬಲ್ಲ ಬುಧನೆಂದು ತಿಳಿ.

೧೦೨. ನಾನು ಒಳ್ಳೆ ತೇಜಸ್ಸುಳ್ಳವರ ವಂಶದಲ್ಲಿ ಹುಟ್ಟಿದ್ದೇನೆ, ನನ್ನ ತಂದೆಯು ಬ್ರಾಹ್ಮಣರಿಗೆಲ್ಲಾ ಅಧಿಪತಿಯು ಎಂದನು. ಈ ರೀತಿಯಾದ ಅವನ ಮಾತಿನಿಂದ ಆ ಬುಧನ ಮನೆಯನ್ನೇ ಹೊಕ್ಕಳು.

೧೦೩. ಆ ಮನೆಯು ರತ್ನದ ಕಂಬಗಳಿಂದ ಕೂಡಿ ಉತ್ತಮವಾದ ಮಾಯೆಯಿಂದಲೇ ಮಾಡಲ್ಪಟ್ಟಿದ್ದಿತು. ಇಳೆಯು ಅವನ ಮನೆಯಲ್ಲಿದ್ದುಕೊಂಡು ತನ್ನ ಬಾಳು ಸಾರ್ಥಕವಾಯಿತೆಂದು ತಿಳಿದುಕೊಂಡಳು.

೧೦೪. ಈ ಇಳೆಯು ಇವನ ಚಾರಿತ್ರ್ಯವೆಂಥ ಉತ್ತಮವಾದುದು. ರೂಪವು ಎಷ್ಟು ಚೆನ್ನಾಗಿದೆ, ಇವನ ಐಶ್ವರ್ಯವೆಷ್ಟರಮಟ್ಟಿಗಿದೆ? ಕುಲವು ಎಷ್ಟು ಉತ್ತಮವಾದುದು! ನನ್ನ ಈ ಗಂಡನ ಲಾವಣ್ಯವು ಎಷ್ಟು ಉತ್ತಮವಾಗಿದೆ ಎಂದು ಸಂತೋಷಿಸಿದಳು.

ರೇಮೇ ಚ ಸಾ ತೇನ ಸಮಮತಿಕಾಲಮಿಲಾ ವನೇ ।
ಸರ್ವಭೋಗಮಯೇ ಗೇಹೇ ಯಥೇಂದ್ರಭವನೇ ತಥಾ ॥ ೧೦೫ ॥

ಅಥಾನ್ವಿಷಂತೋ ರಾಜಾನಂ ಭ್ರಾತರಸ್ತಸ್ಯ ಮಾನವಾಃ ।
ಇಕ್ಷ್ವಾಕುಪ್ರಮುಖಾ ಜಗ್ಮುಸ್ತದಾ ಶರವಣಾಂತಿಕಂ ॥ ೧೦೬ ॥

ತತಸ್ತೇ ದದೃಶುಸ್ಸರ್ವೇ ಬಡಬಾಮಗ್ರತಸ್ಸ್ಥಿತಾಂ ।
ರತ್ನಪರ್ಯಾಪ್ತಕಿರಣಾಂ ದೀಪ್ಯಮಾನಾಮನುತ್ತಮಾಂ ॥ ೧೦೭ ॥

ಸಂಪ್ರಾಪ್ಯ ಪ್ರತ್ಯಭಿಜ್ಞಾನಾತ್ಸರ್ವೇ ವಿಸ್ಮಯಮಾಗತಾಃ ।
ಅಯಂ ಚಂದ್ರಪ್ರಭೋ ನಾಮ ವಾಜೀ ತಸ್ಯ ಮಹಾತ್ಮನಃ ॥ ೧೦೮ ॥

ಅಗಮದ್ಬಾಡಬಂ ರೂಪಮುತ್ತಮಂ ಕೇನ ಹೇತುನಾ ।
ತತಸ್ತು ಮೈತ್ರಾವರುಣಿಂ ಪಪ್ರಚ್ಛುಸ್ತೇ ಪುರೋಧಸಂ ॥ ೧೦೯ ॥

---

೧೦೫. ಆ ಕಾಡಿನಲ್ಲಿ ಆ ಸಮಸ್ತ ಭೋಗಗಳಿಂದ ಕೂಡಿದ ಮನೆಯಲ್ಲಿ ಇಂದ್ರನ ಮನೆಯಲ್ಲಿ ಭೋಗಿಸುವಂತೆ ಬಹುಕಾಲ ಅವನೊಡನೆ ರಮಿಸಿದಳು.

೧೦೬. ಅನಂತರ ಆ ಇಳನ ಸಹೋದರರಾದ ಇಕ್ಷ್ವಾಕು ಮುಂತಾದವರು ಆ ರಾಜನನ್ನು ಹುಡುಕುತ್ತಾ ಶರವಣ ವನದ ಸಮೀಪಕ್ಕೆ ಬಂದರು.

೧೦೭. ಅನಂತರ ಅವರು ಮುಂದುಗಡೆಯಲ್ಲೇ ನಿಂತಿರುವ ಆ ಪ್ರಕಾಶಮಾನವೂ, ಉತ್ತಮವೂ, ರತ್ನದ ಕಿರಣಗಳಿಂದ ಕೂಡಿಯೂ ಇರುವ ಕುದುರೆಯನ್ನು ನೋಡಿದರು.

೧೦೮. ಇದು ಆ ಮಹಾನುಭಾವನಾದ ಇಳನ ಚಂದ್ರಪ್ರಭವೆಂಬ ಕುದುರೆಯು ಎಂದು ಗುರುತಿಸಿ ಇದು ಯಾವ ಕಾರಣದಿಂದ ಹೆಣ್ಣು ಕುದುರೆಯ ಆಕಾರವನ್ನು ಹೊಂದಿದ್ದೀತು ? ಎಂದು ಆಶ್ಚರ್ಯಪಟ್ಟರು.

೧೦೯-೧೧೦. ಅನಂತರ ಅವರು ವಸಿಷ್ಠನಲ್ಲಿಗೆ ಬಂದು ಎಲೈ ತಪೋಧನನೇ ಇದೇನು? ಈ ರೀತಿ ಆಶ್ಚರ್ಯಕರವಾಗಿದೆಯಲ್ಲ ಎಂದು ವಿಷಯವನ್ನು ತಿಳಿಸಿ ಎಲ್ಲ

ಕಿನಿಮಿತ್ತಮೇತದಭೂಚ್ಚಿತ್ರಂ ವದ ಯೋಗವಿದಾಂ ವರ ।
ವಸಿಷ್ಠೋಽಪ್ಯಬ್ರವೀತ್ಸರ್ವಂ ದೃಷ್ಟ್ವಾ ತದ್ಧ್ಯಾನಚಕ್ಷುಷಾ ॥ ೧೧೦ ॥

॥ ವಸಿಷ್ಠ ಉವಾಚ ॥

ಸಮಯಶ್ಶಂಭುದಯಿತಾಕೃತಶ್ಶರವಣೇ ಪುರಾ ।
ಯಃ ಪುಮಾನ್ಸಂವಿಶೇದತ್ರ ಸ ನಾರೀತ್ವಮವಾಪ್ಸ್ಯತಿ ॥ ೧೧೧ ॥

ಅಯಮಶ್ವೋಽಪಿ ನಾರೀತ್ವಮಗಾದ್ರಾಜ್ಞಾ ಸಹೈವ ತು ।
ಇಲಃ ಪುರುಷತಾಮೇತಿ ಯಥಾಸೌ ಧನದೋಪಮಃ ॥ ೧೧೨ ॥

ತಥೈವ ಯತ್ನಃ ಕರ್ತವ್ಯ ಆರಾಧ್ಯೈವ ಪಿನಾಕಿನಂ ।
ತತಸ್ತೇ ಮಾನವಾ ಜಗ್ಮುರ್ಯತ್ರ ದೇವೋ ಮಹೇಶ್ವರಃ ॥ ೧೧೩ ॥

ತುಷ್ಟುವುರ್ವಿವಿಧೈಃ ಸ್ತೋತ್ರೈಃ ಪಾರ್ವತೀಪರಮೇಶ್ವರೌ ।
ತಾವೂಚತುರಲಂ ಚೈಷ ಸಮಯಃ ಕಿನ್ನು ಸಾಂಪ್ರತಂ ॥ ೧೧೪ ॥

---

ಯೋಗಿಶ್ರೇಷ್ಠನೇ ಇದೇನೆಂಬುದನ್ನು ಹೇಳು ಎಂದು ಕೇಳಿದರು. ವಸಿಷ್ಠನು ಅದೆಲ್ಲ ವನ್ನೂ ಯೋಗದೃಷ್ಟಿಯಿಂದ ತಿಳಿದು ಹೇಳಿದನು.

೧೧೧. ವಸಿಷ್ಠನು ಹೇಳಿದನು :—ಶಂಭುವಿನ ಹೆಂಡತಿಯಾದ ಪಾರ್ವತಿಯು ಈ ಶರವಣವನಕ್ಕೆ ಪ್ರವೇಶಿಸುವ ಗಂಡು ಪ್ರಾಣಿಯು ಎಂತಹದಾದರೂ ಹೆಣ್ಣಾಗ ಲೆಂದು ಹೇಳಿದ್ದಾಳೆ.

೧೧೨. ಈ ಕುದುರೆಯೂ ಕೂಡ ನಿಮ್ಮ ರಾಜನಾದ ಇಲನೊಡನೆ ಹೆಣ್ಣಾಗಿದೆ. ಹೆಣ್ಣಾಗಿರುವ ಇಲನೂ ಕೂಡ ಕುಬೇರನಿಗೆ ಸಮನಾಗಿ ಗಂಡಸಾಗಿ ಮತ್ತೆ ಮಾರ್ಪಡು ವನು. ಶಿವನನ್ನು ಪೂಜಿಸಿ ಹಾಗಾಗುವಂತೆ ನೀವು ಯತ್ನಿಸಬೇಕು.

೧೧೩. ಅನಂತರ ಅವರೆಲ್ಲರೂ ಮಹೇಶ್ವರನ ಬಳಿಗೆ ಹೋಗಿ ಅಲ್ಲಿದ್ದ ಪಾರ್ವತೀ ಪರಮೇಶ್ವರರನ್ನು ನಾನಾಬಗೆಯಾದ ಸ್ತೋತ್ರಗಳಿಂದ ಸ್ತುತಿಸಿದರು.

೧೧೪-೧೧೫ ಆಗ ಆ ಪಾರ್ವತೀ ಪರಮೇಶ್ವರರು ಇಕ್ಷ್ವಾಕುಪುತ್ರ ಮಾಡತಕ್ಕ ಅಶ್ವಮೇಧದ ಫಲವನ್ನು ನಮ್ಮಿಬ್ಬರಿಗೂ ಕೊಡುತ್ತೇನೆಂದು ಮಾತುಕೊಟ್ಟು ಅದೀತಿ

ಇಕ್ಷ್ವಾಕೋರಶ್ವಮೇಧೇನ ಯತ್ಫಲಂ ಸ್ಯಾತ್ತದಾವಯೋಃ ।
ದತ್ವಾ ಕಿಂಪುರುಷೋ ವೀರಃ ಸ ಭವಿಷ್ಯತ್ಯಸಂಶಯಂ ॥ ೧೧೪ ॥

ತಥೇತ್ಯುಕ್ತ್ವಾ ತತಸ್ತೇ ತು ಜಗ್ಮುರ್ವೈವಸ್ವತಾತ್ಮಜಾಃ ।
ಇಷ್ಟ್ವಾಶ್ವಮೇಧೇನ ತತ ಇಲಾ ಕಿಂಪುರುಷೋಽಭವತ್ ॥ ೧೧೫ ॥

ಮಾಸಮೇಕಂ ಪುಮಾನ್ವೀರಃ ಸ್ತ್ರೀ ಚ ಮಾಸಮಭೂನ್ನೃಪ ।
ಬುಧಸ್ಯ ಭವನೇ ತಿಷ್ಠನ್ನಿಲೋ ಗರ್ಭಧರೋಽಭವತ್ ॥ ೧೧೬ ॥

ಅಜೀಜನತ್ಪುತ್ರಮೇಕಮನೇಕಗುಣಸಂಯುತಂ ।
ಬುಧ ಉತ್ಪಾದ್ಯ ತಂ ಪುತ್ರಂ ಸ್ವರ್ಗಾರ್ಥಮಗಮತ್ತತಃ ॥ ೧೧೭ ॥

ಇಲಸ್ಯ ನಾಮ್ನಾ ತದ್ವರ್ಷಮಿಲಾವೃತ್ತಮಭೂತ್ತದಾ ।
ಸೋಮಸ್ಯ ವಂಶಜೋ ರಾಜಾ ಐಲೋಽಭೂದ್ವಂಶವರ್ಧನಃ । ॥ ೧೧೮ ॥

---

ಮಾಡುವುದಾದರೆ ಈತನು ಕಿಂಪುರುಷನಿಗೆ ಸಮನಾದ ವೀರನಾಗಿ ಗಂಡಸಾಗುವುದರಲ್ಲಿ ಸಂಶಯವಿಲ್ಲವೆಂದರು.

೧೧೫. ಹಾಗೇ ಆಗಲೆಂದು ಹೇಳಿ ಆ ವೈವಸ್ವತ ಮನುವಿನ ಮಕ್ಕಳು ಹೋಗಿ ಅಶ್ವಮೇಧಯಾಗವನ್ನು ಮಾಡಿ ಆ ಫಲವನ್ನು ಪಾರ್ವತೀಪರಮೇಶ್ವರರಿಗೆ ಅರ್ಪಿಸಲು ಅನಂತರ ಇಲೆಯು ಕಿಂಪುರುಷ ವೀರನಾದನು.

೧೧೬. ಅನಂತರ ಆ ಕಿಂಪುರುಷನು ಒಂದು ತಿಂಗಳು ಗಂಡಸಾಗಿಯೂ ಒಂದು ತಿಂಗಳು ಹೆಂಗಸಾಗಿಯೂ ಇರುತ್ತಿದ್ದನು. ಬುಧನ ಮನೆಯಲ್ಲಿರುವಾಗ ಗರ್ಭಿಣಿಯಾಗಿದ್ದನು.

೧೧೭. ಆಗ ಬಹು ಗುಣಸಂಪೂರ್ಣನಾದ ಒಬ್ಬ ಮಗನನ್ನು ಹೆತ್ತನು. ಹೀಗೆ ಬುಧನು ಒಬ್ಬ ಮಗನನ್ನು ಹುಟ್ಟಿಸಿ ಮತ್ತೆ ಸ್ವರ್ಗಕ್ಕೆ ಹೊರಟುಹೋದನು.

೧೧೮. ಈ ಇಲನ ಹೆಸರಿನಿಂದ ಈ ದೇಶವು ಇಲಾವೃತ್ತವೆನ್ನಿಸಿಕೊಂಡಿತು. ಸೋಮನ ವಂಶದಲ್ಲಿ ಹುಟ್ಟಿದ ಈತನು ಐಲನೆಂದು ಹೆಸರುಗೊಂಡ ರಾಜನಾದನು. ಇವನೇ ಸೋಮವಂಶದ ವರ್ಧನನಾದನು.

ಏವಂ ಪುರೂರವಾಃ ಪೂರೋರಭವದ್ವಂಶವರ್ಧನಃ ।
ಇಕ್ಷ್ವಾಕುರರ್ಕವಂಶಸ್ಯ ತಥೈವೋಕ್ತೋ ನರೇಶ್ವರ ॥ ೧೨೦ ॥

ಇಲಃ ಕಿಂ ಪುರುಷತ್ವೇ ಚ ಸುದ್ಯುಮ್ನ ಇತಿ ಚೋಚ್ಯತೇ ।
ಪುನಃ ಪುತ್ರತ್ರಯಮಭೂತ್ಸುದ್ಯುಮ್ನಸ್ಯಾಪರಾಜಿತಂ ॥ ೧೨೧ ॥

ಉತ್ಕಲೋಽಥ ಗಯಸ್ತದ್ವದ್ಧರಿತಾಶ್ವಶ್ಚ ವೀರ್ಯವಾನ್ ।
ಉತ್ಕಲಸ್ಯೋತ್ಕಲಾ ನಾಮ ಗಯಸ್ಯ ತು ಗಯಾ ಮತಾ ॥ ೧೨೨ ॥

ಹರಿತಾಶ್ವಸ್ಯ ದಿಕ್ಪೂರ್ವಾ ವಿಜ್ಞಾತಾ ಕುರುಭಿಸ್ಸಹ ।
ಪ್ರತಿಷ್ಠಾನೇಽಭಿಷಿಚ್ಯಾಥ ಸ ಪುರೂರವಸಂ ಸುತಂ ॥ ೧೨೩ ॥

ಜಗಾಮೇಲಾವೃತಂ ಭೋಕ್ತುಂ ದಿವ್ಯವರ್ಷಫಲಾಶನಃ ।
ಇಕ್ಷ್ವಾಕುರ್ಜ್ಯೇಷ್ಠದಾಯಾದೋ ಮಧ್ಯದೇಶಮವಾಪ್ತವಾನ್ ॥ ೧೨೪ ॥

---

೧೨೦. ಇದೇ ರೀತಿ ಪುರೂರವನು ಪೂರುವಿಗೆ ವಂಶವರ್ಧನನಾದನು. ಇದು ಚಂದ್ರವಂಶವಾಯಿತು. ಇಕ್ಷ್ವಾಕುವು ಸೂರ್ಯವಂಶಕ್ಕೆ ವರ್ಧನನಾದವನು ಎಂದು ಹೇಳಲ್ಪಟ್ಟಿದೆ.

೧೨೧. ಇಲನು ಕಿಂಪುರುಷನಾಗಿದ್ದಾಗ ಸುದ್ಯುಮ್ನನೆಂದೆನ್ನಿಸಿಕೊಂಡು ಪ್ರಸಿದ್ಧನಾದನು. ಆ ಸುದ್ಯುಮ್ನನಿಗೆ ಅಜೇಯರಾದ ಮೂರು ಜನ ಮಕ್ಕಳು ಹುಟ್ಟಿದರು.

೧೨೨. ಉತ್ಕಲ, ಗಯ, ಹರಿತಾಶ್ವರೆಂದು ಅವರ ಹೆಸರು. ಉತ್ಕಲನು ಉತ್ಕಲದೇಶಕ್ಕೂ ಗಯನೂ ಗಯೆಗೂ, ಹರಿತಾಶ್ವನು ಪೂರ್ವ ದಿಕ್ಕು ಮತ್ತು ಕುರು ದೇಶಕ್ಕೂ ಒಡೆಯನಾದನು.

೧೨೩-೧೨೪. ಆ ಇಲನು ತಾನು ಹೋಗುವಾಗ ಅಲ್ಲಿ ಪುರೂರವಸ್ಸನ್ನು ಅಭಿಷೇಕಮಾಡಿ ತಾನು ಇಲಾವೃತವನ್ನು ಅನುಭವಿಸಲು ಹೊರಟುಹೋದನು. ಅನಂತರ ಸೂರ್ಯವಂಶಕ್ಕೆ ಮೊದಲನೆಯವನಾದ ಇಕ್ಷ್ವಾಕುವು ಮಧ್ಯದೇಶವನ್ನು ಹೊಂದಿ ಅಧಿಪತಿಯಾದನು.

**ನರಿಷ್ಯನ್ತಸ್ಯ ಪುತ್ರೋಽಭೂಚ್ಛಕೋ ನಾಮ ಮಹಾಬಲಃ ।**
**ನಾಭಾಗಸ್ಯಾಂಬರೀಷಸ್ತು ಧೃಷ್ಟಸ್ಯ ತು ಸುತತ್ರಯಂ ॥ ೧೨೫ ॥**

**ಧೃಷ್ಟಕೇತುಶ್ಛತ್ರನಾಥೋ ರಣಧೃಷ್ಟಶ್ಚ ವೀರ್ಯವಾನ್ ।**
**ಆನರ್ತೋ ನಾಮ ಶರ್ಯಾತೇಃ ಸುಕನ್ಯಾ ಚೈವ ದಾರಿಕಾ ॥ ೧೨೬ ॥**

**ಆನರ್ತಸ್ಯಾಭವತ್ಪುತ್ರೋ ರೋಚಮಾನಃ ಪ್ರತಾಪವಾನ್ ।**
**ಆನರ್ತೋ ನಾಮ ದೇಶೋಽಭೂನ್ನಗರೀ ಚ ಕುಶಸ್ಥಲೀ ॥ ೧೨೭ ॥**

**ರೋಚಮಾನಸ್ಯ ರೇವೋಽಭೂದ್ರೇವಾದ್ರೇವತ ಏವ ಚ ।**
**ಕಕುದ್ಮೀ ಚಾಪರಂ ನಾಮ ಜ್ಯೇಷ್ಠಃ ಪುತ್ರಶತಸ್ಯ ವೈ ॥ ೧೨೮ ॥**

**ರೇವತೀ ಯಸ್ಯ ಸಾ ಕನ್ಯಾ ಭಾರ್ಯಾ ರಾಮಸ್ಯ ವಿಶ್ರುತಾ ।**
**ಕಾರೂಷಾಸ್ತು ಕರೂಷಸ್ಯ ಬಹವಃ ಪ್ರಥಿತಾ ಭುವಿ ॥ ೧೨೯ ॥**

---

೧೨೫. ನರಿಷ್ಯಂತನಿಗೆ ಶುಕನೆಂಬ ಮಗನಾದನು. ಆತನು ಬಹು ಬಲಿಷ್ಠನು. ನಾಭಾಗನಿಗೆ ಅಂಬರೀಷನೆಂಬ ಮಗನೂ, ಧೃಷ್ಟನಿಗೆ ಮೂರು ಜನ ಮಕ್ಕಳೂ ಆದರು.

೧೨೬. ಧೃಷ್ಟಕೇತು, ವ್ರತನಾಥ, ಧೃಷ್ಟವೀರರೆಂದು ಆ ಮೂವರ ಹೆಸರು. ಶರ್ಯಾತಿಗೆ ಆನರ್ತನೆಂಬ ಮಗನಾದನು, ಸುಕನ್ಯೆಯೆಂಬ ಮಗಳೂ ಹುಟ್ಟಿದಳು.

೧೨೭. ಆನರ್ತನಿಗೆ ರೋಚಮಾನನೆಂಬ ಮಗನಾದನು. ಆತನು ಬಹು ಪ್ರತಾಪಶಾಲಿಯು. ಅವನು ಆಳುವ ದೇಶವು ಆನರ್ತವೆಂದು ಹೆಸರುಗೊಂಡಿತು. ಅದರ ರಾಜಧಾನಿಯು ಕುಶಸ್ಥಳಿಯು.

೧೨೮. ರೋಚಮಾನನಿಗೆ ರೇವನೆಂಬ ಮಗನಾದನು, ರೇವನಿಗೆ ರೇವತನು ಮಗನಾದನು, ಅವನಿಗೆ ಕಕುದ್ಮಿ ಎಂದು ಹೆಸರು, ಇವನು ಜ್ಯೇಷ್ಠನು ಇವನೂ ಸೇರಿ ನೂರು ಜನ ಸಹೋದರರು.

೧೨೯. ಆ ರೇವತನಿಗೆ ರೇವತಿ ಎಂಬ ಕನ್ಯೆಯಾದಳು. ಅವಳೇ ಬಲರಾಮನ ಹೆಂಡತಿ, ಕರೂಷನಿಗೆ ಕಾರೂಷರೆಂಬದಾಗಿ ಬಹು ಮಂದಿ ಮಕ್ಕಳಾದರು.

ಪೃಷದ್ಧ್ರೋ ಗೋವಧಾಚ್ಛೂದ್ರೋ ಗುರುಶಾಪಾದಜಾಯತ ।
ಇಕ್ಷ್ವಾಕುಪುತ್ರಾ ನಾಮ್ನಾಥ ವಿಕುಕ್ಷಿನಿಮಿದಂಡಕಾಃ ॥ ೧೩೦ ॥

ಶ್ರೇಷ್ಠಾಃ ಪುತ್ರಶತಸ್ಯಾಸನ್ ದಶ ಪಂಚ ಚ ತತ್ಸುತಾಃ ।
ಮೇರೋರುತ್ತರತಸ್ತೇಽಪಿ ಜಾತಾಃ ಪಾರ್ಥಿವಸತ್ತಮಾಃ ॥ ೧೩೧ ॥

ಚತುರ್ದಶೋತ್ತರಂ ಚಾನ್ಯಚ್ಛತಮಸ್ಯ ತಥಾಽಭವತ್ ।
ಮೇರೋರ್ದಕ್ಷಿಣತಶ್ಚೈತೇ ರಾಜಾನಸ್ಸಂಪ್ರಕೀರ್ತಿತಾಃ ॥ ೧೩೨ ॥

ಜ್ಯೇಷ್ಠಾತ್ಕಕುತ್ಸ್ಥನಾಮಾಭೂತ್ತತ್ಸುತಸ್ತು ಸುಯೋಧನಃ ।
ತಸ್ಯ ಪುತ್ರಃ ಪೃಥುರ್ನಾಮ ವಿಶ್ವಾವಸುಃ ಪೃಥೋಸ್ಸುತಃ ॥ ೧೩೩ ॥

ಆರ್ದ್ರಸ್ತಸ್ಯ ಚ ಪುತ್ರೋಽಭೂದ್ಯುವನಾಶ್ವಸ್ತತೋಽಭವತ್
ಶಾವಸ್ತಶ್ಚ ಮಹಾತೇಜಾ ವತ್ಸಕಸ್ತತ್ಸುಕೋಽಭವತ್ ॥ ೧೩೪ ॥

---

೧೩೦. ಪೃಷಧ್ರನೆಂಬುವನು ಗೋವಧೆಮಾಡಿದನು. ಅದರಿಂದ ಗುರುಪ್ರ ಶಾಪಕೊಡಲು ಅವನು ಶೂದ್ರನಾದನು. ಇಕ್ಷ್ವಾಕುವಿಗೆ ವಿಕುಕ್ಷಿ, ನಿಮಿ, ದಂಡಕ ರೆಂದು ಮೂವರು ಮಕ್ಕಳು ಪ್ರಸಿದ್ಧರು.

೧೩೧. ವಿಕುಕ್ಷಿ, ನಿಮಿ, ದಂಡಕರು ಇಕ್ಷ್ವಾಕುವಿನ ನೂರು ಜನ ಮಕ್ಕಳಲ್ಲಿ ಶ್ರೇಷ್ಠರೆನಿಸಿಕೊಂಡರು. ಆ ಇಕ್ಷ್ವಾಕುವಿನ ಹದಿನೈದು ಜನ ಮಕ್ಕಳು ಮೇರು ಪರ್ವತದ ಉತ್ತರದಿಕ್ಕಿನಲ್ಲಿ ರಾಜರಾಗಿದ್ದರು.

೧೩೨. ಕೊನೆಯ ಹದಿನಾಲ್ಕು ಜನರು ಮೇರುವಿನ ದಕ್ಷಿಣದಲ್ಲಿ ರಾಜರಾಗಿ ಪ್ರಸಿದ್ಧರಾದರು. ಮತ್ತೆ ಉಳಿದ ಅರವತ್ತೊಂದು ಜನರು ಅಪ್ರಸಿದ್ಧರಾಗಿ ಇದ್ದರು.

೧೩೩. ಅವರಲ್ಲಿ ಜ್ಯೇಷ್ಠನಾದ ವಿಕುಕ್ಷಿಗೆ ಕಕುತ್ಸ್ಥನೆಂಬ ಮಗನಾದನು. ಅವನಿಗೆ ಸುಯೋಧನನೆಂಬ ಮಗನು, ಅವನಿಗೆ ಪೃಥುವು ಮಗನು, ಆ ಪೃಥುವಿಗೆ ವಿಶ್ವಾವಸು ಎಂಬುವನು ಮಗನು.

೧೩೪. ಆ ವಿಶ್ವಾವಸುವಿಗೆ ಆರ್ದ್ರನೂ, ಆ ಆರ್ದ್ರನಿಗೆ ಯುವನಾಶ್ವನೂ, ಆ ಯುವನಾಶ್ವನಿಗೆ ಶಾವಸ್ತನೂ, ಶಾವಸ್ತನಿಗೆ ವತ್ಸಕನೂ ಮಕ್ಕಳಾದರು.

ನಿರ್ಮಿತಾ ಯೇನ ಶಾವಸ್ತೀ ಗೌಡದೇಶೇ ನರಾಧಿಪ ।
ಶಾವಸ್ತಾದ್ಬೃಹದಶ್ವೋಽಭೂತ್ಕುವಲಾಶ್ವಸ್ತತೋಽಭವತ್ ॥ ೧೩೫ ॥

ಧುಂಧುಮಾರತ್ವಮಗಮದ್ಧುಂಧುನಾಶೇ ಚ ಯಃ ಪುರಾ ।
ತಸ್ಯ ಪುತ್ರಾಸ್ತ್ರಯೋ ಜಾತಾ ದೃಢಾಶ್ವೋ ದಂಡ ಏವ ಚ ॥ ೧೩೬ ॥

ಕಪಿಲಾಶ್ವಶ್ಚ ವಿಖ್ಯಾತೋ ಧೌಂಧುಮಾರಿಃ ಪ್ರತಾಪವಾನ್ ।
ದೃಢಾಶ್ವಸ್ಯ ಪ್ರಮೋದಶ್ಚ ಹರ್ಯಶ್ವಸ್ತಸ್ಯ ಚಾತ್ಮಜಃ ॥ ೧೩೭ ॥

ಹರ್ಯಶ್ವಸ್ಯ ನಿಕುಂಭೋಽಭೂತ್ಸಂಹತಾಶ್ವಸ್ತತೋಽಭವತ್ ।
ಅಕೃತಾಶ್ವೋ ರಣಾಶ್ವಶ್ಚ ಸಂಹತಾಶ್ವಸುತಾವುಭೌ ॥ ೧೩೮ ॥

ಯುವನಾಶ್ವೋ ರಣಾಶ್ವಸ್ಯ ಮಾಧಾತಾ ಚ ತತೋಽಭವತ್ ।
ಮಾಂಧಾತುಃ ಪುರುಕುತ್ಸೋಽಭೂದ್ಧರ್ಮಸೇತುಶ್ಚ ಪಾರ್ಥಿವಃ ॥ ೧೩೯ ॥

---

೧೩೫. ಆ ಶಾವಸ್ತನು ಗೌಡದೇಶದಲ್ಲಿ ಪ್ರಸಿದ್ಧವಾಗಿರುವ ಶಾವಸ್ತಿಯನ್ನು, ನಿರ್ಮಿಸಿದನು. ಆ ಶಾವಸ್ತನಿಗೆ ಬೃಹದಶ್ವನೂ, ಬೃಹದಶ್ವನಿಗೆ ಕುವಲಾಶ್ವನೂ ಮಕ್ಕಳಾದರು.

೧೩೬. ಆ ಕುವಲಾಶ್ವನು ಧುಂಧುವೆಂಬ ರಾಕ್ಷಸನನ್ನು ಕೊಂದುದರಿಂದ ಧುಂಧುಮಾರನೆಂದು ಪ್ರಖ್ಯಾತನಾದನು. ಅವನಿಗೆ ದೃಢಾಶ್ವ, ದಂಡ, ಕಪಿಲಾಶ್ವ ಎಂಬುದಾಗಿ ಮೂವರು ಮಕ್ಕಳಾದರು.

೧೩೭-೧೩೮. ದೃಢಾಶ್ವನಿಗೆ ಪ್ರಮೋದನೆಂಬುವನೂ, ಪ್ರಮೋದನಿಗೆ ಹರ್ಯಶ್ವನೂ, ಹರ್ಯಶ್ವನಿಗೆ ನಿಕುಂಭನೂ, ಸಂಹತಾಶ್ವನೂ, ಆ ಸಂಹತಾಶ್ವನಿಗೆ ಅಕೃತಾಶ್ವರಣಾಶ್ವ ಎಂಬುದಾಗಿ ಇಬ್ಬರು ಮಕ್ಕಳೂ ಆದರು.

೧೩೯. ರಣಾಶ್ವನಿಗೆ ಯುವನಾಶ್ವನೂ, ಯುವನಾಶ್ವನಿಗೆ ಮಾಂಧಾತನೂ, ಮಾಂಧಾತನಿಗೆ ಪುರುಕುತ್ಸನೂ ಮಕ್ಕಳಾದರು. ಆ ಪುರುಕುತ್ಸನು ಧರ್ಮದಲ್ಲಿ ಕಟ್ಟುಗಳನ್ನು ಮಾಡಿದನು.

ಮುಚುಕುಂದಶ್ಚ ವಿಖ್ಯಾತಃ ಶಕ್ರಮಿತ್ರಃ ಪ್ರತಾಪವಾನ್ ।
ಪುರುಕುತ್ಸಸ್ಯ ಪುತ್ರೋಽಭೂತ್ಸಂಭೂತೋ ನರ್ಮದಾಪತಿಃ ॥ ೧೪೦ ।

ಸಂಭೂತಿಸ್ತಸ್ಯ ಪುತ್ರೋಽಭೂತ್ತ್ರಿಧನ್ವಾ ಚ ತತೋಽಭವತ್ ।
ತ್ರಿಧನ್ವನಸ್ಸುತೋ ಜಾತಸ್ತ್ರೈಯಾರಣ ಇತಿ ಸ್ಮೃತಃ ॥ ೧೪೧ ॥

ತಸ್ಯ ಸತ್ಯವ್ರತೋ ನಾಮ ತಸ್ಮಾತ್ಸತ್ಯರಥಃ ಸ್ಮೃತಃ ।
ತಸ್ಯ ಪುತ್ರೋ ಹರಿಶ್ಚಂದ್ರೋ ಹರಿಶ್ಚಂದ್ರಾಚ್ಚ ರೋಹಿತಃ ॥ ೧೪೨ ॥

ರೋಹಿತಾಚ್ಚ ವೃಕೋ ಜಾತೋ ವೃಕಾದ್ಬಾಹುರಜಾಯತ ।
ಸಗರಸ್ತಸ್ಯ ಪುತ್ರೋಽಭೂದ್ರಾಜಾ ಪರಧಾರ್ಮಿಕಃ ॥ ೧೪೩ ॥

ದ್ವೇ ಭಾರ್ಯೇ ಸಗರಸ್ಯಾಪಿ ಪ್ರಭಾ ಭಾನುಮತೀ ತಥಾ ।
ತಾಭ್ಯಾಮಾರಾಧಿತಃ ಪೂರ್ವಮೌರ್ವೋಽಗ್ನಿಃ ಪುತ್ರಕಾಮ್ಯಯಾ ॥ ೧೪೪ ॥

---

೧೪೦. ಆ ಪುರುಕುತ್ಸನೇ ಮುಚುಕುಂದನೆಂದು ಪ್ರಖ್ಯಾತನಾಗಿ ಇಂದ್ರನಿಗೆ ಸ್ನೇಹಿತನಾಗಿದ್ದನು. ಆ ಪುರುಕುತ್ಸನಿಗೆ ಸಂಭೂತನೆಂಬ ಮಗನಾದನು, ಅವನೇ ನರ್ಮದಾಪತಿಯು.

೧೪೧. ಆ ಸಂಭೂತನಿಗೆ ಸಂಭೂತಿಯೂ, ಆ ಸಂಭೂತಿಗೆ ತ್ರಿಧನ್ವನೂ ಆ ತ್ರಿಧನ್ವನಿಗೆ ತ್ರೈಯಾರುಣನೂ ಮಕ್ಕಳಾದರು.

೧೪೨. ತ್ರೈಯ್ಯಾರುಣನಿಗೆ ಸತ್ಯವ್ರತನೂ, ಅವನಿಗೆ ಸತ್ಯರಥನೂ, ಸತ್ಯರಥನಿಗೆ ಹರಿಶ್ಚಂದ್ರನೂ, ಹರಿಶ್ಚಂದ್ರನಿಗೆ ರೋಹಿತನೂ ಮಕ್ಕಳಾದರು.

೧೪೩. ರೋಹಿತನಿಗೆ ವೃಕನೂ, ವೃಕನಿಗೆ ಬಾಹುವೂ, ಬಾಹುವಿಗೆ ಸಗರನೂ, ಮಕ್ಕಳಾದರು. ಆ ಸಗರನು ಬಹು ಧರ್ಮಿಷ್ಠನಾಗಿದ್ದನು.

೧೪೪. ಆ ಸಗರನಿಗೆ ಪ್ರಭೆ, ಭಾನುಮತಿ ಎಂಬುದಾಗಿ ಇಬ್ಬರು ಹೆಂಡಿರು. ಆ ಹೆಂಡಿರಿಬ್ಬರೂ ಮಕ್ಕಳಾಗಬೇಕೆಂಬಿಚ್ಛೆಯಿಂದ ಔರ್ವ ಎಂಬಗ್ನಿಯನ್ನು ಪೂಜಿಸಿದರು.

ಔರ್ವಸ್ತುಷ್ಟಸ್ತಯೋಃ ಪ್ರಾದಾದ್ಯಥೇಷ್ಟಂ ವರಮುತ್ತಮಂ ।
ಏಕಷಷ್ಟಿಸಹಸ್ರಾಣಿ ಸುತಮೇಕಂ ತಥಾ ಪರಾ ॥ ೧೪೫ ॥

ಗೃಹ್ಣಾತು ವಂಶಕರ್ತಾರಂ ಪ್ರಭಾ ಗೃಹ್ಣಾದ್ಬಹೂಂಸ್ತಥಾ ।
ಏಕಂ ಭಾನುಮತೀ ಪುತ್ರಮಗೃಹ್ಣಾದಸಮಂಜಸಂ ॥ ೧೪೬ ॥

ತತಃ ಷಷ್ಟಿಸಹಸ್ರಾಣಿ ಸುಷುವೇ ಯಾದವೀ ಪ್ರಭಾ ।
ಖನಂತಃ ಪೃಥಿವೀಂ ದಗ್ಧಾ ವಿಷ್ಣುನಾ ಯೇಽಶ್ವಮಾರ್ಗಣೇ ॥ ೧೪೭ ॥

ಅಸಮಂಜಸಸ್ತನಯೋ ಅಂಶುಮಾನ್ನಾಮ ವಿಶ್ರುತಃ ।
ತಸ್ಯ ಪುತ್ರೋ ದಿಲೀಪಸ್ತು ದಿಲೀಪಾತ್ತು ಭಗೀರಥಃ ॥ ೧೪೮ ॥

ಯೇನ ಭಾಗೀರಥೀ ಗಂಗಾ ತಪಃ ಕೃತ್ವಾವತಾರಿತಾ ।
ಭಗೀರಥಸ್ಯ ತನಯೋ ನಾಭಾಗ ಇತಿ ವಿಶ್ರುತಃ ॥ ೧೪೯ ॥

ನಾಭಾಗಸ್ಯಾಂಬರೀಷಸ್ತು ಸಿಂಧುದ್ವೀಪಸ್ತತೋಽ ಭವತ್ ।
ತಸ್ಯಾಯುತಾಯುಃ ಪುತ್ರೋಽಭೂದೃತುಪರ್ಣಸ್ತತೋಽ ಭವತ್ ॥ ೧೫೦ ॥

---

೧೪೫-೧೪೬. ಸಂತೋಷಗೊಂಡ ಔರ್ವನು ಅವರಿಗೆ ಇಷ್ಟವಾದ ವರವನ್ನು ಕೊಟ್ಟನು. ಒಬ್ಬಳು ಅರವತ್ತು ಸಾವಿರ ಮಂದಿ ಮಕ್ಕಳನ್ನೂ, ಮತ್ತೊಬ್ಬಳು ವಂಶವರ್ಧಕನಾದ ಒಬ್ಬ ಮಗನನ್ನೂ ಹೊಂದಬಹುದೆಂದು. ಅದನ್ನು ಕೇಳಿ ಪ್ರಭೆಯು ಬಹು ಜನ ಮಕ್ಕಳನ್ನೂ, ಭಾನುಮತಿಯು ವಂಶವರ್ಧಕನಾದಅಸಮಂಜಸನೆಂಬ ಹೆಸರುಳ್ಳವನನ್ನೂ ಕೇಳಿಕೊಂಡಳು.

೧೪೭. ಭೂಮಿಯನ್ನು ಅಗೆಯುತ್ತಿದ್ದ, ವಿಷ್ಣುವಿನಿಂದ ಹತರಾದ ಅರವತ್ತು ಸಾವಿರ ಜನ ಮಕ್ಕಳನ್ನು ಯದುವಿನ ಮಗಳಾದ ಪ್ರಭೆಯು ಪಡೆದಳು.

೧೪೮-೧೪೯. ಅಸಮಂಜಸನಿಗೆ ಅಂಶುಮಂತನೂ, ಅಂಶುಮಂತನಿಗೆ ದಿಲೀಪನೂ, ದಿಲೀಪನಿಗೆ ಭಗೀರಥನೂ, ಮಕ್ಕಳಾದರು. ಆ ಭಗೀರಥನು ತಪಸ್ಸನ್ನು ಮಾಡಿ ಗಂಗೆಯನ್ನು ಭೂಲೋಕಕ್ಕೆ ಇಳಿಸಿದನು.

೧೫೦. ನಾಭಾಗನಿಗೆ ಅಂಬರೀಷನು ಮಗನಾದನು. ಸಿಂಧುದ್ವೀಪವನ್ನು ಆ ಅಂಬರೀಷನು ನಿರ್ಮಿಸಿದನು. ಆ ಅಂಬರೀಷನಿಗೆ ಅಯುತಾಯುವೆಂಬ ಮಗನಾದನು. ಆ ಅಯುತಾಯುವಿಗೆ ಋತುಪರ್ಣನೆಂಬ ಮಗನು ಹುಟ್ಟಿದನು.

ತಸ್ಯ ಕಲ್ಮಾಷಪಾದಸ್ತು ಸರ್ವಕರ್ಮಾ ತತಃ ಸ್ಮೃತಃ ।
ತಸ್ಮಾದಾರಣ್ಯಃ ಪುತ್ರೋಽಭೂನ್ನಿಘ್ನಸ್ತಸ್ಯ ಸುತೋಽಭವತ್ ॥ ೧೫೧ ॥

ನಿಘ್ನಪುತ್ರೌ ನೃಪೌ ಜಾತಾವನಮಿತ್ರರಘೂತ್ತಮೌ ।
ಅನಮಿತ್ರೋ ವನಮಗಾಗರಿನಾಶಕೃತೇ ನೃಪಃ ॥ ೧೫೨ ॥

ರಘೋರಭೂದ್ದಿಲೀಪಸ್ತು ದಿಲೀಪಾಚ್ಚಾಪ್ಯಜಸ್ತಥಾ ।
ದೀರ್ಘಬಾಹುರಜಾಜ್ಜಾತಃ ಪ್ರಜಾಪಾಲಸ್ತತೋಽಭವತ್ ॥ ೧೫೩ ॥

ತತೋ ದಶರಥೋ ಜಾತಸ್ತಸ್ಯ ಪುತ್ರಚತುಷ್ಟಯಂ ।
ನಾರಾಯಣಾತ್ಮಕಾಸ್ಸರ್ವೇ ರಾಮಸ್ತಸ್ಯಾಗ್ರತೋಽಭವತ್ ॥ ೧೫೪ ॥

ರಾವಣಾಂತಕರಸ್ತದ್ವದ್ರಘೂಣಾಂ ವಂಶವರ್ಧನಃ ।
ವಾಲ್ಮೀಕಿರ್ಯಸ್ಯ ಚರಿತಂ ಚಕ್ರೇ ಭಾರ್ಗವಸತ್ತಮಃ ॥ ೧೫೫ ॥

---

೧೫೧. ಋತುಪರ್ಣನಿಗೆ ಕಲ್ಮಾಷಪಾದನೂ, ಕಲ್ಮಾಷಪಾದನಿಗೆ ಸರ್ವಕರ್ಮನೂ ಸರ್ವಕರ್ಮನಿಗೆ ಆರಣ್ಯನೂ, ಆರಣ್ಯನಿಗೆ ನಿಘ್ನನೂ ಮಕ್ಕಳಾದರು.

೧೫೨. ನಿಘ್ನನಿಗೆ ಅನಮಿತ್ರ, ರಘೂತ್ತಮ ಎಂಬ ಇಬ್ಬರು ಮಕ್ಕಳು. ಅನಮಿತ್ರನು ಶತ್ರುನಾಶಕ್ಕೋಸ್ಕರ ಕಾಡಿಗೆ ಹೋದನು.

೧೫೩. ರಘುವಿಗೆ ದಿಲೀಪನೂ, ದಿಲೀಪನಿಗೆ ಅಜನೂ, ಅಜನಿಗೆ ದೀರ್ಘಬಾಹುವೂ ಮಕ್ಕಳಾದರು, ಆತನು ರಾಜನಾದನು.

೧೫೪. ಆ ದೀರ್ಘಬಾಹುವಿಗೆ ದಶರಥನು ಮಗನಾದನು. ಅವನಿಗೆ ನಾರಾಯಣಾಂಶದಿಂದ ಹುಟ್ಟಿದ ನಾಲ್ಕು ಜನ ಮಕ್ಕಳುಗಳು. ಅವರಲ್ಲಿ ರಾಮನೇ ದೊಡ್ಡವನು.

೧೫೫. ಆ ರಾಮನು ರಾವಣನನ್ನು ಕೊಂದನು. ರಘುವಿನ ವಂಶವನ್ನು ಬೆಳೆಸಿದನು. ಅವನ ಚರಿತ್ರೆಯನ್ನು ಭೃಗುಗೋತ್ರೋತ್ಪನ್ನನಾದ ವಾಲ್ಮೀಕಿಯು ಬರೆದನು.

ತಸ್ಯ ಪುತ್ರೌ ಕುಶಲವಾವಿಕ್ಷ್ವಾಕುಕುಲವರ್ಧನೌ ।
ಅತಿಥಿಸ್ತು ಕುಶಾಜ್ಜಾತೋ ನಿಷಧಸ್ತಸ್ಯ ಚಾತ್ಮಜಃ ॥ ೧೫೬ ॥

ನಲಸ್ತು ನಿಷಧಾಜ್ಜಾತೋ ನಭಾಸ್ತಸ್ಮಾದಜಾಯತ ।
ನಭಸಃ ಪುಂಡರೀಕೋಽಭೂತ್ ಕ್ಷೇಮಧನ್ವಾ ತತಸ್ಸ್ಮೃತಃ ॥ ೧೫೭ ॥

ತಸ್ಯ ಪುತ್ರೋಽಭವದ್ವೀರೋ ದೇವಾನೀಕಃ ಪ್ರತಾಪವಾನ್ ।
ಅಹೀನಗುಸ್ತಸ್ಯ ಸುತಃ ಸಹಸ್ರಾಶ್ವಸ್ತತಃ ಪರಃ ॥ ೧೫೮ ॥

ತತಶ್ಚಂದ್ರಾವಲೋಕಸ್ತು ತಾರಾಪೀಡಸ್ತತೋಽಭವತ್ ।
ತಸ್ಯಾತ್ಮಜಶ್ಚಂದ್ರಗಿರಿಶ್ಚಂದ್ರಸ್ತಸ್ಯ ಸುತೋಽಭವತ್ ॥ ೧೫೯ ॥

ಶ್ರುತಾಯುರಭವತ್ತಸ್ಮಾದ್ಭಾರತೇ ಯೋ ನಿಪಾತಿತಃ ।
ನಲೌ ದ್ವಾವಪಿ ವಿಖ್ಯಾತೌ ವಂಶ್ಯೌ ಕಶ್ಯಪಸಂಭವೌ ॥ ೧೬೦ ॥

೧೫೬. ಆ ರಾಮನಿಗೆ ಕುಶ ಲವರೆಂಬಿಬ್ಬರು ಮಕ್ಕಳು. ಇವರು ಇಕ್ಷ್ವಾಕು ವಂಶವನ್ನು ಬೆಳೆಸಿದರು. ಕುಶನಿಗೆ ಅತಿಥಿ ಎಂಬ ಮಗನಾದನು. ಆ ಅತಿಥಿಗೆ ನಿಷಧ ನೆಂಬವನು ಮಗನಾದನು.

೧೫೭. ನಿಷಧನಿಗೆ ನಳನೂ, ನಳನಿಗೆ ನಭನೂ, ನಭನಿಗೆ ಪುಂಡರೀಕನೂ, ಪುಂಡರೀಕನಿಗೆ ಕ್ಷೇಮಧನ್ವನೂ ಮಕ್ಕಳಾದರು.

೧೫೮. ಆ ಕ್ಷೇಮಧನ್ವನಿಗೆ ದೇವಾನೀಕನೂ, ದೇವಾನೀಕನಿಗೆ ಅಹೀನಗುವೂ, ಅಹೀನಗುವಿಗೆ ಸಹಸ್ರಾಶ್ವನೂ ಮಕ್ಕಳಾದರು.

೧೫೯. ಸಹಸ್ರಾಶ್ವನಿಗೆ ಚಂದ್ರಾವಲೋಕನೂ, ಚಂದ್ರಾವಲೋಕನಿಗೆ ತಾರಾಪೀಡನೂ, ತಾರಾಪೀಡನಿಗೆ ಚಂದ್ರಗಿರಿಯೂ, ಚಂದ್ರಗಿರಿಗೆ ಚಂದ್ರನೂ ಮಕ್ಕಳಾದರು.

೧೬೦. ಚಂದ್ರನಿಗೆ ಶ್ರುತಾಯುವು ಮಗನಾದನು. ಅವನೇ ಭಾರತದಲ್ಲಿ ಪ್ರಸಿದ್ಧನಾಗಿ ಯುದ್ಧಮಾಡಿ ಮಡಿದನು. ನಳರೆಂಬುವರಿಬ್ಬರಿದ್ದರೂ, ಅವರಿಬ್ಬರೂ ಕಶ್ಯಪವಂಶದವರೇನೇ. ವೀರಸೇನನ ಮಗನೊಬ್ಬನು ನಿಷಧದೇಶದ ರಾಜನೊಬ್ಬನು.

ವಿರಸೇನಸುತಸ್ತದ್ವನ್ನೈಷಧಶ್ಚ ನರಾಧಿಪಃ ।
ಏತೇ ಚೈವ ಸಮಾಖ್ಯಾತಾ ರಾಜಾನೋ ಭೂರಿದಕ್ಷಿಣಾಃ ॥ ೧೬೧ ॥

ಇಕ್ಷ್ವಾಕುವಂಶಪ್ರಭವಾಃ ಪ್ರಾಧಾನ್ಯೇನ ಪ್ರಕೀರ್ತಿತಾಃ ॥ ೧೬೨ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ
ಆದಿತ್ಯವಂಶಕಥನಂ ನಾಮ ಅಷ್ಟಮೋಽಧ್ಯಾಯಃ.



೧೬೧-೧೬೨. ಈ ರಾಜರುಗಳೇ ಪ್ರಖ್ಯಾತರಾದವರು, ಬಹು ಶೂರರು, ಉದಾರಿಗಳು, ಈ ರೀತಿ ಇಕ್ಷ್ವಾಕು ವಂಶದಲ್ಲಿ ಹುಟ್ಟಿದವರುಗಳನ್ನು ಅವರಲ್ಲಿಯೂ ಪ್ರಧಾನರನ್ನು ಹೇಳಿದ್ದೇನೆ.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ಆದಿತ್ಯವಂಶ ಕಥನವೆಂಬ
ಎಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ನವಮೋಽಧ್ಯಾಯಃ

॥ ಭೀಷ್ಮ ಉವಾಚ ॥

ಭಗವನ್ ಶ್ರೋತುಮಿಚ್ಛಾಮಿ ಪಿತೄಣಾಂ ವಂಶಮುತ್ತಮಂ ।
ರವೇಶ್ಚ ಶ್ರಾದ್ಧದೇವಸ್ಯ ಸೋಮಸ್ಯ ಚ ವಿಶೇಷತಃ ॥ ೧ ॥

॥ ಪುಲಸ್ತ್ಯ ಉವಾಚ ॥

ಹಂತ ತೇ ಕಥಯಿಷ್ಯಾಮಿ ಪಿತೄಣಾಂ ವಂಶಮಾದಿತಃ ।
ಸ್ವರ್ಗೇ ಪಿತೃಗಣಾಃ ಸಪ್ತ ತ್ರಯಸ್ತೇಷಾಮಮೂರ್ತಯಃ ॥ ೨ ॥

ಮೂರ್ತಿಮಂತೋಽಥ ಚತ್ವಾರಃ ಸರ್ವೇಷಾಮಮಿತೌಜಸಾಂ ।
ಅಮೂರ್ತಯಃ ಪಿತೃಗಣಾ ವೈರಾಜಸ್ಯ ಪ್ರಜಾಪತೇಃ ॥ ೩ ॥

---

## ಒಂಭತ್ತನೆಯ ಅಧ್ಯಾಯವು.

೧. ಭೀಷ್ಮನು ಹೇಳಿದನು :—ಸ್ವಾಮಿ! ಪಿತೃಗಳ ವಂಶವನ್ನು ಕೇಳಬೇಕೆಂದಿದ್ದೇನೆ. ಅಲ್ಲದೆ ರವಿಯ ವಂಶವನ್ನೂ, ಯಮನ ವಂಶವನ್ನೂ, [illegible] ವಂಶವನ್ನೂ ಹೆಚ್ಚು ಇಷ್ಟದಿಂದ ಕೇಳಬೇಕೆಂದಿದ್ದೇನೆ.

೨. ಪುಲಸ್ತ್ಯನು ಹೇಳಿದನು :—ಆಗಲಿ, ಸಂತೋಷವಾಗಿ ನಿನಗೆ ಪಿತೃಗಳ ವಂಶವನ್ನು ಹೇಳುತ್ತೇನೆ. ಸ್ವರ್ಗದಲ್ಲಿ ಪಿತೃಗಣಗಳು ಏಳು ಇವೆ. ಅವುಗಳಲ್ಲಿ ಮೂರು ಮೂರ್ತಿ ಇಲ್ಲದವು (ಆಕಾರವಿಲ್ಲದುವು.)

೩. ಆ ಉತ್ತಮವಾದ ತೇಜಸ್ಸುಳ್ಳವರಲ್ಲಿ ನಾಲ್ಕು [illegible] ವೈರಾಜನೆಂಬ ಪ್ರಜಾಪತಿಯ ಗಣಗಳು ಆಕಾರವಿಲ್ಲದವರು.

ಯಜಂತಿ ಯಾನ್ದೇವಗಣಾ ವೈರಾಜಾ ಇತಿ ವಿಶ್ರುತಾಃ ।
ಯೇ ವೈ ತೇ ಯೋಗವಿಭ್ರಷ್ಟಾಃ ಪ್ರಾಪ್ತಾ ಲೋಕಾನ್ಸನಾತನಾನ್ ॥ ೪ ॥

ಪುನರ್ಬ್ರಹ್ಮದಿನಾಂತೇ ತು ಜಾಯಂತೇ ಬ್ರಹ್ಮವಾದಿನಃ ।
ಸಂಪ್ರಾಪ್ಯ ತಾಂ ಸ್ಮೃತಿಂ ಭೂಯೋ ಯೋಗಂ ಸಾಂಖ್ಯಮನುತ್ತಮಂ ॥೫॥

ಸಿದ್ಧಿಂ ಪ್ರಯಾಂತಿ ಯೋಗೇನ ಪುನರಾವೃತ್ತಿದುರ್ಲಭಾಂ ।
ಯೋಗಿನಾಮೇವ ದೇಯಾನಿ ತಸ್ಮಾಚ್ಛ್ರಾದ್ಧಾನಿ ದಾತೃಭಿಃ ॥ ೬ ॥

ಏತೇಷಾಂ ಮಾನಸೀ ಕನ್ಯಾ ಪತ್ನೀ ಹಿಮವತೋ ಮತಾ ।
ಮೈನಾಕಸ್ತಸ್ಯ ದಾಯಾದಃ ಕ್ರೌಂಚಸ್ತಸ್ಯ ಸುತೋಽಭವತ್ ೭ ॥

ಕ್ರೌಂಚದ್ವೀಪಃ ಸ್ಮೃತೋ ಯೇನ ಚತುರ್ಥೋ ಘೃತಸಂಯುತಃ ।
ಮೇನಾ ತು ಸುಷುವೇ ತಿಸ್ರಃ ಕನ್ಯಾ ಯೋಗವತೀಸ್ತತಃ ॥ ೮ ॥

---

೪. ಆಕಾರರಹಿತರಾದ ಅವರು ದೇವಗಣಗಳಾಗಿ ವೈರಾಜರೆಂದು ಪ್ರಸಿದ್ಧರಾಗಿದ್ದಾರೆ. ಆವರೆಲ್ಲರೂ ಯೋಗದಿಂದ ಭ್ರಷ್ಟರಾಗಿ ಉತ್ತಮವಾದ ಲೋಕಗಳನ್ನು ಹೊಂದಿದ್ದಾರೆ.

೫. ಬ್ರಹ್ಮನ ದಿನದ ಕೊನೆಯಲ್ಲಿ ಪುನಃ ಬ್ರಹ್ಮವಾದಿಗಳಾಗಿ ಹುಟ್ಟುತ್ತಾರೆ ಹಿಂದಿನ ಜ್ಞಾಪಕವನ್ನು ಹೊಂದಿ ಉತ್ತಮವಾದ ಸಾಂಖ್ಯವನ್ನೂ ಯೋಗವನ್ನೂ ಹೊಂದುತ್ತಾರೆ.

೬. ಮತ್ತೆ ಪುನರಾವೃತ್ತಿ ಇಲ್ಲದಿರುವ ಸಿದ್ಧಿಯನ್ನು ಯೋಗದಿಂದ ಹೊಂದುತ್ತಾರೆ. ಆದ್ದರಿಂದ ದಾತೃಗಳು ಶ್ರಾದ್ಧದಲ್ಲಿ ಹವಿಸ್ಸನ್ನು ಯೋಗಿಗಳಿಗೆ ಕೊಡಬೇಕು.

೭. ಈ ಪಿತೃಗಳ ಮನಸ್ಸಿನಿಂದುತ್ಪನ್ನಳಾದ ಕನ್ಯೆಯು ಮೇನೆಯು. ಆಕೆಯು ಹಿಮವಂತನಿಗೆ ಹೆಂಡತಿಯಾದಳು. ಮೈನಾಕನು ಅವಳ ಮಗನು, ಆ ಮೈನಾಕನ ಮಗನು ಕ್ರೌಂಚನು.

೮. ಅವನೇ ಕ್ರೌಂಚದ್ವೀಪದ ಅಧಿಕಾರಿಯು, ಇವನು ನಾಲ್ಕನೆಯವನು, ಘೃತದಿಂದ ಕೂಡಿಕೊಂಡಿರುವವನು. ಮೇನೆಯು ಮೂವರು ಯೋಗವನ್ನು ಹೊಂದಿದ ಹೆಣ್ಣು ಮಕ್ಕಳನ್ನು ಹೊಂದಿದಳು.

ಉಮೈಕಪರ್ಣಾಽಪರ್ಣಾ ಚ ತೀವ್ರತಪಃಪರಾಯಣಾಃ ।
ರುದ್ರಸ್ಯೈಕಾ ಭೃಗೋಶ್ಚೈಕಾ ಜೈಗೀಷವ್ಯಸ್ಯ ಚಾಪರಾ ॥ ೯ ॥

ದತ್ತಾ ಹಿಮವತಾ ಬಾಲಾ ಸರ್ವಲೋಕತಪೋಽಧಿಕಾ ।
ಪಿತೃಣಾಂ ಲೋಕಸರ್ಗಂ ತೇ ಕಥಯಾಮಿ ಶೃಣುಷ್ವ ತತ್ ॥ ೧೦ ॥

ಲೋಕಾಃ ಸೋಮಪಥಾ ನಾಮ ಯತ್ರ ಮಾರೀಚನಂದನಾಃ ।
ವರ್ತಂತೇ ಯೇ ಚ ಪಿತರೋ ಯಾನ್ದೇವಾ ಭಾವಯಂತ್ಯಲಂ ॥ ೧೧ ॥

ಅಗ್ನಿಷ್ವಾತ್ತಾ ಇತಿ ಖ್ಯಾತಾ ಯಜ್ವಾನೋ ಯತ್ರ ಸಂಸ್ಥಿತಾಃ ।
ಅಚ್ಛೋದಾ ನಾಮ ತೇಷಾಂ ತು ಮಾನಸೀ ಕನ್ಯಕಾ ನದೀ ॥ ೧೨ ॥

ಅಚ್ಛೋದಂ ನಾಮ ತೇಷಾಂ ತು ಸರಃ ಪಿತೃವಿನಿರ್ಮಿತಂ ।
ಅಚ್ಛೋದಾಽಥ ತಪಶ್ಚಕ್ರೇ ದಿವ್ಯಂ ವರ್ಷಸಹಸ್ರಕಂ ॥ ೧೩ ॥

---

೯. ಉಮಾ, ಏಕಪರ್ಣಾ, ಅಪರ್ಣಾ, ಎಂಬುದಾಗಿ ಮೂವರು ಹೆಣ್ಣು ಮಕ್ಕಳು. ತೀವ್ರವಾದ ತಪಸ್ಸನ್ನು ಮಾಡಿದ್ದರು. ಅವರಲ್ಲಿ ರುದ್ರನಿಗೆ ಒಬ್ಬಳನ್ನೂ, ಭೃಗುವಿಗೆ ಒಬ್ಬಳನ್ನೂ. ಜೈಗೀಷವ್ಯನಿಗೆ ಮತ್ತೊಬ್ಬಳನ್ನೂ ಕೊಟ್ಟನು. ಈ ಮೂವರು ಎಲ್ಲಾ ಜನರಿಗಿಂತ ತಪಸ್ಸಿನಲ್ಲಿ ಅಧಿಕರಾಗಿದ್ದರು.

೧೦. ಪಿತೃಗಳ ಲೋಕೋತ್ಪತ್ತಿಯನ್ನು ಹೇಳುತ್ತೇನೆ, ಅದನ್ನು ಕೇಳು.

೧೧. ಮಾರೀಚನ ಮಕ್ಕಳಿರುವ ಸೋಮಪಥವೆಂಬ ಲೋಕದಲ್ಲಿ ಆ ಪಿತೃಗಳು ಇದ್ದಾರೆ. ಅವರನ್ನು ದೇವತೆಗಳು ಕೂಡ ಗೌರವದಿಂದ ಕಾಣುತ್ತಾರೆ.

೧೨. ಆ ಸ್ಥಳದಲ್ಲಿ ಅಗ್ನಿಷ್ವಾತ್ತರೇ ಮುಂತಾದ ಪಿತೃಗಳಿರುವರು. ಆ ಪಿತೃಗಳ ಮಾನಸೀಕನ್ಯಕೆಯಾದ ಅಚ್ಛೋದವೆಂಬ ನದಿಯಿರುವುದು.

೧೩. ಅಲ್ಲಿಯೇ ಅಚ್ಛೋದವೆಂಬ ಸರೋವರವನ್ನು ಪಿತೃಗಳು ನಿರ್ಮಿಸಿದರು. ಅಚ್ಛೋದೆಯೆಂಬ ಪಿತೃಗಳ ಮಾನಸಿಕ ಕನ್ಯೆಯು ದೇವತೆಗಳ ಸಾವಿರ ವರ್ಷಗಳ ಕಾಲ ತಪಸ್ಸನ್ನು ಮಾಡಿದಳು.

ಆಜಗ್ಮುಃ ಪಿತರಸ್ತುಷ್ಟಾಃ ಕಿಂ ಚ ದಾಸ್ಯಂತಿ ತೇ ವರಂ ।
ದಿವ್ಯರೂಪಧರಾಃ ಸರ್ವೇ ದಿವ್ಯಮಾಲಾನುಲೇಪನಾಃ ॥ ೧೪ ॥

ಸರ್ವೇ ಪ್ರಧಾನಾ ಬಲಿನಃ ಕುಸುಮಾಯುಧಸಂನಿಭಾಃ ।
ತನ್ಮಧ್ಯೇಽಮಾವಸುಂ ನಾಮ ಪಿತರಂ ವೀಕ್ಷ್ಯ ಸಾಂಗನಾ ॥ ೧೫ ॥

ವವ್ರೇ ವರಾರ್ಥಿನೀ ಸಂಗಂ ಕುಸುಮಾಯುಧಪೀಡಿತಾ ।
ಯೋಗಭ್ರಷ್ಟಾ ತು ಸಾ ತೇನ ವ್ಯಭಿಚಾರೇಣ ಭಾಮಿನೀ ॥ ೧೬ ॥

ಧರಾಂ ನ ಸ್ಪೃಶತೇ ಪೂರ್ವಂ ಪಪಾತಾಥ ಭುವಸ್ತಲೇ ।
ತಯೈವಾಮಾವಸುರ್ಯೋಽಯಮಿಚ್ಛಾಂ ಚಕ್ರೇ ನ ತಾಂ ಪ್ರತಿ ॥ ೧೭ ॥

ಧೈರ್ಯೇಣ ತಸ್ಯ ಸಾ ಲೋಕೇ ಅಮಾವಾಸ್ಯೇತಿ ವಿಶ್ರುತಾ ।
ಪಿತೄಣಾಂ ವಲ್ಲಭಾ ಯಸ್ಮಾದ್ದತ್ತಸ್ಯಾಕ್ಷಯಕಾರಿಕಾ ॥ ೧೮ ॥

---

೧೪. ಆಗ ಪಿತೃಗಳು ಅಲ್ಲಿಗೆ ಬಂದು ಮತ್ತು ವರವನ್ನು ಕೊಟ್ಟರು. ಅವ ರೆಲ್ಲರೂ ಸುಂದರರಾಗಿದ್ದರು, ಒಳ್ಳೆಯ ಪುಷ್ಪಮಾಲೆಯನ್ನು ಧರಿಸಿದ್ದರು, ದಿವ್ಯವಾದ ಗಂಧವನ್ನು ಪೂಸಿಕೊಂಡಿದ್ದರು, ಎಲ್ಲರೂ ಮುಖ್ಯರಾಗಿಯೇ ಇದ್ದರು, ಬಲಿಷ್ಠರೂ ಆಗಿದ್ದರು, ನವಮನ್ಮಥನಂತಿದ್ದರು.

೧೫. ಆರೀತಿಯಿದ್ದ ಪಿತೃಗಳೊಳಗೆ ಅಮಾವಸುವೆಂಬ ಪಿತೃವು ಬಹು ಸುಂದರ ನಾಗಿರಲು ಈಕೆಯು ಮನ್ಮಥ ಬಾಧೆಯಿಂದ ಕೂಡಿ ಆತನ ಸಂಗವನ್ನೇ ವರವನ್ನಾಗಿ ಕೇಳಿಕೊಂಡಳು.

೧೬-೧೭. ಆ ವ್ಯಭಿಚಾರದೋಷದಿಂದ ಆಕೆಯು ಯೋಗದಿಂದ ಭ್ರಷ್ಟ ಳಾದಳು. ಮೊದಲು ಯೋಗದ ಮಹಿಮೆಯಿಂದ ಭೂಮಿಯನ್ನೇ ಮುಟ್ಟದಿದ್ದವಳು, ಈಗ ಕೆಳಗೆ ಬಿದ್ದಳು, ಆದರೆ ಆ ಅಮಾವಸುವೆಂಬ ಪಿತೃವೂ ಕೂಡ ಅವಳೊಡನೆ ಸಂಗವನ್ನು ಇಚ್ಛಿಸಲಿಲ್ಲ.

೧೮. ಆಕೆಯು ಧೈರ್ಯದಿಂದ ಆತನ ಸಮೀಪಕ್ಕೆ ಹೋದುದರಿಂದ ಅಮಾವಾಸ್ಯೆ ಯೆಂದು ಅಂಥಿನ ಹೆಸರಾಯಿತು. ಅದು ಪಿತೃಗಳಿಗೆ ಪ್ರೀತಿಯಾದುದರಿಂದ ಆ ದಿನ ಕೊಟ್ಟದ್ದು ಅವರಿಗೆ ಅಕ್ಷಯವು.

ಅಚ್ಛೋದಾಧೋಮುಖೀ ದೀನಾ ಲಜ್ಜಿತಾ ತಪಸಃ ಕ್ಷಯಾತ್ ।
ಸಾ ಪಿತೄನ್ಪ್ರಾರ್ಥಯಾಮಾಸ ಪುನರಾತ್ಮಸಮೃದ್ಧಯೇ ॥ ೧೯ ॥

ವಿಲಜ್ಜಮಾನಾ ಪಿತೃಭಿರಿದಮುಕ್ತಾ ತಪಸ್ವಿನೀ ।
ಭವಿಷ್ಯಮಿದಮಾಲೋಚ್ಯ ದೇವಕಾರ್ಯಂ ಚ ತೇ ತದಾ ॥ ೨೦ ॥

ಇದಮೂಚುರ್ಮಹಾಭಾಗಾಂ ಪ್ರಸಾದಶುಭಯಾ ಗಿರಾ ।
ದಿವಿ ದಿವ್ಯಶರೀರೇಣ ಯತ್ಕಿಂಚಿತ್ಕ್ರಿಯತೇ ಬುಧೈಃ ॥ ೨೧ ॥

ತೇನೈವ ತತ್ಕರ್ಮಫಲಂ ಭುಜ್ಯತೇ ವರವರ್ಣಿನಿ ।
ಸದ್ಯಃ ಫಲಂತಿ ಕರ್ಮಾಣಿ ದೇವತ್ವೇ ಪ್ರೇತ್ಯ ಮಾನುಷೇ ॥ ೨೨ ॥

ತಸ್ಮಾತ್ತ್ವಂ ಸುಕೃತಸ್ಯಾಸ್ಯ ಪ್ರಾಪ್ಸ್ಯಸೇ ಪ್ರೇತ್ಯ ವೈ ಫಲಂ
ಅಷ್ಟಾವಿಂಶೇ ಭವಿತ್ರೀ ತ್ವಂ ದ್ವಾಪರೇ ಮತ್ಸ್ಯಯೋನಿಜಾ ॥ ೨೩ ॥

---

೧೯. ಆಗ ಆ ಅಚ್ಛೋದೆಯು ತಪಸ್ಸಿನ ನಾಶದಿಂದ ಲಜ್ಜೆಗೊಂಡು ತಲೆಯನ್ನು ಬಗ್ಗಿಸಿಕೊಂಡು ನಿಂತಳು. ಮತ್ತು ಪಿತೃಗಳನ್ನು ತನ್ನ ಏಳಿಗೆಗೆ ಪ್ರಾರ್ಥಿಸಿಕೊಂಡಳು.

೨೦. ಅವಳು ನಾಚಿಕೆಗೊಂಡಿರುವುದನ್ನು ನೋಡಿ ಪಿತೃಗಳು ಮುಂದೆ ಬರುವ ದೇವತಾಕಾರ್ಯವನ್ನು ಯೋಚಿಸಿಕೊಂಡು ಅನುಗ್ರಹಪೂರ್ವಕವಾದ ಮಾತಿನಿಂದ ಇಂತೆಂದರು.

೨೧-೨೨. ಎಲೈ ಉತ್ತಮಾಂಗಿಯೆ! ತಿಳುವಳಿಕೆಯುಳ್ಳ ಯಾರು ಒಳ್ಳೆಯ ಕೆಲಸಗಳನ್ನು ಇಲ್ಲಿ ಮಾಡುತ್ತಾರೋ ಅವರು ಸತ್ತಮೇಲೆ ದೇವಲೋಕದಲ್ಲಿ ದಿವ್ಯ ಶರೀರದಿಂದ ಆ ಕರ್ಮಫಲವನ್ನು ಅನುಭವಿಸುತ್ತಾರೆ. ಆ ಕರ್ಮಗಳು ಮನುಷ್ಯತನದಲ್ಲಾಗಲಿ, ಸತ್ತನಂತರ ದೇವಲೋಕದಲ್ಲಾಗಲಿ ಒಡನೆಯೇ ಫಲವನ್ನು ಕೊಡುತ್ತವೆ.

೨೩. ಆದ್ದರಿಂದ ಈ ಸುಕೃತಕ್ಕೆ ಫಲವನ್ನು ಸತ್ತನಂತರ ಹೊಂದುತ್ತೀಯೆ. ಇಪ್ಪತ್ತೆಂಟನೆಯ ದ್ವಾಪರಯುಗದಲ್ಲಿ ಮೀನಿನ ಹೊಟ್ಟೆಯಲ್ಲಿ ನೀನು ಹುಟ್ಟುತ್ತೀಯೆ.

ವ್ಯತಿಕ್ರಮಾತ್ಪಿತೃಣಾಂ ತ್ವಂ ಕಷ್ಟಂ ಕುಲಮವಾಪ್ಸ್ಯಸಿ ।
ತಸ್ಮಾದ್ರಾಜ್ಞೋ ವಸೋಃ ಕನ್ಯಾ ತ್ವಮವಶ್ಯಂ ಭವಿಷ್ಯಸಿ ॥ ೨೪ ॥

ಕನ್ಯಾತ್ವೇ ದೇವಲೋಕಾಂಸ್ತಾನ್ಪುನಃ ಪ್ರಾಪ್ಸ್ಯಸಿ ದುರ್ಲಭಾನ್ ।
ಪರಾಶರಸ್ಯ ವೀರ್ಯೇಣ ಪುತ್ರಮೇಕಮವಾಪ್ಸ್ಯಸಿ ॥ ೨೫ ॥

ದ್ವೀಪೇ ತು ಬದರೀಪ್ರಾಯೇ ಬಾದರಾಯಣಮಚ್ಯುತ ।
ಸ ವೇದಮೇಕಂ ಬಹುಧಾ ವಿಭಜಿಷ್ಯತಿ ತೇ ಸುತಃ ॥ ೨೬ ॥

ಪೌರವಸ್ಯ ಸುತೌ ದ್ವೌ ತು ಸಮುದ್ರಾಂಶಸ್ಯ ಶಂತನೋಃ ।
ವಿಚಿತ್ರವೀರ್ಯಸ್ತನಯಸ್ತಥಾ ಚಿತ್ರಾಂಗದೋ ನೃಪಃ ॥ ೨೭ ॥

ಇಮಾವುತ್ಪಾದ್ಯ ತನಯೌ ಕ್ಷೇತ್ರೇ ಚೈವಾಸ್ಯ ಧೀಮತಃ ।
ಪ್ರೋಷ್ಟಪದ್ಯಷ್ಟಕಾ ಭೂಯಃ ಪಿತೃಲೋಕೇ ಭವಿಷ್ಯಸಿ ॥ ೨೮ ॥

ನಾಮ್ನಾ ಸತ್ಯವತೀ ಲೋಕೇ ಪಿತೃಲೋಕೇ ತಥಾಷ್ಟಕಾ ।
ಆಯುರಾರೋಗ್ಯದಾ ನಿತ್ಯಂ ಸರ್ವಕಾಮಫಲಪ್ರದಾ ॥ ೨೯ ॥

೨೪. ಪಿತೃಗಳ ವಿಷಯದಲ್ಲಿ ನೀನು ಸರಿಯಾಗಿ ನಡೆದುಕೊಳ್ಳದಿರುವುದರಿಂದ ಕೀಳು ಜನ್ಮದಲ್ಲಿ ಹುಟ್ಟುತ್ತೀಯೆ. ಆದರೆ ಆ ವಸುವೆಂಬ ರಾಜನಿಗೆ ನೀನು ಮಗಳಾಗಿ ಆಗುತ್ತೀಯೆ.

೨೫. ಕನ್ಯೆಯಾಗಿರುವಾಗಲೇ ಮತ್ತೆ ಅಸಾಧ್ಯವಾದ ದೇವಲೋಕವನ್ನು ಹೊಂದುತ್ತೀಯೆ. ಪರಾಶರನ ವೀರ್ಯದಿಂದ ಒಬ್ಬ ಮಗನನ್ನು ಪಡೆಯುತ್ತೀಯೆ.

೨೬. ಆತನು ಬದರಿ (ಯಗಚಿ) ಗಿಡಗಳಿರುವ ದ್ವೀಪದಲ್ಲಿ ಹುಟ್ಟುವುದರಿಂದ ಬಾದರಾಯಣನೆಂಬ ಹೆಸರನ್ನು ಹೊಂದುತ್ತಾನೆ. ಆ ನಿನ್ನ ಮಗನು ಒಂದೇ ರಾಶಿಯಾಗಿರುವ ವೇದವನ್ನು ಬೇರೆ ಬೇರೆಯಾಗಿ ವಿಂಗಡಿಸುತ್ತಾನೆ.

೨೭-೨೮. ಪೌರವನೆಂಬ ರಾಜನಿಗೆ ಮದುವೆಯಾಗುತ್ತೀಯೆ. ಅವನ ಹೆಸರು ಶಂತನುವು. ಅವನ ಹೆಂಡತಿಯಾಗಿದ್ದು ವಿಚಿತ್ರವೀರ್ಯ, ಚಿತ್ರಾಂಗದರೆಂಬ ಮಕ್ಕಳನ್ನು ಹೆರುತ್ತೀಯೆ. ಪ್ರೋಷ್ಟಪದಿ, ಅಷ್ಟಕರೆಂಬುವರನ್ನು ಪಿತೃಲೋಕದಲ್ಲಿ ಹೇರುತ್ತೀಯೆ.

೨೯-೩೦. ಈ ಭೂಲೋಕದಲ್ಲಿ ಸತ್ಯವತೀ ಎಂಬ ಹೆಸರುಳ್ಳವಳಾಗಿಯೂ, ಪಿತೃಲೋಕದಲ್ಲಿ ಅಷ್ಟಕಾ ಎಂಬ ಹೆಸರುಳ್ಳವಳಾಗಿಯೂ ಪ್ರಸಿದ್ಧಳಾಗಿರುತ್ತೀಯೆ.

ಭವಿಷ್ಯಸಿ ನರೇ ಲೋಕೇ ನದೀತ್ವಂ ಚ ಗಮಿಷ್ಯಸಿ ।
ಪುಣ್ಯತೋಯಾ ಸರಿಚ್ಛ್ರೇಷ್ಠಾ ಲೋಕೇ ಸ್ವಚ್ಛೋದನಾಮಿಕಾ ॥ ೩೦ ॥

ಇತ್ಯುಕ್ತ್ವಾ ಸಗಣೈಸ್ತೈಸ್ತು ತತ್ರೈವಾಂತರಧೀಯತ ।
ಸಾಪ್ಯಾಪ ಚಾರಿತ್ರಫಲಂ ಮಯಾ ಯದ್ಗದಿತಂ ಪುರಾ ॥ ೩೧ ॥

ವಿಭ್ರಾಜೋ ನಾಮ ಯೇ ಚಾನ್ಯೇ ದಿವಿ ಸಂತಿ ಸುವರ್ಚಸಃ ।
ಲೋಕಾ ಬರ್ಹಿಷದೋ ಯತ್ರ ಪಿತರಃ ಸಂತಿ ಸುವ್ರತಾಃ ॥ ೩೨ ॥

ಯತ್ರ ಬರ್ಹಿಣಯುಕ್ತಾನಿ ವಿಮಾನಾನಿ ಸಹಸ್ರಶಃ ।
ಸಂಕಲ್ಪಪಾದಪಾ ಯತ್ರ ತಿಷ್ಠಂತಿ ಫಲದಾಯಿನಃ ॥ ೩೩ ॥

ಯತ್ರಾಭ್ಯುದಯಶಾಲಾಸು ಮೋದಂತೇ ಶ್ರಾದ್ಧದಾಯಿನಃ ।
ಯೇ ದಾನವಾಃ ಸುರಗಣಾ ಗಂಧರ್ವಾಪ್ಸರಸಾಂ ಗಣಾಃ ॥ ೩೪ ॥

---

ನೀನು ನಿತ್ಯವೂ ಆಯುರಾರೋಗ್ಯಗಳನ್ನು ಕೊಡುವವಳಾಗಿಯೂ, ಎಲ್ಲಾ ಇಷ್ಟಾರ್ಥಗಳನ್ನೂ ಕೊಡುವವಳಾಗಿಯೂ ಆಗುತ್ತೀಯೆ. ಮತ್ತು ಪುಣ್ಯಕರವಾದ ನೀರುಳ್ಳ ಅಚ್ಛೋದವೆಂಬ ಹೆಸರುಳ್ಳ ನದಿಯಾಗಿಯೂ ಹರಿಯುತ್ತೀಯೆ.

೩೧. ಆ ಪಿತೃಗಣಗಳು ಹಾಗೆ ಹೇಳಿ ಅಲ್ಲಿಯೇ ಅಂತರ್ಧಾನರಾದರು. ಆಕೆಯು ಕೂಡ ನಾನು ಹಿಂದೆ ಹೇಳಿದ ಚರಿತ್ರೆಯ ಫಲವನ್ನು ಹೊಂದಿದಳು.

೩೨-೩೩. ವಿಭ್ರಾಜರೆಂಬುವರು ಒಳ್ಳೆಯ ವರ್ಚಸ್ವಿಗಳು, ಅವರು ಸ್ವರ್ಗದಲ್ಲಿ ವಾಸಿಸುತ್ತಾರೆ, ಅವರ ಲೋಕವು ಬರ್ಹಿಷದವೆಂದು ಪ್ರಸಿದ್ಧವಾಗಿದೆ, ಅಲ್ಲಿರುವ ನವಿಲುಗಳು ಸಾವಿರಾರು ನವಿಗಳನ್ನು ಹೊಂದಿವೆ, ಅಲ್ಲಿರುವ ಮರಗಳಿಗೆ ಸಂಕಲ್ಪಪಾದಪಗಳೆಂದು ಹೆಸರು, ಅವು ಇಷ್ಟವಾದ ಫಲಗಳನ್ನು ಕೊಡುತ್ತವೆ.

೩೪. ಅಲ್ಲಿರುವ ಅಭ್ಯುದಯಶಾಲೆಯಲ್ಲಿ ಇಹಲೋಕದಲ್ಲಿ ಶ್ರಾದ್ಧಮಾಡಿದವರು ಸುಖಿಸುತ್ತಾರೆ. ದಾನವರು, ದೇವತೆಗಳು, ಗಂಧರ್ವರು, ಅಪ್ಸರಸ್ಸುಗಳು, ಯಕ್ಷರು, ರಕ್ಷೋಗಣಗಳು, ಇವರೆಲ್ಲರೂ ಅವರನ್ನು ಗೌರವಿಸುತ್ತಾರೆ.

ಯಕ್ಷರಕ್ಷೋಗಣಾಶ್ಚೈವ ಯಜಂತಿ ದಿವಿ ದೇವತಾಃ ।
ಪುಲಸ್ತ್ಯಪುತ್ರಾಃ ಶತಶಸ್ತಪೋಯೋಗಬಲಾನ್ವಿತಾಃ ॥ ೩೫ ॥

ಮಹಾತ್ಮಾನೋ ಮಹಾಭಾಗಾ ಭಕ್ತಾನಾಮಭಯಂಕರಾಃ ।
ಏತೇಷಾಂ ಪೀವರೀ ಕನ್ಯಾ ಮಾನಸೀ ದಿವಿ ವಿಶ್ರುತಾ ॥ ೩೬ ॥

ಯೋಗಿನೀ ಯೋಗಮಾತಾ ಚ ತಪಶ್ಚಕ್ರೇ ಸುದಾರುಣಂ ।
ಪ್ರಸನ್ನೋ ಭಗವಾಂಸ್ತಸ್ಯಾ ವರಂ ವವ್ರೇ ಸುತಾ ತತಃ ॥ ೩೭ ॥

॥ ಕನ್ಯೋವಾಚ ॥

ಯೋಗವಂತಂ ಸುರೂಪಂ ಚ ಭರ್ತಾರಂ ವಿಜಿತೇಂದ್ರಿಯಂ ।
ದೇಹಿ ದೇವ ಪ್ರಸನ್ನಸ್ತ್ವಂ ಯದಿ ಮೇ ವದತಾಂ ವರ ॥ ೩೮ ॥

ಉವಾಚ ದೇವೋ ಭವಿತಾ ವ್ಯಾಸಪುತ್ರೋ ಯದಾ ಶುಕಃ ।
ಭವಿತ್ರೀ ತಸ್ಯ ಭಾರ್ಯಾ ತ್ವಂ ಯೋಗಾಚಾರ್ಯಸ್ಯ ಸುವ್ರತಾ ॥ ೩೯ ॥

ಭವಿಷ್ಯತಿ ಚ ತೇ ಕನ್ಯಾ ಕೃತ್ವೀ ನಾಮಾಥ ಯೋಗಿನೀ ।
ಪಂಚಾಲಾಧಿಪತೇರ್ದೇಯಾ ಸಾತ್ವತಸ್ಯ ತದಾ ತ್ವಯಾ ॥ ೪೦ ॥

೩೫-೩೬. ಪುಲಸ್ತ್ಯನ ಮಕ್ಕಳು ಬಹಳ ಮಂದಿ ಇದ್ದಾರೆ, ಅವರೆಲ್ಲರೂ ತಪಸ್ಸು, ಯೋಗಗಳ ಬಲದಿಂದ ಕೂಡಿದ್ದಾರೆ, ಮಹಾತ್ಮರು, ಭಕ್ತರಿಗೆ ಅಭಯವನ್ನು ಕೊಡತಕ್ಕವರು, ಇವರಿಗೆ ಪೀವರೀ ಎಂಬ ಮಾನಸೀಕನ್ಯೆಯಿರುವಳು.

೩೭. ಯೋಗಿನಿಯೂ ಯೋಗಮಾತೆಯೂ ಆದ ಆಕೆಯು ಉಗ್ರವಾದ ತಪಸ್ಸನ್ನು ಮಾಡಿದಳು. ಭಗವಂತನು ಪ್ರಸನ್ನವಾಗಿ ಬಂದನು. ಆಕೆಯು ಅವನನ್ನು ವರವನ್ನು ಕೇಳಿಕೊಂಡಳು.

೩೮. ಕನ್ಯೆಯು ಹೇಳಿದಳು:—ಯೋಗಿಯಾದ, ಸುಂದರನಾದ, ಜಿತೇಂದ್ರಿಯನಾದ ಗಂಡನನ್ನು, ಎಲೈ ಸ್ವಾಮಿಯೇ! ನೀನು ಪ್ರಸನ್ನನಾಗಿದ್ದರೆ ಕೊಡು.

೩೯. ಆಗ ಸ್ವಾಮಿಯು, ವ್ಯಾಸನಿಗೆ ಶುಕನೆಂಬ ಮಗನು ಹುಟ್ಟುವನು, ಅವನು ಮಹಾಯೋಗಿಯಾಗುವನು, ಆ ಯೋಗಾಚಾರ್ಯನಿಗೆ ನೀನು ಹೆಂಡತಿಯಾಗುತ್ತೀಯೆ, ಎಂದು ಹೇಳಿದನು.

೪೦. ಆಗ ನಿನಗೆ ಕೃತ್ವೀ ಎಂಬ ಮಗಳಾಗುವಳು, ನೀನು ಅವಳನ್ನು ಪಾಂಚಾಲರಾಜನಾದ ಸಾತ್ವತನಿಗೆ ಕೊಡಬೇಕು.

ಜನನೀ ಬ್ರಹ್ಮದತ್ತಸ್ಯ ಯೋಗಸಿದ್ಧಾರ್ಥಗಾ ಸ್ಮೃತಾ ।
ಕೃಷ್ಣೋ ಗೌರಪ್ರಭಃ ಶಂಭುರ್ಭವಿಷ್ಯಂತಿ ಚ ತೇ ಸುತಾಃ ॥ ೪೧ ॥

ಸರ್ವಕಾಮಸಮೃದ್ಧೇಷು ವಿಮಾನೇಷ್ವಪಿ ಪಾವನಾಃ ।
ಕಿಂ ಪುನಃ ಶ್ರಾದ್ಧದಾ ವಿಪ್ರಾ ಭಕ್ತಿಮಂತಃ ಕ್ರಿಯಾನ್ವಿತಾಃ ॥ ೪೨ ॥

ಗೌರ್ನಾಮ ಕನ್ಯಾ ಯೇಷಾಂ ತು ಮಾನಸೀ ದಿವಿ ರಾಜತೇ ।
ಸುಕನ್ಯಾ ದಯಿತಾ ಪತ್ನೀ ಸಾಧ್ಯಾನಾಂ ಕೀರ್ತಿವರ್ಧಿನೀ ॥ ೪೩ ॥

ಮರೀಚಿಗರ್ಭನಾಮಾನೋ ಲೋಕೇ ಮಾರ್ತಂಡಮಂಡಲೇ ।
ಪಿತರೋ ಯತ್ರ ತಿಷ್ಠಂತಿ ಹವಿಷ್ಮಂತೋಽಂಗಿರಃಸುತಾಃ ॥ ೪೪ ॥

ತೀರ್ಥಶ್ರಾದ್ಧಪ್ರದಾ ಯಾಂತಿ ಯತ್ರ ಕ್ಷತ್ರಿಯಪುಂಗವಾಃ ।
ರಾಜ್ಞಾಂ ತು ಪಿತರಸ್ತೇ ವೈ ಸ್ವರ್ಗಮೋಕ್ಷಫಲಪ್ರದಾಃ ॥ ೪೫ ॥

---

೪೧. ಆಕೆಯು ಯೋಗಸಿದ್ಧಿಯನ್ನು ಹೊಂದುತ್ತಾಳೆ, ಅಲ್ಲದೆ ಬ್ರಹ್ಮದತ್ತನೆಂಬ ಮಗನನ್ನು ಹೆರುತ್ತಾಳೆ, ನಿನ್ನ ಮಕ್ಕಳು ಕಪ್ಪು-ಹಳದಿಗಳಿಂದ ಕೂಡಿದವರಾಗಿರುತ್ತಾರೆ, ಮತ್ತು ಮಂಗಳಕರರಾಗಿರುತ್ತಾರೆ.

೪೨. ಎಲ್ಲಾ ಇಷ್ಟವನ್ನು ಕೊಡುವ ವಿಮಾನಗಳಲ್ಲಿರುತ್ತಾರೆ, ಒಳ್ಳೆಯ ಕ್ರಿಯಾವಂತರಾಗಿ ಶ್ರಾದ್ಧಮಾಡಿದವರೂ ಹಾಗೆಯೇ ಸುಖಿಸುತ್ತಾರೆ.

೪೩. ಅವರಿಗೆ ಗೌಃ ಎಂಬ ಮತ್ತೊಬ್ಬಳು ಮಾನಸೀ ಪುತ್ರಿಯಿರುವಳು. ಅವಳು ಆ ಸ್ವರ್ಗದಲ್ಲಿ ಪ್ರಕಾಶಿಸುವಳು. ಆ ಸುಕನ್ಯೆಯು ಸಾಧ್ಯರ ಹೆಂಡತಿಯು. ಕೀರ್ತಿಯನ್ನುಂಟುಮಾಡುವವಳು.

೪೪.. ಮರೀಚಿಗರ್ಭರೆಂಬ ಹೆಸರುಳ್ಳವರು, ಅಂಗಿರಸನ ಮಕ್ಕಳಾದ ಅವರು ಹವಿಷ್ಮಂತರುರೆಂಬ ಪಿತೃಗಳಿರುವ ಮಾರ್ತಂಡಮಂಡಲ ಲೋಕದಲ್ಲಿರುವರು.

೪೫. ತೀರ್ಥಶ್ರಾದ್ಧಗಳನ್ನು ಮಾಡಿದವರೂ, ಕ್ಷತ್ರಿಯಶ್ರೇಷ್ಠರೂ ಆ ಹವಿಷ್ಮಂತರಿರುವಲ್ಲಿಗೆ ಹೋಗುತ್ತಾರೆ, ಅವರು ರಾಜರುಗಳಿಗೆ ಪಿತೃದೇವತೆಗಳು, ಅವರಿಗೆ ಸ್ವರ್ಗವನ್ನೂ ಮೋಕ್ಷಫಲವನ್ನೂ ಕೊಡುತ್ತಾರೆ.

ಏತೇಷಾಂ ಮಾನಸೀ ಕನ್ಯಾ ಯಶೋದಾ ಲೋಕವಿಶ್ರುತಾ ।
ಪತ್ನೀ ಯಾಂಶುಮತಃ ಶ್ರೇಷ್ಠಾ ಸ್ನುಷಾ ಪಂಚಧನಸ್ಯ ತು ॥ ೪೬ ॥

ಜನನ್ಯಥ ದಿಲೀಪಸ್ಯ ಭಗೀರಥಪಿತಾಮಹೀ ।
ಲೋಕಾಃ ಕಾಮದುಘಾ ನಾಮ ಕಾಮಭೋಗಫಲಪ್ರದಾಃ ॥ ೪೭ ॥

ಸುಸ್ವಧಾ ನಾಮ ಪಿತರೋ ಯತ್ರ ತಿಷ್ಠಂತಿ ತೇ ಸುತಾಃ ।
ಆಜ್ಯಪಾ ನಾಮ ಲೋಕೇಷು ಕರ್ದಮಸ್ಯ ಪ್ರಜಾಪತೇಃ ॥ ೪೮ ॥

ಪುಲಹಾಗ್ರಜದಾಯಾದಾ ವೈಶ್ಯಾಸ್ತಾನ್ಭಾವಯಂತಿ ಹ ।
ಯತ್ರ ಶ್ರಾದ್ಧಕೃತಃ ಸರ್ವೇ ಪಶ್ಯಂತಿ ಯುಗಪದ್ಗತಾನ್ ॥ ೪೯ ॥

ಮಾತೃಭ್ರಾತೃಪಿತೃಶ್ವಶ್ರೂಸಖಿಸಂಬಂಧಿಭಾಂಧವಾನ್ ।
ಅಪಿ ಜನ್ಮಾಂತರೈರ್ದೃಷ್ಟಾನನುಭೂತಾನ್ಸಹಸ್ರಶಃ ॥ ೫೦ ॥

ಏತೇಷಾಂ ಮಾನಸೀ ಕನ್ಯಾ ವಿರಜಾ ನಾಮ ವಿಶ್ರುತಾ ।
ಸಾ ಪತ್ನೀ ನಹುಷಸ್ಯಾಸೀದ್ಯಯಾತೇರ್ಜನನೀ ತಥಾ ॥ ೫೧ ॥

---

೪೬. ಈ ಹವಿಷ್ಮಂತರಿಗೆ ಮಾನಸಪುತ್ರಿಯು ಯಶೋದೆಯೆಂಬವಳು. ಈಕೆಯು ಅಂಶುಮಂತನ ಹೆಂಡತಿಯು, ಪಂಚಧನನು ಇವಳ ಮಾವನು.

೪೭. ಈಕೆಯು ದಿಲೀಪನಿಗೆ ತಾಯಿಯು, ಭಗೀರಥನಿಗೆ ತಂದೆಯ ತಾಯಿ (ಅಜ್ಜಿಯು), ಕಾಮಭೋಗವನ್ನು ಕೊಡುವ ಕಾಮದುಘವೆಂಬ ಲೋಕವುಂಟು, ಅಲ್ಲಿ ಸುಸ್ವಧಾ ಎಂಬ ಪಿತೃಪುತ್ರರಿದ್ದಾರೆ.

೪೮-೫೦. ಆಜ್ಯಪವೆಂಬ ಲೋಕವುಂಟು, ಅದು ಕರ್ದಮ ಪ್ರಜಾಪತಿಯದು, ಅಲ್ಲಿರತಕ್ಕವರು ಪುಲಹನ ಅಣ್ಣನ ಮಕ್ಕಳು, ಅವರನ್ನು ವೈಶ್ಯರು ಗೌರವಿಸುತ್ತಾರೆ, ಶ್ರಾದ್ಧಮಾಡಿದ ವೈಶ್ಯರೆಲ್ಲರೂ ತಮ್ಮ ತಾಯಿ, ತಂದೆ, ಸಹೋದರರು, ಅತ್ತೆ, ಮಾವ, ಸ್ನೇಹಿತರು, ಸಂಬಂಧಿಗಳು, ಬೇರೆ ಜನ್ಮದಲ್ಲಿ ಸಂಬಂಧಿಗಳಾದವರು, ಇವರೆಲ್ಲರೂ ಆ ಆಜ್ಯಪರಿರುವಲ್ಲಿಗೆ ಸಾವಿರಗಟ್ಟಲೆ ಹೋಗುವುದು ಗೊತ್ತಾಗಿದೆ.

೫೧. ಈ ಆಜ್ಯಪರ ಮಾನಸೀಕನ್ಯೆಯು ವಿರಜಳೆಂದು ಪ್ರಖ್ಯಾತಳು. ಈಕೆಯು ನಹುಷನ ಹೆಂಡತಿಯು, ಯಯಾತಿಯ ತಾಯಿಯು.

ಏಷಾಷ್ಟಕಾಭವತ್ಪಶ್ಚಾದ್ಬ್ರಹ್ಮಲೋಕಗತಾ ಸತೀ ।
ತ್ರಯ ಏತೇ ಗಣಾಃ ಪ್ರೋಕ್ತಾಶ್ಚತುರ್ಥಂ ತು ವದಾಮ್ಯಹಂ ॥ ೫೨ ॥

ಲೋಕಾಃ ಸುಮಾನಸಾ ನಾಮ ಬ್ರಹ್ಮಲೋಕೋಪರಿ ಸ್ಥಿತಾಃ ।
ಸೋಮಪಾ ನಾಮ ಪಿತರೋ ಯತ್ರ ತಿಷ್ಠಂತಿ ಶಾಶ್ವತಾಃ ॥ ೫೩ ॥

ಧರ್ಮಮೂರ್ತಿಧರಾಃ ಸರ್ವೇ ಪರತೋ ಬ್ರಹ್ಮಣಃ ಸ್ಮೃತಾಃ ।
ಉತ್ಪನ್ನಾಃ ಸ್ವಧಯಾ ತೇ ತು ಬ್ರಹ್ಮತ್ವಂ ಪ್ರಾಪ್ಯ ಯೋಗಿನಃ ॥ ೫೪ ॥

ಕೃತ್ವಾ ಸೃಷ್ಟ್ಯಾದಿಕಂ ಸರ್ವೇ ಮಾನಸೇ ಸಾಂಪ್ರತಂ ಸ್ಥಿತಾಃ ।
ನರ್ಮದಾ ನಾಮ ತೇಷಾಂ ತು ಕನ್ಯಾ ತೋಯವಹಾ ಸರಿತ್ ॥ ೫೫ ॥

ಭೂತಾನಿ ಪೂಯತೇ ಯಾತಿ ಪಶ್ಚಿಮೋದಧಿಗಾಮಿನೀ ।
ತೇಭ್ಯಃ ಸರ್ವತ್ರ ಮನವಃ ಪ್ರಜಾಸರ್ಗಶ್ಚ ನಿರ್ಮಿತಃ ॥ ೫೬ ॥

---

೫೨. ಈಕೆಯು ಅನಂತರ ಅಷ್ಟಕಳೆಂಬ ಹೆಸರಿನಿಂದ ಪಿತೃಲೋಕದಲ್ಲಿ ಪ್ರಸಿದ್ಧಳಾದಳು. ಈ ರೀತಿ ಮೂರು ಪಿತೃಗಣಗಳನ್ನೂ ಹೇಳಿದೆನು, ನಾಲ್ಕನೆಯ ದನ್ನು ಹೇಳುತ್ತೇನೆ.

೫೩. ಸುಮನಸವೆಂಬ ಲೋಕವು ಬ್ರಹ್ಮಲೋಕದ ಮೇಲಿದೆ, ಅಲ್ಲಿ ಸೋಮಪ ರೆಂಬ ಪಿತೃಗಳು ಶಾಶ್ವತರಾಗಿದ್ದಾರೆ.

೫೪. ಅವರೆಲ್ಲರೂ ಧರ್ಮದ ಮೂರ್ತಿಗಳು, ಧರ್ಮದಲ್ಲಿ ಬ್ರಹ್ಮನ ಅನಂತರ ಇವರೇ ನಿಷ್ಠರಾದವರು, ಇವರು ಸ್ವಧೆಯಲ್ಲಿ ಹುಟ್ಟಿ ಯೋಗಿಗಳಾಗಿ ಬ್ರಹ್ಮತ್ವವನ್ನು ಹೊಂದಿ,

೫೫. ಸೃಷ್ಟಿಯನ್ನು ಮಾಡಿ ಇವರೆಲ್ಲರೂ ಈಗ ಮಾನಸಸರೋವರದ ಬಳಿ ಇರುವರು, ನರ್ಮದೆಯೆಂಬುವಳು ಇವರ ಕನ್ಯೆಯಾದ ನದಿಯು.

೫೬. ಆ ನರ್ಮದೆಯು ಪ್ರಾಣಿಗಳನ್ನು ಪಾವನಮಾಡುತ್ತದೆ, ಪಶ್ಚಿಮ ಸಮುದ್ರಕ್ಕೆ ಹೋಗುತ್ತದೆ, ಅದರ ದೆಸೆಯಿಂದಲೇ ಮನುಗಳು ಪ್ರಜೆಗಳನ್ನು ಸೃಷ್ಟಿಸಿದುದು.

ಜ್ಞಾತ್ವಾ ಶ್ರಾದ್ಧಾನಿ ಕುರ್ವಂತಿ ಧರ್ಮಭಾವೇನ ಸರ್ವದಾ ।
ಸರ್ವದಾ ತೇ ಭ್ಯ ಏವ ಸ್ಯಾತ್ಪ್ರಸಾದಾದ್ಯೋಗಸಂತತಿಃ ॥ ೫೭ ॥

ಪಿತೄಣಾಮಾದ್ಯಸರ್ಗೇ ತು ಶ್ರಾದ್ಧಮೇವಂ ವಿನಿರ್ಮಿತಂ ।
ಸರ್ವೇಷಾಂ ರಾಜತಂ ಪಾತ್ರಮಥವಾ ರಜತಾನ್ವಿತಂ ॥ ೫೮ ॥

ದತ್ತಂ ಸ್ವಧಾ ಪಿತೄಣಾಂ ತು ಪಿತೄನ್ಪ್ರೀಣಾನಿ ಸರ್ವದಾ ।
ಆಗ್ನೀಧ್ರಸೋಮಪಾಭ್ಯಾಂ ತು ಕಾರ್ಯಮಾಪ್ಯಾಯನಂ ಬುಧೈಃ ॥ ೫೯ ॥

ಅಗ್ನ್ಯಭಾವೇ ತು ವಿಪ್ರಸ್ಯ ಪಾಣೌ ವಾಥ ಜಲೇಽಪಿ ವಾ ।
ಅಜಾಕರ್ಣೇಽಶ್ವಕರ್ಣೇ ವಾ ಗೋಷ್ಠೇ ವಾಥ ಶಿವಾಂತಿಕೇ ॥ ೬೦ ॥

ಪಿತೄಣಾಮಮಲಂ ಸ್ಥಾನಂ ದಕ್ಷಿಣಾ ದಿಕ್ಪ್ರಶಸ್ಯತೇ ।
ಪ್ರಾಚೀನಾವೀತಮುದಕಂ ತಿಲಸಂತ್ಯಾಗಮೇವ ಚ ॥ ೬೧ ॥

---

೫೭. ಅದನ್ನು ತಿಳಿದುಕೊಂಡು ಧರ್ಮಬುದ್ಧಿಯಿಂದ ಶ್ರಾದ್ಧವನ್ನು ಮಾಡ ಬೇಕು, ಅದರಿಂದ ಆ ಮನುಗಳು ತೃಪ್ತಿಹೊಂದುತ್ತಾರೆ, ಅವರ ಅನುಗ್ರಹದಿಂದ ಯೋಗವು ಸಿದ್ಧಿಸುತ್ತದೆ.

೫೮. ಪಿತೃಗಳ ಮೊದಲನೆಯ ಸೃಷ್ಟಿಯಲ್ಲಿ ಈ ರೀತಿ ಶ್ರಾದ್ಧವು ನಿರ್ಮಿತ ವಾಯಿತು. ಈ ಪಿತೃಗಳಿಗೆಲ್ಲಾ ಬೆಳ್ಳಿಯ ಪಾತ್ರೆಯು, ಇಲ್ಲದಿದ್ದರೆ ಬೆಳ್ಳಿಯಿಂದ ಕೂಡಿದುದು.

೫೯. ಪಿತೃಗಳಿಗೆ ಕೊಟ್ಟ ಹವಿಸ್ಸು ಸ್ವಧೆ ಎನ್ನಿಸಿಕೊಳ್ಳುತ್ತವೆ, ಇದು ಪಿತೃ ಗಳಿಗೆ ತೃಪ್ತಿಯನ್ನುಂಟುಮಾಡುತ್ತದೆ, ಜಾಣರು ಆಗ್ನೀಧ್ರ ಸೋಮಪರಿಗೆ ತೃಪ್ತಿ ಯನ್ನು ಮಾಡಬೇಕು.

೬೦-೬೧. ಅಗ್ನಿಯಲ್ಲಿ ಪಿತೃಗಳಿಗೆ ಹೋಮಮಾಡಬೇಕು, ಅದಿಲ್ಲದಿದ್ದರೆ ಬ್ರಾಹ್ಮಣನ ಕೈಯಲ್ಲಿ ಆಗಲಿ, ನೀರಿನಲ್ಲಾಗಲಿ ಹೋಮಮಾಡಬಹುದು, ಅಜಾಕರ್ಣ (ಕುದುರೆ ಕಿವಿ), ದನಗಳ ಕೊಟ್ಟಿಗೆ ಅಥವಾ ಶಿವನ ಬಳಿ ; ಇವು ಪಿತೃಗಳಿಗೆ ಉತ್ತಮ ವಾದ ಜಾಗಗಳು, ಅವರಿಗೆ ದಕ್ಷಿಣ ದಿಕ್ಕು ಉತ್ತಮವು, ಎಡಗೈಕೆಳಗೆ ಯಜ್ಞೋಪವೀತ ಹಾಕಿಕೊಳ್ಳಬೇಕು, ಎಳ್ಳನ್ನು ತರ್ಪಣದಲ್ಲಿ ಕೊಡಬೇಕು.

ದತ್ತಂ ಸ್ವಧಾಂ ಪುರೋಧಾಯ ಪಿತ್ರ್ಯಾನ್ಪ್ರಷ್ಣಾನಿ ಸರ್ವದಾ ।
ದರ್ಭಾ ಮಾಷಷಷ್ಟಿಕಾನ್ನಂ ಗೋಕ್ಷೀರಂ ಮಧುಸರ್ಪಿಷೀ ॥ ೬೨ ॥

ಖಡ್ಗಲೋಹಾಮಿಷಂ ಚೈವಮನ್ನಂ ಶ್ಯಾಮಾಕಶಾಲಯಃ ।
ಯವನೀವಾರಮುದ್ಗೇಕ್ಷುಶುಕ್ಲಪುಷ್ಪಘೃತಾನಿ ವಾ ॥ ೬೩

ವಲ್ಲಭಾನಿ ಪ್ರಶಸ್ತಾನಿ ಪಿತ್ರ್ಯಾಣಾಮಿಹ ಸರ್ವದಾ ।
ದ್ವೇಷ್ಯಾಣಿ ಚ ಪ್ರವಕ್ಷ್ಯಾಮಿ ಶ್ರಾದ್ಧೇ ವರ್ಜ್ಯಾನಿ ಸರ್ವದಾ ॥ ೬೪ ॥

ಮಸೂರಶಣನಿಷ್ಪಾವರಾಜಮಾಷಕುಲತ್ಥಕಾಃ ।
ಪದ್ಮಬಿಲ್ವಾರ್ಕಧತ್ತೂರಪಾರಿಭದ್ರಾಟರೂಷಕಾಃ ॥ ೬೫ ॥

ನ ದೇಯಾಃ ಪಿತೃಕಾರ್ಯೇಷು ಪಯಶ್ಚಾಜಾವಿಕಂ ತಥಾ ।
ಕೋದ್ರವೋ ದಾರವರಟಾ ಕಪಿತ್ಥಮಧುಕಾತಸೀ ॥ ೬೬ ॥

---

೬೨-೬೩. ಅವರಿಗೆ ಸ್ವಧಾ ಎಂದು ಹೇಳುತ್ತಾ ದತ್ತಮಾಡಬೇಕು. ಅದು ಅವರನ್ನು ತೃಪ್ತಿಪಡಿಸುತ್ತದೆ, ದರ್ಭೆ, ಉದ್ದು, ಅರವತ್ತು ದಿನಕ್ಕೆ ಬರುವ ಭತ್ತದ ಅನ್ನ, ಗೋವಿನಹಾಲು, ತುಪ್ಪ, ಜೇನುತುಪ್ಪ, ಇವು ಅವರಿಗೆ ತೃಪ್ತಿಕರವಾಗುವುವು. ಸವಸೆ, ಭತ್ತದ ಅನ್ನಗಳು ಪ್ರಶಸ್ತಗಳು. ಯವ, ಶೂಕಧಾನ್ಯ, ಹೆಸರು, ಕಬ್ಬು. ಬಿಳಿ ಹೂ, ತುಪ್ಪಗಳು ಅವರಿಗೆ ಬೇಕಾದುವು. ಇವು ಪಿತೃಗಳಿಗೆ ಪ್ರೀತಿಯನ್ನುಂಟು ಮಾಡುವುವು ಮತ್ತು ಪ್ರಶಸ್ತವಾದುವು ಎಂದು ತಿಳಿ.

೬೪. ಆ ಪಿತೃಗಳಿಗೆ ಆಗದಿರುವುವನ್ನೂ, ಶ್ರಾದ್ಧದಲ್ಲಿ ಬಿಡುವುವನ್ನೂ ಹೇಳುತ್ತೇನೆ.

೬೫-೬೬. ಕಾಡುಗಡಲೆ, ಪುಂಡಿನಕಾಳು, ಅವರೆ, ಅಲಸಂದೆ, ಹುರುಳಿ, ಪದ್ಮ, ಬಿಲ್ವಪತ್ರೆ, ಎಕ್ಕ, ದತ್ತೂರಿ, ಹಾಲುವಾಣ, ಆಡುಸೋಗೆ, ಇವು ಪಿತೃಕಾರ್ಯದಲ್ಲಿ ನಿಷಿದ್ಧವಾದವುಗಳು. ಕುರಿ, ಆಡುಗಳ ಹಾಲನ್ನು ಶ್ರಾದ್ಧದಲ್ಲಿ ಉಪಯೋಗಿಸಬಾರದು. ಹಾರಕ, ಜಡೆಧಾನ್ಯ, ಬೇಲ, ಹಿಪ್ಪೆ, ಅಗಸೆ, ಇವನ್ನು ಐಶ್ವರ್ಯಾಪೇಕ್ಷಿಯು ಪಿತೃಗಳಿಗೆ ಕೊಡಬಾರದು.

ನಿತಾನ್ಯಪಿ ನ ದೇಯಾನಿ ಪಿತೃಭ್ಯಃ ಪ್ರಿಯಮಿಚ್ಛತಾ ।
ಪಿತೄನ್ಪ್ರೀಣಾತಿ ಯೋ ಭಕ್ತ್ಯಾ ತೇ ಪುನಃ ಪ್ರೀಣಯಂತಿ ತಂ ॥ ೬೭ ॥

ಯಚ್ಛಂತಿ ಪಿತರಃ ಪುಷ್ಟಿಂ ಸ್ವರ್ಗಾರೋಗ್ಯಂ ಪ್ರಜಾಫಲಂ ।
ದೇವಕಾರ್ಯಾದಪಿ ಪುನಃ ಪಿತೃಕಾರ್ಯಂ ವಿಶಿಷ್ಯತೇ ॥ ೬೮ ॥

ದೇವತಾನಾಂ ತು ಪಿತರಃ ಪೂರ್ವಮಾಪ್ಯಾಯನಂ ಸ್ಮೃತಂ ।
ಶೀಘ್ರಪ್ರಸಾದಾಸ್ತ್ವಕ್ರೋಧಾ ನಿಸ್ಸಂಗಾಃ ಸ್ಥಿರಸೌಹೃದಾಃ ॥ ೬೯ ॥

ಶಾಂತಾತ್ಮಾನಃ ಶೌಚಪರಾಃ ಸತತಂ ಪ್ರಿಯವಾದಿನಃ ।
ಭಕ್ತಾನುರಕ್ತಾಃ ಸುಖದಾಃ ಪಿತರಃ ಪರ್ವದೇವತಾಃ ॥ ೭೦ ॥

ಹವಿಷ್ಮತಾಮಾಧಿಪತ್ಯೇ ಶ್ರಾದ್ಧದೇವಃ ಸ್ಮೃತೋ ರವಿಃ ।
ಏತದ್ಧಿ ಸರ್ವಮಾಖ್ಯಾತಂ ಪಿತೃವಂಶಾನುಕೀರ್ತನಂ ॥ ೭೧ ॥

ಪುಣ್ಯಂ ಪವಿತ್ರಮಾಯುಷ್ಯಂ ಕೀರ್ತನೀಯಂ ನರೈಃ ಸದಾ ॥ ೭೨ ॥

---

೬೭. ಪಿತೃಗಳನ್ನು ಯಾವನು ತೃಪ್ತಿಪಡಿಸುತ್ತಾನೋ ಅವನನ್ನು ಮತ್ತೆ ಪಿತೃಗಳು ತೃಪ್ತಿಪಡಿಸುತ್ತಾರೆ.

೬೮. ಪಿತೃಗಳು ತೃಪ್ತರಾದರೆ ಪುಷ್ಟಿಯನ್ನೂ, ಸ್ವರ್ಗವನ್ನೂ, ಆರೋಗ್ಯವನ್ನೂ, ಪ್ರಜೆಗಳನ್ನೂ ಕೊಡುತ್ತಾರೆ, ದೇವರ ಕೆಲಸಕ್ಕಿಂತಲೂ ಪಿತೃಗಳ ಕೆಲಸವೇ ಹೆಚ್ಚು. ದೇವಕಾರ್ಯವನ್ನು ಬಿಟ್ಟರೂ ಪಿತೃಕಾರ್ಯವನ್ನು ಬಿಡಬಾರದು.

೬೯. ದೇವತೆಗಳಿಗಿಂತಲೂ ಮೊದಲು ಪಿತೃಗಳಿಗೆ ತೃಪ್ತಿಪಡಿಸಬೇಕು, ಇದು ಸಂಪ್ರದಾಯ, ಅವರು ಬೇಗ ಅನುಗ್ರಹಮಾಡುತ್ತಾರೆ, ಕೋಪವಿಲ್ಲ, ಸಹವಾಸಿಗಳಲ್ಲ. ಸ್ನೇಹವು ಯಾವಾಗಲೂ ಶಾಶ್ವತವಾದುದು.

೭೦. ಶಾಂತರು, ಶುಚಿಗಳು, ಯಾವಾಗಲೂ ಒಳ್ಳೆಯ ಮಾತನ್ನೇ ಆಡುತ್ತಾರೆ; ಭಕ್ತರಲ್ಲಿ ಅನುರಾಗವುಳ್ಳವರು; ಸುಖವನ್ನು ಕೊಡುವವರು; ಈ ಪಿತೃಗಳು ಪರ್ವಕಾಲದ ದೇವತೆಗಳು.

೭೧-೭೨. ಈ ಹವಿಷ್ಮಂತರಿಗೆ ಅಧಿಪತಿಯು ರವಿಯು, ಅವನೇ ಶ್ರಾದ್ಧದೇವನು, ಈ ಪಿತೃವಂಶವೆಲ್ಲವನ್ನೂ ಹೇಳಿದ್ದೇನೆ, ಇದು ಪುಣ್ಯ, ಪವಿತ್ರಕರವಾದುದು, ಆಯುಸ್ಸನ್ನೂ ಕೊಡುತ್ತದೆ, ಇದನ್ನು ಯಾವಾಗಲೂ ನರರು ಹೇಳುತ್ತಿರಬೇಕು.

॥ ಭೀಷ್ಮ ಉವಾಚ ॥

ಶ್ರುತ್ವೈತದಖಿಲಂ ಭೂಯಃ ಪರಾ ಭಕ್ತಿರುಪಸ್ಥಿತಾ ।
ಶ್ರಾದ್ಧಕಾಲಂ ವಿಧಿಂ ಚೈವ ಶ್ರಾದ್ಧಮೇವ ತಥೈವ ಚ ॥ ೭೩ ॥

ಶ್ರಾದ್ಧೇಷು ಭೋಜನೀಯಾ ಯೇ ಯೇ ಚ ವರ್ಜ್ಯಾ ದ್ವಿಜಾತಯಃ ।
ಕಸ್ಮಿನ್ವಾಸರಭಾಗೇ ತು ಪಿತೃಭ್ಯಃ ಶ್ರಾದ್ಧಮಾಚರೇತ್ ॥ ೭೪ ॥

ಅನ್ನಂ ದತ್ತಂ ಕಥಂ ಯಾತಿ ಶ್ರಾದ್ಧೇ ವೈ ಬ್ರಹ್ಮವಿತ್ತಮ ।
ವಿಧಿನಾ ಯೇನ ಕರ್ತವ್ಯಂ ಕಥಂ ಪ್ರೀಣಾತಿ ತಾನ್ಪಿತೄನ್ ॥ ೭೫ ॥

॥ ಪುಲಸ್ತ್ಯ ಉವಾಚ ॥

ಕುರ್ಯಾದಹರಹಃ ಶ್ರಾದ್ಧಮನ್ನಾದ್ಯೇನೋದಕೇನ ಚ ।
ಪಯೋಮೂಲಫಲೈರ್ವಾಪಿ ಪಿತೃಭ್ಯಃ ಪ್ರೀತಿಮಾವಹನ್ ॥ ೭೬ ॥

ನಿತ್ಯಂ ನೈಮಿತ್ತಿಕಂ ಕಾಮ್ಯಂ ತ್ರಿವಿಧಂ ಶ್ರಾದ್ಧಮುಚ್ಯತೇ ।
ನಿತ್ಯಂ ತಾವತ್ಪ್ರವಕ್ಷ್ಯಾಮಿ ಅರ್ಘ್ಯಾವಾಹನವರ್ಜಿತಂ ॥ ೭೭ ॥

ಅದೈವಂ ತದ್ವಿಜಾನೀಯಾತ್ಪಾರ್ವಣಂ ಪರ್ವಸು ಸ್ಮೃತಂ ।
ಪಾರ್ವಣಂ ತ್ರಿವಿಧಂ ಪ್ರೋಕ್ತಂ ಶೃಣು ಯತ್ನಾನ್ಮಹೀಪತೇ ॥ ೭೮ ॥

---

೭೩-೭೪. ಭೀಷ್ಮನು ಹೇಳಿದನು:—ಎಲೈ ಪುಲಸ್ತ್ಯನೇ, ಇದೆಲ್ಲವನ್ನೂ ಕೇಳಿ ಬಹು ಭಕ್ತಿಯುಂಟಾಯಿತು. ಶ್ರಾದ್ಧಕಾಲ, ಅದರ ವಿಧಿ, ಶ್ರಾದ್ಧದ ರೀತಿ, ಶ್ರಾದ್ಧದಲ್ಲಿ ಯಾರಿಗೆ ಊಟಮಾಡಿಸಬೇಕು ? ಯಾರನ್ನು ಬಿಡಬೇಕು ? ದಿನದ ಯಾವ ಭಾಗದಲ್ಲಿ ಪಿತೃಗಳಿಗೆ ಶ್ರಾದ್ಧಮಾಡಬೇಕು ?

೭೫. ಶ್ರಾದ್ಧದಲ್ಲಿ ಕೊಟ್ಟ ಅನ್ನವು ಪಿತೃಗಳಿಗೆ ಹೇಗೆ ಸೇರುತ್ತದೆ? ಯಾವ ವಿಧಿಯಿಂದ ಮಾಡಬೇಕು ? ಆ ಪಿತೃಗಳನ್ನು ಹೇಗೆ ತೃಪ್ತಿಪಡಿಸಬೇಕು ?

೭೬. ಪುಲಸ್ತ್ಯನು ಹೇಳಿದನು :—ಅನ್ನ ಮುಂತಾದವುಗಳಿಂದಲೂ, ನೀರಿನಿಂದಲೂ, ಹಾಲು, ಗೆಣಸು, ಹಣ್ಣುಗಳಿಂದಲೂ ಪಿತೃಗಳಿಗೆ ಪ್ರೀತಿಯನ್ನುಂಟು ಮಾಡುತ್ತಾ ಶ್ರಾದ್ಧಮಾಡಬೇಕು.

೭೭. ನಿತ್ಯ, ನೈಮಿತ್ತಿಕ, ಕಾಮ್ಯ ಎಂಬುದಾಗಿ ಶ್ರಾದ್ಧವು ಮೂರು ಬಗೆ, ಅವುಗಳಲ್ಲಿ ನಿತ್ಯವಾದುದನ್ನು ಹೇಳುತ್ತೇನೆ. ಅದರಲ್ಲಿ ಅರ್ಘ್ಯ, ಆವಾಹನಗಳಿರುವುದಿಲ್ಲ.

೭೮. ಆ ನಿತ್ಯಶ್ರಾದ್ಧಕ್ಕೆ ದೇವತೆಯಿಲ್ಲ. ಪರ್ವಕಾಲದಲ್ಲಿ ಮಾಡುವ ಶ್ರಾದ್ಧಕ್ಕೆ ಪಾರ್ವಣವೆಂದು ಹೆಸರು. ಪಾರ್ವಣಶ್ರಾದ್ಧವು ಮೂರುಬಗೆ. ಅದನ್ನು ಹೇಳುತ್ತೇನೆ ಕೇಳು

ಪಾರ್ವಣೇ ಯೇ ನಿಯೋಜ್ಯಾಸ್ತು ತಾನ್ ಶೃಣುಷ್ವ ನರಾಧಿಪ ।
ಪಂಚಾಗ್ನಿಃ ಸ್ನಾತಕಶ್ಚೈವ ತ್ರಿಸೌಪರ್ಣಃ ಷಡಂಗವಿತ್ ॥ ೭೯ ॥

ಶ್ರೋತ್ರಿಯಃ ಶ್ರೋತ್ರಿಯಸುತೋ ವಿಧಿವಾಕ್ಯವಿಶಾರದಃ ।
ಸರ್ವಜ್ಞೋ ವೇದವಾನ್ಮಂತ್ರೀ ಜ್ಞಾನವಂಶಕುಲಾನ್ವಿತಃ ॥ ೮೦ ॥

ತ್ರಿಣಾಚಿಕೇತಸ್ತ್ರಿಮಧುಃ ಶ್ರುತೇಷ್ವನ್ಯೇಷ್ವವಸ್ಥಿತಃ ।
ಪುರಾಣವೇತ್ತಾ ಬ್ರಹ್ಮಜ್ಞಃ ಸ್ವಾಧ್ಯಾಯೀ ಜಪತತ್ಪರಃ ॥ ೮೧ ॥

ಬ್ರಹ್ಮಭಕ್ತಃ ಪಿತೃಪರಃ ಸೂರ್ಯಭಕ್ತೋಽಥ ವೈಷ್ಣವಃ ।
ಬ್ರಾಹ್ಮಣೋ ಯೋಗವಿಚ್ಛಾಂತೋ ವಿದಿತಾತ್ಮಾತಿಶೀಲವಾನ್ ॥ ೮೨ ॥

ಶಿವಭಕ್ತಿಪರೋ ನಿತ್ಯಂ ಶ್ರಾದ್ಧೇ ಚಾರ್ಹತಿ ಕೇತನಂ ।
ಏತೇ ಭೋಜ್ಯಾಃ ಪ್ರಯತ್ನೇನ ವರ್ಜನೀಯಾನಿಮಾನ್ ಶೃಣು ॥ ೮೩ ॥

---

೭೯-೮೦. ಪಾರ್ವಣಶ್ರಾದ್ಧದಲ್ಲಿ ಯಾರಿಗೆ ನಿಮಂತ್ರಣಕ್ಕೆ ಹೇಳಬೇಕೆಂಬುದನ್ನು ಹೇಳುತ್ತೇನೆ, ಕೇಳು. ಪಂಚಾಗ್ನಿ ತಪಸ್ಸನ್ನು ಮಾಡುವವನು, ಸ್ನಾತಕ-ತ್ರಿಸುಪರ್ಣವನ್ನು ಹೇಳುವವನು, ಷಡಂಗಗಳನ್ನು ಅಧ್ಯಯನ ಮಾಡಿದವನು, ಶ್ರೋತ್ರಿಯ (ವೇದಾಧ್ಯಾಯಿ), ಶ್ರೋತ್ರಿಯನ ಮಗ, ವೇದವಾಕ್ಯದಲ್ಲಿ ಪಂಡಿತನಾದವನು, ಸರ್ವಜ್ಞನಾದವನು, ವೇದವನ್ನು ಓದಿದವನು, ಮಂತ್ರವನ್ನು ಬಲ್ಲವನು, ವಂಶವನ್ನೂ ಕುಲವನ್ನೂ ತಿಳಿದು ನಾನು ಯೋಗ್ಯನೆಂದು ತಿಳಿದಿರುವವನು: ಇಂತಹವರಿಗೆ ಹೇಳಬೇಕು.

೮೧. ತ್ರಿಣಾಚಿಕೇತವೆಂಬ ವೇದವನ್ನು ಓದಿದವನು, ತ್ರಿಮಧುವನ್ನು ಹೇಳುವವನು, ಬೇರೆಯಾದ ಶ್ರುತಿಯನ್ನು ಓದಿರುವವನು, ಪುರಾಣವನ್ನು ಬಲ್ಲವನು, ಬ್ರಹ್ಮನನ್ನು ತಿಳಿದು ಬ್ರಹ್ಮಜ್ಞಾನಿಯಾದವನು, ವೇದವನ್ನು ಓದುತ್ತಿರುವವನು, ಜಪವನ್ನು ಮಾಡುತ್ತಿರುವವನು ; ಇವರನ್ನು ಹೇಳಬೇಕು.

೮೨. ವೇದದಲ್ಲಿ ಭಕ್ತಿಯುಳ್ಳವನು, ಪಿತೃಗಳಲ್ಲಿ ಆಸಕ್ತಿಯುಳ್ಳವನು, ಸೂರ್ಯನಲ್ಲಿ ಭಕ್ತಿಯುಳ್ಳವನು, ವಿಷ್ಣುಭಕ್ತನು, ಬ್ರಾಹ್ಮಣನು, ಯೋಗವನ್ನು ಬಲ್ಲವನು, ಶಾಂತನಾಗಿರುವವನು, ಆತ್ಮಜ್ಞಾನಿಯು, ಶೀಲವಂತನು ; ಇಂತಹವನಿಗೆ ಹೇಳಬೇಕು.

೮೩. ಶಿವಭಕ್ತಿಯುಳ್ಳವನು ; ಇಂತಹವರು ಶ್ರಾದ್ಧದಲ್ಲಿ ನಿಮಂತ್ರಣಕ್ಕೆ ಯೋಗ್ಯರಾಗಿರುತ್ತಾರೆ. ಇವರನ್ನು ಪ್ರಯತ್ನಪಟ್ಟು ಕರೆದು ಭೋಜನಮಾಡಿಸಬೇಕು. ಬಿಡತಕ್ಕವರನ್ನು ಹೇಳುತ್ತೇನೆ ಕೇಳು.

**ಪತಿತಸ್ತತ್ಸುತಃ ಕ್ಲೀಬಃ ಪಿಶುನೋಽತ್ಯಂತರೋಗವಾನ್ ।**
**ಸರ್ವೇ ತೇ ಶ್ರಾದ್ಧಕಾಲೇ ತು ತ್ಯಾಜ್ಯಾ ವೈ ಧರ್ಮದರ್ಶಿಭಿಃ ॥ ೮೪ ॥**

**ಪೂರ್ವೇದ್ಯುರಪರೇದ್ಯುರ್ವಾ ವಿನೀತಾಂಶ್ಚ ನಿಮಂತ್ರಯೇತ್ ।**
**ನಿಮಂತ್ರಿತಾಂಶ್ಚ ಪಿತರ ಉಪತಿಷ್ಠಂತಿ ತಾನ್ ದ್ವಿಜಾನ್ ॥ ೮೫ ॥**

**ವಾಯುಭೂತಾ ನಿಗಚ್ಛಂತಿ ತಥಾಸೀನಾನುಪಾಸತೇ ।**
**ದಕ್ಷಿಣಂ ಜಾನುಮಾಲಭ್ಯ ತಮೇವಾನುನಿಮಂತ್ರಿತಃ ॥ ೮೬ ॥**

**ಏವಂ ನಿಮಂತ್ರ್ಯ ಶ್ರಾದ್ಧೇ ತು ನಿಯಮಂ ಪೈತೃಕಂ ವಿದುಃ ।**
**ಅಕ್ರೋಧನೈಃ ಶೌಚಪರೈಃ ಸತತಂ ಬ್ರಹ್ಮವಾದಿಭಿಃ ॥ ೮೭ ॥**

**ಭವಿತವ್ಯಂ ಭವದ್ಭಿಶ್ಚ ಮಯಾ ಚ ಶ್ರಾದ್ಧಕರ್ಮಣಿ ।**
**ಪಿತೃಯಜ್ಞಂ ತು ನಿರ್ವರ್ತ್ಯ ತರ್ಪಣಾಖ್ಯಂ ತು ಯೋಽಗ್ನಿಮಾನ್ ॥ ೮೮ ॥**

---

೮೪. ಪತಿತನಾದವನು, ಅವನ ಮಗ, ನಪುಂಸಕ, ಚಾಡಿಕೋರ, ಜಡ ರೋಗಿಷ್ಠ ; ಇವರನ್ನು ಶ್ರಾದ್ಧದಲ್ಲಿ ಬಿಟ್ಟುಬಿಡಬೇಕು.

೮೫. ಹಿಂದಿನ ದಿನವಾಗಲಿ, ಅದರ ಹಿಂದಿನ ದಿನವಾಗಲಿ ವಿನಯವಂತರಾದ ಬ್ರಾಹ್ಮಣರಿಗೆ ನಿಮಂತ್ರಣಕ್ಕೆ ಹೇಳಬೇಕು, ನಿಮಂತ್ರಣಕ್ಕೆ ಹೇಳಿರುವ ಬ್ರಾಹ್ಮಣರನ್ನು ಪಿತೃಗಳು ಸೇರಿಕೊಳ್ಳುತ್ತಾರೆ.

೮೬. ಪಿತೃಗಳು ವಾಯುವಿನ ರೂಪದಿಂದ ಆ ನಿಮಂತ್ರಿತರನ್ನು ಹೊಂದುತ್ತಾರೆ. ಅವರನ್ನು ಬಲಗಾಲನ್ನು ಹಿಡಿದು ನಮಸ್ಕರಿಸಿ ಮತ್ತೆ ನಿಮಂತ್ರಣ ಮಾಡಬೇಕು.

೮೭. ಈ ರೀತಿ ಶ್ರಾದ್ಧದಲ್ಲಿ ಬ್ರಾಹ್ಮಣರನ್ನು ಕರೆದು ಪೈತೃಕವಾದ ನಿಯಮವನ್ನು ತಿಳಿಸಬೇಕು, ಕೋಪವಿಲ್ಲದೆ, ಶುಚಿಗಳಾಗಿ, ಯಾವಾಗಲೂ ಬ್ರಹ್ಮದ ನಿಯಮವನ್ನು ಹೇಳುತ್ತಾ ಈ ಶುದ್ಧಕರ್ಮದಲ್ಲಿ ನೀವೂ ನಾವೂ ಇರಬೇಕು ಎಂದು ತಿಳಿಸಬೇಕು.

೮೮. ಪಿತೃಯಜ್ಞ ಎಂದರೆ ಶ್ರಾದ್ಧವನ್ನು ಅಗ್ನಿಯಲ್ಲಿ ಮಾಡಿಕೊಂಡು ನಂತರ ತರ್ಪಣವನ್ನು ಕೊಡಬೇಕು. ಆಹಾರರೂಪವಾದ ಪಿಂಡಗಳನ್ನು ಕೂಡ ಸ್ಥಾಲೀಪಾತ್ರದಲ್ಲಿ ಕೊಡಬೇಕು.

ಪಿಂಡಾನ್ವಾಹಾರ್ಯಕಂ ಕೃತ್ವಾ ಶ್ರಾದ್ಧಕಾಲೇ ಕ್ಷಣಯೋಃ ತದಾ ।
ಗೋಮಯೇನಾನುಲಿಪ್ತೇನ ದಕ್ಷಿಣಪ್ರವಣೇ ಸ್ಥಲೇ ॥ ೮೯ ॥

ಶ್ರಾದ್ಧಂ ಸಮಾರಭೇತ್ತತ್ರ ಗೋಷ್ಠೇ ವಾ ಜಲಸಂನಿಧೌ ।
ಅಗ್ನಿಮಾನ್ನಿರ್ವಪೇತ್ಪಿತ್ರ್ಯಂ ಚರುಂ ವಾ ಸಕ್ತುಮುಷ್ಟಿಭಿಃ ॥ ೯೦ ॥

ತ್ರಿಭಿರ್ವಾ ನಿರ್ವಪಾಮೀತಿ ಸರ್ವಂ ದಕ್ಷಿಣತೋ ನ್ಯಸೇತ್ ।
ಅಭಿಘಾರ್ಯ ತತಃ ಕುರ್ಯಾನ್ನಿರ್ವಾಪತ್ರಯಮಗ್ರತಃ ॥ ೯೧ ॥

ತೇ ವಿತಸ್ತ್ಯಾಯತಾಃ ಕಾರ್ಯಾಶ್ಚತುರಂಗುಲವಿಸ್ತೃತಾಃ ।
ದರ್ವೀತ್ರಯಂ ಚ ಕುರ್ವೀತ ಖಾದಿರಂ ರಜತಾನ್ವಿತಂ ॥ ೯೨ ॥

ರತ್ನಿಮಾತ್ರಂ ಪರಿಶ್ಲಕ್ಷ್ಣಂ ಹಸ್ತಾಕಾರಾಗ್ರಮುತ್ತಮಂ ।
ಉದಕ್ಪಾತ್ರಾಣಿ ಕಾಂಸ್ಯಂ ಚ ಮೇಕ್ಷಣಂ ಚ ಸಮಿತ್ಕುಶಂ ॥ ೯೩ ॥

---

೮೯-೯೦. ಹಸುವಿನ ಸಗಣಿಯನ್ನು ಹಾಕಿ ಸಾರಿಸಿದ ದಕ್ಷಿಣದ ಕಡೆಯ ಸ್ಥಳದಲ್ಲಿ ದನಗಳ ಕೊಟ್ಟಿಗೆಯಲ್ಲಿ, ಇಲ್ಲವೇ ನೀರಿನ ತಡಿಯಲ್ಲಿ ಶ್ರಾದ್ಧವನ್ನು ಆರಂಭಿಸಬೇಕು. ಅಗ್ನಿಪ್ರತಿಷ್ಠಾಪನೆಯನ್ನು ಮಾಡಿಕೊಂಡು ಪಿತೃಸಂಬಂಧವಾದ ಚರುವನ್ನು ಅಥವಾ ಹಿಟ್ಟನ್ನು ಮುಷ್ಟಿಯಿಂದ ಹೋಮಮಾಡಬೇಕು.

೯೧. ಹೋಮಮಾಡುತ್ತೇನೆಂದು ಮೂರು ಬಾರಿ ಹೇಳಿ, ದಕ್ಷಿಣ ದಿಕ್ಕಿನಲ್ಲಿ ಇಡಬೇಕು. ಅನಂತರ ತುಪ್ಪದಿಂದ ಅಭಿಘಾರಮಾಡಿ ಮೂರು ಬಾರಿ ಹೋಮ ಮಾಡಬೇಕು.

೯೨. ಕಗ್ಗಲಿಮರದಲ್ಲಿ ಬೆಳ್ಳಿಯಕಟ್ಟನ್ನು ಹಾಕಿಸಿ ಮೂರು ಸೌಟುಗಳನ್ನು ಮಾಡಿಸಬೇಕು. ಅವು ನಾಲ್ಕು ಅಂಗುಲ ಅಗಲವಾಗಿಯೂ, ಅದಕ್ಕೆ ಸರಿಯಾದ ಉದ್ದವಾಗಿಯೂ ಇರಬೇಕು.

೯೩. ಮೊಳದುದ್ದಕ್ಕೆ ಹಸ್ತಾಕಾರವಾಗಿ ಅಗ್ರವುಳ್ಳ ತುಪ್ಪಹಾಕುವುದಕ್ಕೆ ಅನುಕೂಲವಾಗಿರುವ ಆ ಸೌಟನ್ನು ಚೆನ್ನಾಗಿ ಮಾಡಿಸಬೇಕು.

೯೪-೯೫. ಅಗ್ನಿಗಿಂತ ಉತ್ತರದಿಕ್ಕಿಗೆ ಪಾತ್ರೆಗಳನ್ನಿಡಬೇಕು. ಒಂದು ಕಂಚಿನ ಪಾತ್ರೆ, ಮೇಕ್ಷಣ, ಸಮಿತ್ತು, ಕುಶ, ತಿಲಪಾತ್ರ, ಬಟ್ಟೆ. ಗಂಧ, ಧೂಪ, ಲೇಪನ

**ತಿಲಪಾತ್ರಾಣಿ ಸದ್ವಾಸೋ ಗಂಧಧೂಪಾನುಲೇಪನಂ ।**
**ಆಹರೇದಪಸವ್ಯಂ ತು ಸರ್ವಂ ದಕ್ಷಿಣತಃ ಶನೈಃ ॥ ೯೪ ॥**

**ಏವಮಾಸಾದ್ಯ ತತ್ಸರ್ವಂ ಭವನಸ್ಯ ಪುರೋ ಭುವಿ ।**
**ಗೋಮಯೇನಾನುಲಿಪ್ತಾಯಾಂ ಗೋಮೂತ್ರೇಣ ತು ಮಂಡಲಂ ॥ ೯೫ ॥**

**ಸಾಕ್ಷತಾಭಿಃ ಸಪುಷ್ಪಾಭಿರದ್ಭಿಃ ಸವ್ಯಾಪಸವ್ಯವತ್ ।**
**ವಿಪ್ರಾಣಾಂ ಕ್ಷಾಲಯೇತ್ಪಾದಾವಭಿವಂದ್ಯ ಪುನಃ ಪುನಃ ॥ ೯೬ ॥**

**ಆಸನೇಷೂಪಕ್ಲೃಪ್ತೇಷು ದರ್ಭವತ್ಸು ವಿಧಾನತಃ ।**
**ಉಪಸ್ಪೃಷ್ಟೋದಕಾನ್ವಿಪ್ರಾನುಪವೇಶ್ಯಾನುಮಂತ್ರಯೇತ್ ॥ ೯೭ ॥**

**ದ್ವೌ ದೇವೇ ಪಿತೃಕೃತ್ಯೇ ತ್ರೀನೇಕೈಕಮುಭಯತ್ರ ವಾ ।**
**ಭೋಜಯೇದೀಶ್ವರೋ ಪೀಹ ನ ಕುರ್ಯಾದ್ವಿಸ್ತರಂ ಬುಧಃ ॥ ೯೮ ॥**

---

ಪದಾರ್ಥ, ಇವೆಲ್ಲವನ್ನೂ ಪ್ರಾಚೀನವೀತಿಯಲ್ಲಿ ಬಲದಿಂದ ಎಡಕ್ಕೆ ತೆಗೆದುಕೊಳ್ಳಬೇಕು. ಪಾತ್ರಾಸಾದನೆ ಮಾಡಿ ಅನಂತರ ಮನೆಯ ಮುಂದಿನ ಅಂಗಳಕ್ಕೆ ಹೋಗಬೇಕು.

೯೫-೯೬. ಅಲ್ಲಿ ಹಸುವಿನ ಸಗಣಿಯಿಂದಲೂ ಗಂಜಲದಿಂದಲೂ ಮಂಡಲವನ್ನು ಮಾಡಬೇಕು. ಅಕ್ಷತೆ ಹೂಗಳಿಂದ ವಿಶ್ವೇದೇವರ ಮಂಡಲವನ್ನು ಸವ್ಯದಿಂದಲೂ, ಪಿತೃಮಂಡಲವನ್ನು ಅಪಸವ್ಯದಿಂದಲೂ ಪೂಜಿಸಬೇಕು. ಅನಂತರ ಆ ಮಂಡಲಗಳಲ್ಲಿ ಅವರವರನ್ನು ನಿಲ್ಲಿಸಿ ನಮಸ್ಕಾರಗಳನ್ನು ಮಾಡುತ್ತಾ ಕಾಲನ್ನು ತೊಳೆಯಬೇಕು.

೯೭. ವಿಶ್ವೇದೇವರಿಗೆ ಪೂರ್ವಮುಖವಾಗಿಯೂ, ಪಿತೃಗಳಿಗೆ ಉತ್ತರಮುಖವಾಗಿಯೂ ಆಸನವನ್ನು ಹಾಕಿ, ದರ್ಭಾಸನವನ್ನು ವಿಧಿವತ್ತಾಗಿ ಕೊಡಬೇಕು. ಆ ಬ್ರಾಹ್ಮಣರು ಆಚಮನಮಾಡಿದನಂತರ ಅವರನ್ನು ಅಲ್ಲಲ್ಲಿ ಕೂರಿಸಿ ಆವಾಹನೆ ಮಾಡಬೇಕು.

೯೮. ವಿಶ್ವೇದೇವಸ್ಥಾನದಲ್ಲಿ ಇಬ್ಬರನ್ನೂ, ಪಿತೃಸ್ಥಾನದಲ್ಲಿ ಮೂವರನ್ನೂ ನಿಮಂತ್ರಿಸಬೇಕು. ಅದಿಲ್ಲದಿದ್ದರೆ ವಿಶ್ವೇದೇವರಿಗೆ ಒಬ್ಬರು, ಪಿತೃಗಳಿಗೊಬ್ಬರು ಈ ರೀತಿ ಇಬ್ಬರನ್ನಾದರೂ ಹೇಳಬಹುದು. ಎಷ್ಟೇ ಧನಿಕನಾದರೂ, ಶ್ರದ್ಧೆಯುಳ್ಳವನಾದರೂ ಇವಕ್ಕಿಂತ ಹೆಚ್ಚು ಜನಕ್ಕೆ ಹೇಳಕೂಡದು.

ದೈವಪೂರ್ವಂ ನಿವೇದ್ಯಾಥ ವಿಪ್ರಾನರ್ಘ್ಯಾದಿನಾ ಬುಧೈಃ ।
ಅಗ್ನೌ ಕುರ್ಯಾದನುಜ್ಞಾತೋ ವಿಪ್ರೈರ್ಪಿಪ್ರೋ ಯಥಾವಿಧಿ ॥ ೯೯ ॥

ಸ್ವಗೃಹ್ಯೋಕ್ತೇನ ವಿಧಿನಾ ಕಾಲೇ ಕುರ್ಯಾತ್ಸಮಂತತಃ ।
ಅಗ್ನೀಷೋಮಾಯ ಸಾಜ್ಯಂ ತು ಕುರ್ಯಾದಾಪ್ಯಾಯನಂ ಬುಧಃ ॥ ೧೦೦ ॥

ಆಪ್ಯಾಯನಂ ಕೃತಂ ತೇನ ಯ ಏವಾಗ್ನಿರ್ದ್ವಿಜೋತ್ತಮಃ ।
ಯಜ್ಞೋಪವೀತೀ ನಿರ್ವರ್ತ್ಯ ತತಃ ಪರ್ಯುಕ್ಷಣಾದಿಕಂ ॥ ೧೦೧ ॥

ಪ್ರಾಚೀನಾವೀತಿನಾ ಕಾರ್ಯಮೇತತ್ಸರ್ವಂ ವಿಜಾನತಾ ।
ಲಬ್ಧ್ವಾ ತಸ್ಮಾದ್ವಿಶೇಷೇಣ ಪಿಂಡಾನ್ಕುರ್ಯಾತ್ತಥೋದಕಂ ॥ ೧೦೨ ॥

ದದ್ಯಾದುದಕಪಾತ್ರೈಸ್ತು ಸತಿಲಂ ಸವ್ಯಪಾಣಿನಾ ।
ಪ್ರದದ್ಯಾತ್ಸರ್ವಯತ್ನೇನ ದಮಯುಕ್ತೋ ವಿಮತ್ಸರಃ ॥ ೧೦೩ ॥

ವಿಧಾಯ ಲೇಖಾಂ ಯತ್ನೇನ ನಿರ್ವಪೇದವನೇಜನಂ ।
ದಕ್ಷಿಣಾಭಿಮುಖಃ ಕುರ್ಯಾತ್ತತೋ ದರ್ಭಾನ್ನಿಧಾಯ ವೈ ॥ ೧೦೪ ॥

---

೯೯. ವಿಶ್ವೇದೇವರಿಗೆ ಮೊದಲು, ಪಿತೃಗಳಿಗೆ ಅನಂತರ, ಈ ರೀತಿ ಆ ಬ್ರಾಹ್ಮಣರನ್ನು ಅರ್ಘ್ಯಾದಿಗಳಿಂದ ಪೂಜಿಸಬೇಕು. ಅನಂತರ ಆ ಬ್ರಾಹ್ಮಣರ ಅನುಜ್ಞೆಯನ್ನು ಪಡೆದು ಅಗ್ನಿಯಲ್ಲಿ ವಿಧಿಪೂರ್ವಕವಾಗಿ ಹೋಮಮಾಡಬೇಕು.

೧೦೦. ಮನುಷ್ಯನು ಸ್ವಶಾಖೆಯಲ್ಲಿ ಹೇಳಿರುವ ವಿಧಿಯಿಂದ ಸಕಾಲದಲ್ಲಿ ಎಲ್ಲವನ್ನೂ ಮಾಡಬೇಕು. ಅಗ್ನೀಷೋಮರೆಂಬ ದೇವತೆಗಳಿಗೆ ತುಪ್ಪದಿಂದ ಹೋಮ ಮಾಡಿ ತೃಪ್ತಿಪಡಿಸಬೇಕು.

೧೦೧. ಸವ್ಯದಿಂದ ಅಗ್ನಿಗೆ ಹೋಮಮಾಡಿ ತೃಪ್ತಿಪಡಿಸಿ, ಅನಂತರ ಪ್ರಾಚೀನಾವೀತಿಯಿಂದ ಚುಮುಕಿಸುವಿಕೆಯೇ ಮುಂತಾದುವನ್ನು ಮಾಡಬೇಕು.

೧೦೨-೧೦೩. ಇವೆಲ್ಲವನ್ನೂ ಮಾಡಿಕೊಂಡು ಪಿಂಡಗಳನ್ನು ಕೊಡಬೇಕು. ಆವಾಹಿತವಾಗಿರುವ ನೀರಿನ ಪಾತ್ರೆಯಿಂದ ಬ್ರಾಹ್ಮಣನ ಬಲಗೈಯಲ್ಲಿ ಏಕಾಗ್ರತೆಯಿಂದ ಕಾಮಕ್ರೋಧಗಳನ್ನು ಬಿಟ್ಟು ಅರ್ಘ್ಯವನ್ನು ಕೊಡಬೇಕು.

೧೦೪-೧೦೫. ಅನಂತರ ಉತ್ತರದಿಂದ ದಕ್ಷಿಣಕ್ಕೆ ಗೆರೆಯನ್ನು ಎಳೆಯಬೇಕು. ಅದರ ಮೇಲೆ ನೀರನ್ನು ಚುಮುಕಿಸಬೇಕು. ಅದರ ಮೇಲೆ ದರ್ಭೆಯನ್ನಿಡಬೇಕು.

ನಿಧಾಯ ಪಿಂಡಮೇಕೈಕಂ ಸರ್ವಂ ದರ್ಭೋಪರಿ ಕ್ರಮಾತ್ ।
ನಿರ್ವಪೇತ್ತ್ವಥ ದರ್ಭೇಷು ನಾಮಗೋತ್ರಾನುಕೀರ್ತನೈಃ ॥ ೧೦೫ ॥

ತೇಷು ದರ್ಭೇಷು ತಂ ಹಸ್ತಂ ವಿಮೃಜ್ಯಾಲ್ಲೇಪಭಾಗಿನಾಂ ।
ತಥೈವ ಚ ಜಪಂ ಕುರ್ಯಾತ್ಪುನಃ ಪ್ರತ್ಯವನೇಜನಂ ॥ ೧೦೬ ॥

ಜಲಯುಕ್ತಂ ನಮಸ್ಕೃತ್ಯ ಗಂಧಧೂಪಾರ್ಚನಾದಿಭಿಃ ।
ಏವಮಾವಾಹ್ಯ ತತ್ಸರ್ವಂ ವೇದಮಂತ್ರೈರ್ಯಥೋದಿತೈಃ ॥ ೧೦೭ ॥

ಏಕಾಗ್ನೇರೇಕ ಏವಾದ್ಭಿರ್ನಿರ್ವಪೇದ್ದರ್ವಿಕಾಂ ತಥಾ ।
ತತಃ ಕೃತ್ವಾ ನಮೋ ದದ್ಯಾತ್ಪಿತೃಭ್ಯಸ್ತು ಕುಶಾನ್ಬುಧಃ ॥ ೧೦೮ ॥

ತದ್ವತ್ಪಿಂಡಾದಿಕಂ ಕುರ್ಯಾದಾವಾಹನವಿಸರ್ಜನಂ ।
ತತೋ ಗೃಹೀತ್ವಾ ಪಿಂಡೇಭ್ಯೋ ಮಾತ್ರಾಃ ಸರ್ವಾಃ ಕ್ರಮೇಣ ತು ॥

---

ಅವರ ಮೇಲೆ ಹೆಸರು, ಗೋತ್ರರೂಪಗಳನ್ನು ಹೇಳಿ ಪಿಂಡವನ್ನು ಕ್ರಮವಾಗಿ ಇಡಬೇಕು.

೧೦೬. ಆ ದರ್ಭೆಗಳ ಮೇಲೆ ಲೇಪಭಾಗಿಗಳು ಆಹಾರವನ್ನು ಹೊಂದಲು ಕೈಯನ್ನು ತಿಕ್ಕಿ ಹಾಕಬೇಕು. ಅನಂತರ ಮಂತ್ರ-ಜಪವನ್ನು ಮಾಡಿ ಮತ್ತೆ ನೀರನ್ನು ಅಪಸವ್ಯದಿಂದ ಹಾಕಬೇಕು.

೧೦೭. ನೀರನ್ನು ಹಾಕಿದನಂತರ ನಮಸ್ಕರಿಸಿ ಗಂಧ-ಧೂಪ-ದೀಪಗಳಿಂದ ಪೂಜಿಸಬೇಕು. ಈ ರೀತಿ ಯೋಗ್ಯವಾದ ವೇದಮಂತ್ರಗಳಿಂದ ಆವಾಹನೆ ಮಾಡಬೇಕು.

೧೦೮. ಅಗ್ನಿಗೆ ಆ ದರ್ಭೆಗಳಲ್ಲಿ ಒಂದನ್ನು ಹಾಕಬೇಕು. ಹಾಗೆಯೇ ನೀರಿನ ಪಾತ್ರೆಗಳನ್ನು ಚೆಲ್ಲಬೇಕು. ಅನಂತರ ಆ ದರ್ಭೆಗಳನ್ನು ಅಭಿಮಂತ್ರಿಸಿ, ಆ ದರ್ಭೆಯನ್ನು ಎರಡು ಭಾಗ ಮಾಡಿಕೊಂಡು ಒಂದು ಭಾಗವನ್ನು ಪಿತೃಗಳಿಗೆ ಕೊಡಬೇಕು.

೧೦೯-೧೧೦. ಆ ಪಿತೃಗಳ ಪಾತ್ರೆಗೆ ಮಾಡಿದಂತೆಯೇ ಪಿಂಡಗಳಿಗೂ ಆವಾಹನೆ, ವಿಸರ್ಜನೆಗಳನ್ನು ಮಾಡಬೇಕು. ಪಿಂಡಗಳಿಗೋಸ್ಕರ ಕೊಂಚ ಭಾಗ

ತಾನೇವ ವಿಪ್ರಾನ್ಪ್ರಥಮಮಾಶಯೇದ್ಯತ್ನತೋ ನರಃ ।
ಯಸ್ಮಾದತ್ರಾಹಿತಾ ಮಾತ್ರಾ ಭಕ್ಷಯಂತಿ ದ್ವಿಜಾತಯಃ ॥ ೧೧೦ ॥

ಅನ್ವಾಹಾರ್ಯಕಮಿತ್ಯುಕ್ತಂ ತಸ್ಮಾತ್ತಚ್ಚಂದ್ರಸಂಕ್ಷಯೇ ।
ಪೂರ್ವಂ ದತ್ವಾ ತು ಹಸ್ತೇನ ಸಪವಿತ್ರಂ ತಿಲೋದಕಂ ॥ ೧೧೧ ॥

ತತ್ಪಿಂಡಾಗ್ರೇ ಪ್ರಯಚ್ಛೇತ ಸ್ವಧೈಷಾಮಸ್ತ್ವಿತಿ ಬ್ರುವನ್ ।
ವರ್ಣಯನ್ಭೋಜಯೇದ್ದತ್ತಮಿಷ್ಟಂ ಪೂತಂ ಚ ಸರ್ವದಾ ॥ ೧೧೨ ॥

ವರ್ಜಯೇತ್ಕ್ರೋಧಪರತಾಂ ಸ್ಮರನ್ನಾರಾಯಣಂ ಹರಿಂ ।
ತೃಪ್ತಾನ್ ಜ್ಞಾತ್ವಾ ಪುನಃ ಕುರ್ಯಾದ್ವಿಕಿರಂ ಸಾರ್ವವರ್ಣಿಕಂ ॥ ೧೧೩ ॥

ನಿಧೃತ್ಯ ಸೋದಕಂ ತ್ವನ್ನಂ ಸತಿಲಂ ಪ್ರಕ್ಷಿಪೇದ್ಭುವಿ ।
ಆಚಾಂತೇಷು ಪುನರ್ದದ್ಯಾಜ್ಜಲಂ ಪುಷ್ಪಾಕ್ಷತೋದಕಂ ॥ ೧೧

---

ಅನ್ನವನ್ನು ತೆಗೆದಿಟ್ಟು, ಆ ಅನ್ನವನ್ನು ಬ್ರಾಹ್ಮಣರಿಗೆ ಮೊದಲು ಬಡಿಸಿ ತಿನ್ನಿಸಬ ಇಲ್ಲಿಟ್ಟ ಭಾಗವನ್ನು ಬ್ರಾಹ್ಮಣರು ತಿನ್ನಬೇಕು.

೧೧೧. ಹಾಗೆ ಬ್ರಾಹ್ಮಣರು ತಿನ್ನುವುದರಿಂದ ಇದು ಚಂದ್ರಗ್ರಹಣವಲ್ಲಿ ಕೂಡ ಅನ್ವಾಹಾರ್ಯಕವೆಂದು ಹೇಳಿಸಿಕೊಳ್ಳುತ್ತದೆ (ಅನುಸರಿಸಿ ಮಾಡಿದುದು)

೧೧೨. ಬ್ರಾಹ್ಮಣರ ಕೈಯಲ್ಲಿ ಮೊದಲು ಪವಿತ್ರವನ್ನು ಕೊಟ್ಟು ಅನಂತರ ಕೈಯಿಂದ ತಿಲೋದಕವನ್ನು ಕೊಟ್ಟು ಸ್ವಧೆಯಾಗಲಿ ಎನ್ನಬೇಕು. ಅನಂತರ ಅವರಿಗೆ ಇಷ್ಟವಾದುದನ್ನು ಬಡಿಸುತ್ತಾ ಆ ಪದಾರ್ಥಗಳನ್ನು ವರ್ಣಿಸುತ್ತಿರಬೇಕು.

೧೧೩. ಕೋಪ ಮೊದಲಾದುವನ್ನು ಬಿಡಬೇಕು. ನಾರಾಯಣನನ್ನು ಸ್ಮರಿಸುತ್ತಿರಬೇಕು. ಆ ಬ್ರಾಹ್ಮಣರು ತೃಪ್ತರಾದರೆಂದು ತಿಳಿದ ಮೇಲೆ ಎಲ್ಲಾ ವರ್ಣದವರೂ ಉತ್ತಮವಾದ ವಿಕರವನ್ನು ಕೊಡಬೇಕು.

೧೧೪. ನೀರಿನೊಡನೆ ಅನ್ನವನ್ನು ಹಿಡಿದುಕೊಂಡು ಎಳ್ಳನ್ನು ಸೇರಿಸಿಕೊಂಡು ನೆಲದಮೇಲೆ ಹಾಕಬೇಕು. ಬ್ರಾಹ್ಮಣರೆದ್ದು ಕೈತೊಳೆದುಕೊಂಡು ಆಚಮನಮಾಡಿದ ಮೇಲೆ ಅವರಿಗೆ ಹಸ್ತಶುದ್ಧಿಗೆ ನೀರನ್ನು ಹೂ-ಗಂಧ-ಅಕ್ಷತೆಗಳನ್ನೂ ಕೊಡಬೇಕು.

ಸ್ವಧಾವಾಚನಕಂ ಸರ್ವಂ ಪಿಂಡೋಪರಿ ಸಮಾಚರೇತ್ ।
ದೇವಾದ್ಯಂತಂ ಪ್ರಕುರ್ವೀತ ಶ್ರಾದ್ಧನಾಶೋಽನ್ಯಥಾ ಭವೇತ್ ॥ ೧೧೫ ॥

ವಿಸರ್ಜ್ಯ ವಿಪ್ರಾನ್ಪ್ರಣತಸ್ತೇಷಾಂ ಕೃತ್ವಾ ಪ್ರದಕ್ಷಿಣಂ ।
ದಕ್ಷಿಣಾಂ ದಿಶಮಾಕಾಂಕ್ಷನ್ಪಿತ್ರ್ಯಾನುದ್ದಿಶ್ಯ ಮಾನವಃ ॥ ೧೧೬ ॥

ದಾತಾರೋ ನೋಽಭಿವರ್ಧಂತಾಂ ವೇದಾಃ ಸಂತತಿರೇವ ಚ ।
ಶ್ರದ್ಧಾ ಚ ನೋ ಮಾ ವ್ಯಗಮದ್ಬಹು ದೇಯಂ ಚ ನೋಽಸ್ತ್ವಿತಿ ॥ ೧೧೭ ॥

ಅನ್ನಂ ಚ ನೋ ಬಹು ಭವೇದತಿಥೀಂಶ್ಚ ಲಭೇಮಹಿ ।
ಯಾಚಿತಾರಶ್ಚ ನಃ ಸಂತು ಮಾ ಚ ಯಾಚಿಷ್ಮ ಕಂಚನ ॥ ೧೧೮ ॥

ಏತದಗ್ನಿಮತಾಂ ಪ್ರೋಕ್ತಮನ್ವಾಹಾರ್ಯಂ ಚ ಪಾರ್ವಣಂ ।
ಯಥೇಂದುಸಂಕ್ಷಯೇ ತದ್ವತ್ಪಾರ್ವಣಂ ತು ನಿಗದ್ಯತೇ ॥ ೧೧೯ ॥

---

೧೧೫. ಅನಂತರ ಪಿಂಡಪ್ರದಾನಮಾಡಿ ಆ ಪಿಂಡದ ಮೇಲೆ ಸ್ವಧಾ ವಚನವನ್ನು ಮಾಡಬೇಕು. ಮೊದಲು ವಿಶ್ವೇದೇವರಿಗೂ ಅನಂತರ ಪಿತೃಗಳಿಗೂ ಮಾಡಬೇಕು, ಇಲ್ಲದಿದ್ದರೆ ಶ್ರಾದ್ಧವು ನಾಶವಾಗುತ್ತದೆ.

೧೧೬. ಬ್ರಾಹ್ಮಣರನ್ನು ಪಿತೃಗಳಿಂದ ವಿಸರ್ಜನೆ ಮಾಡಿ, ಅವರಿಗೆ ಪ್ರದಕ್ಷಿಣೆ ಮಾಡಿ, ದಕ್ಷಿಣ ದಿಕ್ಕನ್ನುದ್ದೇಶಿಸಿ ಪಿತೃಗಳನ್ನುದ್ದೇಶಿಸಿಕೊಂಡು ಈ ರೀತಿ ಹೇಳಬೇಕು.

೧೧೭-೧೧೮. ನನಗೆ ಕೊಡತಕ್ಕವರು ಹೆಚ್ಚಲಿ, ವೇದಗಳು ನಮಗೆ ಉದ್ದಕ್ಕೂ ಬರಲಿ. ನಮಗೆ ಶ್ರದ್ಧೆಯು ಹೋಗಬಾರದು. ನಾವೂ ಬಹುವಾಗಿ ಕೊಡತಕ್ಕವರಾಗಬೇಕು, ನಮಗೆ ಅನ್ನವು ಹೆಚ್ಚಾಗಿ ಸಿಕ್ಕಲಿ, ಅತಿಥಿಗಳನ್ನು ನಾವು ಹೊಂದುತ್ತಿರಬೇಕು, ಯಾಚಕರು ನಮ್ಮ ಬಳಿಗೆ ಬರಲಿ. ನಾವು ಯಾರನ್ನೂ ಕೇಳಿಕೊಳ್ಳಬಾರದು.

೧೧೯. ಇದು ಅಗ್ನಿಯುಳ್ಳವರಿಗೆ ಮತ್ತೊಂದರಂತೆ ಹೇಳಿರುವ ಪಾರ್ವಣವು, ಇದನ್ನು ಅಮಾವಾಸ್ಯೆಯ ದಿನ ಪರ್ವದಲ್ಲಿ ಮಾಡುವಂತೆ ಮಾಡುವುದರಿಂದ ಪಾರ್ವಣ ವೆನಿಸಿಕೊಳ್ಳುತ್ತದೆ.

ಪಿಂಡಾಂಶ್ಚ ಗೋಜವಿಪ್ರೇಭ್ಯೋ ದದ್ಯಾದಗ್ನೌ ಜಲೇಽಪಿ ವಾ ।
ಪಪ್ರಾಂತೇ ವಾಥ ವಿಕಿರೇದಾಪ್ರೋಭಿರಥ ವಾಪಯೇತ್ ॥ ೧೨೦ ॥

ಪತ್ನೀ ತು ಮಧ್ಯಮಂ ಪಿಂಡಂ ಪ್ರಾಶಯೇದ್ವಿನಯಾನ್ವಿತಾ ।
ಆಧತ್ತ ಪಿತರೋ ಗರ್ಭಂ ಪುತ್ರಸಂತಾನವರ್ಧನಂ ॥ ೧೨೧ ॥

ತಾವನ್ನಿರ್ವಾಪಣಂ ತಿಷ್ಠೇದ್ಯಾವದ್ವಿಪ್ರಾ ವಿಸರ್ಜಿತಾಃ ।
ವೈಶ್ವದೇವಂ ತತಃ ಕುರ್ಯಾನ್ನಿವೃತ್ತೇ ಪಿತೃಕರ್ಮಣಿ ॥ ೧೨೨ ॥

ಇಷ್ಟೈಃ ಸಹ ತತಶ್ಶಾಂತೇ ಭುಂಜೀತ ಪಿತೃಸೇವಿತಂ ।
ಪುನರ್ಭೋಜನಮಧ್ವಾನಂ ಯಾನಮಾಸನಮೈಥುನಂ ॥ ೧೨೩ ॥

ಶ್ರಾದ್ಧಕೃಚ್ಛ್ರಾದ್ಧಭುಗ್ವೋ ವಾ ಸರ್ವಮೇತದ್ವಿವರ್ಜಯೇತ್ ।
ಸ್ವಾಧ್ಯಾಯಂ ಕಲಹಂ ಚೈವ ದಿವಾಸ್ವಪ್ನಂ ಚ ಸರ್ವದಾ ॥ ೧೨೪ ॥

---

೧೨೦. ಪಿಂಡಗಳನ್ನು ವಿಸರ್ಜಿಸಿ ಅವನ್ನು ಗೋವು, ಆಡು, ಬ್ರಾಹ್ಮಣರಿಗೆ ತಿನ್ನಲು ಕೊಡಬಹುದು. ಬೆಂಕಿಯಲ್ಲಾಗಲಿ ನೀರಿನಲ್ಲಾಗಲಿ ಹಾಕಬಹುದು. ಮೊದಲು ಹಕ್ಕಿಗಳಿಗೆ ಹಾಕಬಹುದು. ಹರಿಯುವ ನೀರಿನಲ್ಲಿ ಕೊಚ್ಚಿಕೊಂಡು ಹೋಗುವಂತೆ ಹಾಕಬಹುದು.

೧೨೧. ಹೆಂಡತಿಯು ಮಧ್ಯಮಪಿಂಡವನ್ನು ವಿನಯವಂತಳಾಗಿ ತಿನ್ನಬಹುದು. ಆಗ ಪಿತೃಗಳು ಪುತ್ರಸಂತಾನಕರವಾದ ಗರ್ಭವನ್ನು ಧರಿಸುವಂತೆ ಮಾಡುತ್ತಾರೆ.

೧೨೨. ಪಿತೃಗಳನ್ನು ವಿಸರ್ಜಿಸುವವರೆಗೂ ಪಿಂಡಗಳಿರಬೇಕು, ವಿಸರ್ಜಿಸಿದೊಡನೆಯೇ ತೆಗೆಯಬೇಕು, ಪಿತೃಕಾರ್ಯವು ಮುಗಿದನಂತರ ವೈಶ್ವದೇವವನ್ನು ಮಾಡಬೇಕು.

೧೨೩-೧೨೪. ಆಮೇಲೆ ಇಷ್ಟರೊಡನೆ ಆ ಪಿತೃಗಳ ಶೇಷವನ್ನು ಊಟಮಾಡಬೇಕು, ಆದಿನ ಮತ್ತೆ ಊಟಮಾಡುವುದು, ದಾರಿ ನಡೆಯುವುದು, ಗಾಡಿ ಮುಂತಾದುವುಗಳಲ್ಲಿ ಪ್ರಯಾಣ, ಆಸನಹಾಕುವುದು, ಮೈಥುನಮಾಡುವುದು, ಇವನ್ನು ಶ್ರಾದ್ಧಮಾಡಿದವನೂ, ನಿಮಂತ್ರಿತರಾಗಿ ಊಟಮಾಡಿದ ಬ್ರಾಹ್ಮಣರೂ ಬಿಡಬೇಕು, ಅಧ್ಯಯನ, ಜಗಳ, ಹಗಲುನಿದ್ದೆಗಳನ್ನು ಬಿಡಬೇಕು.

**ಅನೇನ ವಿಧಿನಾ ಶ್ರಾದ್ಧಂ ತ್ರಿವರ್ಗಸ್ಯೇಹ ನಿರ್ವಪೇತ್ ।**
**ಕನ್ಯಾಕುಂಭವೃಷಸ್ಥೇಽರ್ಕೇ ಕೃಷ್ಣಪಕ್ಷೇಷು ಸರ್ವದಾ ॥ ೧೨೫ ॥**

**ಯತ್ರ ಯತ್ರ ಪ್ರದಾತವ್ಯಂ ಸಪಿಂಡೀಕರಣಾತ್ಮಕಂ ।**
**ತತ್ರಾನೇನ ವಿಧಾನೇನ ದೇಯಮಗ್ನಿಮತಾ ಸದಾ ॥ ೧೨೬ ॥**

**ಅತಃ ಪರಂ ಪ್ರವಕ್ಷ್ಯಾಮಿ ಬ್ರಹ್ಮಣಾ ಯದುದೀರಿತಂ ।**
**ಶ್ರಾದ್ಧಂ ಸಾಧಾರಣಂ ನಾಮ ಭುಕ್ತಿಮುಕ್ತಿಫಲಪ್ರದಂ ॥ ೧೨೭ ॥**

**ಅಯನೇ ವಿಷುವೇ ಚೈವ ಅಮಾವಾಸ್ಯಾರ್ಕಸಂಕ್ರಮೇ ।**
**ಅಮಾವಾಸ್ಯಾಷ್ಟಕಾ ಚೈವ ಕೃಷ್ಣೇ ಪಂಚದಶೀಷು ಚ ॥ ೧೨೮ ॥**

**ಆರ್ದ್ರಾಮಘಾರೋಹಿಣೀಷು ದ್ರವ್ಯಬ್ರಾಹ್ಮಣಸಂಗಮೇ ।**
**ಗಜಚ್ಛಾಯಾವ್ಯತೀಪಾತೇ ವಿಷ್ಟಿವೈಧೃತಿವಾಸರೇ ॥ ೧೨೯ ॥**

---

೧೨೫. ಈರೀತಿ ಶ್ರಾದ್ಧವನ್ನು ತಂದೆ, ತಂದೆಯ ತಂದೆ, ತಂದೆಯ-ತಂದೆಯ ತಂದೆ; ಅಥವಾ ತಾಯಿ, ತಂದೆಯ ತಾಯಿ, ತಂದೆಯ ತಂದೆಯ ತಾಯಿ ಇವರಿಗೆ ಮಾಡಬೇಕು. ಈ ಶ್ರಾದ್ಧಗಳನ್ನು ಕನ್ಯಾಮಾಸ, ಕುಂಭಮಾಸ, ವೃಷಭಮಾಸಗಳಲ್ಲಿ ಮಾಡಬೇಕು. ಕೃಷ್ಣಪಕ್ಷದಲ್ಲಿ ಯಾವಾಗಲೂ ಮಾಡಬಹುದು.

೧೨೬. ಸಪಿಂಡೀಕರಣವನ್ನು ಮಾಡುವಲ್ಲಿ ಎಲ್ಲಾ ಈ ರೀತಿಯಿಂದಲೇ ಅಗ್ನಿಯನ್ನು ಪ್ರತಿಷ್ಠಾಪಿಸಿಕೊಂಡು ಮಾಡಬೇಕು.

೧೨೭. ಇನ್ನು ಮೇಲೆ ಬ್ರಹ್ಮನು ಹೇಳಿದ, ಅನ್ನವನ್ನೂ, ಮುಕ್ತಿಯನ್ನೂ ಕೊಡುವ ಸಾಧಾರಣ ಶ್ರಾದ್ಧವನ್ನು ಹೇಳುತ್ತೇನೆ.

೧೨೮-೧೨೯. ದಕ್ಷಿಣಾಯನ ಉತ್ತರಾಯನ ಪುಣ್ಯಕಾಲಗಳಲ್ಲಿ, ವಿಷುವತ್ಪುಣ್ಯಕಾಲಗಳಲ್ಲಿ, ಅಮಾವಾಸ್ಯೆಯಲ್ಲಿ, ಸಂಕ್ರಮಣಗಳಲ್ಲಿ, ಅಮಾವಾಸ್ಯಾಷ್ಟಕಗಳಲ್ಲಿ, ಕೃಷ್ಣಪಕ್ಷದಲ್ಲಿ, ಹದಿನೈದನೆಯದಿನ ಆರಿದ್ರೆ, ಮಖೆ, ರೋಹಿಣಿ ನಕ್ಷತ್ರಗಳಲ್ಲಿ, ದ್ರವ್ಯ ಒದಗಿದಾಗ, ಒಳ್ಳೆಯ ಬ್ರಾಹ್ಮಣರು ಸಿಕ್ಕಿದಾಗ, ಗಜಚ್ಛಾಯೆ ಎಂಬ ವಿಶೇಷ ಯೋಗದಲ್ಲಿ ವ್ಯತೀಪಾತದ ದಿನ, ವಿಷ್ಟಿ, ವೈಧೃತಿಗಳ ದಿನಗಳಲ್ಲಿ ಶ್ರಾದ್ಧವನ್ನು ಮಾಡಬೇಕು.

ವೈಶಾಖಸ್ಯ ತೃತೀಯಾಯಾಂ ನವಮ್ಯಾಂ ಕಾರ್ತಿಕಸ್ಯ ತು ।
ಪಂಚದಶ್ಯಾಂ ತು ಮಾಘಸ್ಯ ನಭಸ್ಯಸ್ಯ ತ್ರಯೋದಶೀ ॥ ೧೩೦ ॥

ಯುಗಾದಯಃ ಸ್ಮೃತಾ ಹ್ಯೇತಾಃ ಪಿತೃಪಕ್ಷೋಪಕಾರಿಕಾಃ ।
ತಥಾ ಮನ್ವಂತರಾದೌ ಚ ದೇಯಂ ಶ್ರಾದ್ಧಂ ವಿಜಾನತಾ ॥ ೧೩೧ ॥

ಅಶ್ವಯುಕ್ಛುಕ್ಲನವಮೀ ದ್ವಾದಶೀ ಕಾರ್ತಿಕೇ ತಥಾ ।
ತೃತೀಯಾ ಚೈತ್ರಮಾಸಸ್ಯ ತಥಾ ಭಾದ್ರಪದಸ್ಯ ಚ ॥ ೧೩೨ ॥

ಫಾಲ್ಗುನಸ್ಯ ತ್ವಮಾವಾಸ್ಯಾ ಪೌಷಸ್ಯೈಕಾದಶೀ ತಥಾ ।
ಆಷಾಢಸ್ಯಾಪಿ ದಶಮೀ ಮಾಘಮಾಸಸ್ಯ ಸಪ್ತಮೀ ॥ ೧೩೩ ॥

ಶ್ರಾವಣೇ ಚಾಷ್ಟಮೀ ಕೃಷ್ಣಾ ತಥಾಷಾಢೀ ಚ ಪೂರ್ಣಿಮಾ ।
ಕಾರ್ತಿಕೀ ಫಾಲ್ಗುನೀ ಚೈವ ಜ್ಯೈಷ್ಠೀ ಪಂಚದಶೀ ತಥಾ ॥ ೧೩೪ ॥

ಮನ್ವಂತರಾದಯಶ್ಚೈತಾ ದತ್ತಸ್ಯಾಕ್ಷಯಕಾರಿಕಾಃ ।
ಯಥಾ ಮನ್ವಂತರಸ್ಯಾದೌ ರಥಮಾಪ ದಿವಾಕರಃ ॥ ೧೩೫ ॥

---

೧೩೦-೧೩೧. ವೈಶಾಖತದಿಗೆಯ ದಿನ, ಕಾರ್ತಿಕ ನವಮಿ ದಿನ, ಮಾಘದ ಪೂರ್ಣಿಮೆ ದಿನ, ಭಾದ್ರಪದ ತ್ರಯೋದಶಿ, ಇವುಗಳು ಯುಗಾದಿಗಳೆನಿಸಿಕೊಳ್ಳುತ್ತವೆ. ಇವು ಪಿತೃಪಕ್ಷಗಳಂತೆಯೇ. ಅದೇ ರೀತಿ ಮನ್ವಂತರಗಳ ಆದಿಯಲ್ಲಿಯೂ ಶ್ರಾದ್ಧವನ್ನು ಮಾಡಬೇಕು.

೧೩೨-೧೩೩. ಆಶ್ವಯುಜ ಶುದ್ಧನವಮಿ, ಕಾರ್ತಿಕ ದ್ವಾದಶಿ, ಚೈತ್ರತೃತೀಯ, ಭಾದ್ರಪದ ತೃತೀಯ, ಫಾಲ್ಗುಣ ಅಮಾವಾಸ್ಯೆ, ಪುಷ್ಯ ಏಕಾದಶಿ, ಆಷಾಢ ದಶಮಿ, ಮಾಘ ಸಪ್ತಮಿ, ಇವು ಮನ್ವಂತರಗಳು.

೧೩೪-೧೩೫. ಶ್ರಾವಣ ಕೃಷ್ಣಅಷ್ಟಮಿ, ಆಷಾಢಪೂರ್ಣಿಮಾ, ಕಾರ್ತಿಕ ಫಾಲ್ಗುಣಗಳ ಪೂರ್ಣಿಮಾ ಜ್ಯೇಷ್ಠದಪೂರ್ಣಿಮಾ ಇವು ಮನ್ವಂತರಗಳು. ಇವುಗಳಲ್ಲಿ ಕೊಟ್ಟುವು ಅಕ್ಷಯಕರಗಳು.

ಮಾಘಮಾಸಸ್ಯ ಸಪ್ತಮ್ಯಾಂ ಭಾದ್ರಮಾಸಸ್ಯ ಸಪ್ತಮಿ　　　　॥ ೧೩೬ ॥

ಪಾನೀಯಮಪ್ಯತ್ರ ತಿಲೈರ್ವಿಮಿಶ್ರಂ
ದದ್ಯಾತ್ಪಿತೃಭ್ಯಃ ಪ್ರಯತೋ ಮನುಷ್ಯಃ ।
ಶ್ರಾದ್ಧಂ ಕೃತಂ ತೇನ ಸಮಾಃ ಸಹಸ್ರಂ
ರಹಸ್ಯಮೇತತ್ಪಿತರೋ ವದಂತಿ ॥　　　　॥ ೧೩೭ ॥

ವೈಶಾಖ್ಯಾಮುಪರಾಗೇ ತು ತಥೋತ್ಸವಮಹಾಲಯೇ ।
ತೀರ್ಥಾಯತನಗೋಷ್ಠೇಷು ದ್ವೀಪೋದ್ಯಾನಗೃಹೇಷು ಚ　　　　॥ ೧೩೮ ॥

ವಿವಿಕ್ತೇಷು ಚ ಲಿಪ್ತೇಷು ಶ್ರಾದ್ಧಂ ದೇಯಂ ವಿಜಾನತಾ ।
ವಿಪ್ರಾನ್ಪೂರ್ವೇ ಪರೇ ಚಾಹ್ನಿ ವಿನೀತಾತ್ಮಾ ನಿಮಂತ್ರಯೇತ್　　　　॥ ೧೩೯ ॥

ಶೀಲವೃತ್ತಗುಣೋಪೇತಾನ್ವಯೋರೂಪಸಮನ್ವಿತಾನ್ ।
ದ್ವೌ ದೈವೇ ಪಿತೃಕಾರ್ಯೇ ತ್ರೀನೇಕೈಕಮುಭಯತ್ರ ವಾ　　　　॥ ೧೪೦ ॥

---

೧೩೬. ಈ ಮನ್ವಂತರಗಳ ಆದಿಯಲ್ಲಿ ಸೂರ್ಯನು ರಥವನ್ನು ಹೊಂದಿದನು. ಅಂತೆಯೇ ಮಾಘಸಪ್ತಮಿ, ಭಾದ್ರಪದ ಸಪ್ತಮಿಗಳು ಮನ್ವಂತರಗಳು.

೧೩೭. ಈ ದಿವಸಗಳಲ್ಲಿ ಮನುಷ್ಯನು ಪಿತೃಗಳನ್ನುದ್ದೇಶಿಸಿ ಎಳ್ಳಿನಿಂದ ಮಿಶ್ರವಾಗಿರುವ ನೀರನ್ನಾದರೂ ಕುಡಿಯಲು ಕೊಡಬೇಕು. ಹಾಗೆ ಮಾಡಿದರೆ ಸಾವಿರ ವರ್ಷಗಳು ಶ್ರಾದ್ಧಮಾಡಿದಂತೆ ಆಗುತ್ತದೆ. ಇದೇ ರಹಸ್ಯವೆಂದು ಪಿತೃಗಳು ಹೇಳುತ್ತಾರೆ.

೧೩೮. ವೈಶಾಖಮಾಸದಲ್ಲಿ, ಗ್ರಹಣಗಳಲ್ಲಿ, ಮನೆಯಲ್ಲಿ ಮಾಡತಕ್ಕ ಶುಭ ಕರ್ಮಗಳಲ್ಲಿ, ಮಹಾಲಯದಲ್ಲಿ, ತೀರ್ಥಪ್ರದೇಶಗಳಲ್ಲಿ, ಕೊಟ್ಟಿಗೆಗಳಲ್ಲಿ, ದ್ವೀಪಗಳಲ್ಲಿ, ಉದ್ಯಾನಗಳಲ್ಲಿ, ಹೊಸಮನೆಗಳಲ್ಲಿ, ಒಬ್ಬೊಬ್ಬರೇ ಇರುವಾಗ, ಜನಸಮುದಾಯ ಸೇರಿದಾಗ ಬುದ್ಧಿವಂತನಾದವನು ಶ್ರಾದ್ಧವನ್ನು ಮಾಡಬೇಕು.

೧೩೯. ಒಳ್ಳೆಯ ಸ್ವಭಾವ, ಒಳ್ಳೆಯ ಗುಣ, ಸರಿಯಾದ ವಯಸ್ಸು, ಸರಿಯಾದ ರೂಪುಗಳಿಂದ ಕೂಡಿದ ವಿನಯವಂತರಾದ ಬ್ರಾಹ್ಮಣರನ್ನು ಹಿಂದಿನ ದಿನವೂ ಆ ದಿನವೂ ಕರೆಯಬೇಕು.

೧೪೦. ವಿಶ್ವೇದೇವರಿಗೋಸ್ಕರ ಇಬ್ಬರನ್ನೂ, ಪಿತೃಗಳಿಗೋಸ್ಕರ ಮೂವರನ್ನೂ; ಇಲ್ಲದಿದ್ದರೆ ವಿಶ್ವೇದೇವರಿಗೆ ಒಬ್ಬರು, ಪಿತೃಗಳಿಗೆ ಒಬ್ಬರು; ಈ ರೀತಿ ಇಬ್ಬರನ್ನು ಊಟಮಾಡಿಸಬೇಕು. ಎಷ್ಟೇ ಹಣವಿದ್ದು ಶ್ರದ್ಧೆಯಿದ್ದರೂ ಕೂಡ ಹೆಚ್ಚು ಬ್ರಾಹ್ಮಣರನ್ನು ನಿಮಂತ್ರಿಸಕೂಡದು.

ಭೋಜಯೇತ್ಸುಸಮೃದ್ಧೋಽಪಿ ನ ಪ್ರಕುರ್ವೀತ ವಿಸ್ತರಂ ।
ವಿಶ್ವೇದೇವಾನ್ಯವೈಃ ಪುಷ್ಪೈರಭ್ಯರ್ಚ್ಯಾಸನಪೂರ್ವಕಂ ॥ ೧೪೧ ॥

ಪೂರಯೇತ್ಪಾತ್ರಯುಗ್ಮಂ ತು ಸ್ಥಾಪ್ಯಂ ದರ್ಭಪವಿತ್ರಕೇ ।
ಶಂ ನೋ ದೇವೀತ್ಯಪಃ ಕುರ್ಯಾದ್ಯವೋಽಸೀತಿ ಯವಾನಪಿ ॥ ೧೪೨ ॥

ಗಂಧಪುಷ್ಪೈಸ್ತು ಸಂಪೂಜ್ಯ ವಿಶ್ವೇದೇವಾನ್ಪ್ರವಿನ್ಯಸೇತ್ ।
ವಿಶ್ವೇದೇವಾಸ ಇತ್ಯಾಭ್ಯಾಮಾವಾಹ್ಯ ವಿಕಿರೇದ್ಯವಾನ್ ॥ ೧೪೩ ॥

ಯವೋಽಸಿ ಧಾನ್ಯರಾಜಸ್ತು ವಾರುಣೋ ಮಧುಮಿಶ್ರಿತಃ ।
ನಿರ್ಣೋದಃ ಸರ್ವಪಾಪಾನಾಂ ಪವಿತ್ರಮೃಷಿಸಂಸ್ತುತಂ ॥ ೧೪೪ ॥

ಗಂಧಪುಷ್ಪೈರಲಂಕೃತ್ಯ ಯಾ ದಿವ್ಯೇತ್ಯರ್ಘಮುತ್ಸೃಜೇತ್ ।
ಅಭ್ಯರ್ಚಿತಾರ್ಘಾನುತ್ಸೃಜ್ಯ ಪಿತೃಯಜ್ಞಂ ಸಮಾರಭೇತ್ ॥ ೧೪೫ ॥

---

೧೪೧. ವಿಶ್ವೇದೇವರನ್ನು ಅಕ್ಕಿಯಿಂದಲೂ ಹೂವಿನಿಂದಲೂ ಆಸನಕೊಟ್ಟು ಪೂಜಿಸಬೇಕು. ಎರಡು ಪಾತ್ರೆಗಳನ್ನು ತೆಗೆದುಕೊಂಡು ಅದಕ್ಕೆ ದರ್ಭೆಯ ಪವಿತ್ರವನ್ನು ಹಾಕಿ ನೀರನ್ನು ತುಂಬಬೇಕು.

೧೪೨. ಶನ್ನೋದೇವಿ ಎಂಬ ಮಂತ್ರವನ್ನುಚ್ಚರಿಸಿ ನೀರನ್ನು ಹಾಕಬೇಕು. ಯವೋಸಿಧಾನ್ಯರಾಜೋವಾ ಎಂಬುದನ್ನು ಹೇಳಿ ಅಕ್ಕಿಯನ್ನು ಹಾಕಬೇಕು.

೧೪೩. ಆ ಪಾತ್ರೆಯನ್ನು ಗಂಧ-ಹೂಗಳಿಂದ ಪೂಜಿಸಿ ವಿಶ್ವೇದೇವರನ್ನು ಅದರಲ್ಲಿ ವಿಶ್ವೇದೇವಾಸ ಎಂಬ ಮಂತ್ರದಿಂದ ಆವಾಹನೆಮಾಡುತ್ತಾ ಅಕ್ಕಿಯನ್ನು ಹಾಕಬೇಕು.

೧೪೪. ಯವವೇ, ಧಾನ್ಯರಾಜನಾಗಿದ್ದೀಯೆ. ನೀನು ವರುಣ ಸಂಬಂಧಿ. ಮಧುವಿಂದ ಕೂಡಿದ್ದೀಯೆ. ಸರ್ವ ಪಾಪಗಳನ್ನೂ ನಾಶಮಾಡುತ್ತೀಯೆ. ನೀನು ಪವಿತ್ರವಾದವನೆಂದು ಋಷಿಗಳಿಂದ ಸ್ತುತಿಸಲ್ಪಟ್ಟಿದ್ದೀಯೆ.

೧೪೫. ವಿಶ್ವೇದೇವರನ್ನು ಗಂಧಪುಷ್ಪಗಳಿಂದ ಅಲಂಕರಿಸಿ, ಪೂಜಿಸಿರುವ ವಿಶ್ವೇದೇವರ ಅರ್ಘ್ಯಪಾತ್ರದ ನೀರನ್ನು ವಿಶ್ವೇದೇವರ ಹಸ್ತದಲ್ಲಿ, ಯಾದಿವ್ಯಾಆಪಃ ಎಂಬ ಮಂತ್ರದಿಂದ ಬಿಡಬೇಕು. ಅನಂತರ ಪಿತೃಗಳ ಪೂಜೆಯನ್ನು ಆರಂಭಿಸಬೇಕು.

**ದರ್ಭಾಸನಾದಿ ಕೃತ್ವಾದೌ ತ್ರೀಣಿ ಪಾತ್ರಾಣಿ ಚಾರ್ಚಯೇತ್ ।**
**ಸಪವಿತ್ರಾಣಿ ಕೃತ್ವಾದೌ ಶಂ ನೋ ದೇವೀತ್ಯಪಃ ಕ್ಷಿಪೇತ್ ॥ ೧೪೬ ॥**

**ತಿಲೋಽಸೀತಿ ತಿಲಾನ್ಕುರ್ಯಾದ್ಗಂಧಪುಷ್ಪಾದಿಕಂ ಪುನಃ ।**
**ಪಾತ್ರಂ ವನಸ್ಪತಿಮಯಂ ತಥಾ ಪರ್ಣಮಯಂ ಪುನಃ ॥ ೧೪೭ ॥**

**ರಾಜತಂ ವಾ ಪ್ರಕುರ್ವೀತ ತಥಾ ಸಾಗರಸಂಭವಂ ।**
**ಸೌವರ್ಣಂ ರಾಜತಂ ಪಾತ್ರಂ ಪಿತೄಣಾಂ ಪಾತ್ರಮಿಷ್ಯತೇ ॥ ೧೪೮ ॥**

**ರಜತಸ್ಯ ಕಥಾ ವಾಪಿ ದರ್ಶನಂ ದಾನಮೇವ ವಾ ।**
**ರಾಜತೈರ್ಭಾಜನೈರೇಷಾಂ ಪಿತೄಣಾಂ ರಜತಾನ್ವಿತೈಃ ॥ ೧೪೯ ॥**

**ವಾರ್ಯಪಿ ಶ್ರದ್ಧಯಾ ದತ್ತಮಕ್ಷಯಾಯೋಪಕಲ್ಪತೇ ।**
**ಅರ್ಘಾರ್ಥಂ ಪಿತೃಪಿಂಡೇಷು ಪಿತೄಣಾಂ ರಾಜತಂ ಮತಂ ॥ ೧೫೦ ॥**

---

೧೪೬. ತಳಕ್ಕೆ ದರ್ಭಾಸನವನ್ನು ಹಾಕಿ, ಮೂರು ಪಾತ್ರೆಗಳನ್ನು ಇಟ್ಟು ಪೂಜಿಸಬೇಕು. ಅವುಗಳಿಗೆ ಪವಿತ್ರಗಳನ್ನು ಹಾಕಬೇಕು. ಅನಂತರ ಶನ್ನೋದೇವಿ ಎಂಬ ಮಂತ್ರದಿಂದ ನೀರನ್ನು ಹಾಕಬೇಕು.

೧೪೭-೧೪೮. ತಿಲೋಸೀತಿ ಎಂಬ ಮಂತ್ರದಿಂದ ಎಳ್ಳನ್ನು ಹಾಕಬೇಕು. ಗಂಧಹೂಗಳಿಂದಲೂ ಮಂತ್ರದಿಂದಲೂ ಪೂಜಿಸಬೇಕು. ಆ ಪಾತ್ರೆಯು ಮರದ್ದಾಗಿರ ಬಹುದು, ಎಲೆಯದಾಗಿರಬಹುದು ಅಥವಾ ಬೆಳ್ಳಿಯದಾಗಿರಬಹುದು. ಅದಿಲ್ಲದಿದ್ದರೆ ಸಮುದ್ರದಲ್ಲಿ ಹುಟ್ಟಿದ ಶಂಖ ಮುಂತಾದುವುಗಳ ರೂಪವಾಗಿರಬಹುದು. ಚಿನ್ನ ದ್ದಾಗಲಿ ಬೆಳ್ಳಿಯದಾಗಲಿ ಪಿತೃಗಳ ಪಾತ್ರೆಯಾಗಿರಬೇಕೆಂದು ಹೇಳುತ್ತಾರೆ.

೧೪೯. ಬೆಳ್ಳಿಯ ವಿಷಯವನ್ನು ಹೇಳುತ್ತ, ಅಥವಾ ಅದನ್ನು ನೋಡುತ್ತ, ದಾನಮಾಡುತ್ತ, ಬೆಳ್ಳಿಯಪಾತ್ರೆಯಿಂದಲೇ ಅರ್ಘ್ಯವನ್ನು ಶ್ರದ್ಧೆಯಿಂದ ಕೊಟ್ಟರೆ ಅದು ಅಕ್ಷಯವಾಗುವುದು.

೧೫೦. ಪಿತೃಪಿಂಡದಲ್ಲಿ ಅರ್ಘ್ಯವನ್ನು ಬೆಳ್ಳಿಯ ಪಾತ್ರೆಯಲ್ಲಿ ಕೊಡಬೇಕು. ಈ ಬೆಳ್ಳಿಯು ಶಿವನ ಕಣ್ಣಿನಿಂದ ಹುಟ್ಟಿದುದಾದುದರಿಂದ ಪಿತೃಗಳಿಗೆ ಪ್ರೀತಿ ದಾಯಕವು.

ಶಿವನೇತ್ರೋದ್ಭವಂ ಯಸ್ಮಾದತಸ್ತತ್ಪಿತೃವಲ್ಲಭಂ ।
ಸುಮಂಗಲಂ ತದ್ಯಜ್ಞೇಷು ದೇವಕಾರ್ಯೇಷು ವರ್ಜಿತಂ ॥ ೧೫೧ ॥

ಏವಂ ಪಾತ್ರಾಣಿ ಸಂಕಲ್ಪ್ಯ ಯಥಾಲಾಭಂ ವಿಶಾಂ ಪತೇ ।
ಯಾ ದಿವ್ಯೇತಿ ಪಿತುರ್ನಾಮಗೋತ್ರೇ ದರ್ಭಾನ್ಕರೇ ನ್ಯಸೇತ್ ॥ ೧೫೨ ॥

ಪಿತೄನಾವಾಹಯಿಷ್ಯಾಮಿ ತಥೇತ್ಯುಕ್ತಃ ಸ ತೈಃ ಪುನಃ ।
ಉಶಂತಸ್ತ್ವಾ ತಥಾಯಾಂತು ಋಗ್ಭ್ಯಾಮಾವಾಹಯೇತ್ಪಿತೄನ್ ॥ ೧೫೩ ॥

ಯಾ ದಿವ್ಯೇತ್ಯರ್ಘ್ಯಮುತ್ಸೃಜ್ಯ ದದ್ಯಾದ್ಗಂಧಾದಿಕಂ ತತಃ ।
ವಸ್ತ್ರೋತ್ತರಂ ದಾನಪೂರ್ವಂ ದತ್ವಾ ಸಂಶ್ರವಮಾದಿತಃ ॥ ೧೫೪ ॥

ಪಿತೃಪಾತ್ರೇ ನಿಧಾಯಾಥ ನ್ಯುಬ್ಜಮುತ್ತರತೋ ನ್ಯಸೇತ್ ।
ಪಿತೃಭ್ಯಃ ಸ್ಥಾನಮಸೀತಿ ನಿಧಾಯ ಪರಿವೇಷಯೇತ್ ॥ ೧೫೫ ॥

---

೧೫೧. ಈ ಬೆಳ್ಳಿಯು ಪಿತೃಕಾರ್ಯದಲ್ಲಿ ಮಂಗಳಕರವು. ದೇವಕಾರ್ಯ ದಲ್ಲಿ ಇದನ್ನು ಉಪಯೋಗಿಸಬಾರದು.

೧೫೨. ಎಲೈ ದೊರೆಯೆ! ತನಗೆ ದೊರಕುವ ರೀತಿಯಲ್ಲಿ ಈ ಮೇಲೆ ಹೇಳಿದ ಪಾತ್ರೆಗಳಲ್ಲಿ ಸಾಧ್ಯವಾದುದನ್ನು ಸಂಪಾದಿಸಿಕೊಂಡು, ಪಿತೃಸ್ಥಾನದ ಬ್ರಾಹ್ಮಣನ ಕೈಯಲ್ಲಿ ದರ್ಭೆಯ ಪವಿತ್ರವನ್ನಿಟ್ಟು, ಯಾದಿವ್ಯಾಆಪಃ ಎಂಬ ಮಂತ್ರವನ್ನು ಹೇಳಿ, ಪಿತೃವಿನ ಹೆಸರು ಗೋತ್ರರೂಪಗಳನ್ನು ಹೇಳಿ ಅರ್ಘ್ಯವನ್ನು ಕೊಡಬೇಕು.

೧೫೩. ಆ ಪಿತೃಸ್ಥಾನದ ಬ್ರಾಹ್ಮಣರಿಗೆ ಪಿತೃಗಳನ್ನು ಆವಾಹನೆಮಾಡುತ್ತೇ ನೆಂದು ಹೇಳಿ, ಅವರಿಂದ ಹಾಗೇ ಆಗಲೆಂದು ಅನುಮತಿಯನ್ನು ತೆಗೆದುಕೊಂಡು ಉಶಂತಸ್ತ್ವಾಹವಾಮಹೆ, ಆಯಾಂತುಪಿತರಃ ಎಂಬ ಮಂತ್ರಗಳಿಂದ ಆತನಲ್ಲಿ ಪಿತೃ ಗಳನ್ನು ಆವಾಹಿಸಬೇಕು.

೧೫೪. ಆತನ ಕೈಯಲ್ಲಿ ಪಿತೃಪಾತ್ರದ ಪವಿತ್ರವನ್ನಿಟ್ಟು ಯಾದಿವ್ಯಾಆಪಃ ಎಂಬ ಮಂತ್ರದಿಂದ ಅರ್ಘ್ಯವನ್ನು ಕೊಡಬೇಕು. ಅನಂತರ ಗಂಧಪುಷ್ಪಗಳನ್ನೂ ಕೊಡಬೇಕು. ವಸ್ತ್ರವನ್ನೂ ದಾನಮಾಡಬೇಕು. ಆಗ್ಗೆ ಗೋತ್ರನಾಮರೂಪಗಳನ್ನು ಹೇಳಬೇಕು.

೧೫೫. ಆ ಪವಿತ್ರವನ್ನು ಪಿತೃಪಾತ್ರೆಯಲ್ಲಿಟ್ಟು ಮೇಲೊಂದನ್ನು ಕವಿಚಿ, ಉತ್ತರಭಾಗದಲ್ಲಿ ಪಿತೃಭ್ಯಃ ಸ್ಥಾನಮಸಿ (ಪಿತೃಗಳ ಸ್ಥಾನವಾಗಿದ್ದೀಯೆ) ಎಂದು ಹೇಳಿ ಇಟ್ಟು ಅನಂತರ ಎಲೆಗಳಿಗೆ ಬಡಿಸಬೇಕು.

ತತ್ರಾಪಿ ಪೂರ್ವತಃ ಕುರ್ಯಾದಗ್ನಿಕಾರ್ಯಂ ವಿಮತ್ಸರಃ ।
ಉಭಾಭ್ಯಾಮಪಿ ಹಸ್ತಾಭ್ಯಾಮಾಹೃತ್ಯ ಪರಿವೇಷಯೇತ್ ॥ ೧೫೬ ॥

ಉಶಂತಸ್ತ್ವೇತಿ ತಂ ದರ್ಭಂ ಪಾಣಿಭಕ್ತಂ ವಿಶೇಷತಃ ।
ಯವಾದಿಸೂಪಶಾಕಾದ್ಯೈರ್ನಾನಾಭಕ್ಷ್ಯೈಸ್ತಥೈವ ಚ ॥ ೧೫೭ ॥

ಅನ್ನಂ ತು ಸದಧಿಕ್ಷೀರಂ ಗೋಘೃತಂ ಶರ್ಕರಾನ್ವಿತಂ ।
ಮಾಂಸಂ ಪ್ರೀಣಯತೇ ಸರ್ವಾನ್ಪಿತೃನಿತ್ಯುಕ್ತವಾನಜಃ ॥ ೧೫೮ ॥

ದ್ವೌ ಮಾಸೌ ಮಾತ್ಸ್ಯಮಾಂಸೇನ ತ್ರೀನ್ಮಾಸಾನ್ ಹಾರಿಣೇನ ಚ ।
ಔರಭ್ರೇಣಾಥ ಚತುರಃ ಶಾಕುನೇನಾಥ ಪಂಚ ವೈ ॥ ೧೫೯ ॥

ವಾರಾಹಸ್ಯ ತು ಮಾಂಸೇನ ಷಣ್ಮಾಸಂ ತೃಪ್ತಿರುತ್ತಮಾ ।
ಸಪ್ತ ಲೋಹಸ್ಯ ಮಾಂಸೇನ ತಥಾಷ್ಟಾವಾಜಕೇನ ತು ॥ ೧೬೦ ॥

೧೫೬. ಬಡಿಸುವುದಕ್ಕೆ ಮೊದಲು ಒಳ್ಳೆಯ ಮನಸ್ಸಿನಿಂದ ಅಗ್ನಿಕಾರ್ಯವನ್ನು ಮಾಡಬೇಕು. ಎರಡು ಕೈಗಳಿಂದಲೂ ತಂದು ಬಡಿಸಬೇಕು. ಹೋಮ ಮಾಡಿದ ಅನ್ನವನ್ನೂ, ಆ ದರ್ಭೆಯನ್ನೂ ಲೌಕಿಕಾಗ್ನಿಯಲ್ಲಿ ಹಾಕಬೇಕು.

೧೫೭-೧೫೮. ತೊವ್ವೆ, ಪಲ್ಯಗಳು, ಭಕ್ಷ್ಯಗಳು, ಅನ್ನ, ಹಾಲು, ಮೊಸರು, ಹಸುವಿನ ತುಪ್ಪ, ಸಕ್ಕರೆ, ಇವೆಲ್ಲವನ್ನೂ ಬಡಿಸಿಕೊಡಬೇಕು. ಮಾಂಸವು ಎಲ್ಲರಿಗೂ ಪ್ರೀತಿದಾಯಕವಾದುದು ಎಂದು ಬ್ರಹ್ಮನು ಹೇಳಿದ್ದಾನೆ.

೧೫೯-೧೬೪. ಪಿತೃಗಳಿಗೆ ಮೀನಿನ ಮಾಂಸದಿಂದ ಎರಡು ತಿಂಗಳು. ಜಿಂಕೆಯ ಮಾಂಸದಿಂದ ಮೂರು ತಿಂಗಳವರೆಗೂ, ಒಂಟೆಯ ಮಾಂಸದಿಂದ ನಾಲ್ಕು ತಿಂಗಳೂ, ಪಕ್ಷಿಯ ಮಾಂಸದಿಂದ ಐದು ತಿಂಗಳವರೆಗೂ, ಹಂದಿಯ ಮಾಂಸದಿಂದ ಆರು ತಿಂಗಳವರೆಗೂ, ಲೋಹವೆಂಬ ಮೃಗದ ಮಾಂಸದಿಂದ ಏಳು ತಿಂಗಳವರೆಗೂ, ಆಡಿನ ಮಾಂಸದಿಂದ ಎಂಟು ತಿಂಗಳವರೆಗೂ, ಪೃಷತವೆಂಬ ಜಿಂಕೆಯ ಮಾಂಸದಿಂದ ಒಂಭತ್ತು ತಿಂಗಳವರೆಗೂ, ಹಂದಿ ಎಮ್ಮೆಗಳ ಮಾಂಸದಿಂದ ಹತ್ತು ತಿಂಗಳವರೆಗೂ, ಮೊಲ ಆಮೆಗಳ ಮಾಂಸದಿಂದ ಹನ್ನೊಂದು ತಿಂಗಳವರೆಗೂ, ಹಸುವಿನ ಹಾಲು, ಅಥವಾ ಹಾಲು ಸೇರಿಸಿದ ಪದಾರ್ಥಗಳಿಂದ ಒಂದು ವರ್ಷದವರೆಗೂ, ಸೂಕರವೆಂಬ ಹಂದಿಯ ಮಾಂಸದಿಂದ ಹದಿನೈದು ತಿಂಗಳವರೆಗೂ, ವಾಧ್ರೀಣಸ

ಪೃಷತಸ್ಯ ತು ಮಾಂಸೇನ ತೃಪ್ತಿರ್ಮಾಸಾನ್ನವೈವ ತು ।
ದಶ ಮಾಸಾಂಸ್ತು ತೃಪ್ಯಂತಿ ವರಾಹಮಹಿಷಾಮಿಷೈಃ ॥ ೧೬೧ ॥
ಶಶಕೂರ್ಮಯೋಸ್ತು ಮಾಂಸೇನ ಮಾಸಾನೇಕಾದಶೈವ ತು ।
ಸಂವತ್ಸರಂ ತು ಗವ್ಯೇನ ಪಯಸಾ ಪ ಯಸೇನ ವಾ ॥ ೧೬೨ ॥
ರೌರವೇಣ ತು ತೃಪ್ಯಂತಿ ಮಾಸಾನ್ಪಂಚದಶೈವ ತು ।
ವಾರ್ಧ್ರೀಣಸಸ್ಯ ಮಾಂಸೇನ ತೃಪ್ತಿರ್ದ್ವಾದಶವಾರ್ಷಿಕೀ ॥ ೧೬೩ ॥
ಕಾಲಶಾಕೇನ ಚಾನಂತ್ಯಂ ಖಡ್ಗಮಾಂಸೇನ ಚೈವ ಹಿ ।
ಯತ್ಕಿಂಚಿನ್ಮಧುಸಂಯುಕ್ತಂ ಗೋಕ್ಷೀರಂ ಘೃತಪಾಯಸಂ ॥ ೧೬೪ ॥
ದತ್ತಮಕ್ಷಯ್ಯಮಿತ್ಯಾಹುಃ ಪಿತರಃ ಪೂರ್ವದೇವತಾಃ ।
ಸ್ವಾಧ್ಯಾಯಂ ಶ್ರಾವಯೇತ್ಪಿತ್ರ್ಯಂ ಪುರಾಣಾನ್ಯಖಿಲಾನಿ ತು ॥ ೧೬೫ ॥
ಬ್ರಹ್ಮವಿಷ್ಣ್ವರ್ಕರುದ್ರಾಣಾಂ ಸ್ತವಾನಿ ವಿವಿಧಾನಿ ಚ ।
ಇಂದ್ರೇಶಸೋಮಸೂಕ್ತಾನಿ ಪಾವಮಾನೀಶ್ಚ ಸರ್ವತಃ ॥ ೧೬೬ ॥
ಬೃಹದ್ರಥಂತರಂ ತದ್ವಜ್ಜ್ಯೇಷ್ಠಸಾಮಸ್ಯ ಗೌರವಂ ।
ತಥೈವ ಶಾಂತಿಕಾಧ್ಯಾಯಂ ಮಧುಬ್ರಾಹ್ಮಣಮೇವ ಚ ॥ ೧೬೭ ॥
ಮಂಡಲಂ ಬ್ರಾಹ್ಮಣಂ ತದ್ವತ್ಪ್ರೀತಿಕಾರಿ ಚ ಯತ್ಪುನಃ
ವಿಪ್ರಾಣಾಮಾತ್ಮನಶ್ಚಾಪಿ ತತ್ಸರ್ವಂ ಸಮುದೀರಯೇತ್ ॥ ೧೬೮ ॥

ವೆಂಬ ಜಂಕವಿಶೇಷದ ಮಾಂಸದಿಂದ ಹನ್ನೆರಡು ವರ್ಷಗಳವರೆಗೂ, ಆಯಾ ಕಾಲದ ಕಾಯಿಪಲ್ಯಗಳಿಂದ ಒಪು ಕಾಲದ ತೃಪ್ತಿಯೂ, ಖಡ್ಗಮೃಗದ ಮಾಂಸದಿಂದ ಅದ್ಯಂತ ಕಾಲದ ತೃಪ್ತಿಯೂ, ಜೇನಿನಿಂದ ಕೂಡಿದ ಹಸುವಿನ ಹಾಲು, ಪಾಯಸಗಳನ್ನು ಕೊಟ್ಟರೆ ಅಕ್ಷಯಕರವಾದ ತೃಪ್ತಿಯೂ ಉಂಟಾಗುತ್ತದೆ.

೧೬೫-೧೬೬. ಪಿತೃಸಂಬಂಧವಾದ ವೇದಮಂತ್ರಗಳನ್ನು ಹೇಳಬೇಕು. ಪುರಾಣಗಳೆಲ್ಲವನ್ನೂ ಹೇಳಬೇಕು. ಬ್ರಹ್ಮ, ವಿಷ್ಣು, ರುದ್ರ, ಸೂರ್ಯರ ವಿವಿಧ ಸ್ತೋತ್ರಗಳನ್ನು ಹೇಳಬೇಕು. ಇಂದ್ರಸೂಕ್ತ, ಸೋಮಸೂಕ್ತ, ಪವಮಾನಗಳನ್ನು ಹೇಳಬೇಕು. ಬೃಹದ್ರಥಂತರವೆಂಬ ದೊಡ್ಡದಾಗಿರುವ ಸಾಮವನ್ನು ಹೇಳಬೇಕು.

೧೬೭-೧೬೮. ಶಾಂತಿಯ ಮಂತ್ರಗಳನ್ನೂ, ಮಧುಬ್ರಾಹ್ಮಣವನ್ನೂ, ಮಂಡಲ ಬ್ರಾಹ್ಮಣವನ್ನೂ, ಬ್ರಾಹ್ಮಣರಿಗೂ, ತನಗೂ ಅನುಕೂಲಗಳಾದ ಮಂತ್ರಗಳನ್ನೆಲ್ಲಾ ಹೇಳಬೇಕು

ಭಾರತಾಧ್ಯಯನಂ ಕಾರ್ಯಂ ಪಿತೄಣಾಂ ಪರಮಂ ಪ್ರಿಯಂ ।
ಭುಕ್ತವತ್ಸು ಚ ವಿಪ್ರೇಷು ಭೋಜ್ಯಂ ಶೋಯಾದಿಕಂ ಚ ಯತ್ ॥

ಸಾರ್ವವರ್ಣಿಕಮನ್ನಾದ್ಯಂ ಸನಿಯಾಯಾತ್ಸಾಪ್ಯಧಾರಣಂ ।
ಸಮುತ್ಸೃಜೇದ್ಭುಕ್ತವತಾಮಗ್ರತೋ ವಿಕಿರನ್ಭುವಿ　　॥ ೧೭೦ ॥

ಅಗ್ನಿದಗ್ಧಾಶ್ಚ ಯೇ ಜೀವಾ ಯೇಽಪ್ಯದಗ್ಧಾಃ ಕುಲೇ ಮಮ ।
ಭೂಮೌ ದತ್ತೇನ ತೃಪ್ಯಂತು ತೃಪ್ತಾ ಯಾಂತು ಪರಾಂ ಗತಿಂ　　॥ ೧೭೧ ॥

ಯೇಷಾಂ ನ ಮಾತಾ ನ ಪಿತಾ ನ ಬಂಧು
ರ್ನ ಚಾನ್ಯಮಿತ್ರಂ ನ ತಥಾಽನ್ನಮಸ್ತಿ ।
ತತ್ತೃಪ್ತಯೇಽನ್ನಂ ಭುವಿ ದತ್ತಮೇತ
ತ್ಪ್ರಯಾಂತು ಯೋಗಾಯ-ಯತೋ ಯತಸ್ತತ್　　॥ ೧೭೨ ॥

ಅಸಂಸ್ಕೃತಪ್ರಮೀತಾನಾಂ ತ್ಯಾಗಿನಾಂ ಕುಲಭಾಗಿನಾಂ ।
ಉಚ್ಛಿಷ್ಟಭಾಗಧೇಯಾನಾಂ ದರ್ಭೇಷು ವಿಕಿರಾಸನಂ　　॥ ೧೭೩ ॥

---

೧೬೯. ಭಾರತವನ್ನು ಓವಬೇಕು, ಅದು ಪಿತೃಗಳಿಗೆ ಪ್ರೀತಿಕರವಾದುದು. ಬ್ರಾಹ್ಮಣರು ತಿನ್ನತಕ್ಕುದೆಲ್ಲವನ್ನೂ ತಿಂದು ಕುಡಿಯಬೇಕಾದುವನ್ನೂ ಕುಡಿಯಬೇಕು.

೧೭೦-೧೭೧. ಅನ್ನ ನೀರುಗಳನ್ನು ಶ್ರಾದ್ಧಮಾಡತಕ್ಕವರೆಲ್ಲರೂ ಊಟಮಾಡಿ ತೃಪ್ತಿಹೊಂದಿದ ಮೇಲೂ ನಿಧಾನವಾಗಿ ಕೇಳಬೇಕು. ಅದಾದನಂತರ ನನ್ನ ಕುಲದಲ್ಲಿ ಅಗ್ನಿಯಿಂದ ಸುಟ್ಟವರೂ, ಸುಡದವರೂ ಯಾರೇ ಇರಲಿ ಅವರೆಲ್ಲರೂ ಭೂಮಿಯ ಮೇಲೆ ಹಾಕಿದ ಈ ಅನ್ನದಿಂದ ತೃಪ್ತಿಹೊಂದಿ ಉತ್ತಮಗತಿಯನ್ನು ಹೊಂದಲಿ ಎಂದು ಹೇಳಿ, ಬ್ರಾಹ್ಮಣರ ಎಲೆಯ ಎದುರಿಗೆ ಭೂಮಿಯ ಮೇಲೆ ಉದ್ದಕ್ಕೂ ಅನ್ನವನ್ನು ಎರಚಬೇಕು.

೧೭೨. ತಂದೆಯಿಲ್ಲದವರು, ತಾಯಿಯಿಲ್ಲದವರು, ಬಂಧುಗಳಿಲ್ಲದವರು, ಸ್ನೇಹಿತರಿಲ್ಲದವರು, ಅನ್ನವಿಲ್ಲದವರು, ಅವರು ತೃಪ್ತಿಹೊಂದುವುದಕ್ಕೋಸ್ಕರ ಭೂಮಿಯಲ್ಲಿ ಅನ್ನವನ್ನು ಕೊಟ್ಟಿದ್ದೇನೆ. ಇದು ಅವರುಗಳಿಗೆ ಸಂಬಂಧಿಸಿದ್ದು.

೧೭೩. ಕುಲಕ್ಕೆ ತಕ್ಕ ಸಂಸ್ಕಾರವನ್ನು ಹೊಂದದೆ ಸತ್ತವರು, ಬಿಟ್ಟು ಬಿಟ್ಟವರು, ಕುಲಕ್ಕೆ ಸಂಬಂಧಪಟ್ಟವರು, ಉಚ್ಛಿಷ್ಟವನ್ನು ಹೊಂದಲರ್ಹರಾದವರು, ಇವರಿಗೆ ದರ್ಭೆಯ ಮೇಲೆ ವಿಕರವನ್ನು ತಿನ್ನಲು ಹಾಕಿದ್ದೇನೆ.

ತೃಪ್ತಾನ್ ಜ್ಞಾತ್ವೋದಕಂ ದದ್ಯಾತ್ಸಕೃದ್ವಿಪ್ರಕರೇ ತದಾ ।
ವಿಪ್ರಲಿಪ್ತೇ ಮಹೀಪೃಷ್ಠೇ ಗೋಶಕೃನ್ಮೂತ್ರವಾರಿಣಾ ॥ ೧೭೪ ॥

ನಿಧಾಯ ದರ್ಭಾನ್ವಿಧಿವದ್ದಕ್ಷಿಣಾಗ್ರಾನ್ಪ್ರಯತ್ನತಃ ।
ಸರ್ವವರ್ಣವಿಧಾನೇನ ಪಿಂಡಾಂಸ್ತು ಪಿತೃಯಜ್ಞವತ್ ॥ ೧೭೫ ॥

ಅವನೇಜನಪೂರ್ವಂ ತು ನಾಮಗೋತ್ರಾಣಿ ಮಾನವಃ ।
ಉಕ್ತ್ವಾ ಪುಷ್ಪಾದಿಕಂ ದದ್ಯಾತ್ಕೃತ್ವಾ ಪ್ರತ್ಯವನೇಜನಂ ॥ ೧೭೬ ॥

ಜ್ಞಾತ್ವಾಪಸವ್ಯಂ ಸವ್ಯೇನ ಪಾಣಿನಾ ತ್ರಿಃಪ್ರದಕ್ಷಿಣಂ ।
ಪಿತ್ರ್ಯಮಾನಿಧನಾತ್ಕಾರ್ಯಂ ವಿಧಿವದ್ದರ್ಭಪಾಣಿನಾ ॥ ೧೭೭ ॥

ದೀಪಪ್ರಜ್ವಾಲನಂ ತದ್ವತ್ಕುರ್ಯಾತ್ಪುಷ್ಪಾರ್ಚನಂ ಬುಧಃ ।
ಅಥಾಚಾಂತೇಷು ಚಾಚಮ್ಯ ದದ್ಯಾಚ್ಚಾಪಃ ಸಕೃತ್ಸಕೃತ್ ॥ ೧೭೮ ॥

---

೧೭೪-೧೭೬. ಬ್ರಾಹ್ಮಣರು ಊಟಮಾಡಿ ತೃಪ್ತಿಹೊಂದಿದ ಮೇಲೆ, ಒಂದೇ ಆವರ್ತಿ ಉತ್ತರಾಪೋಶನವನ್ನು ಹಾಕಬೇಕು. ಅನಂತರ ಬ್ರಾಹ್ಮಣರು ಊಟಮಾಡಿದ ಎಲೆಯನ್ನು ಎತ್ತಿ, ಅಲ್ಲಿ ಹಸುವಿನ ಸಗಣಿ ಗಂಜಲಗಳಿಂದ ಶುದ್ಧಿಮಾಡಬೇಕು. ಅನಂತರ ಅಲ್ಲಿ ವಿಧಿಪೂರ್ವಕವಾಗಿ ದರ್ಭೆಯನ್ನು ದಕ್ಷಿಣಾಗ್ರವಾಗಿ ಹಾಕಬೇಕು. ಸರ್ವ ವರ್ಣಗಳಿಗೂ ಉಕ್ತವಾಗಿರುವ ರೀತಿಯಲ್ಲಿ ಪಿತೃಯಜ್ಞವಂತೆ ಪಿಂಡಗಳನ್ನು ಹಾಕಬೇಕು. ಕೈಯಲ್ಲಿ ದಕ್ಷಿಣಮುಗ್ಗುಲಿಗೆ ಹಿಡಿದುಕೊಂಡು ಹೆಸರು, ಗೋತ್ರಗಳನ್ನು ಹೇಳುತ್ತಾ ಪಿಂಡವನ್ನು ಹಾಕಬೇಕು. ಮತ್ತು ಅದರ ಮೇಲೆ ಎಳ್ಳು- ನೀರುಗಳನ್ನು ಬಿಟ್ಟು ಹೂ-ಗಂಧಗಳನ್ನು ಹಾಕಬೇಕು.

೧೭೭. ಇವೆಲ್ಲವನ್ನೂ ಅಪಸವ್ಯದಿಂದ ಮಾಡಿ, ಅನಂತರ ಸವ್ಯವನ್ನು ಹಾಕಿಕೊಂಡು ಪಿಂಡಗಳಿಗೆ ಮೂರು ಬಾರಿ ಪ್ರದಕ್ಷಿಣೆಯನ್ನು ಮಾಡಬೇಕು. ಪಿತೃಗಳ ಕಾರ್ಯವನ್ನು ದರ್ಭೆಯ ಪವಿತ್ರವನ್ನು ಹಾಕಿಕೊಂಡು ತಾನು ಸಾಯುವವರೆಗೂ ಮಾಡಬೇಕು.

೧೭೮. ಧೂಪದೀಪಗಳಿಂದ ಪೂಜಿಸಿ, ಪುಷ್ಪದಿಂದಲೂ ಪೂಜಿಸಬೇಕು ಅನಂತರ ಬ್ರಾಹ್ಮಣರು ಆಚಮನಮಾಡಬೇಕು. ಅನಂತರ ತಾನೂ ಆಚಮನಮಾಡಬೇಕು. ಅನಂತರ ಹಸ್ತದಲ್ಲಿ ಒಂದೊಂದಾವರ್ತಿ ನೀರನ್ನು ಹಾಕಬೇಕು.

**ತಥಾ ಪುಷ್ಪಾಕ್ಷತಾನ್ಪಶ್ಚಾದಕ್ಷಯ್ಯೋದಕಮೇವ ಚ ।**
**ಸತಿಲಂ ನಾಮಗೋತ್ರೇಣ ದದ್ಯಾಚ್ಛಕ್ತ್ಯಾ ಚ ದಕ್ಷಿಣಾಂ ॥೧೭೯॥**

**ಗೋಭೂಹಿರಣ್ಯವಾಸಾಂಸಿ ಭವ್ಯಾನಿ ಶಯನಾನಿ ಚ ।**
**ದದ್ಯಾದ್ಯದಿಷ್ಟಂ ವಿಪ್ರಾಣಾಮಾತ್ಮನಃ ಪಿತುರೇವ ಚ ॥ ೧೮೦ ॥**

**ವಿತ್ತಶಾಠ್ಯೇನ ರಹಿತಃ ಪಿತೃಭ್ಯಃ ಪ್ರೀತಿಮಾಹರನ್ ।**
**ತತಃ ಸ್ವಧಾವಾಚನಿಕಂ ವಿಶ್ವೇದೇವೇಷು ಚೋದಕಂ ॥ ೧೮೧ ॥**

**ದತ್ವಾಶೀಃ ಪ್ರತಿಗೃಹ್ಣೀಯಾದ್ದ್ವಿಜೇಭ್ಯಃ ಪ್ರಾಙ್ಮುಖೋ ಬುಧಃ ।**
**ಅಘೋರಾಃ ಪಿತರಃ ಸಂತು ಸಂತ್ವಿತ್ಯುಕ್ತಃ ಪುನರ್ದ್ವಿಜೈಃ ॥ ೧೮೨ ॥**

**ಗೋತ್ರಂ ತಥಾ ಚ ವರ್ಧತಾಂ ತಥೇತ್ಯುಕ್ತಶ್ಚ ತೈಃ ಪುನಃ ।**
**ದಾತಾರೋ ನೋಽಭಿವರ್ಧಂತಾಂ ವೇದಾಃ ಸಂತತಿರೇವ ಚ ॥ ೧೮೩ ॥**

---

೧೭೯. ಅನಂತರ ಬ್ರಾಹ್ಮಣರಿಗೆ ಹೂವು ಅಕ್ಷತೆಗಳನ್ನು ಕೊಡಬೇಕು. ಮತ್ತು ಅಕ್ಷಯ್ಯೋದಕವನ್ನು ಎಳ್ಳು ಸೇರಿಸಿಕೊಡಬೇಕು. ನಾಮಗೋತ್ರಗಳನ್ನು ಉಚ್ಚರಿಸಬೇಕು. ಶಕ್ತಿಯನ್ನು ಮೀರದಂತೆ ದಕ್ಷಿಣೆಯನ್ನು ಕೊಡಬೇಕು.

೧೮೦. ಹಸು, ಹಣ, ಬಟ್ಟೆ, ಒಳ್ಳೆಯ ಹಾಸಿಗೆ ಮುಂತಾದ ಬೇಕಾದುದನ್ನು ಬ್ರಾಹ್ಮಣರಿಗೆ ಕೊಡಬೇಕು. ಮತ್ತು ತನಗೂ ತನ್ನ ಪಿತೃಗಳಿಗೂ ಇಷ್ಟವಾದುದನ್ನು ಕೊಡಬೇಕು.

೧೮೧. ಜಿಪುಣತನಮಾಡದೆ ಪಿತೃಗಳಿಗೆ ಪ್ರೀತಿಯನ್ನುಂಟುಮಾಡಬೇಕು. ಅನಂತರ ಸ್ವಧಾವಚನವನ್ನು ಹೇಳಬೇಕು. ವಿಶ್ವೇದೇವರಿಗೆ ನೀರನ್ನು ಕೊಡಬೇಕು. ಅನಂತರ ಪೂರ್ವಮುಖವಾಗಿ ನಿಂತುಕೊಂಡು ಆಶೀರ್ವಾದವನ್ನು ಬ್ರಾಹ್ಮಣರಿಂದ ತೆಗೆದುಕೊಳ್ಳಬೇಕು.

೧೮೨. ನನ್ನ ಪಿತೃಗಳು ಘೋರರಾಗದಿರಲಿ ಎಂದು ಪ್ರಶ್ನಿಸಿ, ಅವರಿಂದ ಹಾಗೇ ಆಗಲೆಂದೂ; ಗೋತ್ರವು ವರ್ಧಿಸಲೆಂದು ಪ್ರಶ್ನಿಸಿ, ಹಾಗೇ ಆಗಲೆಂದೂ ಉತ್ತರವನ್ನು ಹೊಂದಬೇಕು.

೧೮೩-೧೮೪. ತನಗೆ ದಾತೃಗಳು ಹೆಚ್ಚಲಿ. ವೇದಪರಂಪರೆಯಿರಲಿ. ಇವೆಲ್ಲವೂ ಸತ್ಯವಾದ ಆಶೀರ್ವಾದಗಳಾಗಲಿ ಎಂದು ಪ್ರಶ್ನಿಸಿ, ಹಾಗೇ ಆಗಲೆಂದು ಅವರಿಂದ

ಏತಾಃ ಸತ್ಯಾಶಿಷಃ ಸಂತು ಸಂತ್ವಿತ್ಯುಕ್ತೇ ಚ ತೈಃ ಪುನಃ ।
ಸ್ವಸ್ತಿವಾಚನಕಂ ಕುರ್ಯಾತ್ಪಿಂಡಾನುದ್ಧೃತ್ಯ ಭಕ್ತಿತಃ ॥ ೧೮೪ ॥

ಉಚ್ಛೇಷಣಂ ತು ತತ್ತಿಷ್ಠೇದ್ಯಾವದ್ವಿಪ್ರವಿಸರ್ಜನಂ ।
ತತೋ ಗೃಹಬಲಿಂ ಕುರ್ಯಾದಿತಿ ಧರ್ಮೋ ವ್ಯವಸ್ಥಿತಃ ॥ ೧೮೫ ॥

ಉಚ್ಛೇಷಣಂ ಭೂಮಿಗತಮಜಿಹ್ಮಸ್ಯಾಶಠಸ್ಯ ಚ ।
ದಾಸವರ್ಗಸ್ಯ ತತ್ಪಿತ್ರ್ಯಂ ಭಾಗಧೇಯಂ ಪ್ರಚಕ್ಷತೇ ॥ ೧೮೬ ॥

ಪಿತೃಭಿರ್ನಿರ್ಮಿತಂ ಪೂರ್ವಮೇತದಾಪ್ಯಾಯನಂ ತದಾ ।
ಅವ್ರತಾನಾಮಪುತ್ರಾಣಾಂ ಸ್ತ್ರೀಣಾಮಪಿ ನರಾಧಿಪ ॥ ೧೮೭ ॥

ತತಃ ಸ್ಥಾನೇಽಗ್ರತಃ ಸ್ಥಿತ್ವಾ ಪ್ರತಿಗೃಹ್ಯಾಂಬುಪಾತ್ರಿಕಾಂ ।
ವಾಜೆ ವಾಜೇತಿ ಚ ಜಪನ್ಕುಶಾಗ್ರೇಣ ವಿಸರ್ಜಯೇತ್ ॥ ೧೮೮ ॥

ಬಹಿಃ ಪ್ರದಕ್ಷಿಣಂ ಕುರ್ಯಾತ್ಪದಾನ್ಯಷ್ಟಾವನುವ್ರಜೇತ್ ।
ಬಂಧುವರ್ಗೇಣ ಸಹಿತಃ ಪುತ್ರಭಾರ್ಯಾಸಮನ್ವಿತಃ ॥ ೧೮೯ ॥

---

ಉತ್ತರ ತೆಗೆದುಕೊಳ್ಳಬೇಕು. ಪಿಂಡವನ್ನು ತೆಗೆದು, ಅನಂತರ ಸ್ವಸ್ತಿವಾಚನವನ್ನು ಹೇಳಬೇಕು

೧೮೫. ಬ್ರಾಹ್ಮಣರನ್ನು ವಿಸರ್ಜನೆಮಾಡುವವರೆಗೂ ಆ ಪಿಂಡವಿರಬೇಕು. ಅನಂತರ ಗೃಹಬಲಿಯನ್ನು ಕೊಡಬೇಕು. ಇದೇ ಧರ್ಮವು.

೧೮೬. ಭೂಮಿಯಲ್ಲಿರುವ ಶೇಷವು, ಕಪಟಯಾಗದಿರುವ ದಾಸನಿಗೆ ಸೇರಿದ ಪಿತೃಸಂಬಂಧಿಯಾದ ಪಾಲು ಎಂದು ಹೇಳಲ್ಪಟ್ಟಿದೆ.

೧೮೭. ವ್ರತವನ್ನು ಹೊಂದದವರಿಗೂ-ಹೆಂಗಸರಿಗೂ ಕೂಡ ಈ ತೃಪ್ತಿಯು ಪಿತೃಗಳಿಂದ ಮಾಡಲ್ಪಟ್ಟಿದೆ.

೧೮೮. ಅನಂತರ ಆ ಬ್ರಾಹ್ಮಣರ ಮುಂದೆ ಕುಳಿತು, ಪಿತೃಗಳ ಅರ್ಘ್ಯಪಾತ್ರೆಯನ್ನು ತೆಗೆದುಕೊಂಡು, ವಾಜೇ ವಾಜೇ ಎಂಬ ಮಂತ್ರವನ್ನು ಹೇಳುತ್ತಾ ಅದರಲ್ಲಿ ಕುಶಾಗ್ರಗಳನ್ನು ವಿಸರ್ಜಿಸಬೇಕು.

೧೮೯-೧೯೦. ಹೊರಗಡೆಯಲ್ಲಿ ಬ್ರಾಹ್ಮಣರಿಗೆ ಪ್ರದಕ್ಷಿಣೆ ಮಾಡಬೇಕು. ಅನಂತರ ಬಂಧುಗಳಿಂದಲೂ ಹೆಂಡತಿ ಮಕ್ಕಳಿಂದಲೂ ಕೂಡಿಕೊಂಡು ಎಂಟು ಹೆಜ್ಜೆ

**ನಿವೃತ್ತಃ ಪ್ರಣಿಪತ್ಯಾಥ ಪ್ರಯುಜ್ಯಾಗ್ನಿಂ ಸ ಮಂತ್ರವಿತ್ ।**
**ವೈಶ್ವದೇವಂ ತತಃ ಕುರ್ಯ್ಯಾನ್ನಿತ್ಯಕಂ ಬಲಿಮೇವ ಚ　　॥ ೧೯೦ ॥**

**ತತಸ್ತು ವೈಶ್ವದೇವಾಂತೇ ಸಭೃತ್ಯಸುತಬಾಂಧವಃ ।**
**ಭುಂಜೀತಾತಿಥಿಸಂಯುಕ್ತಃ ಸರ್ವಂ ಪಿತೃನಿಷೇವಿತಂ　　॥ ೧೯೧ ॥**

**ಏತಚ್ಚಾನುಪನೀತೋಽಪಿ ಕುರ್ಯಾತ್ಸರ್ವೇಷು ಪರ್ವಸು ।**
**ಶ್ರಾದ್ಧಂ ಸಾಧಾರಣಂ ನಾಮ ಸರ್ವಕಾಮಫಲಪ್ರದಂ　　॥ ೧೯೨ ॥**

**ಭಾರ್ಯಾವಿರಹಿತೋ ವಾಽಪಿ ಪ್ರವಾಸಸ್ಥೋಽಪಿ ಭಕ್ತಿಮಾನ್ ।**
**ಶೂದ್ರೋಽಪ್ಯಮಂತ್ರಕಂ ಕುರ್ಯಾದನೇನ ವಿಧಿನಾ ನೃಪ　　॥ ೧೯೩ ॥**

**ತೃತೀಯಮಾಭ್ಯುದಯಿಕಂ ವೃದ್ಧಿಶ್ರಾದ್ಧಂ ತದುಚ್ಯತೇ ।**
**ಉತ್ಸವಾನಂದಸತ್ಕಾರೇ ಯಜ್ಞೋದ್ವಾಹಮಂಗಲೇ　　॥ ೧೯೪ ॥**

**ಮಾತರಃ ಪ್ರಥಮಂ ಪೂಜ್ಯಾಃ ಪಿತರಸ್ತದನಂತರಂ ।**
**ತತೋ ಮಾತಾಮಹಾ ರಾಜನ್ವಿಶ್ವೇದೇವಾಸ್ತಥೈವ ತು　　॥ ೧೯೫ ॥**

---

ಗಳನ್ನನ್ನಾದರೂ ಅನುಸರಿಸಿ ಹೋಗಬೇಕು. ನಮಸ್ಕರಿಸಿ, ಹಿಂತಿರುಗಿ ಅಗ್ನಿಯನ್ನು ಪೂಜಿಸಿ ನಿವರ್ತಿಸಬೇಕು. ಅನಂತರ ವೈಶ್ವದೇವವನ್ನು ಮಾಡಿ ನಿತ್ಯದ ಬಲಿಯನ್ನು ಕೊಡಬೇಕು.

೧೯೧. ವೈಶ್ವದೇವವಾದ ಮೇಲೆ ಭೃತ್ಯರು, ಮಕ್ಕಳು, ಬಾಂಧವರುಗಳೊಡನೆ ಪಿತೃಶೇಷವನ್ನು ಭೋಜನಮಾಡಬೇಕು.

೧೯೨. ಈ ಶ್ರಾದ್ಧಗಳನ್ನು ಉಪನಯನವಾಗಿಲ್ಲದಿರುವವನೂ ಕೂಡ ಎಲ್ಲಾ ಪರ್ವಕಾಲಗಳಲ್ಲಿಯೂ ಮಾಡಬೇಕು. ಶ್ರಾದ್ಧವೆಂಬುದು ಸಾಧಾರಣವಾಗಿ ಎಲ್ಲಾ ಇಷ್ಟಾರ್ಥಗಳನ್ನೂ ಕೊಡುತ್ತದೆ.

೧೯೩. ಹೆಂಡತಿಯಿಲ್ಲದಿರಲಿ, ತಾನು ಪರಸ್ಥಳದಲ್ಲಿರಲಿ ಭಕ್ತಿಯುಳ್ಳವನು ಮಾಡಬೇಕು. ಶೂದ್ರನೂ ಕೂಡ ಈ ಶ್ರಾದ್ಧವನ್ನು ಮಂತ್ರವಿಲ್ಲದೆ ಮಾಡಬೇಕು.

೧೯೪. ಮೂರನೆಯದಾದ ಅಭ್ಯುದಯ ಶ್ರಾದ್ಧವನ್ನು ವೃದ್ಧಿಶ್ರಾದ್ಧವೆಂದೆನ್ನುತ್ತಾರೆ. ಇದು ಉತ್ಸವ, ಆನಂದ, ಸತ್ಕಾರ, ಯಜ್ಞ, ಮದುವೆ ಮುಂತಾದ ಮಂಗಳ ಕೆಲಸಗಳಲ್ಲಿ ಮಾಡಲ್ಪಡತಕ್ಕದಾಗಿದೆ.

೧೯೫. ಮೊದಲು ಮಾತೃಗಳನ್ನೂ, ಅನಂತರ ಪಿತೃಗಳನ್ನೂ, ಅನಂತರ ಮಾತಾಮಹಾದಿಗಳನ್ನೂ ಇವರಾದ ಮೇಲೆ ವಿಶ್ವೇದೇವರನ್ನು ಶ್ರಾದ್ಧಗಳಲ್ಲಿ ಪೂಜಿಸಬೇಕು.

**ಪ್ರದಕ್ಷಿಣೋಪಚಾರೇಣ ದಧ್ಯಕ್ಷತಫಲೋದಕೈಃ ।**
**ಪ್ರಾಙ್ಮುಖೋ ನಿರ್ವಪೇತ್ಪಿಂಡಾನ್ದೂರ್ವಾಂಶ್ಚೈವ ಪುರಾತನಾನ್ ॥ ೧೯೬ ॥**
**ಸಂಪನ್ನಮಿತ್ಯಭ್ಯುದಯೇ ದದ್ಯಾದರ್ಘ್ಯಂ ದ್ವಯೋರ್ದ್ವಯೋಃ ।**
**ಯುಗ್ಮಾ ದ್ವಿಜಾತಯಃ ಪೂಜ್ಯಾ ವಸ್ತ್ರಕಾರ್ತಸ್ವರಾದಿಭಿಃ ॥ ೧೯೭ ॥**
**ತಿಲಕಾರ್ಯಂ ಯವೈಃ ಕಾರ್ಯಂ ತಚ್ಚ ಸರ್ವಾನುಪೂರ್ವಕಂ ।**
**ಮಂಗಲ್ಯಾನಿ ಚ ಸರ್ವಾಣಿ ವಾಚಯೇದ್ದ್ವಿಜಪುಂಗವಾನ್ ॥ ೧೯೮ ॥**
**ಏವಂ ಶೂದ್ರೋಽಪಿ ಸಾಮಾನ್ಯಂ ವೃದ್ಧಿಶ್ರಾದ್ಧಂ ಚ ಸರ್ವದಾ ।**
**ನಮಸ್ಕಾರೇಣ ಮಂತ್ರೇಣ ಕುರ್ಯಾದ್ದಾನಾದಿಕಂ ಬುಧಃ ॥ ೧೯೯ ॥**
**ದಾನಂ ಪ್ರಧಾನಂ ಶೂದ್ರಸ್ಯ ಪ್ರಾಹೇತಿ ಭಗವಾನ್ಪ್ರಭುಃ ।**
**ದಾನೇನ ಸರ್ವಕಾಮಾಪ್ತಿಸ್ತಸ್ಯ ಸಂಜಾಯತೇ ಯತಃ ॥ ೨೦೦ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಸರ್ವಸಾಧಾರಣಾಭ್ಯುದಯಶ್ರಾದ್ಧಕೀರ್ತನಂ ನಾಮ ನವಮೋಽಧ್ಯಾಯಃ.**

---

೧೯೬. ಪ್ರದಕ್ಷಿಣೆ, ಉಪಚಾರ, ಮೊಸರು, ಅಕ್ಷತೆ, ಹಣ್ಣು, ನೀರು ಮುಂತಾದುವುಗಳಿಂದ ಪೂಜಿಸಿ ತೃಪ್ತಿಪಡಿಸಬೇಕು. ಪೂರ್ವಮುಖವಾಗಿ ಕುಳಿತು ಪಿಂಡಗಳನ್ನು ಹಾಕಬೇಕು.

೧೯೭. ಸಂಪನ್ನಂ ಎಂದು ಹೇಳುತ್ತಾ ಇಬ್ಬಿಬ್ಬರಿಗೆ ಒಟ್ಟೊಟ್ಟಿಗೆ ಅರ್ಘ್ಯವನ್ನು ಕೊಡಬೇಕು. ಇಬ್ಬರು ಬ್ರಾಹ್ಮಣರನ್ನು ಒಟ್ಟಿ, ಹಣ, ಚಿನ್ನ, ಮುಂತಾದುವುಗಳಿಂದ ಪೂಜಿಸಬೇಕು.

೧೯೮. ಈ ವೃದ್ಧಿಶ್ರಾದ್ಧದಲ್ಲಿ ತಿಲಕ್ಕೆ (ಎಳ್ಳಿಗೆ) ಬದಲಾಗಿ ಅಕ್ಕಿಯನ್ನೇ ಉಪಯೋಗಿಸಬೇಕು. ಎಲ್ಲರಿಗೂ ಒಟ್ಟೊಟ್ಟಿಗೆ ಪೂಜೆಮಾಡಬೇಕು. ಬ್ರಾಹ್ಮಣರೆಲ್ಲರೂ ಒಟ್ಟಿಗೇನೇ ಮಂಗಳವಚನವನ್ನು ಹೇಳಬೇಕು.

೧೯೯. ಈ ವೃದ್ಧಿಶ್ರಾದ್ಧವನ್ನು ಶೂದ್ರನೂ ಕೂಡ ಸಾಮಾನ್ಯವಾಗಿ ಯಾವಾಗಲೂ ಮಾಡಬೇಕು. ನಮಸ್ಕಾರವೇ ಆ ಶೂದ್ರನಿಗೆ ಮಂತ್ರವು. ಎಂದರೆ ಮಂತ್ರವಿಲ್ಲದೆ ನಮಸ್ಕಾರಮಾಡಿ ಕೊಟ್ಟರೆ ಸಾಕು ಎಂದು ಭಾವವು.

೨೦೦. ಶೂದ್ರನು ದಾನಮಾಡುವುದೇ ಪ್ರಧಾನವು ಎಂದು ಭಗವಂತನು ಹೇಳಿದ್ದಾನೆ. ಆ ದಾನದಿಂದಲೇ ಅವನಿಗೆ ಎಲ್ಲಾ ಇಷ್ಟಗಳೂ ಒದಗುತ್ತವೆ.

ಇಲ್ಲಿಗೆ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ಸರ್ವಸಾಧಾರಣವಾದ ಅಭ್ಯುದಯ ಶ್ರಾದ್ಧಕೀರ್ತನವೆಂಬ ಒಂಭತ್ತನೆಯ ಅಧ್ಯಾಯವು ಮುಗಿದುದು.

‖ ಶ್ರೀಃ ‖

# ಅಥ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ದಶಮೋಽಧ್ಯಾಯಃ

‖ ಪುಲಸ್ತ್ಯ ಉವಾಚ ‖

ಏಕೋದ್ದಿಷ್ಟಂ ತತೋ ವಕ್ಷ್ಯೇ ಯದುಕ್ತಂ ಬ್ರಹ್ಮಣಾ ಪುರಾ ।
ಮೃತೇ ಪುತ್ರೈರ್ಯಥಾ ಕಾರ್ಯಮಾಶೌಚಂ ಚ ಪಿತುರ್ಯದಿ ‖ ೧ ‖

ದಶಾಹಂ ಶಾವಮಾಶೌಚಂ ಬ್ರಾಹ್ಮಣೇಷು ವಿಧೀಯತೇ ।
ಕ್ಷತ್ರಿಯೇಷು ದಶ ದ್ವೇ ಚ ಪಕ್ಷೋ ವೈಶ್ಯೇಷು ಚೈವ ಹಿ ‖ ೨ ‖

ಶೂದ್ರೇಷು ಮಾಸಮಾಶೌಚಂ ಸಪಿಂಡೇಷು ವಿಧೀಯತೇ ।
ನೈಶಂ ರಾಜಕಮಾಶೌಚಂ ತ್ರಿರಾತ್ರಪರತಃ ಸ್ಮೃತಂ ‖ ೩ ‖

---

## ಹತ್ತನೆಯ ಅಧ್ಯಾಯವು.

೧. ಪುಲಸ್ತ್ಯನು ಹೇಳಿದನು :—ಇನ್ನು ಮೇಲೆ ಏಕೋದ್ದಿಷ್ಟಶ್ರಾದ್ಧ ವಿಷಯ ವನ್ನು ಹೇಳುತ್ತೇನೆ. ಪೂರ್ವದಲ್ಲಿ ಬ್ರಹ್ಮನು ಹೇಳಿರುವ ರೀತಿಯಲ್ಲಿಯೇ ಹೇಳು ತ್ತೇನೆ. ತಂದೆಯು ಸತ್ತರೆ ಮಗನಾದವನಿಗೆ ಆಶೌಚವು ಹೇಗೆ? ಶ್ರಾದ್ಧ ನಡೆವುದು ಹೇಗೆ? ಎಂಬುದನ್ನು ಹೇಳುತ್ತೇನೆ.

೨. ತಂದೆಯು ಸತ್ತರೆ ಬ್ರಾಹ್ಮಣನಾದವನಿಗೆ ಹತ್ತು ದಿವಸವೂ, ಕ್ಷತ್ರಿಯ ನಿಗೆ ಹನ್ನೆರಡು ದಿನವೂ, ವೈಶ್ಯನಿಗೆ ಹದಿನೈದು ದಿನವೂ ಸೂತಕವು ಇರುತ್ತವೆ.

೩. ಶೂದ್ರರಲ್ಲಿ ಅಶೌಚವು ಒಂದು ತಿಂಗಳವರಿಗೆ ಇರುತ್ತವೆ. ಈ ಅಶೌಚ ಗಳು ಸಪಿಂಡರೆಲ್ಲರಿಗೂ ಉಂಟು. ರಾಜರ ಕಾರ್ಯಗೌರವಕ್ಕೆ ತಕ್ಕಂತೆ ಅವರಿಗೆ ಒಂದು ರಾತ್ರಿ. ಮೂರು ರಾತ್ರಿಯೂ ಕೂಡ ಉಂಟು.

ಜನನೇಪ್ಯೇವಮೇವಂ ತು ಸರ್ವವರ್ಣೇಷು ಸರ್ವದಾ ।
ಅಸ್ಥಿಸಂಚಯನಾದೂರ್ಧ್ವಂ ಯದಾ ಸ್ಪರ್ಶೋ ವಿಧೀಯತೇ ॥ ೪ ॥

ಪ್ರೇತಾಯ ಪಿಂಡದಾನಂ ತದ್ದ್ವಾದಶಾಹಂ ಸಮಾಚರೇತ್ ।
ಪಾಥೇಯಂ ತಸ್ಯ ತತ್ಪ್ರೋಕ್ತಂ ಯತಃ ಪ್ರೀತಿಕರಂ ಮಹತ್ ॥ ೫ ॥

ಯಸ್ಮಾತ್ಪ್ರೇತಪುರಂ ಪ್ರೇತೋ ದ್ವಾದಶಾಹೇನ ನೀಯತೇ ।
ಗೃಹೇ ಪುತ್ರಕಳತ್ರಂ ಚ ದ್ವಾದಶಾಹಂ ಪ್ರಪಶ್ಯತಿ ॥ ೬ ॥

ತಸ್ಮಾನ್ನಿಧೇಯಮಾಕಾಶೇ ದಶರಾತ್ರಂ ಪಯಸ್ತದಾ ।
ಸರ್ವದಾಹೋಪಶಾಂತ್ಯರ್ಥಮಧ್ವಶ್ರಮವಿನಾಶನಂ ॥ ೭ ॥

ತತಸ್ತ್ವೇಕಾದಶಾಹೇ ತು ವಿಪ್ರಾನೇಕಾದಶೈವ ತು ।
ಗೋತ್ರಾಣಿ ಸೂತಕಾಂತೇ ತು ಭೋಜಯೇನ್ಮನುಜೋ ದ್ವಿಜಾನ್ ॥ ೮ ॥

---

೪-೫. ಮಗು ಹುಟ್ಟಿದಾಗಲೂ ಕೂಡ ಎಲ್ಲಾ ವರ್ಣದವರಿಗೂ ಮೇಲೆ ಹೇಳಿದ ರೀತಿಯಲ್ಲಿಯೇ ಅಶೌಚವುಂಟು. ಅಸ್ಥಿಸಂಚಯನಕ್ಕಿಂತಲೂ ಮೊದಲು ಸ್ಪರ್ಶವೆಂಬುದೇ ಇಲ್ಲ. ಅನಂತರವೇ ಮುಟ್ಟುವುದಕ್ಕೆ ಯೋಗ್ಯನಾಗುತ್ತಾನೆ. ಪ್ರೇತ ನಿಗೆ ಹನ್ನೆರಡು ದಿನಗಳವರೆಗೂ ಪಿಂಡವನ್ನು ಕೊಡುತ್ತಿರಬೇಕು ಆ ಪಿಂಡವು ಅವನಿಗೆ ಪ್ರೀತಿಯನ್ನುಂಟುಮಾಡುತ್ತದೆ ಮತ್ತು ಬುತ್ತಿಯಾಗಿರುತ್ತದೆ.

೬. ಹನ್ನೆರಡು ದಿನಗಳಾದಮೇಲೆ ಆ ಪ್ರೇತನನ್ನು ಪ್ರೇತಪುರಕ್ಕೆ ಕರೆದು ಕೊಂಡು ಹೋಗುತ್ತಾರೆ. ಸತ್ತಂದಿನಿಂದ ಆ ಹನ್ನೆರಡು ದಿನಗಳವರೆಗೂ ಆ ಪ್ರೇತನು ಮನೆಯಲ್ಲಿ ಹೆಂಡತಿ ಮಕ್ಕಳು ಮುಂತಾದವರನ್ನು ನೋಡಿಕೊಂಡಿರುತ್ತಾನೆ.

೭. ಆದ್ದರಿಂದ ಭೂಮಿಗೆ ಸೋಕದಂತೆ ಸೂರಿನಮೇಲೆಯಾಗಲಿ, ಮತ್ತೆಲ್ಲಾ ದರೂ ಆಗಲಿ ಹಾಲನ್ನು ಆ ಪ್ರೇತನಿಗೋಸ್ಕರ ಆ ಹತ್ತು ದಿವಸವೂ ಇಟ್ಟಿರಬೇಕು. ಆ ಹಾಲು ಅವನಿಗೆ ದಾಹವನ್ನು ನಾಶಮಾಡುತ್ತದೆ. ಅಲ್ಲದೆ ದಾರಿಯ ಆಯಾಸವನ್ನು ಹೋಗಲಾಡಿಸುತ್ತದೆ.

೮. ಆ ಮೇಲೆ ಹನ್ನೊಂದನೆಯ ದಿನದಲ್ಲಿ ಹನ್ನೊಂದು ಜನ ದಾಯಾದಿಗಳಿಗೆ ಅಥವಾ ಗೋತ್ರದ ಬ್ರಾಹ್ಮಣರಿಗಾದರೂ ಹೇಳಿ ಸೂತಕ ಕಳೆದಮೇಲೆ ಊಟ ಮಾಡಿಸಬೇಕು.

**ದ್ವಿತೀಯೇಽಹ್ನಿ ಪುನಸ್ತದ್ವದೇಕೋದ್ದಿಷ್ಟಂ ಸಮಾಚರೇತ್ ।**
**ಆವಾಹನಾಗ್ನೌಕರಣಂ ದೇವಹೀನಂ ವಿಧಾನತಃ ॥ ೯ ॥**

**ಏಕಂ ಪವಿತ್ರಮೇಕೋಽರ್ಘ್ಯ ಏಕಪಿಂಡೋ ವಿಧೀಯತೇ ।**
**ಉಪತಿಷ್ಠತಾಮಿತಿ ವದೇದ್ದೇಯಂ ಪಶ್ಚಾತ್ತಿಲೋದಕಂ ॥ ೧೦ ॥**

**ಸ್ವಕಂ ವಿಪ್ರಕರೇ ಭೂಯಾದ್ವಿಸರ್ಗೇ ಚಾಭಿರಮ್ಯತಾಂ ।**
**ಶೇಷಂ ಪೂರ್ವವದತ್ರಾಪಿ ಕಾರ್ಯಂ ವೇದವಿದೋ ವಿದುಃ ॥ ೧೧ ॥**

**ಅನೇನ ವಿಧಿನಾ ಸರ್ವಮನುಮಾಸಂ ಸಮಾಚರೇತ್ ।**
**ಸೂತಕಾಂತೇ ದ್ವಿತೀಯೇಽಹ್ನಿ ಶಯ್ಯಾಂ ದದ್ಯಾದ್ವಿಧಾನತಃ ॥ ೧೨ ॥**

**ಕಾಂಚನಂ ಪುರುಷಂ ತದ್ವತ್ಫಲವಸ್ತ್ರಸಮನ್ವಿತಂ ।**
**ಸಂಪೂಜ್ಯ ದ್ವಿಜದಾಂಪತ್ಯಂ ನಾನಾಭರಣಭೂಷಿತಂ ॥ ೧೩ ॥**

---

೯. ಹನ್ನೆರಡನೆಯ ದಿನವಲ್ಲಿ ಅದೇ ರೀತಿ ಗೋತ್ರದ ಬ್ರಾಹ್ಮಣರಿಗೆ ಅನ್ನ ಹಾಕಬೇಕು. ಮತ್ತು ಏಕೋದ್ದಿಷ್ಟಶ್ರಾದ್ಧವನ್ನು ಮಾಡಬೇಕು. ಆವಾಹನೆ, ಅಗ್ನಿಯಲ್ಲಿ ಹೋಮ ಇವನ್ನು ಮಾಡಬೇಕು. ಆದರೆ ಈ ಶ್ರಾದ್ಧದಲ್ಲಿ ವಿಶ್ವೇದೇವರಿಲ್ಲ.

೧೦. ಈ ಏಕೋದ್ದಿಷ್ಟಶ್ರಾದ್ಧದಲ್ಲಿ ಪವಿತ್ರವನ್ನು ಒಂದೇದರ್ಭೆಯಿಂದ ಮಾಡಬೇಕು ಒಂದೇ ಅರ್ಘ್ಯವು, ಒಂದೇ ಪಿಂಡವು. ಅವನ್ನು ಕೊಡುವಾಗ ಉಪತಿಷ್ಠತಾಂ ಎಂದು ಹೇಳಬೇಕು. ಅನಂತರ ಎಳ್ಳುನೀರನ್ನೂ ಕೊಡಬೇಕು.

೧೧. ಬ್ರಾಹ್ಮಣನ ಕೈಯಲ್ಲಿ ಸ್ವದಿತಂ ಎಂದು ನೀರನ್ನು ಬಿಡಬೇಕು. ನೀರನ್ನು ಬಿಡುತ್ತಿರುವಾಗ ಅಭಿರಮ್ಯತಾಂ ಎಂದು ಹೇಳಬೇಕು. ಮಿಕ್ಕ ಕಾರ್ಯಗಳಲ್ಲವೂ ಹಿಂದಿನ ಮಾಸಿಕಶ್ರಾದ್ಧಗಳಂತೆಯೇ ಎಂದು ತಿಳಿದವರು ಹೇಳುತ್ತಾರೆ.

೧೨. ಇದೇ ರೀತಿಯಲ್ಲ ತಿಂಗಳು ತಿಂಗಳಿಗೂ, ಮಾಡುತ್ತಿರಬೇಕು. ಸೂತಕ ಹೋದ ಮಾರನೆಯ ದಿವಸ ವಿಧಿಪೂರ್ವಕವಾಗಿ ಹಾಸಿಗೆಯನ್ನು ದಾನಮಾಡಬೇಕು.

೧೩-೧೪. ಚಿನ್ನದಲ್ಲಿ ಸತ್ತಪುರುಷನ ಪ್ರತಿಮೆಯನ್ನು ಮಾಡಿಸಿ, ಅದನ್ನೂ ಹಣ್ಣು, ಹೂ, ಬಟ್ಟೆಗಳಲ್ಲಿ ಶೃಂಗರಿಸಿರಬೇಕು. ಅವನ್ನು ಹಾಸಿಗೆಯಮೇಲೆ ಇಡಬೇಕು. ಅನಂತರ ಬ್ರಾಹ್ಮಣ ದಂಪತಿಯರನ್ನು ಕೂರಿಸಿ ಅವರಿಗೆ ಅಲಂಕರಿಸಿ, ಆ

**ಉಪವೇಶ್ಯ ತು ಶಯ್ಯಾಯಾಂ ಮಧುಪರ್ಕಂ ತತೋ ದದೇತ್ ।**
**ಅರ್ಘ್ಯಂ ದತ್ವಾ ತು ಪಾತ್ರೇಣ ದಧಿದುಗ್ಧಸಮನ್ವಿತಂ ॥ ೧೪ ॥**

**ಅಸ್ಥಿ ಲಲಾಟಜಂ ಗೃಹ್ಯ ಸೂಕ್ಷ್ಮಂ ಕೃತ್ವಾ ವಿಮಿಶ್ರಯೇತ್ ।**
**ಪಾಯಯೇದ್ದ್ವಿಜದಾಂಪತ್ಯಂ ಪಿತೃಭಕ್ತ್ಯಾ ಸಮನ್ವಿತಃ ॥ ೧೫ ॥**

**ಏಷ ಏವ ವಿಧಿರ್ದೃಷ್ಟಃ ಪಾರ್ವತೀಯೈರ್ದ್ವಿಜೋತ್ತಮೈಃ ।**
**ತೇನ ದುಷ್ಟಾ ತು ಸಾ ಶಯ್ಯಾ ನ ಗ್ರಾಹ್ಯಾ ದ್ವಿಜಸತ್ತಮೈಃ ॥ ೧೬ ॥**

**ಗೃಹೀತಾಯಾಂ ತು ಶಯ್ಯಾಯಾಂ ಪುನಃ ಸಂಸ್ಕಾರಮರ್ಹತಿ ।**
**ವೇದೇ ಚೈವ ಪುರಾಣೇ ಚ ಶಯ್ಯಾ ಸರ್ವತ್ರ ಗರ್ಹಿತಾ ॥ ೧೭ ॥**

**ಗೃಹೀತಾರಸ್ತು ಜಾಯಂತೇ ಸರ್ವೇ ನರಕಗಾಮಿನಃ ।**
**ಗ್ರಥಿತಾಂ ವಸ್ತ್ರಜಾಲೇನ ಶಯ್ಯಾಂ ದಾಂಪತ್ಯಸೇವಿತಾಂ ॥ ೧೮ ॥**

**ಯೇ ಸ್ಪೃಶಂತಿ ನ ಜಾನಂತಃ ಸರ್ವೇ ನರಕಗಾಮಿನಃ ।**
**ನವಶ್ರಾದ್ಧೇ ನ ಭೋಕ್ತವ್ಯಂ ಭುಕ್ತ್ವಾ ಚಾಂದ್ರಾಯಣಂ ಚರೇತ್ ॥ ೧೯ ॥**

---

ಹಾಸಿಗೆಯಲ್ಲಿ ಕೂರಿಸಿ ಮಧುಪರ್ಕವನ್ನು ಕೊಡಬೇಕು ಅನಂತರ ಹಾಲು ಮೊಸರು ಗಳಿಂದ ಕೂಡಿಸಿ ಅವರಿಗೆ ಅರ್ಘ್ಯವನ್ನು ಕೊಡಬೇಕು.

೧೫. ಹಣೆಯ ಮೂಳೆಯನ್ನು ತೆಗೆದುಕೊಂಡು ಸಣ್ಣಗೆ ಪುಡಿಮಾಡಿ ಅದನ್ನು ಆ ಹಾಲಿಗೆ ಸೇರಿಸಿ, ಆ ದಂಪತಿಗಳಿಗೆ ಪಿತೃಭಕ್ತಿಯಿಂದ ಕುಡಿಸಬೇಕು.

೧೬. ಮೇರುಹಿಮವತ್ಪರ್ವಗಳನ್ನಾಶ್ರಯಿಸಿರುವ ಬ್ರಾಹ್ಮಣರು ಹಾಗೆ ಮಾಡುತ್ತಾರೆ. ಆದರಿಂದ ಈ ಶಯ್ಯಾದಾನವು ಕೆಟ್ಟದ್ದು. ಬ್ರಾಹ್ಮಣರು ಅದನ್ನು ತೆಗೆದುಕೊಳ್ಳಬಾರದು.

೧೭. ಆ ಹಾಸಿಗೆಯನ್ನು ತೆಗೆದುಕೊಂಡರೆ ಮತ್ತೆ ಅವರಿಗೆ ದ್ವಿಜಸಂಸ್ಕಾರ ಆಗಬೇಕು. ಆದ್ದರಿಂದಲೇ ವೇದದಲ್ಲಿಯೂ ಪುರಾಣದಲ್ಲಿಯೂ ಈ ಶಯ್ಯಾದಾನ ಗ್ರಹಣವು ನಿಂದಿತವಾಗಿದೆ.

೧೮-೧೯. ಹಾಸಿಗೆ ದಾನವನ್ನು ತೆಗೆದುಕೊಂಡವರು ನರಕಕ್ಕೆ ಹೋಗುತ್ತಾರೆ. ದಂಪತಿಗಳು ಸೇವಿಸಿರುವ ಆ ಹಾಸಿಗೆಯನ್ನು ಮುಟ್ಟಿದವರೂ ನರಕವನ್ನು ಹೊಂದುತ್ತಾರೆ. ನವಶ್ರಾದ್ಧದಲ್ಲಿ ನಿಮಂತ್ರಿತರಾಗಿ ಊಟಮಾಡಬಾರದು. ಹಾಗೆ ಮಾಡಿದರೆ ಚಾಂದ್ರಾಯಣವ್ರತವನ್ನು ಮಾಡಬೇಕು.

ಪಿತೃಭಕ್ತ್ಯಾ ಸುಪುತ್ರೇಣ ಕಾರ್ಯಮೇವಂ ಸದಾ ಭವೇತ್ ।
ವೃಷೋತ್ಸರ್ಗಂ ಚ ಕುರ್ವೀತ ದೇಯಾ ಚ ಕಪಿಲಾ ಶುಭಾ ॥ ೨೦ ॥

ಉದಕುಂಭಶ್ಚ ದಾತವ್ಯೋ ಭಕ್ಷ್ಯಭೋಜ್ಯಸಮನ್ವಿತಃ ।
ಯಾವದಬ್ದಂ ನರಶ್ರೇಷ್ಠ ಸತಿಲೋದಕಪೂರ್ವಕಂ ॥ ೨೧ ॥

ತತಃ ಸಂವತ್ಸರೇ ಪೂರ್ಣೇ ಸಪಿಂಡೀಕರಣಂ ಭವೇತ್ ।
ಸಪಿಂಡೀಕರಣಾದೂರ್ಧ್ವಂ ಪ್ರೇತಃ ಪಾರ್ವಣಭಾಗ್ಯತಃ ॥ ೨೨ ॥

ವೃದ್ಧಿಪೂರ್ವೇಷು ಕಾರ್ಯೇಷು ಗೃಹಸ್ಥಸ್ಯ ಭವೇತ್ತತಃ ।
ಸಪಿಂಡೀಕರಣಶ್ರಾದ್ಧಂ ದೇವಪೂರ್ವಂ ನಿಯೋಜಯೇತ್ ॥ ೨೩ ॥

ಪಿತೄನಾವಾಹಯೇತ್ತತ್ರ ಪೃಥಕ್ಪ್ರೇತಂ ವಿನಿರ್ದಿಶೇತ್ ।
ಗಂಧೋದಕತಿಲೈರ್ಯುಕ್ತಂ ಕುರ್ಯಾತ್ಪಾತ್ರಚತುಷ್ಟಯಂ ॥ ೨೪ ॥

---

೨೦. ಸುಪುತ್ರನಾದವನು ಇವೆಲ್ಲವನ್ನೂ ಮಾಡಬೇಕು. ವೃಷೋತ್ಸರ್ಗವನ್ನೂ ಮಾಡಬೇಕು. ಕಪಿಲೆಯ ಗೋದಾನವನ್ನು ಮಾಡಬೇಕು.

೨೧. ಭಕ್ಷ್ಯಗಳನ್ನು ಊಟಮಾಡಿಸಿ ತಿಲೋದಕದಿಂದ ಕೂಡಿದ ಉದಕುಂಭವನ್ನು ದಾನಮಾಡಬೇಕು.

೨೨. ವರ್ಷ ತುಂಬುತ್ತಲೂ ಸಪಿಂಡೀಕರಣವನ್ನು ಮಾಡಬೇಕು. ಸಪಿಂಡೀಕರಣವಾದಮೇಲೆ ಪ್ರೇತನು ಪಾರ್ವಣಪಿಂಡಕ್ಕೆ (ಶ್ರಾದ್ಧಕ್ಕೆ) ಯೋಗ್ಯನಾಗುತ್ತಾನೆ.

೨೩. ಆಗ ಸಪಿಂಡೀಕರಣಶ್ರಾದ್ಧವಾದಮೇಲೆ ಗೃಹಸ್ಥನು ವೃದ್ಧಿಪೂರ್ವಕ ಶ್ರಾದ್ಧಗಳನ್ನು ಮಾಡಲು ಯೋಗ್ಯನಾಗುತ್ತಾನೆ. ಅದಾದನಂತರವೇ ಇವನೂ ವೃದ್ಧಿ ಶ್ರಾದ್ಧದಲ್ಲಿ ಭಾಗಿಯಾಗುತ್ತಾನೆ. ಸಪಿಂಡೀಕರಣಶ್ರಾದ್ಧದಲ್ಲಿ ವಿಶ್ವೇದೇವರಿಗೂ ಬ್ರಾಹ್ಮಣನಾಗಬೇಕು.

೨೪. ಆ ಸಪಿಂಡೀಕರಣದಲ್ಲಿ ವಿಶ್ವೇದೇವರನ್ನು ಬೇರೆಯಾಗಿಯೂ, ಪಿತೃಗಳನ್ನು ಬೇರೆಯಾಗಿಯೂ, ಪ್ರೇತವನ್ನು ಬೇರೆಯಾಗಿಯೂ ಆವಾಹಿಸಬೇಕು. ಮತ್ತು ಅರ್ಘ್ಯಪಾತ್ರೆಯನ್ನು ನಾಲ್ಕನ್ನಿಡಬೇಕು. ಅದಕ್ಕೆ ಗಂಧನೀರು, ಎಳ್ಳುಗಳನ್ನು ಹಾಕಬೇಕು.

ಅರ್ಘ್ಯಾರ್ಥೇ ಪಿತೃಪಾತ್ರೇಷು ಪ್ರೇತಪಾತ್ರಂ ಪ್ರಸೇಚಯೇತ್ ।
ತದ್ವತ್ಸಂಕಲ್ಪ ಚತುರಃ ಪಿಂಡಾನ್ಪಿಂಡಪ್ರದಸ್ತಥಾ ॥ ೨೫ ॥

ಯೇ ಸಮಾನಾ ಇತಿ ದ್ವಾಭ್ಯಾಮನ್ನಂ ತು ವಿಭಜೇತ್ತ್ರಿಧಾ ।
ಅನೇನ ವಿಧಿನಾ ಚಾರ್ಘ್ಯಂ ಪೂರ್ವಮೇವ ಪ್ರದಾಪಯೇತ್ ॥ ೨೬ ॥

ತತಃ ಪಿತೃತ್ವಮಾಪನ್ನೇ ಸ ಚತುರ್ಥಸ್ತಥಾ ತ್ವಸು ।
ಅಗ್ನಿಷ್ವಾತ್ತಾದಿಮಧ್ಯೇ ತು ಪ್ರಾಪ್ನೋತ್ಯಮೃತಮುತ್ತಮಂ ॥ ೨೭ ॥

ಸಪಿಂಡೀಕರಣಾದೂರ್ಧ್ವಂ ತಸ್ಮೈ ತಸ್ಮಾನ್ನ ದೀಯತೇ ।
ಪಿತೃಷ್ವೇವ ಚ ದಾತವ್ಯಂ ತತ್ಪಿಂಡೇಷ್ವೇವ ಸಂಸ್ಥಿತಃ ॥ ೨೮ ॥

ತತಃ ಪ್ರಭೃತಿ ಸಂಕ್ರಾಂತಾವುಪರಾಗಾದಿಪರ್ವಸು ।
ತ್ರಿಪಿಂಡಮಾಚರೇಚ್ಛ್ರಾದ್ಧಮೇಕೋದ್ದಿಷ್ಟಂ ಮೃತೇಽಹನಿ ॥ ೨೯ ॥

---

೨೫. ಅರ್ಘ್ಯವನ್ನು ಕೊಡುವಾಗ ಪಿತೃಪಾತ್ರದಲ್ಲಿ ಪ್ರೇತಪಾತ್ರದ ನೀರನ್ನು ಹಾಕಿಕೊಳ್ಳಬೇಕು. ಅದರಂತೆ ಸಂಕಲ್ಪಮಾಡಬೇಕು. ಪಿಂಡಗಳನ್ನು ನಾಲ್ಕನ್ನು ಕೊಡಬೇಕು.

೨೬. ಯೇಸಮಾನಾ ಎಂಬ ಎರಡು ಮಂತ್ರಗಳಿಂದ ಆ ಪ್ರೇತದ ಪಿಂಡದ ಅನ್ನವನ್ನು ಮೂರು ಪಿಂಡಗಳಿಗೆ ಹಂಚಬೇಕು. ಇದೇರೀತಿಯಾಗಿ ಅರ್ಘ್ಯವನ್ನು ಮೂರಕ್ಕೂ ಹಂಚಬೇಕು.

೨೭. ಈರೀತಿ ಆ ನಾಲ್ಕನೆಯವನಾದ ಪ್ರೇತನು ಪಿತೃಭಾವವನ್ನು ಹೊಂದಿದ ನಂತರ ಅಗ್ನಿಷ್ವಾತ್ತಾದಿಗಳ ಮಧ್ಯದಲ್ಲಿ ಉತ್ತಮವಾದ ಅಮೃತವನ್ನು ಹೊಂದುತ್ತಾನೆ.

೨೮. ಸಪಿಂಡೀಕರಣವಾದಮೇಲೆ ಆ ಪ್ರೇತಗಳಿಗೆ ಬೇರೆಯಾಗಿ ಅನ್ನನೀರು ಗಳನ್ನು ಹೀಗೆ ಸೇರಿಸುವುದರಿಂದಲೇ ಕೊಡುವುದಿಲ್ಲ. ಪಿತೃಗಳಲ್ಲಿಯೇ ಇರುವುದರಿಂದ ಪಿತೃಗಳಿಗೆ ಕೊಡಬೇಕು.

೨೯. ಅನಂತರ ಸಂಕ್ರಮಣಗಳು, ಗ್ರಹಣಾದಿ ಪರ್ವದಿವಸಗಳು, ಇವುಗಳಲ್ಲಿ ಪಿಂಡಶ್ರಾದ್ಧವನ್ನು ಮಾಡಬೇಕು. ಮತ್ತು ಏಕೋದ್ದಿಷ್ಟವನ್ನೂ, ಮೃತಾಹಶ್ರಾದ್ಧ ವನ್ನೂ ಮಾಡಬೇಕು.

ಏಕೋದ್ದಿಷ್ಟಂ ಪರಿತ್ಯಜ್ಯ ಮೃತಾಹೇ ಯಃ ಸಮಾಚರೇತ್ ।
ಸದೈವಂ ಪಿತೃಹಾ ಸ ಸ್ಯಾತ್ತಥಾ ಭ್ರಾತೃವಿನಾಶಕಃ ॥ ೩೦ ॥

ಮೃತಾಹೇ ಪಾರ್ವಣಂ ಕುರ್ವನ್ನಧೋ ಯಾತಿ ಸ ಮಾನವಃ ।
ಸಂಪೃಕ್ತೇ ಸ್ವರ್ಗತೀಭಾವೇ ಪ್ರೇತಮೋಕ್ಷೋ ಯತೋ ಭವೇತ್ ॥ ೩೧ ॥

ಆಮಶ್ರಾದ್ಧಂ ತದಾ ಕುರ್ಯಾದ್ವಿಧಿನಾ ಶ್ರಾದ್ಧದಸ್ತತಃ ।
ತೇನಾಗ್ನೌಕರಣಂ ಕುರ್ಯಾತ್ಪಿಂಡಾಂಸ್ತೇನೈವ ನಿರ್ವಪೇತ್ ॥ ೩೨ ॥

ತ್ರಿಭಿಃ ಸಪಿಂಡೀಕರಣಂ ಮಾಸೈಕತ್ರಿತಯಂ ತಥಾ ।
ಯದಾ ಪ್ರಾಪ್ಸ್ಯತಿ ಕಾಲೇನ ತದಾ ಮುಚ್ಯೇತ ಬಂಧನಾತ್ ॥ ೩೩ ॥

ಮುಕ್ತೋಽಪಿ ಲೇಪಭಾಗಿತ್ವಂ ಪ್ರಾಪ್ನೋತಿ ಕುಶಮಾರ್ಜನಾತ್ ।
ಲೇಪಭಾಜಶ್ಚತುರ್ಥಾದ್ಯಾಃ ಪಿತ್ರಾದ್ಯಾಃ ಪಿಂಡಭಾಗಿನಃ ।
ಪಿಂಡದಃ ಸಪ್ತಮಸ್ತೇಷಾಂ ಸಪಿಂಡಾಃ ಸಪ್ತ ಪೂರುಷಾಃ ॥ ೩೪ ॥

---

೩೦. ಏಕೋದ್ದಿಷ್ಟವನ್ನು ಮಾಡದೇನೇ ಮೃತಾಹಶ್ರಾದ್ಧವನ್ನು ಮಾಡ ಬಾರದು. ಹಾಗೆ ಮಾಡಿದರೆ ಪಿತೃಗಳನ್ನು ಕೊಂದಂತೆ ಆಗುತ್ತದೆ. ಮತ್ತು ಸೋದರರು ನಾಶವಾಗುತ್ತಾರೆ.

೩೧. ಪಿತೃಗಳೊಡನೆ ಸೇರಿದಮೇಲೆ ಪ್ರೇತನಿಗೆ ಸ್ವರ್ಗವು ಸಿಕ್ಕುತ್ತಾದುದರಿಂದ ಅದಕ್ಕೆ ಮೊದಲು ಮೃತಾಹದಲ್ಲಿ ಪಾರ್ವಣಶ್ರಾದ್ಧವನ್ನು ಮಾಡಿದರೆ ಮನುಷ್ಯನು ನರಕಭಾಗಿಯಾಗುತ್ತಾನೆ.

೩೨. ಹಾಗೆ ಶ್ರಾದ್ಧಮಾಡಬೇಕಾದರೆ ಆಮಶ್ರಾದ್ಧವನ್ನು ಮಾಡಬೇಕು. ಆ ಆಮದಿಂದಲೇ ಅಗ್ನಿಯಲ್ಲಿ ಹೋಮವನ್ನು ಮಾಡಬೇಕು. ಆ ಆಮದಿಂದಲೇ ಪಿಂಡ ಗಳನ್ನು ಹಾಕಬೇಕು.

೩೩. ಆ ಮೂರು ಜನರೊಡನೆ ಸಪಿಂಡೀಕರಣವಾಗಬೇಕು. ಇಲ್ಲದಿದ್ದರೆ ನಾಲ್ಕುತಿಂಗಳು ಆಮಶ್ರಾದ್ಧವಾದಮೇಲೆ ಕ್ರಮವಾಗಿ ಪ್ರೇತಬಂಧನದಿಂದ ಬಿಡಲ್ಪಡು ತ್ತಾನೆ.

೩೪. ಪ್ರೇತತ್ವದಿಂದ ಮುಕ್ತನಾದರೂ ಕುಶಮಾರ್ಜನದಿಂದ ಲೇಪಭಾಗಿಯಾಗಿ ಮಾತ್ರ ಆಗುತ್ತಾನೆ, ಪಿತೃಪಿತಾಮಹಪ್ರಪಿತಾಮಹರು ಪಿಂಡಭಾಗಿಗಳು. ಅದರಿಂದ ಮುಂದಿನವರು ನಾಲ್ಕನೆಯವನು ಮೊದಲುಗೊಂಡು ಲೇಪಭಾಗಿಗಳಾಗುತ್ತಾರೆ.

॥ ಭೀಷ್ಮ ಉವಾಚ ॥
ಕಥಂ ಕವ್ಯಾನಿ ದೇಯಾನಿ ಹವ್ಯಾನಿ ಚ ಜನೈಃ ಕಥಂ ।
ಗೃಹ್ಣಂತಿ ಪಿತೃಲೋಕೇ ವಾ ಪ್ರಾಯಃ ಕಃ ಕೈರ್ನಿಗದ್ಯತೇ ॥ ೩೫ ॥
ಯದಿ ಮರ್ತ್ಯೋ ದ್ವಿಜೋ ಭುಂಕ್ತೇ ಹೂಯತೇ ಯದಿ ವಾsನಲೇ ।
ಶುಭಾಶುಭಾತ್ಮಕಾಃ ಪ್ರೇತಸ್ತದನ್ನಂ ಭುಂಜತೇ ಕಥಂ ॥ ೩೬ ॥
॥ ಪುಲಸ್ತ್ಯ ಉವಾಚ ॥
ವಸುಸ್ವರೂಪಾಃ ಪಿತರೋ ರುದ್ರಾಶ್ಚೈವ ಪಿತಾಮಹಾಃ ।
ಪ್ರಪಿತಾಮಹಾಸ್ತಥಾದಿತ್ಯಾ ಇತ್ಯೇಷಾ ವೈದಿಕೀ ಶ್ರುತಿಃ ॥ ೩೭ ॥
ನಾಮಗೋತ್ರೇ ಪಿತೄಣಾಂ ತು ಪ್ರಾಪಕೇ ಹವ್ಯಕವ್ಯಯೋಃ ।
ಶ್ರಾದ್ಧಸ್ಯ ಮಂತ್ರತಸ್ತತ್ತ್ವಮುಪಲಭ್ಯೇತ ಭಕ್ತಿತಃ ॥ ೩೮ ॥
ಅಗ್ನಿಷ್ವಾತ್ತಾದಯಸ್ತೇಷಾಮಾಧಿಪತ್ಯೇ ವ್ಯವಸ್ಥಿತಾಃ ।
ನಾಮಗೋತ್ರಾಸ್ತಥಾ ದೇಶಾ ಭವಂತ್ಯದ್ಭುವತಾಮಪಿ ॥ ೩೯ ॥

---

ಅವನಿಗೆ ಪಿಂಡವನ್ನು ಕೊಡಬೇಕಾದರೆ ಅಪಿಂಡ ಏಳನೆಯವನು. ಆಗ ಅವನಿಗೆ ಆ ಏಳುಜನರೂ ಸಪಿಂಡರಾಗುತ್ತಾರೆ.

೩೫. ಭೀಷ್ಮನು ಕೇಳಿದನು :—ಕವ್ಯವೆಂದರೆ ಪಿತೃಗಳಿಗೆ ಕೊಡುವ ಅನ್ನ ಹವ್ಯವೆಂದರೆ ದೇವತೆಗಳಿಗೆಕೊಡುವ ಅನ್ನ. ಇವನ್ನು ಜನರು ಹೇಗೆ ಕೊಡಬೇಕು? ಪಿತೃಲೋಕದಲ್ಲಿ ಅವನ್ನು ಯಾರು ತೆಗೆದುಕೊಳ್ಳುತ್ತಾರೆ? ಯಾರು ಹೇಳುತ್ತಾರೆ?

೩೬. ಆ ಪ್ರೇತಗಳ ಹೆಸರುಗಳನ್ನು ಹೇಳಿ ಈ ಭೂಲೋಕದಲ್ಲಿಯೇ ಮನುಷ್ಯನು ಊಟಮಾಡುತ್ತಾನೆ. ಬೆಂಕಿಯಲ್ಲಿ ಹಾಕಿ ಆ ಅನ್ನವನ್ನು ಸುಡುತ್ತಾರೆ. ಹೀಗಿರುವಲ್ಲಿ ಆ ಪ್ರೇತಗಳು ಅದನ್ನು ಹೇಗೆ ತಿನ್ನುತ್ತವೆ?

೩೭. ಪುಲಸ್ತ್ಯನು ಹೇಳುತ್ತಾನೆ:— ಪಿತೃಗಳೆಲ್ಲರೂ ವಸುಸ್ವರೂಪರು. ಪಿತಾಮಹರೆಲ್ಲರೂ ರುದ್ರಸ್ವರೂಪರು, ಪ್ರಪಿತಾಮಹರೆಲ್ಲರೂ ಆದಿತ್ಯಸ್ವರೂಪರು ಎಂಬುದಾಗಿ ವೇದದಲ್ಲಿ ಹೇಳಿದೆ.

೩೮. ಹವ್ಯಕವ್ಯಗಳು ಪಿತೃಗಳಿಗೆ ಸೇರಬೇಕಾದರೆ ಅವರ ಹೆಸರು, ಗೋತ್ರಗಳೇ ಕಾರಣ. ಮಂತ್ರದಿಂದ ಶ್ರಾದ್ಧದ ತತ್ವವನ್ನು ತಿಳಿದುಕೊಂಡು ಹೊಂದುತ್ತಾರೆ.

೩೯. ಅವರುಗಳಿಗೆ ಅಗ್ನಿಷ್ವಾತ್ತಾದಿ ದೇವತೆಗಳು ಅಧಿಪತಿಗಳಾಗಿ ಇರುತ್ತಾರೆ. ಕೊಡುವವರು ಹೇಳುವ ಹೆಸರು, ಗೋತ್ರ, ದೇಶಗಳು ಗೊತ್ತಾಗುತ್ತವೆ.

ಪ್ರಾಣಿನಃ ಪ್ರೀಣಯತ್ಯೇತದರ್ಹಣಾಂ ಸಮುಪಾಗತಂ ।
ದಿವ್ಯೋ ಯದಿ ಪಿತಾ ಮಾತಾ ಶುಭಕರ್ಮಾನುಯೋಗತಃ ॥ ೪೦ ॥

ತಸ್ಮಾತ್ತ್ವಮಮೃತಂ ಭೂತ್ವಾ ದಿವ್ಯತ್ವೇಽಪ್ಯನುಗಚ್ಛತಿ ।
ದೈತ್ಯತ್ವೇ ಭೋಗರೂಪೇಣ ಪಶುತ್ವೇ ಚ ತೃಣಂ ಭವೇತ್ ॥ ೪೧ ॥

ಶ್ರಾದ್ಧಾನ್ನಂ ವಾಯುರೂಪೇಣ ನಾನಾತ್ವೇನೋಪತಿಷ್ಠತಿ ।
ಪಾನಂ ಭವತಿ ಯಕ್ಷತ್ವೇ ರಾಕ್ಷಸತ್ವೇ ತಥಾಮಿಷಂ ॥ ೪೨ ॥

ದಾನವತ್ವೇ ತಥಾ ಪಾನಂ ಪ್ರೇತತ್ವೇ ರುಧಿರೋದಕಂ ।
ಮನುಷ್ಯತ್ವೇಽನ್ನಪಾನಾದಿ ನಾನಾ ಭೋಗವತಾಂ ಭವೇತ್ ॥ ೪೩ ॥

ರತಿಶಕ್ತಿಃ ಸ್ತ್ರಿಯಃ ಕಾಂತಾ ಭೋಜ್ಯಂ ಭೋಜನಶಕ್ತಿತಾ ।
ದಾನಶಕ್ತಿಃ ಸವಿಭವಾ ರೂಪಮಾರೋಗ್ಯಮೇವ ಚ ॥ ೪೪ ॥

ಶ್ರಾದ್ಧಂ ಪುಷ್ಪಮಿದಂ ಪ್ರೋಕ್ತಂ ಫಲಂ ಬ್ರಹ್ಮಸಮಾಗಮಃ ।
ಆಯುಃ ಪುತ್ರಾನ್ಧನಂ ವಿದ್ಯಾಂ ಸ್ವರ್ಗಂ ಮೋಕ್ಷಂ ಸುಖಾನಿ ಚ ॥ ೪೫ ॥

---

೪೦-೪೧. ಜನಗಳು ಕೊಟ್ಟ ಈ ಅನ್ನವು ಬಂದು ಆ ಪ್ರಾಣಿಗಳನ್ನು ಹೊಂದಿ ತೃಪ್ತಿಪಡಿಸುತ್ತದೆ. ಒಂದುವೇಳೆ ಶ್ರಾದ್ಧಮಾಡುವವನ ತಾಯಿತಂದೆಗಳು ಒಳ್ಳೆಯ ಪುಣ್ಯದಿಂದ ಸ್ವರ್ಗವನ್ನು ಹೊಂದಿದ್ದರೆ, ಆ ಅನ್ನವು ಅಮೃತವಾಗಿ ದೇವತೆಗಳಾಗಿರುವ ಅವರನ್ನು ಹೊಂದುತ್ತದೆ. ದೈತ್ಯರಾಗಿದ್ದರೆ ಯಾವುದಾದರೂ ಭೋಗರೂಪದಿಂದಲೂ, ಪಶುವಾಗಿದ್ದರೆ ಹುಲ್ಲಾಗಿಯೂ ಆಗುತ್ತದೆ. ನಾವು ಕೊಟ್ಟ ಶ್ರಾದ್ಧಾನ್ನವು ವಾಯುರೂಪದಿಂದಿದ್ದು ನಾನಾಬಗೆಯಾಗಿ ಆಗುತ್ತದೆ.

೪೨-೪೩. ಯಕ್ಷರಿಗೆ ಪಾನವಾಗಿಯೂ, ರಾಕ್ಷಸರಿಗೆ ಮಾಂಸವಾಗಿಯೂ, ದಾನವರಿಗೆ ಪಾನವಾಗಿಯೂ, ಪ್ರೇತರಿಗೆ ರಕ್ತದನೀರಾಗಿಯೂ, ಮನುಷ್ಯರಿಗೆ ಅನ್ನಪಾನಗಳಾಗಿಯೂ, ಈರೀತಿ ನಾನಾಬಗೆಯಾಗಿ ಆಗುತ್ತವೆ.

೪೪. ಸ್ತ್ರೀಗೆ ರತಿಶಕ್ತಿಯಾಗುತ್ತದೆ. ತಿನ್ನುವ ಪದಾರ್ಥವೂ ಆಗುತ್ತವೆ. ತಿನ್ನುವುದಕ್ಕೆ ಶಕ್ತಿಯನ್ನು ಕೊಡುತ್ತವೆ. ಅವೇ ದಾನಮಾಡುವ ಶಕ್ತಿಯನ್ನೂ ಕೊಡುತ್ತದೆ. ಅದೇ ಐಶ್ವರ್ಯವೂ ಆಗುತ್ತವೆ. ರೂಪ, ಆರೋಗ್ಯವೂ ಅವೇ ಆಗುತ್ತದೆ.

೪೫. ಈ ಶ್ರಾದ್ಧವೇ ಹೂವು. ಫಲವು ಬ್ರಹ್ಮನನ್ನು ಪಡೆಯುವಿಕೆ ಆಗುತ್ತದೆ. ಪ್ರೀತರಾದ ಪಿತೃಗಣಗಳು, ಆಯುಸ್ಸು, ಮಕ್ಕಳು, ಧನ, ವಿದ್ಯೆ, ಸ್ವರ್ಗ, ಮೋಕ್ಷ, ಸುಖ, ರಾಜ್ಯ ಇವುಗಳನ್ನು ಕೊಡುತ್ತಾರೆ.

ಪ್ರಯಚ್ಛಂತಿ ತಥಾ ರಾಜ್ಯಂ ಪ್ರೀತಾಃ ಪಿತೃಗಣಾ ನೃಪ ।
ಶ್ರೂಯತೇ ಚ ಪುರಾ ಮೋಕ್ಷಂ ಪ್ರಾಪ್ತಾಃ ಕೌಶಿಕಸೂನವಃ ॥ ೪೬ ॥

ಪಂಚಭಿರ್ಜನ್ಮಸಂಬಂಧೈಃ ಪ್ರಾಪ್ತಾ ಬ್ರಹ್ಮ ಪರಂ ಪದಂ ॥ ೪೭ ॥

॥ ಭೀಷ್ಮ ಉವಾಚ ॥

ಕಥಂ ಕೌಶಿಕದಾಯಾದಾಃ ಪ್ರಾಪ್ತಾ ಯೋಗಮನುತ್ತಮಂ ।
ಪಂಚಭಿರ್ಜನ್ಮಸಂಬಂಧೈಃ ಕಥಂ ಕರ್ಮಕ್ಷಯೋಽಭವತ್ ॥ ೪೮ ॥

ಪುಲಸ್ತ್ಯ ಉವಾಚ ॥

ಕೌಶಿಕೋ ನಾಮ ಧರ್ಮಾತ್ಮಾ ಕುರುಕ್ಷೇತ್ರೇ ಮಹಾನೃಷಿಃ ।
ನಾಮತಃ ಕರ್ಮತಸ್ತಸ್ಯ ಸುತಾನಾಂ ತನ್ನಿಬೋಧತ ॥ ೪೯ ॥

ಸ್ವಸೃಪಃ ಕ್ರೋಧನೋ ಹಿಂಸ್ರಃ ಪಿಶುನಃ ಕವಿರೇವ ಚ ।
ವಾಗ್ದುಷ್ಟಃ ಪಿತೃವರ್ತೀ ಚ ಗರ್ಗಶಿಷ್ಯಾಸ್ತದಾಭವನ್ ॥ ೫೦ ॥

ಪಿತರ್ಯುಪರತೇ ತೇಷಾಮಭೂದ್ದುರ್ಭಿಕ್ಷಮುಲ್ಬಣಂ ।
ಅನಾವೃಷ್ಟಿಃ ಸುಮಹತೀ ಸರ್ವಲೋಕಭಯಂಕರೀ ॥ ೫೧ ॥

---

೪೬-೪೭. ಪೂರ್ವದಲ್ಲಿ ಕೌಶಿಕನ ಮಕ್ಕಳು ಐದು ಜನ್ಮಗಳಿಂದ ಬ್ರಹ್ಮಪದವನ್ನು ಹೊಂದಿದರೆಂದು ಕೇಳಿದ್ದೇವೆ.

೪೮. ಭೀಷ್ಮನು ಹೇಳಿದನು :—ಕೌಶಿಕನ ಮಕ್ಕಳು ಐದು ಜನ್ಮಗಳಿಂದ ಯೋಗವನ್ನು ಹೊಂದಿ ಹೇಗೆ ತಾನೆ ಕರ್ಮವನ್ನು ನಾಶಮಾಡಿಕೊಂಡರು ?

೪೯. ಪುಲಸ್ತ್ಯನು ಹೇಳಿದನು :—ಕುರುಕ್ಷೇತ್ರದಲ್ಲಿ ಧರ್ಮಾತ್ಮನಾದ ಕೌಶಿಕನೆಂಬ ಋಷಿಯೊಬ್ಬನಿದ್ದನು. ಹೆಸರು, ಕೆಲಸಗಳಿಂದ ಅವರು ಮಾಡಿದ ವಿಷಯವನ್ನು ಕೇಳು.

೫೦. ಸ್ವಸೃಪ, ಕ್ರೋಧನ, ಹಿಂಸ್ರ, ಪಿಶುನ, ಕವಿ, ವಾಗ್ದುಷ್ಟ, ಪಿತೃವರ್ತೀ ಎಂಬುದಾಗಿ ಆ ಕೌಶಿಕನಿಗೆ ಏಳು ಜನ ಮಕ್ಕಳು ಇವರೆಲ್ಲರೂ ಗರ್ಗನಿಗೆ ಶಿಷ್ಯರಾಗಿದ್ದರು.

೫೧. ಹೀಗಿರಲು ಅವರ ತಂದೆಯು ಸತ್ತುಹೋದನು. ಅನಂತರ ಬಹು ದುರ್ಭಿಕ್ಷವು ಪ್ರಾಪ್ತವಾಯಿತು. ಎಲ್ಲಾ ಜನಗಳಿಗೂ ಭಯವನ್ನುಂಟುಮಾಡುವ ಅನಾವೃಷ್ಟಿಯೂ ಕೂಡ ಉಂಟಾಯಿತು.

ಗರ್ಗಾದೇಶಾದ್ವನೇ ದೋಗ್ಧ್ರೀಂ ರಕ್ಷಂತಿ ಚ ತಪೋಧನಾಃ ।
ಖಾದಾಮಃ ಕಪಿಲಾಮೇತಾಂ ವಯಂ ಕ್ಷುತ್ಪೀಡಿತಾ ಭೃಶಂ ॥ ೫೨ ॥

ಇತಿ ಚಿಂತಯತಾಂ ಪಾಪಂ ಲಘುಃ ಪ್ರಾಹ ದಿವಾನುಜಃ ।
ಯದ್ಯವಶ್ಯಮಿಯಂ ವಧ್ಯಾ ಶ್ರಾದ್ಧರೂಪೇಣ ಯೋಜ್ಯತಾಂ ॥ ೫೩ ॥

ಶ್ರಾದ್ಧೇ ನಿಯೋಜ್ಯಮಾನೇಯಂ ಪಾಪಾತ್ತ್ರಾಸ್ಯತಿ ನೋ ಧ್ರುವಂ ।
ಏವಂ ಕುರ್ವಿತ್ಯನುಜ್ಞಾತಃ ಪಿತೃವರ್ತೀ ತದಾನುಜೈಃ ॥ ೫೪ ॥

ಚಕ್ರೇ ಸಮಾಹಿತಃ ಶ್ರಾದ್ಧಮುಪಯುಜ್ಯಾಥ ತಾಂ ಪುನಃ ।
ದ್ವೌ ದೇವೇ ಭ್ರಾತರೌ ಕೃತ್ವಾ ಪಿತ್ರ್ಯೇ ತ್ರೀನ್ ಭ್ರಾತರಃ ಕ್ರಮಾತ್ ॥ ೫೫ ॥

ತಥೈಕಮತಿಥಿಂ ಕೃತ್ವಾ ಶ್ರಾದ್ಧದಃ ಸ್ವಯಮೇವ ತು ।
ಚಕಾರ ಮಂತ್ರವಚ್ಛ್ರಾದ್ಧಂ ಸ್ಮರನ್ ಪಿತೃಪರಾಯಣಃ ॥ ೫೬ ॥

---

೫೨. ಇವರು ಗುರುವಾದ ಗರ್ಗನ ಅಪ್ಪಣೆಯಂತೆ ಕಾಡಿನಲ್ಲಿ ಹಸುವನ್ನು ಕಾಯುತ್ತಿದ್ದರು. ಆಗ ಇವರಿಗೆ ಹಸಿವು ಬಹಳವಾಗಲು ಈ ಹಸುವನ್ನು ತಿನ್ನಬೇಕೆಂದು ಮನಸ್ಸುಮಾಡಿದರು.

೫೩. ಈರೀತಿ ಇವರು ಕೆಟ್ಟಯೋಚನೆ ಮಾಡುತ್ತಿರಲು ತಮ್ಮನು ಅಣ್ಣಂದಿರನ್ನು ಕುರಿತು ನೀವು ಈ ಹಸುವನ್ನು ಖಂಡಿತವಾಗಿಯೂ ಕೊಲ್ಲಬೇಕಾದರೆ ಅದನ್ನು ಕೊಂದು ಶ್ರಾದ್ಧದಲ್ಲಿ ಉಪಯೋಗಿಸಿರಿ.

೫೪. ಶ್ರಾದ್ಧದಲ್ಲಿ ಇದನ್ನು ಉಪಯೋಗಿಸಿದರೆ ನಮಗೆ ಇದನ್ನು ಕೊಂದ ಪಾಪವು ಬರುವುದಿಲ್ಲವೆಂದನು. ಆಗ ಹಾಗೆಯೇ ಆಗಲೆಂದು ಎಲ್ಲರೂ ಹೇಳಲು, ಪಿತೃವರ್ತಿಯಾದ ಹಿರಿಯ ಮಗನು ಕೊಲ್ಲಲು ಒಪ್ಪಿದನು.

೫೫-೫೬. ಆ ಹಸುವನ್ನು ಉಪಯೋಗಿಸಿ ಅವರು ಆಗ ಶ್ರಾದ್ಧಮಾಡಿದರು. ವಿಶ್ವೇದೇವರಿಗೋಸ್ಕರ ಇಬ್ಬರನ್ನೂ ಪಿತೃಗಳಿಗೆ ಮೂವರನ್ನು ಅತಿಥಿಯಾಗಿ ಒಬ್ಬನನ್ನು ಆ ಭ್ರಾತೃಗಳಲ್ಲೆ ನಿಮಂತ್ರಿಸಿ, ಹಿರಿಯನಾದವನು ತಾನೇ ಶ್ರಾದ್ಧಕರ್ತನಾದನು, ಮತ್ತು ಪಿತೃಗಳನ್ನು ಸ್ಮರಿಸುತ್ತಾ ಮಂತ್ರವತ್ತಾಗಿ ಶ್ರಾದ್ಧವನ್ನು ಮಾಡಿದನು.

ತದಾ ಗತ್ವಾ ವಿಶಂಕಾಸ್ತೇ ಗುರುವೇ ಚ ನ್ಯವೇದಯನ್ ।
ವ್ಯಾಘ್ರೇಣ ನಿಹತಾ ಧೇನುರ್ವತ್ಸೋಽಯಂ ಪ್ರತಿಗೃಹ್ಯತಾಂ ॥ ೫೭ ॥

ಏವಂ ಸಾ ಭಕ್ಷಿತಾ ಧೇನುಃ ಸಪ್ತಭಿಸ್ತೈಸ್ತಪೋಧನೈಃ ।
ವೈದಿಕಂ ಬಲಮಾಶ್ರಿತ್ಯ ಕ್ರೂರೇ ಕರ್ಮಣಿ ನಿರ್ಭಯಾಃ ॥ ೫೮ ॥

ತತಃ ಕಾಲಾಪಕೃಷ್ಟಾಸ್ತೇ ವ್ಯಾಧಾ ದಶಪುರೇಽಭವನ್ ।
ಜಾತಿಸ್ಮರತ್ವಂ ಪ್ರಾಪ್ತಾಸ್ತೇ ಪಿತೃಭಾವೇನ ಭಾವಿತಾಃ ॥ ೫೯ ॥

ತತ್ರ ವೈ ಜ್ಞಾನವೈರಾಗ್ಯಾತ್ಪ್ರಾಣಾನುತ್ಸೃಜ್ಯ ಧರ್ಮತಃ ।
ಲೋಕೈರವೇಕ್ಷ್ಯಮಾಣಾಸ್ತೇ ತೀರ್ಥಾಂತೇಽನಶನೇನ ತು ॥ ೬೦ ॥

ಸಂಜಾತಾ ಮೃಗರೂಪಾಸ್ತೇ ಸಪ್ತ ಕಾಲಂಜರೇ ಗಿರೌ ।
ಪ್ರಾಪ್ತವಿಜ್ಞಾನಯೋಗಾಸ್ತೇ ತತ್ಯಜುಸ್ತಾಂ ನಿಜಾಂ ತನುಂ ॥ ೬೧ ॥

---

೫೭. ಅವರು ಗುರುವಿನ ಬಳಿಗೆ ಹೋಗಿ ಸ್ವಲ್ಪವೂ ಸಂದೇಹಪಡದೆ ಆತನಿಗೆ ನಮ್ಮ ಹಸುವನ್ನು ಹುಲಿಯು ತಿಂದುಬಿಟ್ಟಿತು, ಕರುವನ್ನು ತೆಗೆದುಕೊಳ್ಳಿ ಎಂದು ಹೇಳಿದರು.

೫೮. ಆ ಏಳು ಜನ ತಪೋಧನರೂ ಕೂಡ ವೈದಿಕವಾದ ಬಲವನ್ನಾಶ್ರಯಿಸಿ ಕೆಟ್ಟ ಕೆಲಸವನ್ನು ಸ್ವಲ್ಪವೂ ಭಯವಿಲ್ಲದೆ ನಡೆಸಿದರು.

೫೯. ಕೆಲವು ಕಾಲದ ಮೇಲೆ ಸತ್ತು ದಶಪುರದಲ್ಲಿ ವ್ಯಾಧರಾಗಿ ಹುಟ್ಟಿ, ತಾವು ಮಾಡಿದ ಕೆಲಸದ ಪ್ರಭಾವದಿಂದ ತಮ್ಮ ಪೂರ್ವ ಜನ್ಮದ ಸ್ಮರಣೆಯನ್ನು ಹೊಂದಿದರು.

೬೦. ಆ ವ್ಯಾಧಜಾತಿಯಲ್ಲಿಯೂ ಜ್ಞಾನದ ವೈರಾಗ್ಯದಿಂದ ಧರ್ಮರೀತಿಯಲ್ಲಿ, ತೀರ್ಥಪ್ರದೇಶದಲ್ಲಿ, ಅನಶನವ್ರತದಿಂದ ಜನಗಳು ಕಾಣುವಂತೆಯೇ ಪ್ರಾಣಗಳನ್ನು ಬಿಟ್ಟರು.

೬೧. ಆ ಏಳು ಜನರೂ ಕಾಲಂಜರವೆಂಬ ಬೆಟ್ಟದಲ್ಲಿ ಮೃಗಗಳಾಗಿ ಹುಟ್ಟಿದರು. ಅವರಲ್ಲಿಯೂ ಜ್ಞಾನವನ್ನು ಹೊಂದಿ ಆ ಶರೀರವನ್ನು ಬಿಟ್ಟರು

**ತತಃ ಪ್ರಪತನೇನಾಥ ಜಾತಾ ವೈರಾಗ್ಯಮಾನಸಾಃ ।**
**ಮಾನಸೇ ಚಕ್ರವಾಕಾಸ್ತೇ ಸಂಜಾತಾಃ ಸಪ್ತ ಯೋಗಿನಃ ॥ ೬೨ ॥**

**ನಾಮತಃ ಕರ್ಮತಃ ಸರ್ವೇ ಸುಮನಾಃ ಕುಸುಮೋ ವಸುಃ ।**
**ಛಿದ್ರದರ್ಶೀ ಸುದರ್ಶೀ ಚ ಜ್ಞಾತಾ ಜ್ಞಾನಸ್ಯ ಪಾರಗಃ ॥ ೬೩ ॥**

**ಜ್ಯೇಷ್ಠಾನುರಕ್ತಾಃ ಶ್ರೇಷ್ಠಾಸ್ತೇ ಸಪ್ತೈತೇ ಯೋಗಪಾವನಾಃ ।**
**ಯೋಗಭ್ರಷ್ಟಾಸ್ತ್ರಯಸ್ತೇಷಾಂ ಬಭೂವುಶ್ಚಲಚೇತಸಃ ॥ ೬೪ ॥**

**ದೃಷ್ಟ್ವಾ ವಿಭ್ರಾಜಮಾನಂ ತಮುಣುಹಂ ಸ್ತ್ರೀಭಿರಾವೃತಂ ।**
**ಕ್ರೀಡಂತಂ ವಿವಿಧೈರ್ಭೋಗೈರ್ಮಹಾಬಲಪರಾಕ್ರಮಂ ॥ ೬೫ ॥**

**ಪಂಚಾಲಾನ್ವಯಸಂಭೂತಂ ಪ್ರಭೂತಧನವಾಹನಂ ।**
**ರಾಜ್ಯಕಾಮೋಽಭವತ್ತ್ವೇಕಸ್ತೇಷಾಂ ಮಧ್ಯೇ ಜಲೌಕಸಾಂ ॥ ೬೬ ॥**

---

೬೨. ಆ ಮೃಗರೂಪಿನಲ್ಲಿದ್ದಾಗ ಬೆಟ್ಟದಿಂದ ಬಿದ್ದು ಮರಣಹೊಂದಿದುದರಿಂದ ಮಾನಸಸರೋವರದಲ್ಲಿ ಚಕ್ರವಾಕಗಳಾಗಿ ಏಳು ಜನರೂ ಹುಟ್ಟಿದರು.

೬೩. ಸುಮನ, ಕುಸುಮ, ವಸು, ಛಿದ್ರದರ್ಶೀ, ಸುದರ್ಶೀ, ಜ್ಞಾತಾ, ಜ್ಞಾನಪಾರಗ ಎಂಬುದಾಗಿ ಅವರು ಅನ್ವರ್ಥವಾದ ಹೆಸರನ್ನು ಹೊಂದಿದರು.

೬೪. ಅವರೆಲ್ಲರೂ ಯೋಗದಿಂದ ಯೋಗ್ಯರಾಗಿ ದೊಡ್ಡವನಲ್ಲಿ ಪ್ರೀತಿಯನ್ನು ಇಟ್ಟುಕೊಂಡಿದ್ದರು. ಅನಂತರ ಅವರಲ್ಲಿ ಮೂವರು ಚಂಚಲಚಿತ್ತರಾಗಿ ಯೋಗ ಭ್ರಷ್ಟರಾದರು.

೬೫-೬೬. ಹೀಗಿರುತ್ತಿರಲು ಪಾಂಚಾಲದೇಶದ ರಾಜನ ಮಗನು ಅಲ್ಲಿಗೆ ಬಂದು ಹೆಂಗಸರೊಡನೆ ರಮಿಸುತ್ತಿರಲು, ಅವನನ್ನು ಈ ಮೂವರು ನೋಡಿದರು. ಅವನು ಬಹುವಾಗಿ ಧನವನ್ನೂ ವಾಹನಗಳನ್ನೂ ಹೊಂದಿದ್ದು ಸುಖಪಡುತ್ತಿದ್ದುದ ರಿಂದ ಅವರಲ್ಲಿ ಒಬ್ಬನು ರಾಜ್ಯಭಾರಮಾಡಬೇಕೆಂಬ ಆಸೆಯುಳ್ಳವನಾದನು.

ಪಿತೃವರ್ತೀ ತು ಯೋ ವಿಪ್ರಃ ಶ್ರಾದ್ಧಕೃತ್ಪಿತೃವತ್ಸಲಃ ।
ಅಪರೌ ಮಂತ್ರಿಣೌ ದೃಷ್ಟ್ವಾ ಪ್ರಭೂತಧನವಾಹನೌ ॥ ೬೭ ॥

ಮಂತ್ರಿತ್ವೇ ಚಕ್ರತುಶ್ಚೇಚ್ಛಾಮಸ್ಮಿನ್ಮರ್ತ್ಯೇ ದ್ವಿಜೋತ್ತಮೌ ।
ವಿಭ್ರಾಜಪುತ್ರಸ್ತ್ವೇಕೋಽಭೂದ್ಬ್ರಹ್ಮದತ್ತ ಇತಿ ಸ್ಮೃತಃ ॥ ೬೮ ॥

ಮಂತ್ರಿಪುತ್ರೌ ತಥಾ ಚೈವ ಪುಂಡರೀಕಸುಬಾಲಕೌ ।
ಬ್ರಹ್ಮದತ್ತೋಽಭಿಷಿಕ್ತಸ್ತು ಕಾಂಪಿಲ್ಯೇ ನಗರೋತ್ತಮೇ ॥ ೬೯ ॥

ಪಾಂಚಾಲರಾಜೋ ವಿಕ್ರಾಂತಃ ಶ್ರಾದ್ಧಕೃತ್ಪಿತೃವತ್ಸಲಃ ।
ಯೋಗವಿತ್ಸರ್ವಜಂತೂನಾಂ ಚಿತ್ತವೇತ್ತಾಽಭವತ್ಸದಾ ॥ ೭೦ ॥

ತಸ್ಯ ರಾಜ್ಞೋಽಭವದ್ಭಾರ್ಯಾ ಸುದೇವಸ್ಯಾತ್ಮಜಾ ತದಾ ।
ಸಂನತಿರ್ನಾಮ ವಿಖ್ಯಾತಾ ಕಪಿಲಾ ಯಾಭವತ್ಪುರಾ ॥ ೭೧ ॥

ಪಿತೃಕಾರ್ಯೇ ನಿಯುಕ್ತತ್ವಾದಭವದ್ಬ್ರಹ್ಮವಾದಿನೀ ।
ತಯಾ ಚಕಾರ ಸಹಿತಃ ಸ ರಾಜ್ಯಂ ರಾಜನಂದನಃ ॥ ೭೨ ॥

---

೬೭. ಶ್ರಾದ್ಧವನ್ನು ಮಾಡಿದ ಈ ಪಿತೃವರ್ತಿಯು ಉಳಿದ ಮಂತ್ರಿಗಳ ವಿಭವವನ್ನು ನೋಡಿದನು.

೬೮. ಆ ಇಬ್ಬರೂ ಮಂತ್ರಿಗಳಾಗಬೇಕೆಂದು ಇಚ್ಛಿಸಿದರು. ಅಂತೆಯೇ ಆ ರಾಜ್ಯಾಭಿಲಾಷಿಯು ವೈಭ್ರಾಜನ ಹೊಟ್ಟೆಯಲ್ಲಿ ಬ್ರಹ್ಮದತ್ತನೆಂಬ ಹೆಸರಿನಿಂದ ಹುಟ್ಟಿದನು.

೬೯. ಕಾಂಪಿಲ್ಯನಗರದಲ್ಲಿ ಬ್ರಹ್ಮದತ್ತನೆಂದು ಅಭಿಷಿಕ್ತನಾಗಿ ರಾಜನಾದನು. ಪುಂಡರೀಕ ಬಾಲಕರಾದ ಇವರು ಇಬ್ಬರೂ ಮಂತ್ರಿಗಳಾದರು.

೭೦. ಪಾಂಚಾಲರಾಜನಾಗಿ ಪರಾಕ್ರಮಶಾಲಿಯಾಗಿದ್ದನು. ಮತ್ತು ತಂದೆಯಲ್ಲಿ ಭಕ್ತಿಯುಳ್ಳವನಾದುದರಿಂದಲೂ ಯೋಗಿಯಾದುದರಿಂದಲೂ ಯಾವಾಗಲೂ ಎಲ್ಲಾ ಪ್ರಾಣಿಗಳ ಮನಸ್ಸಿನಲ್ಲಿರುವುದನ್ನು ತಿಳಿದವನಾಗಿರುತ್ತಿದ್ದನು.

೭೧-೭೨. ಹಿಂದಿನ ಜನ್ಮದಲ್ಲಿ ಪಿತೃಕಾರ್ಯಕ್ಕೋಸ್ಕರ ಕೊಂಡಿದ್ದ ಹಸುವು ಬ್ರಹ್ಮವಾದಿನಿಯಾಗಿ ಸನ್ನತಿಯೆಂಬ ಹೆಸರಿನಿಂದ ಹುಟ್ಟಿ ಆ ರಾಜನಿಗೆ ಹೆಂಡತಿಯಾದಳು. ಆ ರಾಜನು ಆಕೆಯೊಂದಿಗೆ ರಾಜ್ಯಭಾರಮಾಡುತ್ತಿದ್ದನು.

**ಕದಾಚಿದ್ಗತ ಉದ್ಯಾನೇ ತಯಾ ಸಹ ಸ ಪಾರ್ಥಿವಃ ।**
**ದದರ್ಶ ಕೀಟಮಿಥುನಮನಂಗಕಲಹಾನ್ವಿತಂ ॥ ೭೩ ॥**

**ಪಿಪೀಲಿಕಾಮುಪಾಸಂತಂ ಪುರತಃ ಕೀಟಿಕಾಮುಕಃ ।**
**ಪಂಚಬಾಣಾಭಿತಪ್ತಾಂಗಃ ಸಗದ್ಗದಮುವಾಚ ಹ ॥ ೭೪ ॥**

**॥ ಪಿಪೀಲಿಕ ಉವಾಚ ॥**

**ನ ತ್ವಯಾ ಸದೃಶೀ ಲೋಕೇ ಕಾಮಿನೀ ವಿದ್ಯತೇ ಕ್ವಚಿತ್ ।**
**ಮಧ್ಯೇ ಕ್ಷಾಮಾತಿಜಘನಾ ಬೃಹದ್ವಕ್ತ್ರಾತಿಗಾಮಿನೀ ॥ ೭೫ ॥**

**ಸುವರ್ಣವರ್ಣಸದೃಶೀ ಸದ್ವಕ್ತ್ರಾ ಚಾರುಹಾಸಿನೀ ।**
**ಆಲಕ್ಷ್ಯತೇ ಚ ವದನಂ ಗುಡಶರ್ಕರವತ್ಸಲಂ ॥ ೭೬ ॥**

**ಭೋಕ್ಷ್ಯಸೇ ಮಯಿ ಭುಕ್ತೇ ತ್ವಂ ಸ್ನಾಸಿ ಸ್ನಾತೇ ಸದಾ ಮಯಿ ।**
**ಪ್ರೋಷಿತೇ ಮಯಿ ದೀನಾ ತ್ವಂ ಕ್ರುದ್ಧೇ ಚ ಭಯಚಂಚಲಾ ॥ ೭೭ ॥**

---

೭೩. ಒಂದು ನಾಡು ಆಕೆಯೊಡನೆ ಉದ್ಯಾನವನದಲ್ಲಿ ಸಂಚರಿಸುತ್ತಿದ್ದಾಗ ಎರಡು ದಂಪತಿಗಳಾದ ಹುಳುಗಳು ಮನ್ಮಥಕ್ರೀಡೆಯಲ್ಲಿ ಜಗಳವಾಡಿಕೊಂಡಿದ್ದುದನ್ನು ಕಂಡನು.

೭೪. ಅವುಗಳು ಇರುವೆಗಳಾಗಿದ್ದುವು. ಹೆಣ್ಣು ಇರುವೆಯನ್ನು ಅನುಸರಿಸುತ್ತ ಆ ಮನ್ಮಥಬಾಣದಿಂದ ತಪ್ತವಾದ ಗಂಡು ಇರುವೆಯು ಗದ್ಗದ ಸ್ವರದಿಂದ ಇಂತೆಂದಿತು.

೭೫. ಗಂಡು ಇರುವೆಯು ಹೇಳಿತು:—ಎಲೈ ಭಾಮಿನಿಯೆ! ಲೋಕದಲ್ಲಿ ನಿನ್ನ ಸಮಾನರೇ ಯಾರೂ ಇಲ್ಲ. ನಡುವಿನಲ್ಲಿ ಸಣ್ಣಗೂ, ಸೊಂಟದ ಮುಂಭಾಗದಲ್ಲಿ ದಪ್ಪವಾಗಿಯೂ ದೊಡ್ಡ ಮುಖವುಳ್ಳವಳಾಗಿಯೂ ಜಾಗ್ರತೆ ಹೋಗುವವಳಾಗಿಯೂ ಇದ್ದೀಯೆ.

೭೬. ಚಿನ್ನ ಬಣ್ಣಕ್ಕಿದ್ದೀಯೆ, ಮುಖವು ಬಹು ಚೆನ್ನಾಗಿದೆ, ನಗುಮುಖವುಳ್ಳವಳಾಗಿದ್ದೀಯೆ, ನಿನ್ನ ಮುಖವು ಬೆಲ್ಲ ಸಕ್ಕರೆ ಇವುಗಳಂತಿದೆ, ಅವುಗಳ ಅಚ್ಚಿನಂತಿದೆ.

೭೭. ನಾನು ಊಟಮಾಡಿದನಂತರ ನೀನು ಊಟಮಾಡುತ್ತೀಯೆ ನನಗೆ ಸ್ನಾನವಾಗುತ್ತಲೂ ಸ್ನಾನಮಾಡುತ್ತೀಯೆ. ನಾನು ಎಲ್ಲಾದರೂ

ಕಿಮರ್ಥಂ ವದ ಕಲ್ಯಾಣಿ ಸದಾಧೋವದನಾ ಸ್ಥಿತಾ ।
ಸಾ ತಮಾಹ ತದಾ ಕೋಪಾತ್ಕಿಮಾಲಪಸಿ ವೇಗವಾನ್ ॥ ೭೮ ॥

ತ್ವಯಾ ಮೋದಕಚೂರ್ಣಂ ತು ಮಾಂ ವಿಹಾಯಾಭಿಭಕ್ಷಿತಂ ।
ಪ್ರದತ್ತಂ ಚಾಪ್ಯತಿಕ್ರಮ್ಯ ಮಾಮನ್ಯಸ್ಯಾಸ್ತ್ವಯಾಧಮ ॥ ೭೯ ॥

॥ ಪಿಪೀಲಕ ಉವಾಚ ॥

ತ್ವತ್ಸಾದೃಶ್ಯಾನ್ಮಯಾ ದತ್ತಮನ್ಯಸ್ಯಾ ವರವರ್ಣಿನಿ ।
ತದೇಕಮಪರಾಧಂ ಮೇ ಕ್ಷಂತುಮರ್ಹಸಿ ಶೋಭನೇ ॥ ೮೦ ॥

ನೈವಂ ಪುನಃ ಕರಿಷ್ಯಾಮಿ ತ್ಯಜ ಕೋಪಂ ಚ ಸುಸ್ತನಿ ।
ಸ್ಪೃಶಾಮಿ ಪಾದೌ ಸತ್ಯೇನ ಪ್ರಸೀದ ಪ್ರಣತಸ್ಯ ಮೇ ॥ ೮೧ ॥

ರುಷ್ಟಾಯಾಂ ತ್ವಯಿ ಸುಶ್ರೋಣೀ ಮೃತ್ಯುರ್ಮೇ ಪುರತೋ ಭವೇತ್ ।
ತುಷ್ಟಾಯಾಂ ತ್ವಯಿ ವಾಮೋರು ಪೂರ್ಣಾಃ ಸರ್ವಮನೋರಥಾಃ ॥ ೮೨ ।

---

ಹೋದರೆ ನೀನು ದುಃಖದಿಂದಿರುತ್ತೀಯೆ. ನಾನು ಕೋಪಗೊಂಡರೆ ನೀನು ಭಯ ದಿಂದ ನಡುಗುತ್ತೀಯೆ.

೭೮-೭೯. ಎಲೈ ಕಲ್ಯಾಣಿಯೇ! ಏತಕ್ಕೋಸ್ಕರ ಯಾವಾಗಲೂ ತಲೆತಗ್ಗಿಸಿಕೊಂಡಿದ್ದೀಯೆ, ಹೇಳು ಎಂದಿತು. ಆಗ ಆ ಹೆಣ್ಣು ಇರುವೆಯು ಕೋಪದಿಂದ, ಎಲೈ! ನೀನು ಅವಸರವಾಗಿ ಏನು ಹೇಳುತ್ತಿದ್ದೀಯೆ? ನೀನು ಆ ಕಡುಬಿನ ಪುಡಿಯನ್ನು ನನ್ನನ್ನು ಬಿಟ್ಟುಬಿಟ್ಟೇ ತಿಂದಿದ್ದೀಯೆ. ಅಲ್ಲದೆ ನನ್ನನ್ನು ಬಿಟ್ಟು ಮತ್ತೊಬ್ಬಳಿಗೂ ಕೊಟ್ಟೆಯಲ್ಲ?

೮೦. ಗಂಡು ಇರುವೆಯು ಹೇಳಿತು:—ಆಕೆಯೂ ನಿನ್ನಂತೆ ಇದ್ದುದರಿಂದ ನೀನೇ ಎಂದು ತಿಳಿದುಕೊಟ್ಟೆನು, ಅದೇ ಒಂದು ತಪ್ಪು, ಅದನ್ನು ದಯವಿಟ್ಟು ಕ್ಷಮಿಸು.

೮೧. ಇನ್ನು ಮೇಲೆ ಹೀಗೆ ಮಾಡುವುದಿಲ್ಲ. ಎಲೈ, ಸುಸ್ತನಿಯೆ! ಕೋಪವನ್ನು ಬಿಟ್ಟುಬಿಡು. ನಿನ್ನ ಪಾದದಾಣೆಗೂ ಪ್ರಮಾಣವಾಗಿ ಹೀಗೆ ಮಾಡುವುದಿಲ್ಲ, ನಮಸ್ಕರಿಸುತ್ತೇನೆ, ಕ್ಷಮಿಸಿ ಪ್ರಸನ್ನಳಾಗು.

೮೨ ಎಲೈ ಸುಶ್ರೋಣಿಯೇ! ನೀನು ಕೋಪಗೊಂಡರೆ ನನಗೆ ಸಾವು ಎದುರಿಗೆ ನಿಲ್ಲುತ್ತದೆ. ನೀನು ಸಂತೋಷಗೊಂಡರೆ ನನ್ನ ಇಷ್ಟಾರ್ಥಗಳೆಲ್ಲವೂ ಪೂರ್ಣವಾಗುತ್ತವೆ.

ಪೂರ್ಣಚಂದ್ರೋಪಮಂ ವಕ್ತ್ರಂ ಸ್ವಾದೇಽಮೃತರಸೋಪಮಂ
ನಿರ್ಭರಂ ಪಿಬ ಸುಶ್ರೋಣೀ ಕಾಮಾಸಕ್ತಸ್ಯ ಮೇ ಸದಾ　　|| ೮೩ ||

ಏತನ್ಮತ್ವಾ ಶುಭೇ ಕಾರ್ಯಾ ಸರ್ವದಾ ತು ಕೃಪಾ ಮಯಿ ।
ಇತಿ ಸಾ ವಚನಂ ಶ್ರುತ್ವಾ ಪ್ರಸನ್ನಾ ಚಾಭವತ್ತತಃ　　|| ೮೪ ||

ಆತ್ಮಾನಮರ್ಪಯಾಮಾಸ ಮೋಹನಾಯ ಪಿಪೀಲಿಕಾ ।
ಬ್ರಹ್ಮದತ್ತೋಽಪಿ ತತ್ಸರ್ವಂ ಜ್ಞಾತ್ವಾ ಸಸ್ಮಯಮಾಹಸತ್　　|| ೮೫ ||

ಸರ್ವಸತ್ತ್ವರುತಜ್ಞಾನಾತ್ಪ್ರಭಾವಾತ್ಪೂರ್ವಕರ್ಮಣಃ　　|| ೮೬ ||

|| ಭೀಷ್ಮ ಉವಾಚ ||

ಕಥಂ ಸರ್ವರುತಜ್ಞೋಽಭೂದ್ಬ್ರಹ್ಮದತ್ತೋ ನರಾಧಿಪಃ ।
ತಚ್ಚಾಭವತ್ಕಸ್ಯ ಕುಲೇ ಚಕ್ರವಾಕಚತುಷ್ಟಯಂ　　|| ೮೭ ||

ತನ್ಮೇ ಕಥಯ ಧರ್ಮಜ್ಞ ಕುಲೇ ಕಸ್ಯ ಚ ಜಜ್ಞಿವಾನ್　　|| ೮೮ ||

---

೮೩. ನಿನ್ನ ಮುಖವು ಪೂರ್ಣ ಚಂದ್ರನಂತಿದೆ. ಆಸ್ವಾದಿಸಿದರೆ ಅಮೃತರಸ ದಂತಿರುವುದು. ಕಾಮಾಸಕ್ತನಾದ ನನ್ನ ಮುಖವನ್ನು ಪೂರ್ತಿಯಾಗಿ ಆಸ್ವಾದಿಸು.

೮೪. ಇದನ್ನು ತಿಳಿದು ಯಾವಾಗಲೂ ನನ್ನಲ್ಲಿ ಕೃಪೆಯಿಡು ಎನ್ನಲು ಆಕೆಯು ಆ ಮಾತನ್ನು ಕೇಳಿ ಪ್ರಸನ್ನಳಾದಳು.

೮೫-೮೬. ಅನಂತರ ಕಾಮಾನುಭವಕ್ಕೋಸ್ಕರ ಆ ಹೆಣ್ಣಿರುವೆಯು ದೇಹ ವನ್ನು ಕೊಟ್ಟಿತು. ಬ್ರಹ್ಮದತ್ತನು ಇದೆಲ್ಲವನ್ನೂ ಪೂರ್ವ ಜನ್ಮದ ಕರ್ಮ ಪ್ರಭಾವ ದಿಂದುಂಟಾದ, ಎಲ್ಲಾ ಪ್ರಾಣಿಗಳ ಭಾಷೆಯನ್ನು ತಿಳಿಯತಕ್ಕ ಜ್ಞಾನದಿಂದ ಕೇಳಿ ತಿಳಿದು ಆಶ್ಚರ್ಯದಿಂದ ನಕ್ಕನು.

೮೭-೮೮. ಭೀಷ್ಮನು ಹೇಳಿದನು :—ಎಲೈ ಪುಲಸ್ತ್ಯನೆ! ಬ್ರಹ್ಮದತ್ತನೆಂಬ ರಾಜನು ಎಲ್ಲಾ ಪ್ರಾಣಿಗಳ ಭಾಷೆಯನ್ನು ತಿಳಿಯಲು ಹೇಗೆ ಸಮರ್ಥನಾದನು? ಪಕ್ಕಿ ನಾಲ್ಕು ಚಕ್ರವಾಕಗಳು ಎಲ್ಲಿ ಹುಟ್ಟಿದುವು? ಎಲೈ ಧರ್ಮಜ್ಞನೆ, ಅವರು ಯಾವ ಕುಲದಲ್ಲಿ ಹುಟ್ಟಿದರೆಂಬುದನ್ನು ತಿಳಿಸು.

॥ ಪುಲಸ್ತ್ಯ ಉವಾಚ ॥

ತಸ್ಮಿನ್ನೇವ ಪುರೇ ಜಾತಾಶ್ಚಕ್ರವಾಕಾ ಅಥೋ ನೃಪ ।
ವೃದ್ಧದ್ವಿಜಸ್ಯ ದಾಯಾದಾ ವಿಪ್ರಾ ಜಾತಿಸ್ಮರಾ ಬುಧಾಃ ॥ ೮೯ ॥

ಧೃತಿಮಾನ್ಸರ್ವದರ್ಶೀ ಚ ವಿದ್ಯಾಚಂದ್ರಸ್ತಪೋಧಿಕಃ ।
ನಾಮತಃ ಕರ್ಮತಶ್ಚೈವ ಸುದರಿದ್ರಸ್ಯ ತೇ ಸುತಾಃ ॥ ೯೦ ॥

ತಪಸೇ ಬುದ್ಧಿರಭವತ್ತತಸ್ತೇಷಾಂ ದ್ವಿಜನ್ಮನಾಂ ।
ಯಾಸ್ಯಾಮಃ ಪರಮಾಂ ಸಿದ್ಧಿಮೂಚುಸ್ತೇ ದ್ವಿಜಸತ್ತಮಾಃ ॥ ೯೧ ॥

ತತಸ್ತದ್ವಚನಂ ಶ್ರುತ್ವಾ ಸ ದರಿದ್ರೋ ಮಹಾತಪಾಃ ।
ಉವಾಚ ದೀನಯಾ ವಾಚಾ ಕಿಮೇತದಿತಿ ಪುತ್ರಕಾಃ ॥ ೯೨ ॥

ಅಧರ್ಮ ಏಷ ವಃ ಪುತ್ರಾಃ ಪಿತಾ ತಾನಿತ್ಯುವಾಚ ಹ ।
ವೃದ್ಧಂ ಪಿತರಮುತ್ಸೃಜ್ಯ ದರಿದ್ರಂ ವನವಾಸಿನಂ ॥ ೯೩ ॥

೮೯. ಪುಲಸ್ತ್ಯನು ಹೇಳಿದನು :—ಉಳಿದ ನಾಲ್ಕು ಚಕ್ರವಾಕಗಳು ಅದೇ ಊರಿನಲ್ಲಿ ಒಬ್ಬ ವೃದ್ಧಬ್ರಾಹ್ಮಣನ ಮಕ್ಕಳಾಗಿ ಹುಟ್ಟಿ ಜಾತಿಸ್ಮರತ್ವವನ್ನು ಹೊಂದಿದರು.

೯೦. ಆ ತಂದೆಯ ಹೆಸರು ವಿದ್ಯಾಚಂದ್ರನು, ಹೆಸರಿಗೆ ತಕ್ಕಂತೆ ವಿದ್ಯಾವಂತನಾಗಿದ್ದನು ; ಮತ್ತು ಧೈರ್ಯಶಾಲಿಯಾಗಿಯೂ, ಎಲ್ಲವನ್ನೂ ತಿಳಿದವನಾಗಿಯೂ ಇದ್ದನು. ಆದರೆ ಆತನು ದರಿದ್ರನು.

೯೧. ಅನಂತರ ಆ ಮಕ್ಕಳಿಗೆ ತಪಸ್ಸುಮಾಡಬೇಕೆಂಬ ಬುದ್ಧಿ ಹುಟ್ಟಿತು. ಆಗ ತಂದೆಗೆ ನಾವು ತಪಸ್ಸುಮಾಡಿ ಸಿದ್ಧಿಯನ್ನು ಹೊಂದಬೇಕೆಂದು ಹೇಳಿದರು.

೯೨. ಆಗ ಮಹಾತಪಸ್ವಿಯೂ ದರಿದ್ರನೂ ಆದ ಆ ಬ್ರಾಹ್ಮಣನು ಅವರ ಮಾತನ್ನು ಕೇಳಿ, ಎಲೈ ಮಕ್ಕಳಿರಾ! ಇದೇನು? ಇದು ನಿಮಗೆ ಅಧರ್ಮವು, ಎಂದು ದೀನತೆಯಿಂದ ನುಡಿದನು.

೯೩. ವೃದ್ಧನೂ, ದರಿದ್ರನೂ, ವನವಾಸಿಯೂ, ಬೇರೆ ಗತಿಯಿಲ್ಲದವನೂ ಆದ ತಂದೆಯನ್ನು ಬಿಟ್ಟು ಹೋಗುವುದು ನಿಮಗೆ ಯಾವ ಧರ್ಮವು? ಎಂದು ಕೇಳಿದನು.

ಕೋ ನು ಧರ್ಮೋಽತ್ರ ಭವತಾಂ ಮಾಂ ತ್ಯಕ್ತ್ವಾ ಗತಿರ್ನೇವ ಚ ।
ಊಚುಸ್ತೇ ಕಲ್ಪಿತಾ ವೃತ್ತಿಸ್ತವ ತಾತ ಬತ ಶೃಣು ॥ ೯೪ ॥

ವಿತ್ತಮೇತತ್ಪುರಾ ರಾಜ್ಞಾ ಸ ತೇ ದಾಸ್ಯತಿ ಪುಷ್ಕಲಂ ।
ಧನಂ ಗ್ರಾಮಸಹಸ್ರಾಣಿ ಪ್ರಭಾತೇ ಪಠತಸ್ತವ ॥ ೯೫ ॥

ಕುರುಕ್ಷೇತ್ರೇ ತು ಯೇ ವಿಪ್ರಾ ವ್ಯಾಧಾ ದಶಪುರೇ ತು ಯೇ ।
ಕಾಲಂಜರೇ ಮೃಗೀಭೂತಾಶ್ಚಕ್ರವಾಕಾಸ್ತು ಮಾನಸೇ ॥ ೯೬ ॥

ಇತ್ಯುಕ್ತ್ವಾ ಪಿತರಂ ಜಗ್ಮುಸ್ತೇ ವನಂ ತಪಸೇ ಪುನಃ ।
ವೃದ್ಧೋಽಪಿ ಸ ದ್ವಿಜೋ ರಾಜಜ್ಞಾಗಾಮಾಥಾರ್ಥಸಿದ್ಧಯೇ ॥ ೯೭ ॥

ಅಣುಹೋ ನಾಮ ವೈಭ್ರಾಜಃ ಪಂಚಾಲಾಧಿಪತಿಃ ಪುರಾ ।
ಪುತ್ರಾರ್ಥೀ ದೇವದೇವೇಶಂ ಪದ್ಮಯೋನಿಂ ಪಿತಾಮಹಂ ॥ ೯೮ ॥

ಆರಾಧಯಾಮಾಸ ವಿಭುಂ ತೀವ್ರವ್ರತಪರಾಯಣಃ ।
ತತಃ ಕಾಲೇನ ಮಹತಾ ತುಷ್ಟಸ್ತಸ್ಯ ಪಿತಾಮಹಃ

॥ ಬ್ರಹ್ಮೋವಾಚ ॥

ವರಂ ವೃಣೀಷ್ವ ಭದ್ರಂ ತೇ ಹೃದಯೇ ತೇಽಸ್ತಿ ಯನ್ನೃಪ ॥ ೯೯ ॥

---

೯೪-೯೫ ಎಲೈ ತಂದೆಯೆ, ನಿನಗೆ ಜೀವನಕ್ಕೆ ಕಲ್ಪಿಸಿದ್ದೇವೆ, ಕೇಳು. ಈ ಊರಿನ ರಾಜನು ನಿನಗೆ ಬಹಳವಾಗಿ ಹಣವನ್ನೂ, ಸಾವಿರಾರು ಗ್ರಾಮಗಳನ್ನೂ ಕೊಡುತ್ತಾನೆ, ನೀನು ಬೆಳಗ್ಗೆ ಎದ್ದು ಇದನ್ನು ಹೇಳಿಕೊಂಡು ಇರು.

೯೬. "ಕುರುಕ್ಷೇತ್ರದಲ್ಲಿ ಬ್ರಾಹ್ಮಣರಾಗಿಯೂ ದಶಪುರದಲ್ಲಿ ವ್ಯಾಧರಾಗಿಯೂ ಹುಟ್ಟಿದವರು ಕಾಲಂಜರದಲ್ಲಿ ಮೃಗಗಳಾಗಿಯೂ, ಮಾನಸದಲ್ಲಿ ಚಕ್ರವಾಕಗಳಾಗಿಯೂ ಹುಟ್ಟಿದರು." ಎಂದು ಹೇಳಿಂದು ತಂದೆಗೆ ಹೇಳಿ ತಪಸ್ಸುಮಾಡಲು ಕಾಡಿಗೆ ಹೋದರು.

೯೭. ಅನಂತರ ಆ ವೃದ್ಧನು ಹಣಕ್ಕೋಸ್ಕರ ಕೈಲಾಗದಿದ್ದರೂ ಹೊರಟನು

೯೮-೯೯. ಹೀಗಿರಲು ಪ್ರಕಾಶಮಾನನಾದ ಅಣುಹನೆಂಬ ಹೆಸರುಳ್ಳ ಪಾಂಚಾಲರಾಜನು ಮಕ್ಕಳಿಗೋಸ್ಕರ ಪದ್ಮಯೋನಿಯಾದ ಬ್ರಹ್ಮನನ್ನು ತೀವ್ರವ್ರತಗಳಿಂದ ಪೂಜಿಸಲು ಬಹುಕಾಲದ ಮೇಲೆ ಆ ಬ್ರಹ್ಮನು ಪ್ರಸನ್ನನಾದನು.

॥ ರಾಜೋವಾಚ ॥

ಪುತ್ರಂ ಮಾಂ ದೇಹಿ ದೇವೇಶ ಮಹಾಬಲಪರಾಕ್ರಮಂ ।
ಪಾರಗಂ ಸರ್ವವಿದ್ಯಾನಾಂ ಧಾರ್ಮಿಕಂ ಯೋಗಿನಾಂ ವರಂ ॥ ೧೦೦ ॥

ಸರ್ವಸತ್ತ್ವರುತಜ್ಞಂ ಮೇ ದೇಹಿ ಯೋಗಿನಮಾತ್ಮಜಂ ।
ಏವಮಸ್ತ್ವಿತಿ ವಿಶ್ವಾತ್ಮಾ ತಮಾಹ ಪರಮೇಶ್ವರಃ ॥ ೧೦೧ ॥

ಪಶ್ಯತಾಂ ಸರ್ವಭೂತಾನಾಂ ತತ್ರೈವಾಂತರಧೀಯತ ।
ತತಃ ಸ ತಸ್ಯ ಪುತ್ರೋಽಭೂದ್ಬ್ರಹ್ಮದತ್ತಃ ಪ್ರತಾಪವಾನ್ ॥ ೧೦೨ ॥

ಸರ್ವಸತ್ತ್ವಾನುಕಂಪೀ ಚ ಸರ್ವಸತ್ತ್ವಬಲಾಧಿಕಃ ।
ಸರ್ವಸತ್ತ್ವರುತಜ್ಞಶ್ಚ ಸರ್ವಸತ್ತ್ವೇಶ್ವರೇಶ್ವರಃ ॥ ೧೦೩ ॥

ಅಥ ಸತ್ತ್ವೇನ ಯೋಗಾತ್ಮಾ ಸ ಪಿಪೀಲಿಕಮಾಗತಃ ।
ಯತ್ರ ತತ್ಕೀಟಮಿಥುನಂ ರಮಮಾಣಮವಸ್ಥಿತಂ ॥ ೧೦೪ ॥

---

೧೦೦. ಬ್ರಹ್ಮನು ಹೇಳಿದನು :—ಎಲೈ ದೊರೆಯೆ ! ನಿನ್ನ ಮನಸ್ಸಿನಲ್ಲಿರು ವುದನ್ನು ಕೇಳಿಕೋ.

೧೦೧. ರಾಜನು ಹೇಳಿದನು :—ಎಲೈ ಬ್ರಹ್ಮನೇ, ನನಗೆ ಬಲಿಷ್ಠನಾದ ಪರಾಕ್ರಮಿಯಾದ, ಎಲ್ಲಾ ವಿದ್ಯೆಯಲ್ಲಿಯೂ ಪಾರಂಗತನಾದ, ಧರ್ಮಿಷ್ಠನಾದ, ಯೋಗಿಗಳಲ್ಲಿ ಶ್ರೇಷ್ಠನಾದ, ಎಲ್ಲಾ ಪ್ರಾಣಿಗಳ ಭಾಷೆಯನ್ನು ಬಲ್ಲ ಮಗನನ್ನು ಕೊಡು.

೧೦೨. ಆಗ ಆ ಬ್ರಹ್ಮನು ಹಾಗೆಯೇ ಆಗಲೆಂದು ಹೇಳಿ, ಎಲ್ಲರೂ ನೋಡು ತ್ತಿರುವಂತೆಯೇ ಅಂತರ್ಧಾನನಾದನು.

೧೦೩. ಆ ವೈಭ್ರಾಜನೆಂಬ ಅಣುಹನಿಗೆ ಮಗನಾಗಿ ಹುಟ್ಟಿ ಬ್ರಹ್ಮದತ್ತ ನೆಂದು ಹೆಸರನ್ನು ಹೊಂದಿದನು. ಬಹು ಪ್ರತಾಪಶಾಲಿಯೂ, ಪ್ರಾಣಿದಯೆಯುಳ್ಳ ವನೂ, ಎಲ್ಲರಿಗಿಂತಲೂ ಬಲಿಷ್ಠನೂ, ಎಲ್ಲರಿಗೂ ಒಡೆಯನೂ ಆದನು.

೧೦೪. ಈ ಯೋಗಿಯಾದ ಬ್ರಹ್ಮದತ್ತನು ಆ ಇರುವೆಗಳು ರಮಿಸುತ್ತ ಮೇಲೆ ಹೇಳಿದ ರೀತಿಯಲ್ಲಿ ಮಾತನಾಡುತ್ತಿದ್ದ ಜಾಗಕ್ಕೆ ಬಂದನು.

ತತಃ ಸಾ ಸಂನತಿರ್ದೃಷ್ಟ್ವಾ ತಂ ಹಸಂತಂ ಸುವಿಸ್ಮಿತಂ ।
ಕಿಮಪ್ಯಾಶಂಕಮಾನಾ ಸಾ ತಮಪೃಚ್ಛನ್ನರಾಧಿಪಂ ॥ ೧೦೫ ॥

॥ ಸನ್ನತಿರುವಾಚ ॥

ಅಕಸ್ಮಾದೇವ ಹಾಸೋಽಯಂ ಕಿಮರ್ಥಮಭವನ್ನೃಪ ।
ಹಾಸ್ಯಹೇತುಂ ನ ಜಾನಾಮಿ ಯದಕಾಲೇ ಕೃತಂ ತ್ವಯಾ ॥ ೧೦೬ ॥

ಅವದದ್ರಾಜಪುತ್ರೋಽಸೌ ತಾಂ ಪಿಪೀಲಿಕಭಾಷಿತಂ ।
ರಾಗವದ್ವಿವಶೋತ್ಪನ್ನಮೇತದ್ಧಾಸ್ಯಂ ವರಾನನೇ ॥ ೧೦೭ ॥

ನ ಚಾನ್ಯತ್ಕಾರಣಂ ಕಿಂಚಿದ್ಧಾಸ್ಯಹೇತುಃ ಶುಚಿಸ್ಮಿತೇ ।
ನ ಸಾಽಮನ್ಯತ ತಂ ದೇವೀ ಪ್ರಾಹಾಲೀಕಮಿದಂ ತವ ॥ ೧೦೮ ॥

ಅಹಮೇವಾದ್ಯ ಹಸಿತಾ ನ ಜೀವಿಷ್ಯೇ ತ್ವಯಾಽಧುನಾ ।
ಕಥಂ ಪಿಪೀಲಿಕಾಲಾಪಮನ್ಯೋ ವೇತ್ತಿ ಸುರಾದೃತೇ ॥ ೧೦೯ ॥

ತಸ್ಮಾತ್ತ್ವಯಾಽಹಮೇವಾದ್ಯ ಹಸಿತಾ ಕಿಮತಃ ಪರಂ ।
ತತೋ ನಿರುತ್ತರೋ ರಾಜಾ ಜಿಜ್ಞಾಸುಸ್ತದ್ವಚೋ ಹರೇಃ ॥ ೧೧೦ ॥

---

೧೦೫. ಹಾಗೆ ನಗುತ್ತಿದ್ದ ಆ ಬ್ರಹ್ಮದತ್ತನನ್ನು ಹೆಂಡತಿಯಾದ ಸನ್ನತಿಯು ನೋಡಿ, ಏನೋ ಸಂದೇಹಪಟ್ಟು ಆ ರಾಜನನ್ನು ಕುರಿತು ಕೇಳಿದಳು.

೧೦೬. ಎಲೈ ಧೊರೆಯೆ, ಈ ನಗುವು ಅಕಸ್ಮಾತ್ತಾಗಿ ಬರಲು ಕಾರಣವೇನು ? ನನಗೆ ಗೊತ್ತಾಗಲಿಲ್ಲವಲ್ಲ ?

೧೦೭. ಆಗ ಆ ರಾಜನು ಇರುವೆಗಳು ಮಾತನಾಡಿಕೊಂಡುದನ್ನು ಹೇಳಿದನು. ಆಸಕ್ತಿಯಿಂದ ಪರಾಧೀನನಾಗಿ ಈರೀತಿ ಮಾತನಾಡಿದುದರಿಂದ ನಗುವು ಬಂದಿತು.

೧೦೮. ಎಲೈ ಶುಚಿಸ್ಮಿತೆಯೆ ! ಬೇರೆಯಾದ ಕಾರಣವೇನೂ ಇಲ್ಲ ಎನ್ನಲು ಆಕೆಯು ಒಪ್ಪದೆ ನೀನು ಹೇಳುವ ಈ ಮಾತು ಸುಳ್ಳು ಎಂದಳು.

೧೦೯. ನನ್ನನ್ನು ಕುರಿತು ಈಗ ನೀನು ನಕ್ಕದ್ದು. ಇರುವೆಗಳ ಮಾತನ್ನು ದೇವತೆಗಳ ಹೊರತು ಮತ್ತಾರು ತಿಳಿದಾರು ?

೧೧೦. ಆದ್ದರಿಂದ ನೀನು ನನ್ನನ್ನೇ ಹಾಸ್ಯಮಾಡಿದೆ, ಮತ್ತೇನೂ ಇಲ್ಲ ಎನ್ನಲು, ರಾಜನು ಏನೊಂದು ಉತ್ತರವನ್ನೂ ಹೇಳಲಾರದವನಾಗಿ ಆಕೆಯು ಹಾಗೆ ಹೇಳಲು ಕಾರಣವನ್ನು ತಿಳಿಯುವುದಕ್ಕೋಸ್ಕರ ಎಳುದಿವಸಗಳು ನಿಯಮವನ್ನು ಹೊಂದಿದ್ದನು.

ಆಸ್ಥಾಯ ನಿಯಮಂ ತಸ್ಥೌ ಸಪ್ತರಾತ್ರಮಕಲ್ಮಷಃ ।
ಸ್ವಪ್ನಾಂತೇ ಪ್ರಾಹ ತಂ ಬ್ರಹ್ಮಾ ಪ್ರಭಾತೇ ಪರ್ಯಟನ್ಪುರಂ ॥ ೧೧೧ ॥

ವೃದ್ಧದ್ವಿಜೋತ್ತಮಾದ್ವಾಕ್ಯಂ ಸರ್ವಂ ಜ್ಞಾಸ್ಯತಿ ತೇ ಪ್ರಿಯಾ ।
ಇತ್ಯುಕ್ತ್ವಾಽಂತರ್ದಧೇ ಬ್ರಹ್ಮಾ ಪ್ರಭಾತೇ ಚ ನೃಪಃ ಪುರಾತ್ ॥ ೧೧೨ ॥

ನಿರ್ಗಚ್ಛನ್ಮಂತ್ರಿಸಹಿತಃ ಸಭಾರ್ಯೋಽ ವೃದ್ಧಮಗ್ರತಃ ।
ಗದಂತಂ ವಿಪ್ರಮಾಯಾಂತಂ ತಂ ವೃದ್ಧಂ ಸ ದದರ್ಶ ಹ ॥ ೧೧೩ ॥

॥ ಬ್ರಾಹ್ಮಣ ಉವಾಚ ॥

ಯೇ ವಿಪ್ರಮುಖ್ಯಾಃ ಕುರುಜಾಂಗಲೇಷು
ದಾಸಾಸ್ತಥಾ ದಾಸಪುರೇ ಮೃಗಾಶ್ಚ ।
ಕಾಲಂಜರೇ ಸಪ್ತ ಚ ಚಕ್ರವಾಕಾ
ಯೇ ಮಾನಸೇ ತೇ ವಯಮತ್ರ ಸಿದ್ಧಾಃ ॥ ೧೧೪ ॥

ಇತ್ಯಾಕರ್ಣ್ಯ ವಚಸ್ತಸ್ಯ ಸ ಪಪಾತ ತ್ವರಾನ್ವಿತಃ ।
ಜಾತಿಸ್ಮರತ್ವಮಗಮತ್ತೌ ಚ ಮಂತ್ರಿವರಾತ್ಮಜೌ ॥ ೧೧೫ ॥

---

೧೧೧-೧೧೨. ಸ್ವಪ್ನದಲ್ಲಿ ಬ್ರಹ್ಮನು ಬಂದು, ಎಲೈ ರಾಜನೇ! ಬೆಳಗೆ ಒಬ್ಬ ಮುದುಕ ಬ್ರಾಹ್ಮಣನು ಊರಿನಲ್ಲಿ ಸುತ್ತುತ್ತಾ ಬರುತ್ತಾನೆ. ಅವನಿಂದ ನಿನ್ನ ಹೆಂಡತಿಯು ಎಲ್ಲವನ್ನೂ ತಿಳಿದುಕೊಳ್ಳುತ್ತಾಳೆ ಎಂದುಕೇಳಿ ಹೊರಟುಹೋದನು.

೧೧೩. ಬೆಳಗ್ಗೆ ರಾಜನೂ ಮಂತ್ರಿಗಳೂ ಹೆಂಡತಿಯರೊಡನೆ ಊರಿನಲ್ಲಿ ಹೊರಟು ಹಿಂದೆ ಹೇಳಿದಂತೆ ಹೇಳುತ್ತ ಬರುತ್ತಿರುವ ಬ್ರಾಹ್ಮಣನನ್ನು ಎದುರಿಗೆ ನೋಡಿದನು.

೧೧೪. ಬ್ರಾಹ್ಮಣನು ಹೇಳಿದನು:—ಕುರುಜಾಂಗಲಿದಲ್ಲಿದ್ದ ಬ್ರಾಹ್ಮಣರು ದಾಸಪುರದಲ್ಲಿ ವ್ಯಾಧರಾಗಿಯೂ, ಕಾಲಂಜರಗಿರಿಯಲ್ಲಿ ಮೃಗಗಳಾಗಿಯೂ. ಶರದ್ವೀಪದಲ್ಲಿ ಚಕ್ರವಾಕಗಳಾಗಿಯೂ, ಮಾನಸದಲ್ಲಿ ಚಕ್ರವಾಕಗಳಾಗಿಯೂ, ಇದ್ದವರು ಈಗ ಇಲ್ಲಿ ಸಿದ್ಧರಾಗಿದ್ದೇವೆ.

೧೧೫. ಅವನ ಈ ಮಾತನ್ನು ಕೇಳಿ ರಾಜನು ಒಡನೆಯೇ ನೆಲದಲ್ಲಿ ಬಿದ್ದು ಬಿಟ್ಟನು. ಮತ್ತಿಬ್ಬರು ಮಂತ್ರಿಗಳೂ ಹಿಂದಿನಜಾತಿಯನ್ನು ಜ್ಞಾಪಿಸಿಕೊಂಡರು.

**ಕಾಮಶಾಸ್ತ್ರಪ್ರಣೇತಾ ತು ಬಾಭ್ರವ್ಯಸ್ಯ ತು ಪಾಲಕಃ ।**
**ಪಾಂಚಾಲ ಇತಿ ಲೋಕೇಷು ವಿಶ್ರುತಃ ಸರ್ವಶಾಸ್ತ್ರವಿತ್ ॥ ೧೧೬ ॥**

**ಪುಂಡರೀಕೋಽಪಿ ಧರ್ಮಾತ್ಮಾ ವೈದ್ಯಶಾಸ್ತ್ರಪ್ರವರ್ತಕಃ ।**
**ಭೂತ್ವಾ ಜಾತಿಸ್ಮರೌ ಶೋಕಾತ್ಪತಿತಾವಗ್ರತಸ್ತಥಾ ॥ ೧೧೭ ॥**

**ಹಾ ವಯಂ ಯೋಗವಿಭ್ರಷ್ಟಾಃ ಕಾಮತಃ ಕರ್ಮಬಂಧನಾತ್ ।**
**ಏವಂ ವಿಲಪ್ಯ ಬಹುಧಾ ತ್ರಯಸ್ತೇ ಯೋಗಪಾರಗಾಃ ॥ ೧೧೮ ॥**

**ವಿಸ್ಮಯಾಚ್ಛ್ರಾದ್ಧಮಾಹಾತ್ಮ್ಯಮಭಿನಂದ್ಯ ಪುನಃ ಪುನಃ ।**
**ಸ ತು ತಸ್ಮೈ ಧನಂ ದತ್ವಾ ಪ್ರಭೂತಗ್ರಾಮಸಂಯುತಂ ॥ ೧೧೯ ॥**

**ವಿಸೃಜ್ಯ ಬ್ರಾಹ್ಮಣಂ ತಂ ಚ ವೃದ್ಧಂ ಧನಮುದಾನ್ವಿತಂ ।**
**ಆತ್ಮೀಯಂ ನೃಪತಿಃ ಪುತ್ರಂ ನೃಪಲಕ್ಷಣಲಕ್ಷಿತಂ ॥ ೧೨೦ ॥**

**ವಿಷ್ವಕ್ಸೇನಾಭಿಧಾನಂ ತು ರಾಜಾ ರಾಜ್ಯೇಽಭ್ಯಷೇಚಯತ್ ।**
**ಮಾನಸೇ ಸಲಿಲೇ ಸರ್ವೇ ತತಸ್ತೇ ಯೋಗಿನಾಂ ವರಾಃ ॥ ೧೨೧ ॥**

---

೧೧೬-೧೧೭. ಕಾಮಶಾಸ್ತ್ರವನ್ನು ಮಾಡಿದವನೂ ಭಾಭ್ರವ್ಯ ದೇಶದ ಅಧಿಕಾರಿಯೂ ಆಗಿ ಪಾಂಚಾಲನೆಂದು ಹೆಸರುಗೊಂಡು ಸರ್ವಶಾಸ್ತ್ರವನ್ನು ಬಲ್ಲವನೂ ಆದ ಪಾಂಚಾಲನೂ, ವೈದ್ಯಶಾಸ್ತ್ರವನ್ನು ಬರೆದ ಧರ್ಮಾತ್ಮನಾದ ಪುಂಡರೀಕನೂ ಹಿಂದಿನ ಜನ್ಮಗಳ ವಿಷಯವನ್ನು ಸ್ಮರಿಸುತ್ತ ಆ ಬ್ರಾಹ್ಮಣನ ಮುಂದುಗಡೆಯಲ್ಲಿ ಬಿದ್ದರು.

೧೧೮-೧೧೯. ಅಯ್ಯೋ! ನಾವುಗಳು ಕಾಮದಿಂದಲೂ, ಕರ್ಮದ ಬಂಧನದಿಂದಲೂ ಯೋಗಭ್ರಷ್ಟರಾದೆವು ಎಂದು ಈ ಮೂವರೂ ದುಃಖಿಸುತ್ತ ಆಶ್ಚರ್ಯದಿಂದ ಶ್ರಾದ್ಧದ ಮಹಿಮೆಯನ್ನು ಬಾರಿಬಾರಿಗೂ ಶ್ಲಾಘಿಸುತ್ತಲಿದ್ದರು. ಆ ರಾಜನು ಆ ಬ್ರಾಹ್ಮಣನಿಗೆ ಅನೇಕ ಗ್ರಾಮಗಳನ್ನೂ, ಹಣವನ್ನೂ ಕೊಟ್ಟು ಕಳುಹಿಸಿದನು.

೧೨೦. ಆಗ ಆ ರಾಜನು ರಾಜಲಕ್ಷಣದಿಂದ ಕೂಡಿದ ತನ್ನ ಮಗನಾದ ವಿಷ್ವಕ್ಸೇನನೆಂಬುವನನ್ನು ರಾಜ್ಯದಲ್ಲಿ ಅಭಿಷೇಕಮಾಡಿದನು.

೧೨೧. ಅನಂತರ ಮಾನಸಸರೋವರದ ನೀರಿನ ಬಳಿಯಲ್ಲಿ ಆ ಯೋಗಿಶ್ರೇಷ್ಠರೆಲ್ಲರೂ ಸೇರಿದರು. ಮತ್ಸರವನ್ನು ಬಿಟ್ಟು ಪಿತೃಭಕ್ತರಾಗಿದ್ದರು.

ಬ್ರಹ್ಮದತ್ತಾದಯಸ್ತಸ್ಮಿನ್ಪಿತೃಭಕ್ತಾ ವಿಮತ್ಸರಾಃ ।
ಸಂನತಿಶ್ಚಾಭವದ್ಧೃಷ್ಟಾ ಮಯ್ಯೈವ ತವ ದರ್ಶಿತಂ ॥ ೧೨೨ ॥

ರಾಜನ್ಯೋಗಫಲಂ ಸರ್ವಂ ಯದೇತದಭಿಲಕ್ಷ್ಯತೇ ।
ತಥೇತಿ ಪ್ರಾಹ ರಾಜಾಪಿ ಪುರಸ್ತಾದಭಿಸಂಪದಯನ್ ॥ ೧೨೩ ॥

ತ್ವತ್ಪ್ರಸಾದಾದಿದಂ ಸರ್ವಂ ಮಯ್ಯೈವ ಪ್ರಾಪ್ಯತೇ ಫಲಂ ।
ತತಸ್ತೇ ಯೋಗಮಾಸ್ಥಾಯ ಸರ್ವ ಏವ ವನೌಕಸಃ ॥ ೧೨೪ ॥

ಬ್ರಹ್ಮರಂಧ್ರೇಣ ಪರಮಂ ಪದಮಾಪುಸ್ತಪೋಬಲಾತ್ ।
ಏವಮಾಯುರ್ಧನಂ ವಿದ್ಯಾಂ ಸ್ವರ್ಗಂ ಮೋಕ್ಷಂ ಧನಾನಿ ಚ ॥ ೧೨೫ ॥

ಪ್ರಯಚ್ಛಂತಿ ಸುತಾನ್ರಾಜ್ಯಂ ನೃಣಾಂ ತುಷ್ಟಾಃ ಪಿತಾಮಹಾಃ ।
ಇದಂ ಯಃ ಪಿತೃಮಾಹಾತ್ಮ್ಯಂ ಬ್ರಹ್ಮದತ್ತಸ್ಯ ಭೋ ನೃಪ ॥ ೧೨೬ ॥

ದ್ವಿಜೇಭ್ಯಃ ಶ್ರಾವಯೇದ್ವಿದ್ವಾನ್ ಶೃಣೋತಿ ಪಠತೇಽಪಿ ಚ ।
ಕಲ್ಪಿಕೋಟಿಶತಂ ಸಾಗ್ರಂ ಬ್ರಹ್ಮಲೋಕೇ ಮಹೀಯತೇ ॥ ೧೨೭ ॥

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಪಿತೃಮಾಹಾತ್ಮ್ಯ ಕಥನಂ ನಾಮ ದಶಮೋಽಧ್ಯಾಯಃ**

---

೧೨೨. ಈಗ ಕಾಣುತ್ತಿರುವ ಈ ಯೋಗಫಲವೆಲ್ಲವನ್ನೂ ನಾನೇ ತೋರಿಸಿದೆನು ಎಂದಳು.

೧೨೩. ರಾಜನು ಹೌದೆಂದು ಹೇಳುತ್ತ ಅವಳನ್ನು ಶ್ಲಾಘಿಸುತ್ತ, ನಿನ್ನ ಅನುಗ್ರಹದಿಂದಲೇ ಈ ಫಲವೆಲ್ಲವನ್ನೂ ನಾನು ಅನುಭವಿಸುತ್ತಿದ್ದೇನೆ ಎಂದನು.

೧೨೪. ಅನಂತರ ಅವರು ಯೋಗಾಭ್ಯಾಸ ಮಾಡುತ್ತಿದ್ದು ಕಾಡಿನಲ್ಲಿದ್ದುಕೊಂಡು ಬ್ರಹ್ಮರಂಧ್ರದಿಂದ ತಮ್ಮ ಪ್ರಾಣವಾಯುವನ್ನು ಬಿಟ್ಟವರಾಗಿ ತಪೋಬಲದಿಂದ ಪರಮಪದವನ್ನು ಹೊಂದಿದರು.

೧೨೫. ಈರೀತಿ ಆಯುಸ್ಸು, ಧನ, ವಿದ್ಯೆ, ಸ್ವರ್ಗ, ಮೋಕ್ಷ, ಮಕ್ಕಳು, ರಾಜ್ಯ ಮುಂತಾದುವನ್ನು ಸಂತೋಷಗೊಂಡ ಪಿತಾಮಹಾದಿಗಳು ಕೊಡುತ್ತಾರೆ.

೧೨೬-೧೨೭. ಈ ಪಿತೃಮಹಿಮೆಯನ್ನು ಯಾವನು ಭಕ್ತಿಯಿಂದ ಬ್ರಾಹ್ಮಣರಿಗೆ ಹೇಳುತ್ತಾನೆಯೋ, ತಾನು ಕೇಳುತ್ತಾನೆಯೋ ಅವನು ಕೋಟಿಕಲ್ಪಗಳವರೆಗೆ ಬ್ರಹ್ಮಲೋಕದಲ್ಲಿ ಸುಖಿಸುತ್ತಾನೆ.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ಪಿತೃಮಾಹಾತ್ಮ್ಯೆಯೆಂಬ ಹತ್ತನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಏಕಾದಶೋಽಧ್ಯಾಯಃ

|| ಭೀಷ್ಮ ಉವಾಚ ||

ಕಸ್ಮಿನ್ವಾಸರಭಾಗೇ ತು ಶ್ರಾದ್ಧಂ ಶ್ರಾದ್ಧೀ ಸಮಾರಭೇತ್ ।
ತೀರ್ಥೇಷು ಕೇಷು ವೈ ಶ್ರಾದ್ಧಂ ಕೃತಂ ಬಹುಫಲಂ ದ್ವಿಜ || ೧ ||

|| ಪುಲಸ್ತ್ಯ ಉವಾಚ ||

ತೀರ್ಥಂ ಪುಷ್ಕರಕಂ ನಾಮ ಯತ್ತು ಶ್ರೇಷ್ಠತಮಂ ಮತಂ ।
ಸರ್ವೇಷಾಂ ದ್ವಿಜಮುಖ್ಯಾನಾಂ ಮನೋರಥಮಿವ ಸ್ಥಿತಂ || ೨ ||

ತತ್ರ ದತ್ತಂ ಹುತಂ ಜಪ್ತಮಾನಂತ್ಯಂ ಭವತಿ ಧ್ರುವಂ ।
ಪಿತೄಣಾಂ ವಲ್ಲಭಂ ನಿತ್ಯಮೃಷೀಣಾಂ ಪರಮಂ ಪ್ರಿಯಂ || ೩ ||

---

## ಹನ್ನೊಂದನೆಯ ಅಧ್ಯಾಯವು.

೧. ಭೀಷ್ಮನು ಹೇಳಿದನು :—ಶ್ರಾದ್ಧವನ್ನು ಮಾಡುವವನು ಶ್ರಾದ್ಧವನ್ನು ದಿವಸದ ಯಾವ ಭಾಗದಲ್ಲಿ ಮಾಡಬೇಕು? ಯಾವ ತೀರ್ಥದಲ್ಲಿ ಶ್ರಾದ್ಧಮಾಡಿದರೆ ಬಹುವಾದ ಫಲವು ಬರುತ್ತದೆ ?

೨. ಪುಲಸ್ತ್ಯನು ಹೇಳಿದನು :—ಪುಷ್ಕರವೆಂಬ ತೀರ್ಥವು ಶ್ರೇಷ್ಠವೆಂಬುದಾಗಿ ತಿಳಿಯಬೇಕು. ಅದು ಇಲ್ಲಿ ಬ್ರಾಹ್ಮಣರಿಗೆ ಇಷ್ಟಾರ್ಥರೂಪವಾಗಿದೆ.

೩. ಆ ಪುಷ್ಕರದಲ್ಲಿ ಮಾಡಿದ ದಾನ, ಹೋಮ, ಜಪ, ಇವು ನಿಶ್ಚಯವಾಗಿಯೂ ಅನಂತವಾಗುತ್ತವೆ. ಪಿತೃಗಳಿಗೂ ಋಷಿಗಳಿಗೂ ಬಹು ಪ್ರೀತಿಪಾತ್ರವಾದುದು.

ನಂದಾಥ ಲಲಿತಾ ತದ್ವತ್ತೀರ್ಥಮಾಯಾಪುರೀ ಶುಭಾ ।
ತಥಾ ಮಿತ್ರಪದಂ ರಾಜಂಸ್ತಥಾ ಕೇದಾರಮುತ್ತಮಂ ॥ ೪ ॥

ಗಂಗಾಸಾಗರಮಿತ್ಯಾಹುಃ ಸರ್ವತೀರ್ಥಮಯಂ ಶುಭಂ ।
ತೀರ್ಥಂ ಬ್ರಹ್ಮಸರಸ್ತದ್ವಚ್ಛತದ್ರುಸಲಿಲಂ ಶುಭಂ ॥ ೫ ॥

ತೀರ್ಥಂ ತು ನೈಮಿಷಂ ನಾಮ ಸರ್ವತೀರ್ಥಫಲಪ್ರದಂ ।
ಗಂಗೋದ್ಭೇದಸ್ತು ಗೋಮತ್ಯಾಂ ಯತ್ರೋದ್ಭೂತಃ ಸನಾತನಃ ॥ ೬ ॥

ತಥಾ ಯಜ್ಞವರಾಹಸ್ತು ದೇವದೇವಸ್ತು ಶೂಲಧೃಕ್ ।
ಯತ್ರ ತತ್ಕಾಂಚನಂ ದಾನಮಷ್ಟಾದಶಭುಜೋ ಹರಃ ॥ ೭ ॥

ನೇಮಿಸ್ತು ಧರ್ಮಚಕ್ರಸ್ಯ ಶೀರ್ಣೋ ಯತ್ರಾಭವತ್ಪುರಾ ।
ತದೇತನ್ನೈಮಿಷಾರಣ್ಯಂ ಸರ್ವತೀರ್ಥನಿಷೇವಿತಂ ॥ ೮ ॥

---

೪. ನಂದಾ, ಲಲಿತ, ತೀರ್ಥಮಾಯಾಪುರೀ, ಮಿತ್ರಪದ, ಕೇದಾರ, ಈ ತೀರ್ಥಗಳು ಉತ್ತಮಗಳು.

೫. ಗಂಗಾಸಂಗಮವನ್ನು ಎಲ್ಲಾ ತೀರ್ಥಗಳ ರೂಪವಾದುದೆಂದು ಹೇಳುತ್ತಾರೆ. ಬ್ರಹ್ಮಸರಸ್ಸು. ಶತದ್ರು ಇವುಗಳ ನೀರು ಅದೇರೀತಿ ಉತ್ತಮವಾದುದು.

೬. ನೈಮಿಷತೀರ್ಥವು ಎಲ್ಲಾ ತೀಥಗಳ ಫಲವನ್ನು ಕೊಡುತ್ತದೆ. ಗೋಮತಿಯಲ್ಲಿ ಗಂಗೋದ್ಭೇದವೆಂಬ ಸ್ಥಳವಿದೆ. ಅದು ಪವಿತ್ರವಾದುದು. ಅಲ್ಲಿ ಸ್ವಾಮಿಯೇ ಆವಿರ್ಭವಿಸಿದ್ದಾನೆ.

೭. ಅಂತೆಯೇ ಯಜ್ಞವರಾಹವೆಂಬ ಪುಣ್ಯಸ್ಥಳವುಂಟು. ಅಲ್ಲಿ ಚಿನ್ನವನ್ನು ದಾನಮಾಡಿದರೆ ಅದರ ಹದಿನೆಂಟುಭಾಗವನ್ನು ಸಾಕ್ಷಾತ್ಪರಮೇಶ್ವರನೇ ಅನುಭವಿಸುತ್ತಾನೆ. ಅಲ್ಲಿ ಈಶ್ವರನೇ ಪ್ರತ್ಯಕ್ಷವಾಗಿ ಶೂಲವನ್ನು ಹಿಡಿದು ನಿಂತಿದ್ದಾನೆ.

೮. ಈ ನೈಮಿಷಾರಣ್ಯದಲ್ಲಿ ಪೂರ್ವದಲ್ಲಿ ಧರ್ಮಚಕ್ರದ ಅಂಚು ಮೊಳಿಕೊಂಡಿತು. ಅದೇ ಈ ನೈಮಿಷಾರಣ್ಯವು. ಇದು ಎಲ್ಲಾ ತೀರ್ಥಗಳಿಂದಲೂ ಸೇವಿತವಾಗಿದೆ.

ದೇವದೇವಸ್ಯ ತತ್ರಾಪಿ ವರಾಹಸ್ಯ ಚ ದರ್ಶನಂ ।
ಯಃ ಪ್ರಯಾತಿ ಸ ಧರ್ಮಾತ್ಮಾ ನಾರಾಯಣಪುರಂ ವ್ರಜೇತ್ ॥ ೯ ॥

ಕೋಕಾಮುಖಂ ಪರಂ ತೀರ್ಥಮಿಂದ್ರಮಾರ್ಗೋಽಪಿ ಲಕ್ಷ್ಯತೇ ।
ಅಥಾಪಿ ಪಿತೃತೀರ್ಥಂ ತು ಬ್ರಹ್ಮಣೋಽವ್ಯಕ್ತಜನ್ಮನಃ ॥ ೧೦ ॥

ಪುಷ್ಕರಾರಣ್ಯಸಂಸ್ಥೋಽಸೌ ಯತ್ರ ದೇವಃ ಪಿತಾಮಹಃ ।
ವಿರಿಂಚಿದರ್ಶನಂ ಶ್ರೇಷ್ಠಮಪವರ್ಗಫಲಪ್ರದಂ ॥ ೧೧ ॥

ಕೃತಂ ನಾಮ ಮಹಾಪುಣ್ಯಂ ಸರ್ವಪಾಪನಿಷೂದನಂ ।
ಯತ್ರಾದ್ಯೋ ನಾರಸಿಂಹಸ್ತು ಸ್ವಯಮೇವ ಜನಾರ್ದನಃ ॥ ೧೨ ॥

ತೀರ್ಥಮಿಕ್ಷುಮತೀ ನಾಮ ಪಿತೄಣಾಂ ವಲ್ಲಭಂ ಸದಾ ।
ತುಷ್ಯಂತಿ ಪಿತರೋ ನಿತ್ಯಂ ಗಂಗಾಯಮುನಸಂಗಮೇ ॥ ೧೩ ॥

---

೯. ಅಲ್ಲಿ ದೇವದೇವನಾದ ವರಾಹನಿದ್ದಾನೆ. ಅವನ ದರ್ಶನಮಾಡಿದರೆ ಧರ್ಮವು ಪ್ರಾಪ್ತವಾಗಿ ವೈಕುಂಠಕ್ಕೆ ಹೋಗುತ್ತಾನೆ.

೧೦. ಕೋಕಾಮುಖವೆಂಬ ಮತ್ತೊಂದು ತೀರ್ಥವಿದೆ. ಅಲ್ಲಿ ಇಂದ್ರಮಾರ್ಗವು ಕಾಣುತ್ತದೆ. ಈ ಕೋಕಾಮುಖವು ಬ್ರಹ್ಮನಿಗೂ ಕೂಡ ಪಿತೃತೀರ್ಥವಾಗಿದೆ.

೧೧. ಈ ಕೋಕಾಮುಖವು ಪುಷ್ಕರಾಣ್ಯದಲ್ಲಿದೆ. ಅಲ್ಲಿಯೇ ಬ್ರಹ್ಮನು ಇದ್ದಾನೆ. ಇಲ್ಲಿ ಬ್ರಹ್ಮನ ದರ್ಶನವು ಮೋಕ್ಷವನ್ನು ಕೊಡತಕ್ಕದ್ದಾಗಿದೆ.

೧೨. ಅಲ್ಲಿಯೇ ಕೃತವೆಂಬ ಪುಣ್ಯಕರವೂ, ಪಾಪನಾಶಕವೂ ಆದ ತೀರ್ಥವಿದೆ. ಅಲ್ಲಿ ಆದಿನರಸಿಂಹನು ಪ್ರತ್ಯಕ್ಷವಾಗಿದ್ದಾನೆ.

೧೩. ಗಂಗಾ ಯಮುನಾ ಸಂಗಮದಲ್ಲಿ ಇಕ್ಷುಮತೀ ಎಂಬ ತೀರ್ಥವಿದೆ ಅದು ಪಿತೃಗಳಿಗೂ ಪ್ರೀತಿಪಾತ್ರವಾದುದು. ಅಲ್ಲಿ ಯಾವಾಗಲೂ ಪಿತೃಗಳು ಸಂತೋಷ ಪಡುತ್ತಾರೆ.

ಕುರುಕ್ಷೇತ್ರಂ ಮಹಾಪುಣ್ಯಂ ಯತ್ರ ಮಾರ್ಗೋಽಪಿ ಲಕ್ಷ್ಯತೇ ।
ಅದ್ಯಾಪಿ ಪಿತೃತೀರ್ಥಂ ತತ್ಸರ್ವಕಾಮಫಲಪ್ರದಂ ॥ ೧೪ ॥

ನೀಲಕಂಠಮಿತಿ ಖ್ಯಾತಂ ಪಿತೃತೀರ್ಥಂ ನರಾಧಿಪ ।
ತಥಾ ಭದ್ರಸರಃ ಪುಣ್ಯಂ ಸರೋ ಮಾನಸಮೇವ ಚ ॥ ೧೫ ॥

ಮಂದಾಕಿನೀ ವಿಪಾಶಾ ಚ ತಥಾ ಪುಣ್ಯಾ ಸರಸ್ವತೀ ।
ಸರ್ವಮಿತ್ರಪದಂ ತದ್ವದ್ವೈದ್ಯನಾಥಂ ಮಹಾಬಲಂ ॥ ೧೬ ॥

ಕ್ಷಿಪ್ರಾ ನದೀ ಮಹಾಪುಣ್ಯಾ ತಥಾ ಕಾಲಂಜರಂ ಶುಭಂ ।
ವಂಶೋದ್ಭೇದಂ ಹರೋದ್ಭೇದಂ ಗರ್ಭಭೇದಂ ಮಹಾಲಯಂ ॥ ೧೭ ॥

ಭದ್ರೇಶ್ವರಂ ವಿಷ್ಣುಪದಂ ನರ್ಮದಾದ್ವಾರಮೇವ ಚ ।
ಗಯಾ ಪಿಂಡಪ್ರದಾನೇನ ಸಮಾನ್ಯಾಹುರ್ಮಹರ್ಷಯಃ ॥ ೧೮ ॥

ಏತಾನಿ ಪಿತೃತೀರ್ಥಾನಿ ಸರ್ವಪಾಪಹರಾಣಿ ಚ ।
ಸ್ಮರಣಾದಪಿ ಲೋಕಾನಾಂ ಕಿಮು ಶ್ರಾದ್ಧಪ್ರದಾಯಿನಾಂ ॥ ೧೯ ॥

---

೧೪. ಕುರುಕ್ಷೇತ್ರವು ಮಹಾಪುಣ್ಯಪ್ರದವಾದುದು. ಅದರ ಮಾರ್ಗವೂ ಈ ಪುಷ್ಕರದಲ್ಲಿರುವ ಇಕ್ಷುಮತಿಯ ಬಳಿಯಲ್ಲಿಯೇ ಕಾಣುತ್ತದೆ. ಅದು ಕೂಡ ಈಗಲೂ ಪಿತೃತೀರ್ಥವಾಗಿಯೇ ಇದೆ. ಸರ್ವ ಕಾಮಗಳನ್ನೂ ಕೊಡುತ್ತದೆ.

೧೫. ನೀಲಕಂಠವೆಂಬ ಪಿತೃತೀರ್ಥವಿರುವುದು. ಅಂತೆಯೇ ಭದ್ರಸರಸ್ಸೆಂದೂ ಮಾನಸಸರೋವರವೆಂದೂ ಎರಡು ಸರೋವರಗಳಿವೆ.

೧೬-೧೮. ಮಂದಾಕಿನೀ, ವಿಪಾಶೆ, ಸರಸ್ವತಿ, ಸರ್ವಮಿತ್ರಪದ, ವೈದ್ಯನಾಥ, ಮಹಾಬಲ, ಕ್ಷಿಪ್ರಾ, ಕಾಳಂಜರ, ವಂಶೋದ್ಭೇದ, ಹರೋದ್ಭೇದ, ಗರ್ಭಭೇದ, ಮಹಾಲಯ, ಭದ್ರೇಶ್ವರ, ವಿಷ್ಣುಪದ, ನರ್ಮದಾದ್ವಾರ ಇವುಗಳೂ ಪುಣ್ಯಕ್ಷೇತ್ರಗಳು. ಇವುಗಳಲ್ಲಿ ಪಿಂಡವನ್ನು ಹಾಕಿದರೆ ಗಯಾಪಿಂಡಕ್ಕೆ ಸಮಾನವೆಂದು ಋಷಿಗಳು ಹೇಳು ತ್ತಾರೆ.

೧೯. ಇವೆಲ್ಲವೂ ಪಿತೃತೀರ್ಥಗಳು. ಸ್ಮರಿಸುವುದರಿಂದಲೇ ಸರ್ವಪಾಪಗಳನ್ನೂ ನಾಶಮಾಡುತ್ತವೆ. ಅಲ್ಲಿ ಶ್ರಾದ್ಧಮಾಡಿದವರಿಗೆ ಬರತಕ್ಕ ಫಲವು ಅಪಾರವೆಂಬುದನ್ನು ಹೇಳಬೇಕಾದುದೇ ಇಲ್ಲ.

ಓಂಕಾರಂ ಪಿತೃತೀರ್ಥಂ ತು ಕಾವೇರೀ ಕಪಿಲೋದಕಂ।
ಸಂಭೇದಶ್ಚಂಡವೇಗಾಯಾಂ ತಥೈವಾಮರಕಂಟಕಂ ॥ ೨೦ ॥

ಕುರುಕ್ಷೇತ್ರಾದ್ದಶಗುಣಂ ತಸ್ಮಿನ್‌ಸ್ನಾನಾದಿಕಂ ಭವೇತ್ ।
ಶುಕ್ಲತೀರ್ಥಂ ತು ವಿಖ್ಯಾತಂ ತೀರ್ಥಂ ಸೋಮೇಶ್ವರಂ ಪರಂ ॥ ೨೧ ॥

ಸರ್ವವ್ಯಾಧಿಹರಂ ಪುಣ್ಯಂ ಫಲಕೋಟಿಶತಾಧಿಕಂ ।
ಶ್ರಾದ್ಧದಾನೇ ತಥಾ ಹೋಮೇ ಸ್ವಾಧ್ಯಾಯೇ ಜಪಸಂನಿಧೌ ॥ ೨೨ ॥

ಕಾಯಾವರೋಹಣಂ ನಾಮ ದೇವದೇವಸ್ಯ ಶೂಲಿನಃ ।
ಅವತಾರಂ ರೋಚಮಾನಂ ಬ್ರಾಹ್ಮಣಾವಸಥೇ ಶುಭೇ ೨೩ ॥

ಜಾತಂ ತತ್ಸುಮಹಾಪುಣ್ಯಂ ತಥಾ ಚರ್ಮಣ್ವತೀ ನದೀ ।
ಗೌತಮೀ ವರುಣಾ ತದ್ವತ್ತೀರ್ಥಂ ಹೌತಾಶನಂ ಪರಂ ॥ ೨೪ ॥

ಭೈರವಂ ಭೃಗುತೀರ್ಥಂ ಚ ಗೌರೀತೀರ್ಥಮನುತ್ತಮಂ ।
ತೀರ್ಥಂ ವೈನಾಯಕಂ ನಾಮ ವಸ್ತ್ರೇಶ್ವರಮತಃ ಪರಂ ॥ ೨೫ ॥

ತಥಾ ಪಾಪಹರಂ ನಾಮ ಪುಣ್ಯಾ ವೇತ್ರವತೀ ನದೀ ।
ಶೂಲತಾಪೀ ಪಯೋಷ್ಣೀ ಚ ಪಯೋಷ್ಣೀಸಂಗಮಸ್ತಥಾ ॥ ೨೬ ॥

---

೨೦. ಓಂಕಾರತೀರ್ಥ, ಕಾವೇರಿ, ಕಪಿಲೆ, ಚಂಡವೇಗೆಯಮೂಲ, ಅಂತೆಯೇ ಅಮರ ಕಂಟಕ ಇವು ಪಿತೃತೀರ್ಥಗಳು. ಇವುಗಳಲ್ಲಿ ಸ್ನಾನಮಾಡಿದರೆ ಕುರುಕ್ಷೇತ್ರಕ್ಕಿಂತ ಹತ್ತುಪಾಲು ಹೆಚ್ಚಿನ ಫಲವುಂಟು.

೨೧-೨೨. ಶುಕ್ಲತೀರ್ಥ, ಸೋಮೇಶ್ವರತೀರ್ಥ, ಇವುಗಳು ಎಲ್ಲಾ ರೋಗಗಳನ್ನೂ ಹಾಳುಮಾಡುವ ತೀರ್ಥಗಳು. ಇವುಗಳಲ್ಲಿ ಶ್ರಾದ್ಧಮಾಡಿದರೂ ಹೋಮಮಾಡಿದರೂ ಅಧ್ಯಯನ, ಜಪ ದಾನಮಾಡಿದರೂ ನೂರುಕೋಟಿ ಹೆಚ್ಚಿನ ಫಲವುಂಟು.

೨೩-೨೪. ಅಲ್ಲಿ ಕಾಯಾವರೋಹಣವೆಂದು ಮತ್ತೊಂದು ತೀರ್ಥವಿರುವುದು. ಅದು ದೇವದೇವನಾದ ಈಶ್ವರನು ಬ್ರಾಹ್ಮಣನ ಮನೆಯಲ್ಲಿ ಅವತಾರವನ್ನು ಅಪೇಕ್ಷಿಸಿ ಅಲ್ಲಿ ಹುಟ್ಟಿದನು. ಅದು ಮಹಾ ಪುಣ್ಯಕರವಾದುದು.

೨೫-೨೬. ಭೈರವ, ಭೃಗತೀರ್ಥ, ಗೌರೀತೀರ್ಥ, ವಿನಾಯಕತೀರ್ಥ, ವಸ್ತ್ರೇಶ್ವರ, ಪಾಪಹರತೀರ್ಥ, ವೇತ್ರಾವತೀನದೀ, ಶೂಲತಾಪಿನದಿ, ಪಯೋಷ್ಣೀನದಿ.

ಮಹಾಬೋಧಾ ಪಾರಣಾ ಚ ನಾಗತೀರ್ಥಪ್ರವರ್ತಿನೀ ।
ಮಹಾವೇಣಾನದೀ ಪುಣ್ಯಾ ಮಹಾಶಾಲಸ್ತಥೈವ ಚ ॥ ೨೭ ॥

ಮಹಾರುದ್ರಂ ನಾಮ ಲಿಂಗಂ ದಶಾರ್ಣಾ ಚ ಮಹಾನದೀ ।
ಶತರುದ್ರಾ ಶತಾಹ್ವಾ ಚ ತಥಾ ಪಿತೃಪದಂ ಪರಂ ॥ ೨೮ ॥

ಅಂಗಾರವಾಹಿಕಾ ತದ್ವನ್ನದೌ ದ್ವೌ ಶೋಣಘರ್ಘರೌ ।
ಕಾಲಿಕಾ ಚ ನದೀ ಪುಣ್ಯಾ ಪಿತರಾ ಚ ನದೀ ಶುಭಾ ॥ ೨೯ ॥

ಏತಾನಿ ಪಿತೃತೀರ್ಥಾನಿ ಶಸ್ಯಂತೇ ಸ್ನಾನದಾನಯೋಃ ।
ಶ್ರಾದ್ಧಮೇತೇಷು ಯದ್ದತ್ತಂ ತದನಂತಫಲಂ ಸ್ಮೃತಂ ॥ ೩೦ ॥

ಶಿನೀವಾಟನದೀ ಧಾರಾ ಶರದ್ವೀ ಚ ನದೀ ತಥಾ ।
ದ್ವಾರಕಾ ಕೃಷ್ಣತೀರ್ಥಂ ಚ ತಥಾಽರ್ಬುದಸರಸ್ವತೀ ॥ ೩೧ ॥

ನದೀ ಮಣಿಮತೀ ನಾಮ ತಥಾ ಚ ಗಿರಿಕರ್ಣಿಕಾ ।
ಧೂತಪಾಪಂ ತಥಾ ತೀರ್ಥಂ ಸಮುದ್ರೇ ದಕ್ಷಿಣೇ ತಥಾ ॥ ೩೨ ॥

ಗೋಕರ್ಣೋ ಗಜಕರ್ಣಶ್ಚ ತಥಾ ಚ ಪುರುಷೋತ್ತಮಃ ।
ಏತಾನಿ ಪಿತೃತೀರ್ಥಾನಿ ಶ್ರಾದ್ಧಮಾನಂತ್ಯಮಶ್ನುತೇ ॥ ೩೩ ॥

---

ಪಯೋಷ್ಣೀಸಂಗಮ, ಮಹಾಬೋಧಾ, ಪಾರಣ, ನಾಗತೀರ್ಥ, ಮಹಾವೇಣಾನದೀ, ಮಹಾಶಾಲ ಇವೆಲ್ಲವೂ ಉತ್ತಮವಾದ ತೀರ್ಥಗಳು.

೨೮-೩೦. ಮಹಾರುದ್ರವೆಂಬ ಲಿಂಗ, ದಶಾರ್ಣನದಿ, ಶತರುದ್ರೆ, ಶತಾಹ್ವೆ, ಪಿತೃಪದ, ಅಂಗಾರವಾಹಕಾನದಿ, ಶೋಣ; ಘರ್ಘರವೆಂಬ ನದಿಗಳು. ಕಾಲಿಕಾನದಿ, ಪಿತರಾನದಿ, ಇವೆಲ್ಲವು ಪಿತೃತೀರ್ಥಗಳು. ಸ್ನಾನದಾನಗಳಲ್ಲಿ ಪ್ರಸಿದ್ಧವಾದುವು. ಇವುಗಳಲ್ಲಿ ಶ್ರಾದ್ಧಮಾಡಿದರೆ ಅನಂತವಾದ ಫಲವುಂಟು.

೩೧-೩೩. ಶಿನೀವಾಟನದಿ, ಧಾರ, ಶರದ್ವೀ, ದ್ವಾರಕೆ, ಕೃಷ್ಣತೀರ್ಥ, ಅರ್ಬುದ, ಸರಸ್ವತೀ, ಮಣಿಮತೀ, ಗಿರಿಕರ್ಣಿಕೆ, ಧೂತಪಾಪೆ, ದಕ್ಷಿಣಸಮುದ್ರ, ಗೋಕರ್ಣ, ಪುರುಷೋತ್ತಮ, ಇವೆಲ್ಲವೂ ಪಿತೃತೀರ್ಥಗಳು. ಇಲ್ಲಿ ಮಾಡಿದ ಶ್ರಾದ್ಧವು ಅನಂತ ಫಲವನ್ನು ಕೊಡುತ್ತದೆ.

ತೀರ್ಥಂ ಮೋಘಕರಂ ನಾಮ ಸ್ವಯಮೇವ ಜನಾರ್ದನಃ ।
ಯತ್ರ ಶಾರ್ಙ್ಗಧರೋ ವಿಷ್ಣುರ್ಮೇಖಲಾಯಾಂ ವ್ಯವಸ್ಥಿತಃ ॥ ೩೪ ॥

ತಥಾ ಮಂಡೋದರೀತೀರ್ಥಂ ತಥಾ ಚಂಪಾನದೀ ತಥಾ ।
ತಥಾ ಶಾಮಲನಾಥಂ ಚ ಮಹಾಶಾಲೋದರೀ ತಥಾ ॥ ೩೫ ॥

ಚಿತ್ರಕೂಟಂ ಮಹಾಪುಣ್ಯಂ ತಥಾ ಜಲ್ಪೇಶ್ವರಂ ಮಹತ್ ।
ಅರ್ಜುನಂ ಚ ತ್ರಿಪುರುಷಂ ಸಿದ್ಧೇಶ್ವರಮತಃ ಪರಂ ॥ ೩೬ ॥

ಮಹೇಂದ್ರಂ ಚ ಮಹಾಪುಣ್ಯಂ ತಥಾ ಪುಣ್ಯಾ ಮಹಾನದೀ ।
ಏತೇಷ್ವಪಿ ಸದಾ ಶ್ರಾದ್ಧಮನಂತಫಲದಂ ಭವೇತ್ ॥ ೩೭ ॥

ದರ್ಶನಾದಪಿ ಪುಣ್ಯಾನಿ ಸದ್ಯಃಪಾಪಹರಾಣಿ ವೈ ।
ತುಂಗಭದ್ರಾ ನದೀ ಪುಣ್ಯಾ ತಥಾ ಚಕ್ರರಥಾ ಸರಿತ್ ॥ ೩೮ ॥

ಭೀಮೇಶ್ವರಂ ಕೃಷ್ಣವರ್ಣಾ ಕಾವೇರೀ ಚಾಂಜನಾ ನದೀ ।
ನದೀ ಗೋದಾವರೀ ಪುಣ್ಯಾ ತ್ರಿಸಂಧ್ಯಾತೀರ್ಥಮುತ್ತಮಂ ॥ ೩೯ ॥

ತೀರ್ಥಂ ತ್ರ್ಯಯಂಬಕಂ ನಾಮ ಸರ್ವತೀರ್ಥನಮಸ್ಕೃತಂ ।
ಯತ್ರಾಸ್ತೇ ಭಗವಾನ್ಭೀಮಃ ಸ್ವಯಮೇವ ತ್ರಿಲೋಚನಃ ॥ ೪೦ ॥

ಶ್ರಾದ್ಧಮೇತೇಷು ಸರ್ವೇಷು ದತ್ತಂ ಕೋಟಿಗುಣಂ ಭವೇತ್ ।
ಸ್ಮರಣಾದಪಿ ಪಾಪಾನಿ ವ್ರಜಂತಿ ಶತಧಾ ನೃಪ ॥ ೪೧ ॥

---

೩೪. ಮೋಘಕರವೆಂಬ ತೀರ್ಥವು ಉತ್ತಮವಾದುದು, ಅದರ ಮಧ್ಯದಲ್ಲಿ ಜನಾರ್ಧನನು ಧನಸ್ಸನ್ನು ಹಿಡಿದು ನಿಂತಿದ್ದಾನೆ.

೩೫-೩೭- ಮಂದೋದರೀತೀರ್ಥ, ಚಂಪಾನದಿ, ಶ್ಯಾಮಲನಾಥ. ಮಹಾ ಶಾಲೋದರಿ, ಚಿತ್ರಕೂಟ, ಜಲ್ಪೇಶ್ವರ, ಅರ್ಜುನತೀರ್ಥ, ತ್ರಿಪುರುಷತೀರ್ಥ, ಸಿದ್ಧೇಶ್ವರತೀರ್ಥ, ಮಹೇಂದ್ರ, ಮಹಾನದೀ ಇವೆಲ್ಲವೂ ಪುಣ್ಯಪ್ರದಗಳು. ಇವುಗಳಲ್ಲಿ ಶ್ರಾದ್ಧ ಮಾಡಿದರೆ ಬಹುಫಲವುಂಟು. ದರ್ಶನದಿಂದಲೇ ಒಡನೆಯೇ ಪಾಪಗಳು ಹೋಗುತ್ತವೆ. ಅಂತಹ ಪುಣ್ಯಕ್ಷೇತ್ರಗಳು.

೩೮-೪೧. ತುಂಗಭದ್ರೆ, ಚಕ್ರರಥೆ, ಭೀಮೇಶ್ವರ, ಕೃಷ್ಣವರ್ಣ, ಕಾವೇರಿ, ಅಂಜನಾ, ಗೋದಾವರಿ, ತ್ರಿಸಂಧ್ಯೆ. ತ್ರ್ಯಯಂಬಕತೀರ್ಥ. ಈತ್ರ್ಯಯಂಬಕ ತೀರ್ಥದಲ್ಲಿ ಈಶ್ವರನು ತಾನಾಗಿಯೇ ನೆಲೆಸಿದ್ದಾನೆ. ಇವುಗಳಲ್ಲಿ ಶ್ರಾದ್ಧ ಮಾಡಿದರೆ ಕೋಟಿಪಾಲು ಪುಣ್ಯ ಬರುತ್ತದೆ. ಸ್ಮರಿಸುವುದರಿಂದಲೇ ಪಾಪವೆಲ್ಲವೂ ನಾಶವಾಗುತ್ತದೆ.

ತ್ರಿಪರ್ಣಾ ಚ ನದೀ ಪುಣ್ಯಾ ವ್ಯಾಸತೀರ್ಥಮನುತ್ತಮಂ ।
ತಥಾ ಮತ್ಸ್ಯನದೀ ರಾಕಾ ಶಿವಧಾರಾ ತಥೈವ ಚ ॥ ೪೨ ॥

ಭವತೀರ್ಥಂ ಚ ವಿಖ್ಯಾತಂ ಪುಣ್ಯತೀರ್ಥಂ ಚ ಶಾಶ್ವತಂ ।
ಪುಣ್ಯಂ ರಾಮೇಶ್ವರಂ ತದ್ವದ್ದೇವಾಯುರಮಲಂ ಪುರಂ ॥ ೪೩ ॥

ಅಂಗಾರಕಂ ಚ ವಿಖ್ಯಾತಮಾನಂದಕಮಲಂ ಶುಭಂ ।
ವತ್ಸವ್ರಾತೇಶ್ವರಂ ತದ್ವತ್ತಥಾ ಮೇಕಾಮುಖಂ ಪರಂ ॥ ೪೪ ॥

ಗೋವರ್ಧನಂ ಹರಿಶ್ಚಂದ್ರಂ ಪುರಶ್ಚಂದ್ರಂ ಪೃಥೂದಕಂ ।
ಸಹಸ್ರಾಕ್ಷಂ ಹಿರಣ್ಯಾಕ್ಷಂ ತಥಾ ಚ ಕದಲೀನದೀ ॥ ೪೫ ॥

ನಾಮಧೇಯಾನಿ ಚ ತಥಾ ತಥಾ ಸೋಮಸರಾಂತಗಾ ।
ಇಂದ್ರನೀಲಂ ಮಹಾನಾದಂ ತಥಾ ಚ ವೃಷಸೇನಕಂ ॥ ೪೬ ॥

ಏತಾನ್ಯಪಿ ಸದಾ ಶ್ರಾದ್ಧೇ ಪ್ರಶಸ್ತಾನ್ಯಧಿಕಾನಿ ಚ ।
ಏತೇಷು ಸರ್ವದೇವಾನಾಂ ಸಾಂನಿಧ್ಯಂ ಪಶ್ಯತೇ ಯತಃ ॥ ೪೭ ॥

ದಾನಮೇತೇಷು ಸರ್ವೇಷು ಭವೇತ್ಕೋಟಿಗುಣಾಧಿಕಂ ।
ಬಾಹುದಾ ಚ ನದೀ ಪುಣ್ಯಾ ತಥಾ ಸಿಂಧುವನಂ ಮಹತ್ ॥ ೪೮ ॥

ತೀರ್ಥಂ ಪಂಪಾಶುಭಂ ನಾಮ ನದೀ ಪರ್ಯಟಿಕಾ ತಥಾ ।
ಶ್ರಾದ್ಧಮೇತೇಷು ಸರ್ವೇಷು ಭವೇತ್ಕೋಟಿಗುಣಾಧಿಕಂ ॥ ೪೯ ॥

---

೪೨-೪೭. ತ್ರಿಪರ್ಣನದೀ, ವ್ಯಾಸತೀರ್ಥ, ಮತ್ಸ್ಯನದೀ, ರಾಕೆ, ಶಿವಧಾರೆ, ಭವತೀರ್ಥ, ಪುಣ್ಯತೀರ್ಥ, ರಾಮೇಶ್ವರ, ದೇವಾಯು, ಅಂದಾರಕ, ಅನಿಂದಕಮಲ, ವತ್ಸವ್ರಾತೇಶ್ವರ, ಮೇಕಾಮುಖ, ಗೋವರ್ಧನ, ಹರಿಶ್ಚಂದ್ರ, ಪುರಶ್ಚಂದ್ರ, ಪೃಥೂದಕ, ಸಹಸ್ರಾಕ್ಷ, ಹಿರಣ್ಯಾಕ್ಷ, ಕದಳೀನದಿ ಮತ್ತು ಸೋಮಸರಕ್ಕೆ ಹೋಗುವ ನದಿ, ಇಂದ್ರನೀಲ, ಮಹಾನಾದ, ವೃಷಸೇನಕ, ಇವುಗಳೂ ಕೂಡ ಶ್ರಾದ್ಧದಲ್ಲಿ ಪವಿತ್ರವಾದುವು. ಬಹು ಹೆಚ್ಚಾದುವೂ ಹೌದು. ಇವುಗಳಲ್ಲಿ ಎಲ್ಲಾ ದೇವರು ಇರುತ್ತಾರೆಂದು ಹೇಳಲ್ಪಟ್ಟಿದೆ. ಇವುಗಳಲ್ಲಿ ದಾನಮಾಡಿದರೆ ಕೋಟಿ ಗುಣಗಳಷ್ಟು ಹೆಚ್ಚಾಗಿ ಪುಣ್ಯ ಬರುತ್ತದೆ.

೪೮-೪೯. ಬಹುದಾನದಿ, ಸಿಂಧುವನ, ಪಂಪಾತೀರ್ಥ, ಪರ್ಯಟಿಕಾ ಇವುಗಳಲ್ಲಿ ಶ್ರಾದ್ಧವನ್ನು ಮಾಡಿದರೆ ಕೋಟಿ ಗುಣಗಳಷ್ಟು ಹೆಚ್ಚು ಪುಣ್ಯವುಂಟು.

ತತ್ರೈವ ಪಿತೃತೀರ್ಥಂ ತು ಯತ್ರ ಗೋದಾವರೀ ನದೀ ।
ಯುತಾ ಲಿಂಗಸಹಸ್ರೇಣ ಸವ್ಯೇತರಜಲಾವಹಾ　　॥ ೫೦ ॥

ಜಾಮದಗ್ನ್ಯಸ್ಯ ತತ್ತೀರ್ಥಂ ವೋಪಾಯತನಮುತ್ತಮಂ ।
ಪ್ರತೀಕಸ್ಯ ಭಯಾತ್ಸಿದ್ಧಾ ಯತ್ರ ಗೋದಾವರೀ ನದೀ　　॥ ೫೧ ॥

ತೀರ್ಥಂ ತದ್ಧವ್ಯಕವ್ಯಾನಾಮಪ್ಸರೋಗಣಸಂಯುತಂ ।
ಶ್ರಾದ್ಧಾಗ್ನಿದಾನಕಾರ್ಯಂ ಚ ತತ್ರ ಕೋಟಿಶತಾಧಿಕಂ　　॥ ೫೨ ॥

ತಥಾ ಚ ಸಾಗ್ರಲಿಂಗಂ ತು ರಾಘವೇಶ್ವರಮುತ್ತಮಂ ।
ಸೇಂದ್ರಃ ಕಲಾ ನದೀ ಪುಣ್ಯಾ ಯತ್ರ ದುಃಖಾದ್ಗತಃ ಪುರಾ　　॥ ೫೩ ॥

ನಿಹತ್ಯ ನಮುಚಿಂ ಮಿತ್ರಂ ತಪಸಾ ಸ್ವರ್ಗಮಾಪ್ತವಾನ್ ।
ತತ್ರ ದತ್ತಂ ನರೈಃ ಶ್ರಾದ್ಧಮನಂತಫಲದಂ ಭವೇತ್　　॥ ೫೪ ॥

ಪುಷ್ಕರಂ ನಾಮ ವೈ ತೀರ್ಥಂ ಶಾಲಗ್ರಾಮಂ ತಥೈವ ಚ ।
ಶೋಣಪಾತಶ್ಚ ವಿಖ್ಯಾತೋ ಯತ್ರ ವೈಶ್ವಾನರಾಲಯಃ　　॥ ೫೫ ॥

---

೫೦-೫೨. ಗೋದಾವರೀನದಿಯು ಎಡಗಡೆಗೆ ತಿರುಗುತ್ತಿರುವ ಮತ್ತು ಅನೇಕ ಲಿಂಗಗಳಿರುವ ಆ ಸ್ಥಳವೆಲ್ಲವೂ ಪಿತೃತೀರ್ಥವೆನ್ನಿಸಿಕೊಳ್ಳುತ್ತದೆ. ಅದನ್ನು ಜಾಮದಗ್ನ್ಯ ತೀರ್ಥವೆಂದೂ ಹೇಳುತ್ತಾರೆ ಅಲ್ಲಿ ಪಿತೃಗಳಿಗೆ ಬಹು ಸಂತೋಷವಾಗುತ್ತದೆ. ಪ್ರತೀಕನೆಂಬ ಋಷಿಯ ಭಯದಿಂದಲೇ ಅದು ಅಷ್ಟೊಂದು ಮಹಾತ್ಮ್ಯೆಯನ್ನು ಹೊಂದಿದೆ. ಹವ್ಯಕವ್ಯಗಳಿಗೆ ಅದು ಉತ್ತಮತೀರ್ಥವು. ಅದನ್ನು ಯಾವಾಗಲೂ ಸೇವಿಸುತ್ತಿರುವರು. ಅಲ್ಲಿ ಮಾಡುವ ಶ್ರಾದ್ಧ ಹೋಮ ದಾನಗಳು ಕೋಟಿಗುಣ ಹೆಚ್ಚಾಗಿರುವುವು.

೫೩-೫೪. ಅಲ್ಲೇ ಅಗ್ರವುಳ್ಳ ಮತ್ತೊಂದು ಲಿಂಗವಿರುವುದು. ಅದು ರಾಘವೇಶ್ವರವೆಂದು ಹೆಸರುಳ್ಳದು ಅಲ್ಲಿ ಕಲಾ ಎಂಬ ನದಿಯುಂಟು. ಅಲ್ಲಿ ಇಂದ್ರನು ನಮುಚಿಯನ್ನು ಕೊಂದು ದುಃಖದಿಂದ ತಪಸ್ಸುಮಾಡುತ್ತ ಸ್ವರ್ಗವನ್ನು ಹೊಂದಿದನು. ಅಲ್ಲಿ ಮನುಷ್ಯರು ಶ್ರಾದ್ಧಮಾಡಿದರೆ ಅನಂತವಾದ ಪುಣ್ಯವು ಬರುತ್ತದೆ.

೫೫-೫೭. ಪುಷ್ಕರ ಸಾಲಗ್ರಾಮ, ಶೋಣಪಾದ, ಸಾರಸ್ವತತೀರ್ಥ. ಸ್ವಾಮಿತೀರ್ಥ, ಮಲಂದರಾನದಿ, ಕೌಶಿಕ, ಚಂದ್ರಿಕಾನದಿಗಳು ವಿದರ್ಭಾ, ವೇಗಾ, ಪೂರ್ವ

ತೀರ್ಥಂ ಸಾರಸ್ವತಂ ನಾಮ ಸ್ವಾಮಿತೀರ್ಥಂ ತಥೈವ ಚ ।
ಮಲಂದರಾ ನದೀ ಪುಣ್ಯಾ ಕೌಶಿಕೀ ಚಂದ್ರಿಕಾ ತಥಾ ॥ ೫೬ ॥

ವಿದರ್ಭಾ ಚಾಥ ವೇಗಾ ಚ ಪಯೋಷ್ಣೀ ಪ್ರಾಙ್ಮುಖಾ ಪರಾ ।
ಕಾವೇರೀ ಚೋತ್ತರಾ ಕಾ ಚ ತಥಾ ಜಾಲಂಧರೋ ಗಿರಿಃ ॥ ೫೭ ॥

ಏತೇಷು ಶ್ರಾದ್ಧತೀರ್ಥೇಷು ಶ್ರಾದ್ಧಮಾನಂತ್ಯಮಶ್ನುತೇ ।
ಲೋಹದಂಡಂ ತಥಾ ತೀರ್ಥಂ ಚಿತ್ರಕೂಟಸ್ತಥೈವ ಚ ॥ ೫೮ ॥

ವಿಂಧ್ಯಯೋಗಸ್ತು ಗಂಗಾಯಾಂ ತಥಾ ನಂದೀತಟಂ ಶುಭಂ ।
ಕುಬ್ಜಾಮ್ರಕಂ ತಥಾ ತೀರ್ಥಮುರ್ವಶೀಪುಲಿನಂ ತಥಾ ॥ ೫೯ ॥

ಸಂಸಾರಮೋಚನಂ ತೀರ್ಥಂ ತಥೈವ ಋಣಮೋಚನಂ ।
ಏತೇಷು ಪಿತೃತೀರ್ಥೇಷು ಶಾದ್ಧಮಾನಂತ್ಯಮಶ್ನುತೇ ॥ ೬೦ ॥

ಅಟ್ಟಹಾಸಂ ತಥಾ ತೀರ್ಥಂ ಗೌತಮೇಶ್ವರಮೇವ ಚ ।
ತಥಾ ವಸಿಷ್ಠತೀರ್ಥಂ ಚ ಭಾರತಂ ಚ ತತಃ ಪರಂ ॥ ೬೧ ॥

ಬ್ರಹ್ಮಾವರ್ತಂ ಕುಶಾವರ್ತಂ ಹಂಸತೀರ್ಥಂ ತಥೈವ ಚ ।
ಪಿಂಡಾರಕಂ ಚ ವಿಖ್ಯಾತಂ ಶಂಖೋದ್ಧಾರಂ ತಥೈವ ಚ ॥ ೬೨ ॥

ಖಂಡೇಶ್ವರಂ ಬಿಲ್ವಕಂ ಚ ನೀಲಪರ್ವತ ಏವ ಚ ।
ತಥಾ ಚ ಬದರೀತೀರ್ಥಂ ರಾಮತೀರ್ಥಂ ತಥೈವ ಚ ॥ ೬೩ ॥

---

ದಿಕ್ಕಿಗೆ ಹರಿಯುವ ಪಯೋಷ್ಣಿ, ಉತ್ತರದಿಕ್ಕಿಗೆ ಹರಿಯುವ ಕಾವೇರಿ, ಜಾಲಂಧರಗಿರಿ. ಇವೂ ಶ್ರಾದ್ಧತೀರ್ಥಗಳು. ಇವುಗಳಲ್ಲಿ ಕೊಟ್ಟುದು ಅನಂತವಾಗುತ್ತದೆ.

೫೮-೬೦. ಲೋಹದಂಡ, ಚಿತ್ರಕೂಟ, ಗಂಗೆಯಲ್ಲಿ ವಿಂಧ್ಯಯೋಗ, ನದೀತಟ. ಕುಬ್ಜಾಮ್ರಕ, ಉರ್ವಶೀಪುಳಿನ, ಸಂಸಾರಮೋಚನ, ಋಣಮೋಚನ ಈ ತೀರ್ಥಗಳು ಪಿತೃತೀರ್ಥಗಳು. ಇವುಗಳಲ್ಲಿ ಶಾದ್ಧಮಾಡಿದರೆ ಅನಂತವಾಗುತ್ತದೆ.

೬೧-೬೪. ಅಟ್ಟಹಾಸತೀರ್ಥ. ಗೌತಮೇಶ್ವರ, ವಸಿಷ್ಠತೀರ್ಥ, ಭಾರತ. ಬ್ರಹ್ಮಾವರ್ತ, ಕುಶಾವರ್ತ, ಹಂಸತೀರ್ಥ, ಪಿಂಡಾರಕ, ಶಂಖೋದ್ಧಾರ, ಖಂಡೇಶ್ವರ, ಬಿಲ್ವಕ, ನೀಲಪರ್ವತ, ಬದರೀತೀರ್ಥ, ರಾಮತೀರ್ಥ, ಜಯಂತೀ, ವಿಜಯ,

ಜಯಂತೀ ವಿಜಯಂ ಚೈವ ಶುಕ್ಲತೀರ್ಥಂ ತಥೈವ ಚ ।
ಏಷು ಶ್ರಾದ್ಧಪ್ರದಾತಾರಃ ಪ್ರಯಾಂತಿ ಪರಮಂ ಪದಂ ॥ ೬೪ ॥

ತೀರ್ಥಂ ಮಾತೃಗೃಹಂ ನಾಮ ಕರವೀರಪುರಂ ತಥಾ ।
ಸಪ್ತ ಗೋದಾವರೀ ನಾಮ ಸರ್ವತೀರ್ಥೇಶ್ವರೇಶ್ವರಂ ॥ ೬೫ ॥

ತತ್ರ ಶ್ರಾದ್ಧಂ ಪ್ರದಾತವ್ಯಮನಂತಫಲಮೀಪ್ಸುಭಿಃ ।
ಕೀಕಟೇಷು ಗಯಾ ಪುಣ್ಯಾ ಪುಣ್ಯಂ ರಾಜಗೃಹಂ ವನಂ ॥ ೬೬ ॥

ಚ್ಯವನಸ್ಯಾಶ್ರಮಂ ಪುಣ್ಯಂ ನದೀ ಪುಣ್ಯಾ ಪುನಃ ಪುನಃ ।
ಯತ್ರ ಗಾಥಾ ವಿಚರತಿ ಬ್ರಹ್ಮಣಾ ಪರಿಕೀರ್ತಿತಾ ॥ ೬೭ ॥

ಏಷ್ಟವ್ಯಾ ಬಹವಃ ಪುತ್ರಾ ಯದ್ಯೇಕೋಽಪಿ ಗಯಾಂ ವ್ರಜೇತ್ ।
ಯಜೇತ ವಾಶ್ವಮೇಧೇನ ನೀಲಂ ವಾ ವೃಷಮುತ್ಸೃಜೇತ್ ॥ ೬೮ ॥

ಇಯಂ ಗಾಥಾ ವಿಚರತಿ ಪುಣ್ಯೇಷ್ವಾಯತನೇಷು ಚ ।
ಸರ್ವೇ ಮನುಷ್ಯಾ ರಾಜೇಂದ್ರ ಕೀರ್ತಯಂತಃ ಸಮಾಗತಾಃ ॥ ೬೯ ॥

---

ಶುಕ್ಲತೀರ್ಥ, ಇವುಗಳಲ್ಲಿ ಶ್ರಾದ್ಧವನ್ನು ಮಾಡಿದವರು ಪರಮ ಪದವನ್ನು ಹೊಂದುತ್ತಾರೆ.

೬೫. ಮಾತೃಗೃಹತೀರ್ಥ, ಕರವೀರಪುರ, ಸಪ್ತಗೋದಾವರಿ ಇವುಗಳಲ್ಲಿ ಶ್ರಾದ್ಧವನ್ನು ಮಾಡಿದರೆ ಅನಂತವಾದ ಫಲವುಂಟು.

೬೬-೬೮. ಕೀಟಕವೆಂಬ ಪ್ರದೇಶದಲ್ಲೆಲ್ಲಾ ಗಯೆಯು ಪುಣ್ಯಪ್ರದವಾದುದು. ರಾಜಗೃಹವೆಂಬ ವನವೂ ಪುಣ್ಯಕರವಾದುದು. ಚ್ಯವನಾಶ್ರಮವೂ, ಅಲ್ಲಿರುವ ನದಿಗಳೂ ಪುಣ್ಯವಾದವುಗಳು. ಬಹುಜನ ಮಕ್ಕಳಾಗಬೇಕು. ಏತಕ್ಕೆಂದರೆ ಒಬ್ಬನಾದರೂ ಗಯೆಗೆ ಹೋದಾನೆಂಬುವೇ ಧ್ಯೇಯ. ಅದಿಲ್ಲದಿದ್ದರೆ ಅಶ್ವಮೇಧಯಾಗವನ್ನು ಮಾಡಬೇಕು. ಅದೂ ಇಲ್ಲದಿದ್ದರೆ ನೀಲವೆಂಬ ಹೆಸರುಳ್ಳ ಬಸವನನ್ನು ಬಿಡಬೇಕು ಎಂಬ ಗಾದೆಯನ್ನು ಬ್ರಹ್ಮನು ತಾನಾಗಿಯೇ ಎಲ್ಲಾ ಕಡೆಯಲ್ಲಿಯೂ ಹೇಳುತ್ತಾನೆ.

೬೯-೭೦. ಈ ಗಾದೆಯು ಎಲ್ಲಾ ಪುಣ್ಯಸ್ಥಳಗಳಲ್ಲಿಯೂ ಹರಡುತ್ತದೆ. ಎಲ್ಲಿ ಸೇರಿಯೆ, ಆಗ ಎಲ್ಲಾ ಮನುಷ್ಯರೂ ನಮ್ಮ ವಂಶದಲ್ಲಿ ಯಾವನಾದರೂ ಗಯೆಗೆ

**ಕಿಮಸ್ಮಾಕಂ ಕುಲೇ ಕಶ್ಚಿದ್ಗಯಾಂ ಯಾಸ್ಯತಿ ಯಃ ಸುತಃ ।**
**ಪ್ರೀಣಯಿಷ್ಯತಿ ತಾನ್ಗತ್ವಾ ಸಪ್ತ ಪೂರ್ವಾಂಸ್ತಥಾ ಪರಾನ್ ॥ ೭೦ ॥**

**ಮಾತಾಮಹಾನಾಮಪ್ಯೇವಂ ಶ್ರುತಿರೇಷಾ ಚಿರಂತನೀ ।**
**ಗಂಗಾಯಾಂ ವಾಸ್ಥಿನಿಚಯಂ ಗತ್ವಾ ಕ್ಷೇಪ್ಸ್ಯತಿ ಯಃ ಸುತಃ ॥ ೭೧ ॥**

**ತಿಲೈಃ ಸಪ್ತಾಷ್ಟಭಿರ್ವಾಪಿ ದಾಸ್ಯತೇ ಚ ಜಲಾಂಜಲಿಂ ।**
**ಅರಣ್ಯತ್ರಿತಯೇ ವಾಪಿ ಪಿಂಡದಾನಂ ಕರಿಷ್ಯತಿ ॥ ೭೨ ॥**

**ಪ್ರಥಮಂ ಪುಷ್ಕರಾರಣ್ಯೇ ನೈಮಿಷೇ ತದನಂತರಂ ।**
**ಧರ್ಮಾರಣ್ಯೇ ಪುನಃ ಪ್ರಾಪ್ಯ ಶ್ರಾದ್ಧಂ ಭಕ್ತ್ಯಾ ಪ್ರದಾಸ್ಯತಿ ॥ ೭೩ ॥**

**ಗಯಾಯಾಂ ಧರ್ಮಪೃಷ್ಠೇ ಚ ಸರಸಿ ಬ್ರಹ್ಮಣಸ್ತಥಾ ।**
**ಗಯಾಶೀರ್ಷೇ ವಟೇ ಚೈವ ಪಿತೄಣಾಂ ದತ್ತಮಕ್ಷಯಂ ॥ ೭೪ ॥**

**ವ್ರಜನಾಯಾಂ ನರೋ ಯಸ್ತು ಅಧ್ವಾನಂ ಪರಿಸರ್ಪತಿ ।**
**ನರಕಸ್ಥಾನ್ ಪಿತೄಂಸ್ತದ್ವತ್ಸ್ವರ್ಗಂ ನಯತಿ ಸತ್ವರಃ ॥ ೭೫ ॥**

---

ಹೋಗುತ್ತಾನೆಯೋ ? ಹಾಗೆ ಹೋಗಿ ಹಿಂದುಮುಂದು ತನ್ನ ಏಳೇಳು ತಲೆಗಳನ್ನು ತೃಪ್ತಿಪಡಿಸುತ್ತಾನೆಯೋ ? ತಾಯಿಯ ಕಡೆಯವರನ್ನೂ ತೃಪ್ತಿಪಡಿಸುತ್ತಾನೆಯೋ ? ಎಂದು ಹೇಳುತ್ತ ಬರುತ್ತಿರುತ್ತಾರೆ.

೭೧-೭೨. ಯಾವನಾದರೂ ಗಂಗೆಯಲ್ಲಿ ನಮ್ಮ ಮೂಳೆಗಳನ್ನು ಹಾಕುವನೇ ? ಏಳೆಂಟು ಎಳ್ಳುಗಳನ್ನಾದರೂ ಹಾಕಿ ಯಾವನಾದರೂ ತರ್ಪಣವನ್ನು ಕೊಡುವನೆ ? ಮೂರು ಅರಣ್ಯಗಳಲ್ಲಿಯೂ ಪಿಂಡವನ್ನು ಯಾವನಾದರೂ ನಮ್ಮವನು ಹಾಕುವನೆ ? ಎನ್ನುವರು.

೭೩-೭೪. ಮೊದಲು ಪುಷ್ಕರಾರಣ್ಯದಲ್ಲಿಯೂ ಆಮೇಲೆ ನೈಮಿಷಾರಣ್ಯದಲ್ಲಿಯೂ ಅನಂತರ ಧರ್ಮಾರಣ್ಯದಲ್ಲಿಯೂ ಯಾವನಾದರೂ ಹೋಗಿ ಭಕ್ತಿಯಿಂದ ಪಿಂಡವನ್ನು ಕೊಡುವನೇ ಎನ್ನುವರು. ಗಯೆ, ಧರ್ಮಪೃಷ್ಠ, ಬ್ರಹ್ಮಸರಸ್ಸು, ಗಯಾಶೀರ್ಷ, ವಟ ಈ ಸ್ಥಳಗಳಲ್ಲಿ ಪಿಂಡವನ್ನು ಕೊಟ್ಟರೆ ಪಿತೃಗಳಿಗೆ ಅಕ್ಷಯವಾಗುತ್ತದೆ.

೭೫. ಪ್ರಯಾಣಮುಖದಲ್ಲಿ ಯಾವನು ದಾರಿಯನ್ನು ನಡೆಯುತ್ತಿರುವನೋ ಆ ನಡಗೆಯಲ್ಲಿ ಅವನು ನರಕದಲ್ಲಿರುವ ಪಿತೃಗಳನ್ನು ಅಷ್ಟು ಜಾಗ್ರತೆಯಾಗಿ ಸ್ವರ್ಗವನ್ನು ಹೊಂದಿಸುವನು.

**ಕುಲೇ ತಸ್ಯ ನ ರಾಜೇಂದ್ರ ಪ್ರೇತೋ ಭವತಿ ಕಶ್ಚನ ।**
**ಪ್ರೇತತ್ವಮೋಕ್ಷಭಾವಂ ಚ ಪಿಂಡದಾನಾಚ್ಚ ಗಚ್ಛತಿ　　॥ ೭೬ ॥**

**ಏಕೋ ಮುನಿಸ್ತಾಮ್ರಕರಾಗ್ರಹಸ್ತೋ**
**ಹ್ಯಾಮ್ರೇಷು ಮಧ್ಯೇ ಸಲಿಲಂ ದದಾತಿ ।**
**ಆಮ್ರಾಶ್ಚ ಸಿಕ್ತಾಃ ಪಿತರಶ್ಚ ತೃಪ್ತಾ**
**ಏಕಾ ಕ್ರಿಯಾ ದ್ವ್ಯರ್ಥಕರೀ ಪ್ರಸಿದ್ಧಾ　　॥ ೭೭ ॥**

**ಗಯಾಯಾಂ ಪಿಂಡದಾನಸ್ಯ ನಾನ್ಯದ್ದಾನಂ ವಿಶಿಷ್ಯತೇ ।**
**ಏಕೇನ ಪಿಂಡದಾನೇನ ತೃಪ್ತಾಸ್ತೇ ಮೋಕ್ಷಗಾಮಿನಃ　　॥ ೭೮ ॥**

**ಧಾನ್ಯಪ್ರಧಾನಂ ಪ್ರವರಂ ವದಂತಿ**
**ವಸ್ತ್ರಪ್ರದಾನಂ ಚ ತಥಾ ಮುನೀಂದ್ರಾಃ ।**
**ಗಯಾಸುತೀರ್ಥೇಷು ನರೈಃ ಪ್ರದತ್ತಂ**
**ತದ್ಧರ್ಮಹೇತುಂ ಪ್ರವರಂ ಪ್ರದಿಷ್ಟಂ　॥ ೭೯ ॥**

---

೭೬. ಅವನ ಕುಲದಲ್ಲಿ ಯಾವನೂ ಕೂಡ ಪ್ರೇತವಾಗುವುದೇ ಇಲ್ಲ ಪಿಂಡವನ್ನು ಕೊಡುವುದರಿಂದ ಆ ಪ್ರೇತವು ಪಿಂಡದಾನದಿಂದ ಮೋಕ್ಷವನ್ನು ಹೊಂದುತ್ತದೆ.

೭೭. ಅಲ್ಲಿರುವ ಆಶ್ರಮದಲ್ಲಿ ಒಬ್ಬ ಋಷಿಯು ತಾಮ್ರದ ಪಾತ್ರೆಯಲ್ಲಿ ನೀರನ್ನು ತೆಗೆದುಕೊಂಡು ತುದಿಬೆರಳಿನಿಂದ ಮಾವಿನ ಗಿಡಗಳಿಗೆ ನೀರನ್ನು ಹುಯ್ಯುತ್ತಿದ್ದನು. ಆಗ ಮಾವಿನಗಿಡಕ್ಕೂ ನೀರುಹಾಕಿದಂತಾಯಿತು. ತರ್ಪಣವನ್ನು ಕೊಡುವ ರೀತಿಯಲ್ಲಿ ನೀರನ್ನು ಬಿಟ್ಟುದರಿಂದ ಪಿತೃಗಳೂ ತೃಪ್ತರಾದರು. ನೀರು ಹಾಕುವ ಒಂದೇ ಕೆಲಸದಿಂದ ಎರಡುಕೆಲಸಗಳು ಆದಂತಾಯಿತು.

೭೮. ಗಯೆಯಲ್ಲಿ ಪಿಂಡದಾನ ಕೊಡುವುದಕ್ಕಿಂತಲೂ ಬೇರೆ ದಾನವೇ ಇಲ್ಲ. ಒಂದೇ ಒಂದು ಪಿಂಡದಾನವನ್ನು ಗಯೆಯಲ್ಲಿ ಕೊಡುವುದರಿಂದ ಪಿತೃಗಳೆಲ್ಲರೂ ಮೋಕ್ಷವನ್ನು ಹೊಂದುತ್ತಾರೆ.

೭೯. ಧಾನ್ಯದಾನವೇ ಉತ್ತಮವಾದುದು. ಅದೇರೀತಿ ವಸ್ತ್ರದಾನವೂ ಕೂಡ ಉತ್ತಮವಾದುದು. ಇವನ್ನು ಗಯೆಯಲ್ಲಿ ಕೊಟ್ಟರೆ ಉತ್ತಮವಾದ ಧರ್ಮಕಾರ್ಯವೆಂದು ಎಲ್ಲರೂ ಹೇಳುತ್ತಾರೆ.

ಸರ್ವಾತ್ಮನಾ ಸುರುಚಿನಾ ಮಹಾಚಲಮಹಾನದೀ ।
ಯೇ ತು ಪಶ್ಯಂತಿ ತಾಂ ಗತ್ವಾ ಮಾನಸೇ ದಕ್ಷಿಣೋತ್ತರೇ ॥ ೮೦ ॥

ಪ್ರಣಮ್ಯ ದ್ವಿಜಮುಖ್ಯೇಭ್ಯಃ ಪ್ರಾಪ್ತಂ ತೈರ್ಜನ್ಮನಃ ಫಲಂ ।
ಯದ್ಯದಿಚ್ಛತಿ ವೈ ಮರ್ತ್ಯಸ್ತತ್ತದಾಪ್ನೋತ್ಯಸಂಶಯಂ ॥ ೮೧ ॥

ಏಷ ತೂದ್ದೇಶತಃ ಪ್ರೋಕ್ತಸ್ತೀರ್ಥಾನಾಂ ಸಂಗ್ರಹೋ ಮಯಾ ।
ವಾಗೀಶೋಽಪಿ ನ ಶಕ್ನೋತಿ ವಿಸ್ತರಾತ್ಕಿಮು ಮಾನುಷಃ ॥ ೮೨ ॥

ಸತ್ಯಂ ತೀರ್ಥಂ ದಯಾತೀರ್ಥಂ ತೀರ್ಥಮಿಂದ್ರಿಯನಿಗ್ರಹಃ ।
ವರ್ಣಾಶ್ರಮಾಣಾಂ ಗೇಹೇಽಪಿ ತೀರ್ಥಂ ಶಮ ಉದಾಹೃತಂ ॥ ೮೩ ॥

ಏಷ ತೀರ್ಥೇಷು ಯಚ್ಛ್ರಾದ್ಧಂ ತತ್ಕೋಟಿಗುಣಮಿಷ್ಯತೇ ।
ಗಯಾಯಾಂ ವೈ ತು ಯಚ್ಛ್ರಾದ್ಧಂ ತಚ್ಛ್ರಾದ್ಧಮಪವರ್ಗದಂ ॥ ೮೪ ॥

---

೮೦-೮೧ ಮಾನಸಸರೋವರಕ್ಕೆ ಹೋದರೆ ದಕ್ಷಿಣಕ್ಕೆ ಗಂಗಾನದಿಯೂ ಉತ್ತರಕ್ಕೆ ಕೈಲಾಸ ಪರ್ವತವೂ ಕಾಣುತ್ತವೆ. ಅವನ್ನು ನೋಡಿ ಬ್ರಾಹ್ಮಣರಿಗೆ ನಮಸ್ಕಾರ ಮಾಡಿದರೆ ಅವರು ಹುಟ್ಟಿದುದಕ್ಕೆ ಸಾರ್ಥಕವಾಯಿತು. ಮನುಷ್ಯನು ಅಪೇಕ್ಷಿಸಿದುದೆಲ್ಲವನ್ನೂ ಖಂಡಿತವಾಗಿಯೂ ಹೊಂದುತ್ತಾನೆ.

೮೨. ನಾನು ತೀರ್ಥಗಳನ್ನು ದೇಶದ ಕ್ರಮದಿಂದ ಸಂಗ್ರಹವಾಗಿ ಹೇಳಿದ್ದೇನೆ. ಬ್ರಹ್ಮನಾದರೂಕೂಡ ವಿಸ್ತಾರವಾಗಿ ಹೇಳಲುಶಕ್ತನಾಗಲಾರ. ಮನುಷ್ಯನು ಹೇಳಲು ಹೇಗೆಸಾಧ್ಯ ವಾದೀತು ?

೮೩. ಸತ್ಯ, ದಯೆ, ಇಂದ್ರಿಯನಿಗ್ರಹಗಳೇ ತೀರ್ಥಗಳು. ವರ್ಣ ಮತ್ತು ಆಶ್ರಮಗಳ ಮನೆಗಳಲ್ಲಿ ಶಾಂತಿಯೊಂದಿದ್ದರೆ ಅದೇ ತೀರ್ಥವು.

೮೪. ಈ ತೀರ್ಥಗಳಲ್ಲಿ ಶ್ರಾದ್ಧಮಾಡಿದರೆ ಕೋಟಿಪಾಲಿನಷ್ಟು ಪುಣ್ಯವುಂಟು. ಗಯೆಯಲ್ಲಿ ಶ್ರಾದ್ಧಮಾಡಿದರೆ ಅದು ಮೋಕ್ಷವನ್ನು ಕೊಡುತ್ತದೆ.

**ಯಸ್ಮಾತ್ತಸ್ಮಾತ್ಪ್ರಯತ್ನೇನ ತೀರ್ಥೇ ಶ್ರಾದ್ಧಂ ಸಮಾಚರೇತ್ ।**
**ಪ್ರಾತಃಕಾಲೋ ಮುಹೂರ್ತಾಂಸ್ತ್ರೀನ್ ಸಂಗವಸ್ತಾವದೇವ ತು ॥ ೮೫ ॥**

**ಮಧ್ಯಾಹ್ನಸ್ತ್ರಿಮುಹೂರ್ತಃ ಸ್ಯಾದಪರಾಹ್ಣಸ್ತತಃ ಪರಂ ।**
**ಸಾಯಾಹ್ನಸ್ತ್ರಿಮುಹೂರ್ತಃ ಸ್ಯಾಚ್ಛ್ರಾದ್ಧಂ ತತ್ರ ನ ಕಾರಯೇತ್ ॥ ೮೬ ॥**

**ರಾಕ್ಷಸೀ ನಾಮ ಸಾ ವೇಲಾ ಗರ್ಹಿತಾ ಸರ್ವಕರ್ಮಸು ।**
**ಅಹ್ನೋ ಮುಹೂರ್ತಾ ವ್ಯಾಖ್ಯಾತಾ ದಶ ಪಂಚ ಚ ಸರ್ವದಾ ॥ ೮೭ ॥**

**ತತ್ರಾಷ್ಟಮೋ ಮುಹೂರ್ತೋ ಯಃ ಸ ಕಾಲಃ ಕುತಪಃ ಸ್ಮೃತಃ ।**
**ಮಧ್ಯಾಹ್ನಾತ್ಸರ್ವದಾ ಯಸ್ಮಾನ್ಮಂದೀಭವತಿ ಭಾಸ್ಕರಃ ॥ ೮೮ ॥**

**ತಸ್ಮಾದನಂತಫಲದಸ್ತತ್ರಾರಂಭೋ ವಿಶಿಷ್ಯತೇ ।**
**ಖಡ್ಗಪಾತ್ರಂ ಚ ಕುತಪಸ್ತಥಾ ನೇಪಾಲಕಂಬಲಂ ॥ ೮೯ ॥**

---

೮೫-೮೬. ಸರ್ವಪ್ರಯತ್ನದಿಂದಲೂ ತೀರ್ಥಗಳಲ್ಲಿ ಶ್ರಾದ್ಧಗಳನ್ನು ಮಾಡಬೇಕು. ಸೂರ್ಯೋದಯವಾದಮೇಲೆ ಮೂರು ಮುಹೂರ್ತಗಳು, ಪ್ರಾತಃಕಾಲ; ಕೊನೆಯ ಮುಹೂರ್ತವೇ ಸಂಗಮಕಾಲ. ಅನಂತರ ಮೂರು ಮುಹೂರ್ತಗಳು ಮಧ್ಯಾಹ್ನಕಾಲ. ಅನಂತರ ಅಪರಾಹ್ಣವೆನಿಸಿಕೊಳ್ಳುತ್ತದೆ. ಇದೂ ಮೂರುಮುಹೂರ್ತಕಾಲ. ಅನಂತರ ಮೂರು ಮುಹೂರ್ತಗಳಕಾಲ ಸಾಯಾಹ್ನವೆನ್ನಿಸಿಕೊಳ್ಳುತ್ತದೆ. ಈ ಸಾಯಾಹ್ನದಲ್ಲಿ ಶ್ರಾದ್ಧವನ್ನು ಮಾಡಬಾರದು.

೮೭. ಆ ವೇಳೆಯು ರಾಕ್ಷಸೀವೇಳೆ ಎನ್ನಿಸಿಕೊಳ್ಳುತ್ತದೆ. ಅದರಲ್ಲಿ ಯಾವ ಕೆಲಸವನ್ನೂ ಮಾಡಬಾರದು. ಈ ರೀತಿ ಹದಿನಾರು ಮುಹೂರ್ತಗಳೆಂದು ಹಗಲಿನ ವೇಳೆಯನ್ನು ಹೇಳಿದುದಾಯಿತು. ಈ ಮುಹೂರ್ತಗಳಲ್ಲಿ ಎಂಟನೆಯ ಮುಹೂರ್ತಕ್ಕೆ ಕುತುಪವೆಂದು ಹೆಸರು.

೮೮. ಮಧ್ಯಾಹ್ನಾನಂತರ ಸೂರ್ಯನು ಮಂದರಶ್ಮಿಪ್ರಪ್ರವನಾಗುತ್ತಾನಾದ್ದರಿಂದ ಆಗ ಮಾಡಿದ ಶ್ರಾದ್ಧವು ಬಹು ಕಳೆಯುಳ್ಳದ್ದು. ಆದ್ದರಿಂದಲೇ ಆಗ ಶ್ರಾದ್ಧಾರಂಭವು ಉತ್ತಮವು.

೮೯-೯೦. ಖಡ್ಗಪಾತ್ರ, ಕುತುಪಕಾಲ, ಶಾಲುಗಳೆಂಬ ನೇಪಾಳದೇಶದ ಕಂಬಳಿ, ಚಿನ್ನ, ದರ್ಭೆ, ಹಸುಗಳು, ಮಗಳಮಗ, ಇವೆಂಟೂ ಉತ್ತಮವಾದುವು.

ರುಕ್ಮಂ ದರ್ಭಾಸ್ತಿಲಾ ಗಾವೋ ದೌಹಿತ್ರಶ್ಚಾಷ್ಟಮಃ ಸ್ಮೃತಃ ।
ಪಾಪಂ ಕುತ್ಸಿತಮಿತ್ಯಾಹುಸ್ತಸ್ಯ ಸಂತಾಪಕಾರಿಣಃ ॥ ೯೦ ॥

ಅಷ್ಟಾವೇತೇ ಯತಸ್ತಸ್ಮಾತ್ಕುತಪಾ ಇತಿ ಕೀರ್ತಿತಾಃ ।
ಊರ್ಧ್ವಂ ಮುಹೂರ್ತಾತ್ಕುತಪಾನ್ಮುಹೂರ್ತಂ ತು ಚತುಷ್ಟಯಂ ॥ ೯೧

ಮುಹೂರ್ತಪಂಚಕಂ ಚೈವ ಸ್ವಧಾಪಾಚನಮಿಷ್ಯತೇ ।
ವಿಷ್ಣುದೇಹಸಮುದ್ಭೂತಾಃ ಕುಶಾಃ ಕೃಷ್ಣತಿಲಾಸ್ತಥಾ ॥ ೯೨ ॥

ಶ್ರಾದ್ಧಸ್ಯ ಲಕ್ಷಣಂ ಕಾಲಮಿತಿ ಪ್ರಾಹುರ್ದಿವೌಕಸಃ ।
ತಿಲೋದಕಾಂಜಲಿರ್ದೇಯೋ ಜಲಾಂತೇ ತೀರ್ಥವಾರಿಭಿಃ ॥ ೯೩ ॥

ಸದರ್ಭಹಸ್ತೇನೈಕೇನ ಗೃಹೇ ಶ್ರಾದ್ಧಂ ಗಮಿಷ್ಯತಿ ।
ಪುಣ್ಯಂ ಪವಿತ್ರಮಾಯುಷ್ಯಂ ಸರ್ವಪಾಪವಿನಾಶನಂ ॥ ೯೪ ॥

ಬ್ರಹ್ಮಣಾ ಚೈವ ಕಥಿತಂ ತೀರ್ಥಶ್ರಾದ್ಧಾನುಕೀರ್ತನಂ ।
ಶೃಣೋತಿ ಯಃ ಪಠೇದ್ವಾಪಿ ಶ್ರೀಮಾನ್ಸಂಜಾಯತೇ ನರಃ ॥ ೯೫ ॥

---

ಕುತುಪಕಾಲದಲ್ಲಿ ಪಾಪವು ಕುತ್ಸಿತವಾದುದು. ಆಗ ತೊಂದರೆ ಮಾಡುವವರಿಗೆ ಶಕ್ತಿಯು ಕಡಿಮೆಯಾದುದು.

೯೧-೯೨. ಈ ಮೇಲೆ ಹೇಳಿದ ಎಂಟೂ ಸೇರಿ ಕುತಪಗಳೆನ್ನಿಸಿಕೊಳ್ಳುತ್ತವೆ. ಹಿಂದೆ ಹೇಳಿದ ಕುತಪಕಾಲವಾದಮೇಲೂ ನಾಲ್ಕು ಮುಹೂರ್ತಗಳು ಕುತಪಕಾಲವೂ ಸೇರಿ ಐದು ಮುಹೂರ್ತಗಳಲ್ಲಿ ಪಿತೃಕಾರ್ಯವನ್ನು ಮಾಡುವುದು ಶ್ರೇಯಸ್ಕರವು ಉತ್ತಮವು. ದರ್ಭೆ ಮತ್ತು ಕಪ್ಪುಎಳ್ಳು ಇವೆರಡೂ ವಿಷ್ಣುವಿನ ದೇಹದಿಂದಲೇ ಹುಟ್ಟಿದುವು.

೯೩. ದೇವತೆಗಳು ಶ್ರಾದ್ಧಕ್ಕೆ ಮುಖ್ಯವಾದುದು ಕಾಲವೆಂದು ಹೇಳುತ್ತಾರೆ. ತೀರ್ಥಗಳಿಗೆ ಹೋದರೆ ತಿಲೋದಕವನ್ನು ಬೊಗಸೆಯಿಂದ ಕೊಡಬೇಕು. ಮನೆಯಲ್ಲಿ ಪವಿತ್ರವನ್ನಿಟ್ಟುಕೊಂಡು ಒಂದೇ ಕೈಯಿಂದ ತರ್ಪಣವನ್ನು ಕೊಡಬೇಕು.

೯೪-೯೫. ಈ ಶ್ರಾದ್ಧವು ಪುಣ್ಯಕರವಾದುದು. ಆಯುಸ್ಸನ್ನು ಉಂಟು ಮಾಡತಕ್ಕುದ್ದು. ಎಲ್ಲಾ ಪಾಪಗಳನ್ನು ನಾಶಮಾಡುತ್ತದೆ. ಬ್ರಾಹ್ಮಣನೂ ಕೂಡ ಈ ತೀರ್ಥಶ್ರಾದ್ಧವನ್ನು ಹೊಗಳಿದ್ದಾನೆ. ಇದನ್ನು ಕೇಳಿದವನೂ, ಓದಿದವನೂ ಕೂಡ ಶ್ರೀಮಂತನಾಗುತ್ತಾನೆ.

ಶ್ರಾದ್ಧಕಾಲೇ ಚ ವಕ್ತವ್ಯಂ ತಥಾ ತೀರ್ಥನಿವಾಸಿಭಿಃ ।
ಸರ್ವಪಾಪೋಪಶಾಂತ್ಯರ್ಥಮಲಕ್ಷ್ಮೀನಾಶನಂ ಯತಃ　　॥ ೯೬ ॥

ಇದಂ ಪವಿತ್ರಂ ಯಶಸೋ ನಿಧಾನ
ಮಿದಂ ಮಹಾಪಾತಕನಾಶನಂ ಚ ।
ಬ್ರಹ್ಮಾರ್ಕರುದ್ರೈಶ್ಚ ಸುಪೂಜಿತಂ ಚ
ಶ್ರಾದ್ಧಸ್ಯ ಮಾಹಾತ್ಮ್ಯಮುಶಂತಿತಜ್ಞಾಃ　　॥ ೯೭ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಶ್ರಾದ್ಧಪ್ರಕರಣಂ
ನಾಮ ಏಕಾದಶೋಽಧ್ಯಾಯಃ



---

೯೬. ಈ ಶ್ರಾದ್ಧಮಾಡುವ ಕಾಲದಲ್ಲಿ ತೀರ್ಥದಲ್ಲಿ ವಾಸಮಾಡುವವರು ಎಲ್ಲಾ ಪಾಪಗಳನ್ನು ಕಳೆದುಕೊಳ್ಳಲು ಮತ್ತು ಅಲಕ್ಷ್ಮಿಯನ್ನು ನಾಶಮಾಡಿಕೊಳ್ಳಲು ಈ ಅಧ್ಯಾಯವನ್ನು ಓದಬೇಕು.

೯೭. ಈ ಅಧ್ಯಾಯವು ಪವಿತ್ರವಾದುದು. ಯಶಸ್ಸಿಗೆ ಕಾರಣವು. ಮಹಾ ಪಾಪಗಳನ್ನು ನಾಶಮಾಡುತ್ತದೆ. ಬ್ರಹ್ಮ ಸೂರ್ಯ ರುದ್ರರಿಂದ ಪೂಜಿಸಲ್ಪಟ್ಟಿದೆ. ಈ ಶ್ರಾದ್ಧ ಮಹಿಮೆಯು ಬಹು ಯೋಗ್ಯವಾದುದೆಂದು ಅದರ ವಿಷಯವನ್ನು ಬಲ್ಲವರು ಹೇಳುತ್ತಾರೆ.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ಶ್ರಾದ್ಧ ಪ್ರಕರಣವೆಂಬ ಹನ್ನೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

## ಅಥ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ದ್ವಾದಶೋಽಧ್ಯಾಯಃ

॥ ಭೀಷ್ಮ ಉವಾಚ ॥

ಸೋಮವಂಶಃ ಕಥಂ ಜಾತಃ ಸರ್ವಶಾಸ್ತ್ರವಿಶಾರದ ।
ತದ್ವಂಶೇ ಕೇ ತು ರಾಜಾನೋ ಬಭೂವುಃ ಕೀರ್ತಿವರ್ಧನಾಃ ॥ ೧ ॥

॥ ಪುಲಸ್ತ್ಯ ಉವಾಚ ॥

ಆದಿಷ್ಟೋ ಬ್ರಹ್ಮಣಾ ಪೂರ್ವಮತ್ರಿಃ ಸರ್ವವಿಧೌ ಪುರಾ ।
ಅನುತ್ತರಂ ನಾಮ ತಪಃ ಸೃಷ್ಟ್ಯರ್ಥಂ ತಪ್ತವಾನ್ವಿಭುಃ ॥ ೨ ॥

ಯದಾನಂದಕರಂ ಬ್ರಹ್ಮ ಭಗವಾನ್ಕ್ಲೇಶನಾಶನಂ ।
ಬ್ರಹ್ಮವಿಷ್ಣ್ವರ್ಕರುದ್ರಾಣಾಮಭ್ಯಂತರಮತೀಂದ್ರಿಯಂ ॥ ೩ ॥

---

### ಹನ್ನೆರಡನೆಯ ಅಧ್ಯಾಯವು.

೧. ಭೀಷ್ಮನು ಕೇಳಿದನು :—ಎಲೈ ಸರ್ವಶಾಸ್ತ್ರದಲ್ಲಿ ವಿಶಾರದನಾದ ಪುಲಸ್ತ್ಯನೇ, ಚಂದ್ರವಂಶವು ಹೇಗೆ ಹುಟ್ಟಿತು? ಆ ವಂಶದಲ್ಲಿ ರಾಜರು ಯಾರು? ಅವರಲ್ಲಿ ಕೀರ್ತಿವಂತರಾರು? ಹೇಳು.

೨. ಪುಲಸ್ತ್ಯನು ಹೇಳಿದನು :—ಪೂರ್ವದಲ್ಲಿ ಬ್ರಹ್ಮನಿಂದ ಆಜ್ಞಾಪಿಸಲ್ಪಟ್ಟ ಅತ್ರಿಯು ಸರ್ವ ಪ್ರಕಾರದಿಂದಲೂ ಸೃಷ್ಟಿಯನ್ನು ಮಾಡುವುದಕ್ಕೋಸ್ಕರ ಮಹತ್ತರವಾದ ತಪಸ್ಸನ್ನು ಮಾಡಿದನು.

೩. ಆನಂದವನ್ನುಂಟುಮಾಡುವ, ಕ್ಲೇಶನಾಶಕವಾದ, ಇಂದ್ರಿಯಗಳಿಗೆ ತಿಳಿಯದ ಬ್ರಹ್ಮ, ವಿಷ್ಣು, ಸೂರ್ಯ, ರುದ್ರರುಗಳಿಗೆ ಮಧ್ಯಸ್ಥನಾದ ಬ್ರಹ್ಮನನ್ನು ಕುರಿತು ತಪಸ್ಸುಮಾಡಿದನು.

ಶಾಂತಿಂ ಕೃತ್ವಾ ತು ಮನಸಾ ತದಾತ್ರಿಃ ಸಂಯಮೋ ಸ್ಥಿತಃ ।
ಮಾಹಾತ್ಮ್ಯಂ ತಪಸೋ ಪಾಪಿ ಪರಮಾನಂದಕಾರಕಂ ॥ ४ ।

ಯಸ್ಮಾದ್ವಂಶಪತಿಃ ಸಾರ್ಧಂ ಸಮಯೋ ತದಧಿಷ್ಠಿತಂ ।
ತಂ ದೃಷ್ಟ್ವಾ ಚೇಷ್ಟಮಾನೇನ ತಸ್ಮಾತ್ಸೋಮೋಽಭವದ್ವಿಭುಃ ॥ ೫ ॥

ಅಥ ಸುಸ್ರಾವ ನೇತ್ರಾಭ್ಯಾಂ ಜಲಂ ತತ್ರಾತ್ರಿಸಂಭವಂ ।
ದ್ಯೋತಯದ್ವಿಶ್ವಮಖಿಲಂ ಜ್ಯೋತ್ಸ್ನಯಾ ಸಚರಾಚರಂ ॥ ೬ ॥

ತದ್ದಿಶೋ ಜಗೃಹಸ್ತತ್ರ ಸ್ತ್ರೀರೂಪೇಣ ಸುತೇಚ್ಛಯಾ ।
ಗರ್ಭೋಽಭೂದುದರೇ ತಾಸಾಂ ಸ್ಥಿತಃ ಸೋಽಪ್ಯತ್ರಿಸಂಭವಃ ॥ ೭ ॥

ಆಶಾಶ್ಚ ಮುಮುಚುರ್ಗರ್ಭಮಶಕ್ತಾ ಧಾರಣೇ ತತಃ ।
ಸಮಾದಾಯಾಥ ತಂ ಗರ್ಭಮೇಕೀಕೃತ್ಯ ಚತುರ್ಮುಖಃ ॥ ೮ ॥

---

೪. ಆ ಅತ್ರಿಯು ಮನಸ್ಸಿನಲ್ಲಿಯೇ ಶಾಂತಿಯನ್ನು ಜಪಿಸಿ ನಿಯಮದಲ್ಲಿದ್ದನು. ತಪಸ್ಸಿನ ಮಹಿಮೆಯು ಅಸಾಧ್ಯವಾದುದು. ಬಹು ಆನಂದವನ್ನುಂಟುಮಾಡತಕ್ಕದ್ದು

೫. ವಂಶಪತಿಯಾದ ಆ ಅತ್ರಿಯು ತಪಸ್ಸಿನಲ್ಲಿ ನಿಯಮದಿಂದಿದ್ದುದರಿಂದ ಆ ನಿಯಮವನ್ನು ತಿಳಿದ ಆಸಕ್ತನಾದ ಆ ಅತ್ರಿಯಿಂದ ಸೋಮನು ಹುಟ್ಟಿದನು.

೬. ಆ ತಪಸ್ಸಿನ ಕಾಲದಲ್ಲಿ ಅತ್ರಿಯ ಕಣ್ಣಿನಿಂದ ನೀರು ಪ್ರಪಂಚವನ್ನೇ ತನ್ನ ಬೆಳಕಿನಿಂದ ಬೆಳಗುತ್ತ ಸುರಿಯಿತು.

೭. ಆಗ ದಿಕ್ಕುಗಳು ಸ್ತ್ರೀರೂಪವನ್ನು ಧರಿಸಿ ಮಕ್ಕಳನ್ನು ಹೊಂದಬೇಕೆಂಬ ಇಚ್ಛೆಯಿಂದ ಆ ನೀರನ್ನು ಗ್ರಹಿಸಲು, ಅವುಗಳ ಹೊಟ್ಟೆಯಲ್ಲಿ ಗರ್ಭವು ಉಂಟಾಯಿತು.

೮. ಅನಂತರ ದಿಕ್ಕುಗಳು ಆ ಗರ್ಭವನ್ನು ಸಹಿಸಲಾರದೆ ಬಿಟ್ಟುಬಿಟ್ಟವು ಆಗ ಬ್ರಹ್ಮನು ಅವನ್ನು ತೆಗೆದುಕೊಂಡು ಸೇರಿಸಿ ಒಂದನ್ನಾಗಿಮಾಡಿ, ಸರ್ವಾಯುಧಗಳನ್ನು ಧರಿಸಿರುವ ಒಬ್ಬ ಯುವಕನನ್ನಾಗಿಮಾಡಿದನು.

ಯುವಾನಮುಕರೋದ್ಬ್ರಹ್ಮಾ ಸರ್ವಾಯುಧಧರಂ ನರಂ ।
ಸ್ಯಂದನೇಽಥ ಸಹಸ್ರಾಖ್ಯೇ ದೇವಶಕ್ತಿಮಯೇ ಪ್ರಭುಃ ॥ ೯ ॥

ಆರೋಪ್ಯ ಲೋಕಮನಯದಾತ್ಮೀಯಂ ಸ ಪಿತಾಮಹಃ ।
ತತೋ ಬ್ರಹ್ಮರ್ಷಿಭಿಃ ಪ್ರೋಕ್ತಮಸ್ಮತ್ಸ್ವಾಮೀ ಭವತ್ವಯಂ ॥ ೧೦ ॥

ಋಷಿಭಿರ್ದೇವಗಂಧರ್ವೈರಪ್ಸರೋಭಿಸ್ತಥೈವ ಚ ।
ತುಷ್ಟುವೇ ಸಾಮದೈವತ್ಯೈರ್ಬ್ರಹ್ಮಾದ್ಯೈರ್ವೇದಸಂಗ್ರಹಃ ॥ ೧೧ ॥

ಸ್ತೂಯಮಾನಸ್ಯ ತಸ್ಯಾಭೂದಧಿಕಂ ಮಹದಂತರಂ ।
ತೇಜೋವಿತಾನಾದಭವದ್ಭುವಿ ದಿವ್ಯೌಷಧೀಗಣಃ ॥ ೧೨ ॥

ತದ್ದೀಪ್ತಿರಧಿಕಾ ತಸ್ಮಾದ್ರಾತ್ರೌ ಭವತಿ ಸರ್ವದಾ ।
ತೇನೌಷಧೀಶಃ ಸೋಮೋಽಭೂದ್ದ್ವಿಜೇಷ್ವಪಿ ಹಿ ಗದ್ಯತೇ ॥ ೧೩ ॥

ವೇದಧಾಮಾ ರಸಶ್ಚಾಯಂ ಯದಿದಂ ಮಂಡಲಂ ಶುಭಂ ।
ಕ್ಷೀಯತೇ ವರ್ಧತೇ ಚೈವ ಶುಕ್ಲೇ ಕೃಷ್ಣೇ ಚ ಸರ್ವದಾ ॥ ೧೪ ॥

---

೯-೧೦. ಆಗ ಆ ಬ್ರಹ್ಮನು ದೇವಶಕ್ತಿಮಯವಾದ ಸಹಸ್ರಾಖ್ಯವೆಂಬ ರಥದಲ್ಲಿ ಕೂರಿಸಿಕೊಂಡು ತನ್ನ ಲೋಕಕ್ಕೆ ಕರೆದುಕೊಂಡು ಹೋದನು. ಆಗ ಬ್ರಹ್ಮರ್ಷಿಗಳು ಇವನು ನಮ್ಮ ಸ್ವಾಮಿಯಾಗಲೆಂದು ಹೇಳಿದರು.

೧೧. ಋಷಿಗಳು, ದೇವತೆಗಳು ಗಂಧರ್ವರು, ಅಪ್ಸರೆಸ್ಸುಗಳು, ಬ್ರಹ್ಮಾದಿಗಳು, ಸಾಮದೇವತೆಗಳು ಕೂಡ ಆತನನ್ನು ವೇದಸಂಗ್ರಹನೆಂದು ಸ್ತುತಿಸಿದರು.

೧೨. ಅವನನ್ನು ಸ್ತೋತ್ರಮಾಡಿದುದರಿಂದ ಮಿಕ್ಕವರಿಗೂ ಆತನಿಗೂ ಬಹು ವ್ಯತ್ಯಾಸವುಂಟಾಯಿತು. ಆ ತೇಜಸ್ಸಿನಿಂದಲೇ ಭೂಮಿಯಲ್ಲಿ ಔಷಧಿಗಳು ಹುಟ್ಟಿದುವು.

೧೩. ಆ ಕಾಂತಿಯು ರಾತ್ರಿಯಲ್ಲಿ ಯಾವಾಗಲೂ ಹೆಚ್ಚಾಗಿ ಆಗುತ್ತದೆ. ಅದರಿಂದಲೇ ಸೋಮನು ಔಷಧೀಶನಾದನು ಎಂದು ದ್ವಿಜರು ಹೇಳುತ್ತಾರೆ.

೧೪. ಆ ಚಂದ್ರಮಂಡಲವು ವೇದಕ್ಕೆ ಜಾಗವಾದುದು, ಶುಭವಾದುದು. ರಸಮಯವಾದುದು, ಶುಕ್ಲದಲ್ಲಿ ವೃದ್ಧಿಯಾಗುತ್ತಲೂ ಕೃಷ್ಣದಲ್ಲಿ ಕ್ಷೀಣಿಸುತ್ತಲೂ ಇರುವುದು.

**ತತೋ ವಿಂಶಾಸ್ತಥಾ ಸಪ್ತ ದಕ್ಷಃ ಪ್ರಾಚೇತಸೋ ದದೌ ।**
**ರೂಪಲಾವಣ್ಯಸಂಯುಕ್ತಾಸ್ತಸ್ಮೈ ಕನ್ಯಾಃ ಸುವರ್ಚಸಃ ॥ ೧೫ ॥**

**ತತಃ ಪದ್ಮಸಹಸ್ರಾಣಾಂ ಸಹಸ್ರಾಣಿ ದಶೈವ ತು ।**
**ತಪಶ್ಚಚಾರ ಶೀತಾಂಶುರ್ವಿಷ್ಣುಧ್ಯಾನೈಕತತ್ಪರಃ ॥ ೧೬ ॥**

**ತತಸ್ತುಷ್ಟಃ ಸ ಭಗವಾಂಸ್ತಸ್ಮೈ ನಾರಾಯಣೋ ಹರಿಃ ।**
**ವರಂ ವೃಣೀಷ್ವ ಚೋವಾಚ ಪರಮಾತ್ಮಾ ಜನಾರ್ದನಃ ॥ ೧೭ ॥**

**ತತೋ ವವ್ರೇ ವರಂ ಸೋಮಃ ಶಕ್ರಲೋಕೇ ಯಜಾಮ್ಯಹಂ ।**
**ಪ್ರತ್ಯಕ್ಷಮೇವ ಭೋಕ್ತಾರೋ ಭವಂತು ಮಮ ಮಂದಿರೇ ॥ ೧೮ ॥**

**ರಾಜಸೂಯೇ ಸುರಗಣಾ ಬ್ರಹ್ಮಾದ್ಯಾ ಯೇ ಚತುರ್ವಿಧಾಃ ।**
**ರಕ್ಷಪಾಲಃ ಸುರೋಽಸ್ಮಾಕಮಾಸ್ತಾಂ ಶೂಲಧರೋ ಹರಃ ॥ ೧೯ ॥**

**ತಥೇತ್ಯುಕ್ತಃ ಸಮಾಜಹ್ರೇ ರಾಜಸೂಯಂ ತು ವಿಷ್ಣುನಾ ।**
**ಹೋತಾತ್ರಿರ್ಭೃಗುರಧ್ವರ್ಯುರುದ್ಗಾತಾ ಚ ಚತುರ್ಮುಖಃ ॥ ೨೦ ॥**

---

೧೫. ಅನಂತರ ದಕ್ಷಪ್ರಜಾಪತಿಯು ಆ ಸೋಮನಿಗೆ ರೂಪಲಾವಣ್ಯಗಳಿಂದ ಕೂಡಿದ ವರ್ಚಸ್ವಿನಿಯರಾದ ಇಪ್ಪತ್ತೇಳು ಜನ ಹೆಣ್ಣು ಮಕ್ಕಳನ್ನು ಕೊಟ್ಟನು.

೧೬. ಅನಂತರ ಆ ಚಂದ್ರನು ಒಂದು ಕೋಟಿ ಪದ್ಮಗಳ ಕಾಲದವರೆಗೂ ವಿಷ್ಣುವನ್ನು ಕುರಿತು ತಪಸ್ಸುಮಾಡಿದನು.

೧೭. ಆಗ ಆ ಭಗವಂತನಾದ ಹರಿಯು ಆ ಚಂದ್ರನಿಗೆ ತುಷ್ಟನಾಗಿ ಪ್ರಸನ್ನನಾಗಿ ವರವನ್ನು ಕೇಳಿಕೋ ಎಂದು ಹೇಳಿದನು.

೧೮-೧೯. ಆಗ ಸೋಮನು ಈ ರೀತಿಯಾದ ವರವನ್ನು ಕೇಳಿಕೊಂಡನು. ನಾನು ಶಕ್ರಲೋಕದಲ್ಲಿ ರಾಜಸೂಯಯಾಗವನ್ನು ಮಾಡಬೇಕು. ಆಗ ನನ್ನ ಆ ಯಾಗದಲ್ಲಿ ದೇವತೆಗಳೂ ಪ್ರತ್ಯಕ್ಷವಾಗಿಯೇ ಆಹಾರವನ್ನು ತೆಗೆದುಕೊಳ್ಳಬೇಕು. ನಮ್ಮ ಯಾಗವನ್ನು ಶೂಲಧರನಾದ ಶಿವನು ರಕ್ಷಿಸುತ್ತಿರಬೇಕು.

೨೦-೨೧. ವಿಷ್ಣುವು ಹಾಗೇ ಆಗಲೆನ್ನಲು ವಿಷ್ಣುವನ್ನು ಸಹಾಯಕ್ಕೆ ತೆಗೆದುಕೊಂಡು ಸೋಮನು ರಾಜಸೂಯಯಾಗವನ್ನು ಮಾಡಿದನು. ಅತ್ರಿ ಋಷಿಯು ಹೋತೃವಾಗಿಯೂ ಭೃಗುವು ಅಧ್ವರ್ಯುವಾಗಿಯೂ ಉದ್ಗಾತೃವಾಗಿಯೂ ಆದನು.

ಬ್ರಹ್ಮತ್ವಮಗಮತ್ತಸ್ಯ ಉಪದ್ರಷ್ಟಾ ಹರಿಃ ಸ್ವಯಂ ।
ಸದಸ್ಯಾಃ ಸನಕಾದ್ಯಾಸ್ತು ರಾಜಸೂಯವಿಧಿಃ ಸ್ಮೃತಃ ॥ ೨೦ ॥

ವಸವೋಽಧ್ವರ್ಯವಸ್ತದ್ವದ್ವಿಶ್ವೇದೇವಾಸ್ತಥೈವ ಚ ।
ತ್ರೈಲೋಕ್ಯಂ ದಕ್ಷಿಣಾ ತೇನ ಋತ್ವಿಗ್ಭ್ಯಃ ಪ್ರತಿಪಾದಿತಾ ॥ ೨೨ ॥

ತತಃ ಸಮಾಪ್ತೇಽವಭೃಥೇ ತದ್ರೂಪಾಲೋಕನೇಚ್ಛಯಾ ।
ಕಾಮಬಾಣಾಭಿತಪ್ತಾಂಗಾ ನವ ದೇವ್ಯಃ ಸಿಷೇವಿರೇ ॥ ೨೩ ॥

ಲಕ್ಷ್ಮೀರ್ನಾರಾಯಣಂ ತ್ಯಕ್ತ್ವಾ ಸಿನೀವಾಲೀ ಚ ಕರ್ದಮಂ ।
ದ್ಯುತಿರ್ವಿಭಾವಸುಂ ತ್ಯಕ್ತ್ವಾ ಪುಷ್ಟಿರ್ಧಾತಾರಮವ್ಯಯಂ ॥ ೨೪ ॥

ಪ್ರಭಾ ಪ್ರಭಾಕರಂ ತ್ಯಕ್ತ್ವಾ ಹವಿಷ್ಮಂತಂ ಕುಹೂಃ ಸ್ವಯಂ ।
ಕೀರ್ತಿರ್ಜಯಂತಂ ಭರ್ತಾರಮಂಶುಮಾಲೀ ಚ ಕಶ್ಯಪಂ ॥ ೨೫ ॥

ಧೃತಿಸ್ತ್ಯಕ್ತ್ವಾ ಪತಿಂ ನಂದಂ ಸೋಮಮೇವಾಭಜಂಸ್ತದಾ ।
ಸ್ವಕೀಯಾ ಇವ ಸೋಮೋಽಪಿ ಕಾಮಯಾಮಾಸ ತಾಸ್ತದಾ ॥ ೨೬ ॥

---

ಸಾಕ್ಷಾತ್ ಬ್ರಹ್ಮನೇ ಬ್ರಹ್ಮತ್ವವನ್ನು ಹೊಂದಿದನು. ಹರಿಯೇ ಉಪದ್ರಷ್ಟ್ರವಾಗಿ ನಿಂತುಕೊಂಡನು. ಸನಕಾದಿಗಳು ಸದಸ್ಯರಾದರು. ವಸುಗಳು ವಿಶ್ವೇದೇವರೂ ಅಧ್ವರ್ಯುಗಳಾದರು.

೨೨. ಆ ಸೋಮನು ಮೂರು ಲೋಕವನ್ನೂ ಋತ್ವಿಕ್ಕುಗಳಿಗೆ ದಕ್ಷಿಣೆಯಾಗಿ ಕೊಟ್ಟನು.

೨೩. ಯಜ್ಞದ ಕಡೆಯ ಸ್ನಾನವು ಮುಗಿಯಲು ಅವನ ರೂಪವನ್ನು ನೋಡ ಬೇಕೆಂಬ ಇಚ್ಛೆಯಿಂದ ನವ (ಒಂಭತ್ತು) ದೇವಿಯರೂ ಬಂದು ಕಾಮಬಾಣದಿಂದ ಪೀಡಿತರಾಗಿ ಆ ಸೋಮನನ್ನು ಸೇವಿಸಿದರು.

೨೪-೨೬. ಲಕ್ಷ್ಮಿಯು ನಾರಾಯಣನನ್ನೂ ಸಿನೀವಾಲಿಯು ಕರ್ದಮನನ್ನೂ, ದ್ಯುತಿಯು ವಿಭಾವಸುವನ್ನೂ, ಪುಷ್ಟಿಯು ಧಾತೃವನ್ನೂ, ಪ್ರಭೆಯು ಪ್ರಭಾಕರನನ್ನೂ ಕುಹುವು ಹವಿಷ್ಮಂತನನ್ನೂ, ಕೀರ್ತಿಯು ಜಯಂತನನ್ನೂ, ಅಂಶುಮಾಲಿಯು ಕಶ್ಯಪ ನನ್ನೂ, ಧೃತಿಯು ನಂದನನ್ನೂ ಬಿಟ್ಟು (ತಮ್ಮ ತಮ್ಮ ಪತಿಗಳ ಮೇಲಿನ ಅಭಿಮಾನ ವನ್ನು ಬಿಟ್ಟು) ಸೋಮನನ್ನು ಹೊಂದಿದರು. ಸೋಮನೂ ಕೂಡ ತನ್ನ ಹೆಂಡತಿಯ ರಂತೆಯೇ ಅವರನ್ನು ಕಾಮಿಸಿ ಸೇವಿಸಿದನು.

ನಿರ್ವೃತ್ತಯಜ್ಞಕರ್ಮಾಣಂ ದೀಕ್ಷಿತಾ ವೇದಪಾರಗೈಃ ।
ತಂ ವಾ ವಾರಯಿತುಂ ಶಕ್ತಾ ನ ತೇ ದೇವೈಃ ಸವಾಸವೈಃ ॥ ೨೭ ॥

ಭುಕ್ತಭೋಗಾಸ್ತು ಮುನಯೋ ಜಟಾಜಿನಧರಾಸ್ತಥಾ ।
ಯುವತೀದರ್ಶನೇ ಕ್ಷುಬ್ಧಾಸ್ತತ್ಕ್ಷಣೇ ಚ ಮದಂ ಗತಾಃ ॥ ೨೮ ॥

ಗಮ್ಯಾಗಮ್ಯಾಶ್ಚ ಯುವತೀಃ ಕಾಮಾತುರಾಃ ಪಶವೋ ಯಥಾ ।
ನ ತೇ ಧಾರಯಿತುಂ ಶಕ್ತಾ ವರ್ಷಾಸು ಚ ಯಥಾಪಗಾಃ ॥ ೨೯ ॥

ಏವಂ ಕೃತಾಪಚಾರಾಸ್ತಾಸ್ತಾಸಾಂ ಭರ್ತೃಗಣಾಸ್ತಥಾ ।
ನ ಶೇಕುರಪರಾಧಂ ತೇ ಶಪ್ತುಂ ಶಕ್ತಾ ವಿಭುಂ ನ ಚ ॥ ೩೦ ॥

ತಥಾ ವ್ಯರಾಜಚ್ಚ ವಿಭುರ್ದಶಧಾ ಭಾವಯನ್ದಿಶಃ ।
ಸೋಮಃ ಪ್ರಾಪ್ಯಾಥ ದುಷ್ಪ್ರಾಪ್ಯಮೈಶ್ವರ್ಯಂ ಸೃಷ್ಟಿಸತ್ಕೃತಂ ॥ ೩೧ ॥
ಸಪ್ತಲೋಕೇಷು ನಾಥತ್ವಂ ಪ್ರಾಪ್ತಃ ಸ ತಪಸಾ ತದಾ ॥ ೩೨ ॥

---

೨೭. ಯಜ್ಞವು ಮುಗಿದವೇಳೆ ಆ ಸೋಮನನ್ನು ವೇದಪಾರಗರಾದ ಬ್ರಾಹ್ಮಣರೂ ದೀಕ್ಷಿತರೂ ಇಂದ್ರಸೇ ಮೊಂತಾದ ದೇವತೆಗಳೂ ಕೂಡ ಅವರನ್ನು ಕಾಮಿಸಿ ಸೋಮನನ್ನು ನಿವೃತ್ತಿಸಲಾರದೆ ಹೋದರು.

೨೮. ಜಟಿ, ಚರ್ಮಗಳನ್ನು ಧರಿಸಿದ್ದರೂ ಕೂಡ ಆ ಯತಿಗಳು ಅವರೆಲ್ಲ ರನ್ನು ಅನುಭವಿಸಿದ್ದುದರಿಂದ ಅವರನ್ನು ನೋಡುವುದರಲ್ಲಿ ಆಸೆಗೊಂಡವರಾಗಿ ಕಾಮಾತುರರಾದರು.

೨೯. ಮಳೆಗಾಲದ ನದಿಗಳಂತೆ ಕಾಮಾರ್ತರಾದ ಆ ಯತಿಗಳು, ಈ ಹೆಂಗಸರು ಗಮ್ಯರು, ಇವರು ಅಗಮ್ಯರು ಎಂಬುದನ್ನೇ ನೋಡದೆ ಮನಸ್ಸನ್ನು ಬಿಗಿ ಹಿಡಿಯಲು ಸಮರ್ಥರಾಗಲಿಲ್ಲ.

೩೦. ಈ ಹೆಂಗಸರು ಈ ರೀತಿ ಅಪರಾಧಮಾಡುತ್ತಿದ್ದರೂ ಅವರ ಗಂಡಂದಿರು ಅವರ ಅಪರಾಧವನ್ನೂ ಸಹಿಸಲಾರದೆ ಹೋದರು. ಆ ಸೋಮನನ್ನು ಶಪಿಸಲೂ ಅಸಮರ್ಥರಾದರು.

೩೧-೩೨. ಆಗ ಆ ಸೋಮನು ಹತ್ತು ದಿಕ್ಕುಗಳನ್ನು ಆಳುತ್ತ ಯಜಮಾನ ನಾಗಿದ್ದನು. ಈ ರೀತಿ ಆ ಸೋಮನು ಸೃಷ್ಟಿಯಿಂದುಂಟಾದ ಐಶ್ವರ್ಯವನ್ನು ಮುಂದುಮಾಡಿಕೊಂಡು ಅನುಭವಿಸಿದನು. ಈರೀತಿ ಆ ಸೋಮನು ಏಳು ಲೋಕಕ್ಕೂ ಒಡೆಯನಾಗಿದ್ದನು.

ಕದಾಚಿದುದ್ಯಾನಗತಾಮಪಶ್ಯ-
ದನೇಕಪುಷ್ಪಾಭರಣೋಪಶೋಭಿತಾಂ ।
ಬೃಹನ್ನಿತಂಬಸ್ತನಭಾರಖೇದಾಂ
ಪುಷ್ಪಾವಭಂಗೇಽಪ್ಯತಿದುರ್ಬಲಾಂಗೀಂ ॥ ೩೩ ॥

ಭಾರ್ಯಾಂ ಚ ತಾಂ ದೇವಗುರೋರನಂಗ-
ಬಾಣಾಭಿರಾಮಾಮಾಯತಚಾರುನೇತ್ರಾಂ ।
ತಾರಾಂ ಸ ತಾರಾಧಿಪತಿಃ ಸ್ಮರಾರ್ತಃ
ಕೇಶೇಷು ಜಗ್ರಾಹ ವಿವಿಕ್ತಭೂಮೌ ॥ ೩೪ ॥

ಸಾಽಪಿ ಸ್ಮರಾರ್ತಾ ಸಹ ತೇನ ರೇಮೇ
ತದ್ರೂಪಕಾಂತ್ಯಾ ಹೃತಮಾನಸೈವ ।
ಚಿರಂ ವಿಹೃತ್ಯಾಥ ಜಗಾಮ ತಾರಾಂ
ವಿಧುರ್ಗೃಹೀತ್ವಾ ಸ್ವಗೃಹಂ ತತೋಽಪಿ ॥ ೩೫ ॥

ನ ತೃಪ್ತಿರಾಸೀತ್ಸ್ವಗೃಹೇಽಪಿ ತಸ್ಯ
ತಾರಾನುರಕ್ತಸ್ಯ ಸುಖಾಗಮೇಷು ।
ಬೃಹಸ್ಪತಿಸ್ತದ್ವಿರಹಾಗ್ನಿದಗ್ಧ-
ಸ್ತದ್ಧ್ಯಾನನಿಷ್ಠೈಕಮನಾ ಬಭೂವ ॥ ೩೬ ॥

---

೩೩-೩೪. ದೇವಗುರುವಿನ ಹೆಂಡತಿಯಾದ ತಾರೆಯು ಒಂದು ಸಾರಿ ಉದ್ಯಾನಕ್ಕೆ ಹೋಗಿ ಬಹುವಾದ ಹೂವಿನಿಂದ ಶೋಭಿತಳಾಗಿದ್ದಳು. ಮತ್ತು ದಪ್ಪವಾದ ಕುಂಡೆಗಳು ಸ್ತನಗಳೂ ಇದ್ದು ನೋಡಲು ಬಹು ರಮ್ಯಳಾಗಿ, ಹೂವನ್ನು ಕುಯ್ಯುವುದಕ್ಕೂ ಬಹು ದುರ್ಬಲಳಂತೆ ಕಾಣುತ್ತಿದ್ದಳು. ಅಂತಹ ತಾರೆಯನ್ನು ಆ ಚಂದ್ರನು ಯಾರೂ ಇಲ್ಲದ ಸ್ಥಳದಲ್ಲಿ ನೋಡಿ ಕಾಮಪೀಡಿತನಾಗಿ ಆಕೆಯ ಜಡೆಯನ್ನು ಹಿಡಿದುಕೊಂಡನು.

೩೫. ಆ ತಾರೆಯೂ ಕೂಡ ಚಂದ್ರನ ರೂಪನ್ನು ನೋಡಿ ಮನಸ್ಸುಳ್ಳವಳಾಗಿ ಬಹುಕಾಲ ರಮಿಸಿದಳು. ಸೋಮನು ಹಾಗೆ ರಮಿಸಿದುದಲ್ಲದೆ ತನ್ನ ಮನೆಗೇ ಕರೆದುಕೊಂಡು ಹೋದನು.

೩೬. ಆ ಚಂದ್ರನಿಗೆ ತಾರೆಯಲ್ಲಿ ಎಷ್ಟು ಕಾಲ ಅನುಭವಿಸಿದರೂ ತೃಪ್ತಿಯೇ ಆಗಲಿಲ್ಲ. ಇತ್ತ ತಾರೆಯ ಗಂಡನಾದ ಬೃಹಸ್ಪತಿಯು ಆಕೆಯ ವಿರಹಾಗ್ನಿಯಿಂದ ಪೀಡಿತನಾಗಿ ಆಕೆಯಲ್ಲಿಯೇ ಮನಸ್ಸುಳ್ಳವನಾದನು.

ಶಶಾಕ ಶಾಪಂ ನ ಚ ದಾತುಮಸ್ಮೈ
ನ ಮಂತ್ರಶಸ್ತ್ರಾಗ್ನಿವಿಷೈರಶೇಷೈಃ ।
ತಸ್ಯಾಪಕರ್ತುಂ ವಿವಿಧೈರುಪಾಯೈ-
ರ್ನೈವಾಭಿಚಾರೈರಪಿ ವಾಗಧೀಶಃ　　　॥ ೩೭ ॥

ಸ ಯಾಚಯಾಮಾಸ ತತಸ್ತು ದೇವಂ
ಸೋಮಂ ಸ್ವಭಾರ್ಯಾರ್ಥಮನಂಗತಪ್ತಃ ।
ಸ ಯಾಚ್ಯಮಾನೋಽಪಿ ದದೌ ನ ಭಾರ್ಯಾಂ
ಬೃಹಸ್ಪತೇಸ್ತತ್ಸುಖಪಾರಬದ್ಧಃ　　　॥ ೩೮ ॥

ಮಹೇಶ್ವರೇಣಾಥ ಚತುರ್ಮುಖೇನ
ಸಾಧ್ಯೈರ್ಮರುದ್ಭಿಃ ಸಹ ಲೋಕಪಾಲೈಃ ।
ದದೌ ಯದಾ ತಾಂ ನ ಕಥಂಚಿದಿಂದು-
ಸ್ತದಾ ಶಿವಃ ಕ್ರೋಧಪರೋ ಬಭೂವ　　　॥ ೩೯ ॥

---

೩೭. ಬೃಹಸ್ಪತಿಯು ಆ ಚಂದ್ರನಿಗೆ ಶಾಪವನ್ನು ಕೊಡಲಾರದೆ ಹೋದನು. ಅಲ್ಲದೆ ಮಂತ್ರ, ಶಸ್ತ್ರ, ಅಗ್ನಿ, ವಿಷ, ಮತ್ತೆ ಯಾವ ಕೆಡಕುಗಳಿಂದಲೂ ಕೂಡ ಕೊಂದರೆ ಪಡಿಸಲಾರದೆ ಹೋದನು. ಮತ್ತೆ ಯಾವ ಉಪಾಯದಿಂದಲೇ ಆಗಲಿ ಅಭಿಚಾರಗಳಿಂದಲೇ ಆಗಲಿ ಕೆಡಕು ಮಾಡಲಾರದೆ ಹೋದನು.

೩೮. ಕಾಮಪೀಡಿತನಾಗಿ ಬೃಹಸ್ಪತಿಯು ಸೋಮನನ್ನು ಹೆಂಡತಿಯನ್ನು ಕೊಡೆಂದು ನಾನಾಬಗೆಯಲ್ಲಿ ಕೇಳಿದನು. ಆಕೆಯ ಸುಖದಲ್ಲಿ ನಿರತನಾದ ಸೋಮನು ಗುರುವು ಎಷ್ಟು ಕೇಳಿದರೂ ಕೂಡ ಆಕೆಯನ್ನು ಹಿಂತಿರುಗಿ ಕೊಡಲಿಲ್ಲ.

೩೯. ಮಹೇಶ್ವರ, ಚತುರ್ಮುಖ, ಸಾಧ್ಯರು, ಮರುತ್ತುಗಳು, ಲೋಕಪಾಲಕರು ಇವರೆಲ್ಲರೂ ಕೂಡ ಹೇಳಿದರೂ ಚಂದ್ರನು ಕೊಡದೆ ಹೋದನು. ಆಗ ವಾಮದೇವನೆಂದು ಪ್ರಸಿದ್ಧನೂ, ಅನೇಕರಾದ ರುದ್ರರಿಂದ ಸೇವಿತನೂ ಆದ ಶಿವನು ಕೋಪಗೊಂಡನು.

ಯೋ ವಾಮದೇವಃ ಪ್ರಥಿತಃ ಪೃಥಿವ್ಯಾ
ಮನೇಕರುದ್ರಾಂಚಿತಪಾದಪದ್ಮಃ ।
ತತಃ ಸ ಶಿಷ್ಯೋ ಗಿರಿಶಃ ಪಿನಾಕೀ
ಬೃಹಸ್ಪತೇಸ್ತದ್ವಚಸಾಪಿ ಬದ್ಧಃ ॥ ೪೦ ॥

ಧನುರ್ಗೃಹೀತ್ವಾಜಗವಂ ಪುರಾರಿ-
ರ್ಜಗಾಮ ಭೂತೇಶ್ವರಸಿದ್ಧಜುಷ್ಟಃ ।
ಯುದ್ಧಾಯ ಸೋಮೇನ ವಿಶೇಷದೀಪ್ತ-
ತೃತೀಯನೇತ್ರಾನಲಭೀಮವಕ್ತ್ರಃ ॥ ೪೧ ॥

ಸಹೈವ ಜಗ್ಮುಃಶ್ಚ ಗಣೇಶ್ವರಾಣಾಂ
ವಿಂಶಾಧಿಕಾ ಷಷ್ಟಿರಥೋಗ್ರಮೂರ್ತಿಃ ।
ಯಕ್ಷೇಶ್ವರಾಣಾಂ ಸ ಗಣೈರನೇಕೈ-
ರ್ಯುತೋऽನ್ವಗಾತ್ಸ್ಯಂದನಸಂಸ್ಥಿತಾನಾಂ- ॥ ೪೨ ॥

ವೇತಾಲಯಕ್ಷೋರಗಕಿಂನರಾಣಾಂ
ಪದ್ಮೇನ ಚೈಕೇನ ತಥಾऽರ್ಬುದಾನಾಂ ।
ಲಕ್ಷೈಸ್ತ್ರಿಭಿರ್ದ್ವಾದಶಭೀ ರಥಾನಾಂ
ಸೋಮೋऽಭ್ಯಗಾತ್ತತ್ರ ವಿವೃದ್ಧಮನ್ಯುಃ ॥ ೪೩ ॥

---

೪೦. ಆಗ ಈಶ್ವರನು ಶಿಷ್ಯರೊಡನೆ ಕೂಡಿ ಪಿನಾಕವೆಂಬ ಧನುಸ್ಸನ್ನು ಹಿಡಿದು ಆ ಬೃಹಸ್ಪತಿಯ ಮಾತಿಗೆ ಕಟ್ಟುಬಿದ್ದು, ಭೂತಗಳನ್ನು ಕರೆದುಕೊಂಡು ಚಂದ್ರನ ಮೇಲೆ ಯುದ್ಧಕ್ಕೆ ಹೋದನು.

೪೧-೪೨. ಶಿವನು ಬಹು ಕೋಪಗೊಂಡು ಮೂರನೆಯ ಕಣ್ಣಿನಿಂದ ಭಯಂಕರವಾದ ಮುಖವುಳ್ಳವನಾಗಿ, ಉಗ್ರಮೂರ್ತಿಯುಳ್ಳವನಾಗಿ ಎಂಭತ್ತು ಗಣೇಶ್ವರರೊಡನೆಯೂ, ರಥದಲ್ಲಿ ಸಿದ್ಧರಾದ ಅನೇಕ ಯಕ್ಷೇಶ್ವರರೊಡನೆಯೂ ಕೂಡಿಕೊಂಡು ಹೊರಟನು.

೪೩. ಬೇತಾಳಗಳು, ಯಕ್ಷರು, ನಾಗರು, ಕಿನ್ನರರು, ಇವರ ಪದ್ಮದಿಂದಲೂ ಮತ್ತು ಅರ್ಬುದದಿಂದಲೂ ಮತ್ತು ಹದಿನೈದು ಲಕ್ಷ ರಥಿಕರೊಡನೆಯೂ ಆ ಶಿವನು ಹೋಗಲು ಸೋಮನಿಗೂ ಕೋಪಬಂದಿತು.

ನಕ್ಷತ್ರದೈತ್ಯಾಸುರಸೈನ್ಯಯುಕ್ತಃ
ಶನೈಶ್ಚರಾಂಗಾರಕವೃದ್ಧತೇಜಾಃ ।
ಜಗ್ಮುರ್ಭಯಂ ಸಪ್ತ ತಥೈವ ಲೋಕಾ
ಧರಾವನದ್ವೀಪಸಮುದ್ರಗರ್ಭಾಃ ॥ ೪೪ ॥

ಸ ಸೋಮಮೇವಾಭ್ಯಗಮತ್ಪಿನಾಕೀ
ಗೃಹೀತದೀಪ್ತಾಸ್ತ್ರವಿಶಾಲವಹ್ನಿಃ ।
ಅಥಾಭವದ್ಭೀಷಣಭೀಮಸೋಮ-
ಸೈನ್ಯದ್ವಯಸ್ಯಾಸ್ಯ ಮಹಾಹವೋಽಸೌ ॥ ೪೫ ॥

ಅಶೇಷಸತ್ತ್ವಕ್ಷಯಕೃತ್ಪ್ರವೃದ್ಧ-
ಸ್ತೀಕ್ಷ್ಣಾಯುಧಾಸ್ತ್ರಜ್ವಲನೈಕರೂಪಃ ।
ಅಸ್ತ್ರೈರಥಾನ್ಯೋನ್ಯಮಶೇಷಸೈನ್ಯಂ
ದ್ವಯೋರ್ಜಗಾಮ ಕ್ಷಯಮುಗ್ರತೀಕ್ಷ್ಣೈಃ ॥ ೪೬ ॥

---

೪೪. ಆಗ ಸೋಮನೂ ಕೂಡ ನಕ್ಷತ್ರಗಳು, ದೈತ್ಯರು, ಅಸುರರು, ಇವರ ಸೈನ್ಯದಿಂದ ಕೂಡಿಕೊಂಡು ಶನಿ ಅಂಗಾರಕರಿಂದ ಹುರಿದುಂಬಿಸಲ್ಪಟ್ಟವನಾಗಿ ಹೊರಡಲು ಭೂಮಿ, ವನ, ದ್ವೀಪ, ಸಮುದ್ರಗಳಿಂದ ಕೂಡಿದ ಏಳು ಲೋಕಗಳು ಭಯವನ್ನು ಹೊಂದಿದುವು.

೪೫. ಶಿವನು ಬಹು ಕ್ರೂರಗಳಾದ ಅಸ್ತ್ರಗಳನ್ನು ಹಿಡಿದುಕೊಂಡು ಸೋಮನನ್ನು ಎದುರಿಸಿದನು. ಆಗ ಶಿವಸೋಮರಿಗೆ ಸೈನ್ಯಗಳಿಗೆ ಭಯಂಕರವಾದ ಯುದ್ಧವು ನಡೆಯಿತು.

೪೬. ಕ್ರೂರವಾದ ಆಯುಧಗಳು, ಅಸ್ತ್ರಗಳು ಇವುಗಳಿಂದ ಪ್ರಜ್ವಲಿಸುತ್ತಿರುವ, ಬಹುವಾಗಿ ನಡೆಯುತ್ತಿರುವ ಈ ಯುದ್ಧವು ಸಮಸ್ತವಾದ ಪ್ರಾಣಿಗಳನ್ನು ನಾಶಮಾಡುವುದಾಗಿದ್ದಿತು. ಈರೀತಿ ಅಸ್ತ್ರಶಸ್ತ್ರಗಳಿಂದ ಒಬ್ಬರಿಗೊಬ್ಬರು ಹೊಡೆದಾಡುತ್ತ ಎರಡು ಕಡೆಯಲ್ಲಿಯೂ ಸೈನ್ಯವು ನಾಶವಾಯಿತು.

ಪತಂತಿ ಶಸ್ತ್ರಾಣಿ ತಥೋಜ್ಜ್ವಲಾನಿ
ಸ್ವಭೂಮಿಪಾತಾಲತಲಂ ದಹಂತಿ ।
ರುದ್ರಃ ಕ್ರೋಧಾದ್ಬ್ರಹ್ಮಶಿರೋ ಮುಮೋಚ
ಸೋಮೋಽಪಿ ಸೋಮಾಸ್ತ್ರಮಮೋಘವೀರ್ಯಂ ॥ ೪೭ ॥

ತಯೋರ್ನಿಪಾತೇನ ಸಮುದ್ರಭೂಮೋ-
ರಥಾಂತರಿಕ್ಷಸ್ಯ ಚ ಭೀತಿರಾಸೀತ್ ।
ತದಸ್ತ್ರಯುದ್ಧಂ ಜಗತಾಂ ಕ್ಷಯಾಯ
ಪ್ರವೃದ್ಧಮಾಲೋಕ್ಯ ಪಿತಾಮಹೋಽಪಿ ॥ ೪೮ ॥

ಅಂತಃ ಪ್ರವಿಶ್ಯಾಥ ಕಥಂಚಿದೇವ
ನಿವಾರಯಾಮಾಸ ಸುರೈಃ ಸಹೈವ ।
ಅಕಾರಣಂ ಕಿಂ ಕ್ಷಯಕೃತಜ್ಜನಾನಾಂ
ಸೋಮ ತ್ವಯಾಪೀದಮಕಾರ್ಯಕಾರ್ಯಂ ॥ ೪೯ ॥

ಯಸ್ಮಾತ್ಪರಸ್ತ್ರೀಹರಣಾಯ ಸೋಮ
ತ್ವಯಾ ಕೃತಂ ಯುದ್ಧಮತೀವ ಭೀಮಂ ।
ಸಾಪತ್ರಪಸ್ತ್ವಂ ಭವಿತಾ ನಿಜೇಷು
ಶಸ್ತ್ರೋಪಲಂಭೇ ಸಮಯೋಽಪಿ ನಾಸ್ತಿ ॥ ೫೦ ॥

---

೪೭. ಆ ರೀತಿಯಾಗಿ ಕ್ರೂರವಾಗಿ ಬೀಳುತ್ತಿರುವ ಶಸ್ತ್ರಗಳು ಸ್ವರ್ಗ, ಭೂಮಿ, ಪಾತಾಳಲೋಕಗಳಲ್ಲಿ ಕೂಡ ಬೀಳುತ್ತವೆ. ಆಗ ರುದ್ರನು ಕೋಪದಿಂದ ಬಹು ಉತ್ಕೃಷ್ಟವೂ, ಕ್ರೂರವೂ ಆದ ಬ್ರಹ್ಮಶಿರಸ್ಸೆಂಬ ಅಸ್ತ್ರವನ್ನು ಬಿಟ್ಟನು. ಸೋಮನೂ ಉತ್ಕೃಷ್ಟವಾದ ಸೋಮಾಸ್ತ್ರವನ್ನು ಬಿಟ್ಟನು.

೪೮. ಇಬ್ಬರೂ ಅವೆರಡನ್ನೂ ಬಿಡುತ್ತಲೂ ಸಮುದ್ರ, ಭೂಮಿ, ಅಂತರಿಕ್ಷ ಇವುಗಳಲ್ಲಿ ಹೆದರಿಕೆಯಾಯಿತು. ಈ ಅಸ್ತ್ರಯುದ್ಧಗಳಿಂದ ಜಗತ್ತು ನಾಶವಾಗುವ್ರ ದೆಂದು ಬ್ರಹ್ಮನು ತಿಳಿದನು.

೪೯. ಆಗ ಬ್ರಹ್ಮನು ಅವುಗಳ ಮಧ್ಯೆ ನುಗ್ಗಿ ದೇವತೆಗಳೊಡನೆ ಅವನ್ನು ನಿವಾರಿಸಿದನು. ಎಲೈ ಸೋಮನೆ, ಕಾರಣವಿಲ್ಲದೆ ನೀನು ಜನಗಳಿಗೆ ಕ್ಷಯವನ್ನುಂಟು ಮಾಡುತ್ತಿದ್ದೀಯೆ. ನಿನ್ನಿಂದಲೂ ಕೂಡ ಈ ಅಕಾರ್ಯವು ಮಾಡಲ್ಪಟ್ಟಿತು.

೫೦. ಎಲೈ ಸೋಮನೇ ಪರಸ್ತ್ರೀಯನ್ನು ನೀನು ಕದ್ದುದರಿಂದ ಭಯಂಕರ

ಭಾರ್ಯಾಮಿಮಾಮರ್ಪಯ ವಾಕ್ಪತೇಸ್ತ್ವಂ
ನ ಮಾನಮಾನ್ಯೋಽಸ್ತಿ ಪರಾಪಹಾರೇ ।
ತಥೇತಿ ಚೋವಾಚ ಹಿಮಾಂಶುಮಾಲೀ
ಯುದ್ಧಾದಪಾಕ್ರಾಮದತಃ ಪ್ರಶಾಂತಃ ॥
ಬೃಹಸ್ಪತಿಸ್ತಾಮಥ ಗೃಹ್ಯ ತಾರಾಂ ।
ಹೃಷ್ಟೋ ಜಗಾಮ ಸ್ವಗೃಹಂ ಸರುದ್ರಃ ॥ ೫೧ ॥

॥ ಪುಲಸ್ತ್ಯ ಉವಾಚ ।
ತತಃ ಸಂವತ್ಸರಸ್ಯಾಂತೇ ದ್ವಾದಶಾದಿತ್ಯಸಂನಿಭಃ ।
ದಿವ್ಯಪೀತಾಂಬರಧರಃ ಪೀತಾಂಬರವಿಭೂಷಿತಃ ॥ ೫೨ ॥

ತಾರೋದರಾದ್ವಿನಿಷ್ಕ್ರಾಂತಃ ಕುಮಾರಃ ಸೂರ್ಯಸನ್ನಿಭಃ ।
ಸರ್ವಾರ್ಥಶಾಸ್ತ್ರದ್ವಿನಿದ್ವಾನ್ ಹಸ್ತಿಶಾಸ್ತ್ರಪ್ರವರ್ತಕಃ ॥ ೫೩ ॥

ನಾಮ ಯದ್ರಾಜಪುತ್ರೋಽಯಂ ವಿಶ್ರುತೋ ರಾಜವೈದ್ಯಕಃ ।
ರಾಜ್ಞಃ ಸೋಮಸ್ಯ ಪುತ್ರತ್ವಾದ್ರಾಜಪುತ್ರೋ ಬುಧಃ ಸ್ಮೃತಃ ॥ ೫೪ ॥

---

ವಾದ ಯುದ್ಧವು ನಡೆಯಿತು. ನಿನ್ನ ಜನಗಳಲ್ಲಿ ನೀನು ಅವಮಾನಪಡಬೇಕು. ಶಸ್ತ್ರವನ್ನು ಹಿಡಿಯುವುದರಲ್ಲಿ ಕೂಡ ನಿನಗೆ ಒಂದು ನಿಯಮವಿಲ್ಲ.

೫೧. ಎಲೈ ಸೋಮನೇ, ನೀನು ಈ ಗುರುವಿನ ಹೆಂಡತಿಯನ್ನು ಕೊಟ್ಟು ಬಿಡು. ಮಾನವುಳ್ಳ ಎಲೈ ಸೋಮನೇ ಪರಸ್ತ್ರೀಯನ್ನು ಕದ್ದುದರಿಂದ ಯಾರಿಗೂ ಗೌರವಬಂದಿಲ್ಲ. ಅನಂತರ ಬ್ರಹ್ಮನ ಮಾತಿಗೆ ಗೌರವ ಕೊಟ್ಟು ಚಂದ್ರನು ಹಾಗೇ ಆಗಲೆಂದು ಶಾಂತನಾಗಿ ಯುದ್ಧದಿಂದ ಹಿಂತಿರುಗಿದನು. ಅನಂತರ ಬೃಹಸ್ಪತಿಯು ಆಕೆಯನ್ನು ಕರೆದುಕೊಂಡು ಸಂತೋಷದಿಂದ ರುದ್ರನೊಡನೆ ಮನೆಗೆ ಹೋದನು.

೫೨-೫೩. ಪುಲಸ್ತ್ಯನು ಹೇಳಿದನು :—ಅನಂತರ ವರ್ಷವಾಗುತ್ತಲೂ ದ್ವಾದಶಾದಿತ್ಯರಿಗೆ ಸಮನಾದ, ಒಳ್ಳೆಯ ಪೀತಾಂಬರವನ್ನುಟ್ಟ, ಪೀತಾಂಬರವನ್ನು ಹೊದ್ದ, ಸೂರ್ಯನಂತಿರುವ ಒಂದು ಮಗುವು ತಾರೆಯ ಹೊಟ್ಟೆಯಲ್ಲಿ ಹುಟ್ಟಿತು. ಎಲ್ಲಾ ಅಸ್ತ್ರಗಳನ್ನು ಶಾಸ್ತ್ರಗಳನ್ನು ಬಲ್ಲ ಹಸ್ತಿ (ಆನೆ) ಯ ಶಾಸ್ತ್ರವನ್ನು ಬರೆದಿರುವ ಆ ಹುಡುಗನು ಹುಟ್ಟಿದನು.

೫೪. ಈತನು ರಾಜಪುತ್ರನು, ರಾಜವೈದ್ಯನು, ರಾಜನಾದ ಸೋಮನ ಮಗನಾದುದರಿಂದ ರಾಜಪುತ್ರನೆಂದೂ ಬುಧನೆಂದೂ ಹೆಸರು ಬಂದಿತು.

ಜನಾನಾಮುಗ್ರತೇಜಾಂಸಿ ಸರ್ವಾಣ್ಯೇವಾಕ್ಷಿಪದ್ಬಲೀ ।
ಬ್ರಹ್ಮಾದ್ಯಾಸ್ತತ್ರ ಚಾಜಗ್ಮುರ್ದೇವಾ ಬ್ರಹ್ಮರ್ಷಿಭಿಃ ಸಹ ॥ ೫೫ ॥

ಬೃಹಸ್ಪತಿಗೃಹೇ ಸರ್ವೇ ಜಾತಕರ್ಮೋತ್ಸವೇ ತದಾ
ಪಪ್ರಚ್ಛುಸ್ತೇ ತದಾ ತಾರಾಂ ಕೇನ ಜಾತಃ ಕುಮಾರಕಃ ॥ ೫೬ ॥

ತತಃ ಸಾ ಲಜ್ಜಿತಾ ತೇಷಾಂ ನ ಕಿಂಚಿದವದತ್ತದಾ ।
ಪುನಃ ಪುನಸ್ತದಾ ಪೃಷ್ಟಾ ಲಜ್ಜಯಂತೀ ವರಾಂಗನಾ ॥ ೫೭ ॥

ಸೋಮಸ್ಯೇತಿ ಚಿರಾತ್ಪ್ರಾಹ ತತೋಽಗೃಹ್ಣಾದ್ವಿಧುಃ ಸುತಂ
ಬುಧ ಇತ್ಯಕರೋನ್ನಾಮ ಪ್ರಾದಾದ್ರಾಜ್ಯಂ ಚ ಭೂತಲೇ ॥ ೫೮ ॥

ಅಭಿಷೇಕಂ ತತಃ ಕೃತ್ವಾ ಪ್ರದಾನಮಕರೋದ್ವಿಭುಃ ।
ಗ್ರಹಸಾಮ್ಯಂ ಪ್ರದಾಯಾಥ ಬ್ರಹ್ಮಾ ಬ್ರಹ್ಮರ್ಷಿಸಂಯುತಃ ॥ ೫೯ ॥

ಪಶ್ಯತಾಂ ಸರ್ವಭೂತಾನಾಂ ತತ್ರೈವಾಂತರಧೀಯತ ।
ಇಲೋದರೆ ಚ ಧರ್ಮಿಷ್ಠಂ ಬುಧಃ ಪುತ್ರಮಜೀಜನತ್ ॥ ೬೦ ॥

---

೫೫. ಆತನು ಬಹು ಬಲಿಷ್ಠನಾಗಿ ಜನಗಳ ಬಲವನ್ನು ಸೆಳೆದುಕೊಂಡನು ಬ್ರಹ್ಮಾದಿ ದೇವತೆಗಳೂ ಬ್ರಹ್ಮರ್ಷಿಗಳೊಡನೆ ಅಲ್ಲಿಗೆ ಬಂದರು.

೫೬. ಬೃಹಸ್ಪತಿಯ ಮನೆಯಲ್ಲಿ ಆಗ ಜಾತಕರ್ಮವು ನಡೆಯುವ ಕಾಲದಲ್ಲಿ ಎಲ್ಲರೂ ಸೇರಿ ತಾರೆಯನ್ನು ಕುರಿತು ಹುಡುಗನು ಯಾರಿಂದ ಹುಟ್ಟಿದನೆಂದು ಕೇಳಿದರು.

೫೭-೫೮. ಅನಂತರ ಆಕೆಯು ಲಜ್ಜೆಗೊಂಡು ಏನನ್ನೂ ಹೇಳಲಿಲ್ಲ. ಅವರೆಲ್ಲರೂ ಮತ್ತೆ ಮತ್ತೆ ಕೇಳಲು, ಆಕೆಯು ಬಹು ಹೊತ್ತಿನ ಮೇಲೆ ಸೋಮನದೆಂದು ಹೇಳಿದಳು. ಆಗ ಸೋಮನು ಆ ಹುಡುಗನನ್ನು ಕರೆದುಕೊಂಡು ಬುಧನೆಂದು ಹೆಸರಿಟ್ಟು ಭೂಮಿಯಲ್ಲಿ ರಾಜ್ಯವನ್ನು ಕೊಟ್ಟನು.

೫೯-೬೦. ಚಂದ್ರನು ಬುಧನಿಗೆ ರಾಜ್ಯಾಭಿಷೇಕಮಾಡಿ ರಾಜ್ಯವನ್ನು ಕೊಟ್ಟನು. ಮತ್ತು ಬ್ರಹ್ಮನು ಬ್ರಹ್ಮರ್ಷಿಗಳೊಡನೆ, ಗ್ರಹಗಳೊಡನೆ ಸಮಾನತೆಯನ್ನು ಕೊಟ್ಟನು. ಹೀಗೆ ಎಲ್ಲರೆದುರಿಗೂ ಕೊಟ್ಟು ಹೊರಟುಹೋದನು. ಈ ರೀತಿಯಾದ ಬುಧನು ಇಲೆಯ ಹೊಟ್ಟೆಯಲ್ಲಿ ಮಗನನ್ನು ಹುಟ್ಟಿಸಿದನು.

**ಧರ್ಮೇಣ ಪಾಲಿತಾ ತೇನ ಸರ್ವಲೋಕಮಯಾ ಮಹೀ ।**
**ಅಶ್ವಮೇಧಶತಂ ಸಾಗ್ರಮಕರೋದ್ವ್ಯಃ ಸ್ವತೇಜಸಾ ॥ ೬೧ ॥**

**ಪುರೂರವಾ ಇತಿ ಖ್ಯಾತಃ ಸರ್ವಲೋಕನಮಸ್ಕೃತಃ ।**
**ಹಿಮಾದ್ರಿಶಿಖರೇ ರಮ್ಯ ಆರಾಧ್ಯ ಸ ಪಿತಾಮಹಂ ॥ ೬೨ ॥**

**ಲೋಕೈಶ್ವರ್ಯಮಗಾದ್ರಾಜನ್ ಸಪ್ತದ್ವೀಪಪತಿಸ್ತದಾ ।**
**ಕೇಶಿಪ್ರಭೃತಯೋ ದೈತ್ಯಾಸ್ತದ್ಭೃತ್ಯತ್ವಮುಪಾಗತಾಃ ॥ ೬೩ ॥**

**ಉರ್ವಶೀ ಯಸ್ಯ ಪತ್ನೀತ್ವಮಗಮದ್ರೂಪಮೋಹಿತಾ ।**
**ಸಪ್ತದ್ವೀಪಾ ವಸುಮತೀ ಸಶೈಲವನಕಾನನಾ ॥ ೬೪ ॥**

**ಧರ್ಮೇಣ ಪಾಲಿತಾ ತೇನ ಸರ್ವಲೋಕಹಿತೈಷಿಣಾ ।**
**ಚಾಮರಗ್ರಾಹಿಣೀ ಕೀರ್ತಿಃ ಸ್ವಯಂ ಚೈವಾಂಗವಾಹಿಕಾ ॥ ೬೫ ॥**

**ಬ್ರಹ್ಮಪ್ರಸಾದಾದ್ದೇವೇಂದ್ರೋ ದದಾವರ್ಧಾಸನಂ ತದಾ ।**
**ಧರ್ಮಾರ್ಥಕಾಮಾನ್ ಧರ್ಮೇಣ ಸಮವೇತೋಽಭ್ಯಪಾಲಯತ್ ॥ ೬೬ ॥**

---

೬೧. ಬುಧನ ಮಗನಾದ ಆತನು ಪುರೂರವನೆಂಬ ಹೆಸರಿನಿಂದ ಪ್ರಸಿದ್ಧನಾಗಿ ಧರ್ಮದಿಂದ ಎಲ್ಲಾ ಲೋಕಗಳನ್ನೂ ಕಾಪಾಡುತ್ತ ತನ್ನ ಶಕ್ತಿಯಿಂದ ನೂರು ಅಶ್ವಮೇಧ ಯಾಗಗಳನ್ನು ಮಾಡಿ ಎಲ್ಲಾ ಜನಗಳಿಂದಲೂ ಗೌರವಿಸಲ್ಪಟ್ಟನು.

೬೨-೬೩. ಆ ಪುರೂರವನು ಮನೋಹರವಾದ ಹಿಮವತ್ಪರ್ವತದ ಶಿಖರದಲ್ಲಿ ಬ್ರಹ್ಮನನ್ನು ಕುರಿತು ತಪಸ್ಸುಮಾಡಿ, ಲೋಕಗಳ ಐಶ್ವರ್ಯವನ್ನು ಹೊಂದಿ ಏಳು ದ್ವೀಪಗಳಿಗೂ ಒಡೆಯನಾದನು. ಮತ್ತು ಕೇಶಿಯೇ ಮೊದಲಾದ ರಾಕ್ಷಸರು ಆ ಪುರೂರವಸ್ಸಿನ ತೇಜಸ್ಸನ್ನು ತಡೆಯಲಾರದೆ ಅವನಿಗೆ ಆಳುಗಳಾದರು

೬೪. ಊರ್ವಶಿಯೂ ಕೂಡ ಮೋಹಹೊಂದುವಷ್ಟು ಸುಂದರನಾಗಿಯೂ ಬಲಿಷ್ಠನಾಗಿಯೂ ಇದ್ದನು. ಏಳು ದ್ವೀಪಗಳಿಂದಲೂ ಬೆಟ್ಟ ಕಾಡುಗಳಿಂದಲೂ ಕೂಡಿದ ಭೂಮಿಯನ್ನು ಆ ಸರ್ವಲೋಕಹಿತೈಷಿಯು ಧರ್ಮದಿಂದ ಕಾಪಾಡಿದನು.

೬೫-೬೬. ಚಾಮರವನ್ನು ಹಿಡಿಸಿಕೊಂಡು ಕೀರ್ತಿಯು ತಾನಾಗಿಯೇ ಆ ಪುರೂರವನ ತೊಡೆಯಮೇಲೆ ಕುಳಿತಳು. ಬ್ರಹ್ಮನ ವರದಿಂದ ದೇವೇಂದ್ರನು ಅರ್ಧಾಸನವನ್ನು ಕೊಟ್ಟು ಗೌರವಿಸಿದನು. ಧರ್ಮದಿಂದಲೇ ಧರ್ಮಾರ್ಥಕಾಮ ಗಳನ್ನು ಸಮಾನತೆಯಿಂದ ಕಾಪಾಡಿದನು.

ಧರ್ಮಾರ್ಥಕಾಮಾಸ್ತಂ ದ್ರಷ್ಟುಮಾಗತಾಃ ಕೌತುಕಾನ್ವಿತಾಃ ।
ಜಿಜ್ಞಾಸವಸ್ತಚ್ಚರಿತಂ ಕಥಂ ಪಶ್ಯತಿ ನಃ ಸಮಂ ॥ ೬೭ ॥

ಭಕ್ತ್ಯಾ ಚಕ್ರೇ ತತಸ್ತೇಷಾಮರ್ಘಪಾದ್ಯಾದಿಕಂ ತಥಾ ।
ಆಸನತ್ರಯಮಾದಾಯ ದಿವ್ಯಂ ಕನಕಭೂಷಣಂ ॥ ೬೮ ॥

ನಿವೇಶ್ಯಾಥಾಕರೋತ್ಪೂಜಾಮೀಷದ್ಧರ್ಮಾಧಿಕಾಂ ಪುನಃ ।
ಜಗ್ಮತುಸ್ತಾ ಚ ಕಾಮಾರ್ಥಾವತಿಕೋಪಂ ನೃಪಂ ಪ್ರತಿ ॥ ೬೯ ॥

ಅರ್ಥಃ ಶಾಪಮುದಾತ್ತಸ್ಮೈ ಲೋಭಾತ್ತ್ವಂ ನಾಶಮೇಷ್ಯಸಿ ।
ಕಾಮೋಽಪ್ಯಾಹ ತವೋನ್ಮಾದೋ ಭವಿತಾ ಗಂಧಮಾದನೇ ॥ ೭೦ ॥

ಕುಮಾರವನಮಾಗತ್ಯ ವಿಯೋಗಾಚ್ಚೋರ್ವಶೀಭವಾತ್ ।
ಧರ್ಮೋಽಪ್ಯಾಹ ಚಿರಾಯುಸ್ತ್ವಂ ಧಾರ್ಮಿಕಶ್ಚ ಭವಿಷ್ಯಸಿ ॥ ೭೧ ॥

---

೬೭. ಧರ್ಮಾರ್ಥಕಾಮಗಳು ಈ ಪುರೂರವನು ನಮ್ಮನ್ನು ಸಮವಾಗಿ ಕಾಣಲು ಕಾರಣವೇನೆಂದು ತಿಳಿಯಲು ಅವನ ಚರಿತ್ರೆಯನ್ನು ಹೇಳಲು ಬಂದರು.

೬೮. ಅನಂತರ ಆ ಪುರೂರವನು ಭಕ್ತಿಯಿಂದ ಆ ಧರ್ಮಕಾಮಾರ್ಥಗಳಿಗೆ ಅರ್ಘ್ಯಪಾದ್ಯಾದಿಗಳನ್ನು ಕೊಟ್ಟು ಮೂರು ಜನಕ್ಕೂ ಮೂರು ಆಸನಗಳನ್ನು ದಿವ್ಯವಾದ ಚಿನ್ನದ ಒಡವೆಗಳನ್ನೂ ಕೊಟ್ಟು ಪೂಜಿಸಿದನು. ಆದರೆ ಧರ್ಮನಿಗೆ ಮತ್ತಿಬ್ಬರಿಗಿಂತಲೂ ಸ್ವಲ್ಪ ಹೆಚ್ಚು ಪೂಜೆಯನ್ನು ಮಾಡಿದನು.

೬೯-೭೦. ಆಗ ಕಾಮನಿಗೂ ಅರ್ಥನಿಗೂ ರಾಜನ ಮೇಲೆ ಬಹು ಕೋಪ ಬಂದಿತು. ಅರ್ಥನು ಆತನಿಗೆ ನೀನು ಲೋಭದಿಂದ ನಾಶಹೊಂದೆಂದೂ ಕಾಮನು ಹುಚ್ಚಿನಿಂದ ಗಂಧಮಾದನದಲ್ಲಿ ಅಲೆದಾಡೆಂದೂ ಶಪಿಸಿದರು.

೭೧. ಕುಮಾರವನದಲ್ಲಿ ಊರ್ವಶೀ ವಿಯೋಗದಿಂದ ಬಹು ಹುಚ್ಚನಾಗು ಎಂದನು. ಧರ್ಮನು, ಎಲೈ ಪುರೂರವನೇ, ನೀನು ಚಿರಾಯುವೂ ಧರ್ಮಿಷ್ಠನೂ ಆಗೆಂದು ವರವನ್ನು ಕೊಟ್ಟನು.

ಸಂತತಿಸ್ತವ ರಾಜೇಂದ್ರ ಯಾವದಾಚಂದ್ರತಾರಕಂ ।
ಸತತಂ ವೃದ್ಧಿಮಾಯಾತಿ ನ ನಾಶಂ ಭುವಿ ಯಾಸ್ಯತಿ　　॥ ೬೨ ॥

ಷಷ್ಟಿವರ್ಷಾಣಿ ಚೋನ್ಮಾದ ಉರ್ವಶೀಕಾಮಸಂಭವಃ ।
ಅಚಿರಾದೇವ ತೇನಾಶಂ ವಶಮೇಷ್ಯತಿ ತೇಽಪ್ಸರಾ　　॥ ೬೩ ॥

ಮನ್ವಂತರಂ ಸಮಗ್ರಂ ತು ಏವಮೇವ ನ ಸಂಶಯಃ ।
ಇತ್ಯುಕ್ತ್ವಾಂತರ್ದಧುಃ ಸರ್ವೇ ರಾಜಾ ರಾಜ್ಯಂ ತದನ್ವಭೂತ್　　॥ ೬೪ ॥

ಅಹನ್ಯಹನಿ ದೇವೇಂದ್ರಂ ದ್ರಷ್ಟುಂ ಯಾತಿ ಪುರೂರವಾಃ ।
ಕದಾಚಿದಾರುಹ್ಯ ರಥಂ ದಕ್ಷಿಣಾಯುಧಧಾರಿಣಾ　　॥ ೬೫ ॥

ಸಾರ್ಧಂ ಶಕ್ರೇಣ ಸೋಽಪಶ್ಯನ್ನೀಯಮಾನಾಮಥಾಂಬರೇ ।
ಕೇಶಿನಾ ದಾನವೇಂದ್ರೇಣ ಚಿತ್ರಲೇಖಾಮಥೋರ್ವಶೀಂ　　॥ ೬೬ ॥

---

೬೨-೬೩. ಎಲೈ ದೊರೆಯೇ, ನಿನ್ನ ವಂಶವು ಸೂರ್ಯಚಂದ್ರರಿರುವವರೆಗೂ ವೃದ್ಧಿಯನ್ನು ಹೊಂದುತ್ತ ನಾಶಹೊಂದದಿರಲಿ. ಅರವತ್ತು ವರ್ಷಗಳ ಕಾಲ ಊರ್ವಶಿಯ ಸಂಬಂಧದಿಂದ ಕಾಮಿಯಾಗಿ ಹುಚ್ಚನಾಗಿದ್ದು ಸ್ವಲ್ಪ ದಿನಗಳಲ್ಲಿಯೇ ಅವಳೊಡನೆ ಸಂಬಂಧವನ್ನು ಹೊಂದುತ್ತೀಯೆ.

೬೪. ಒಂದು ಮನ್ವಂತರಕಾಲ ನೀನು ಆ ಊರ್ವಶಿಯೊಡನೆ ಇರುತ್ತೀಯೆ. ಎಂದು ಹೇಳಿ ಎಲ್ಲರೂ ಹೊರಟುಹೋದರು. ಅನಂತರ ರಾಜನೂ ರಾಜ್ಯವನ್ನಾಳು ತ್ತಿದ್ದನು.

೬೫-೬೬. ಪುರೂರವನು ಪ್ರತಿದಿನವೂ ದೇವೇಂದ್ರನನ್ನು ನೋಡಲು ಹೋಗು ತ್ತಿದ್ದನು. ಹೀಗಿರಲು ಒಂದು ಸಾರಿ ಒಳ್ಳೆಯ ಆಯುಧಗಳನ್ನು ಧರಿಸಿ ಇಂದ್ರನೊಡನೆ ರಥದಲ್ಲಿ ಕುಳಿತು ಹೋಗುತ್ತಿರುವಾಗ ಅಂತರಿಕ್ಷದಲ್ಲಿ ಕೇಶಿಯೆಂಬ ರಾಕ್ಷಸನು ಊರ್ವಶಿಯನ್ನೂ ಚಿತ್ರಲೇಖೆಯನ್ನೂ ಅಪಹರಿಸಿಕೊಂಡು ಹೋಗುತ್ತಿರುವುದನ್ನು ನೋಡಿದನು.

ತಂ ವಿನಿರ್ಜಿತ್ಯ ಸಮರೇ ವಿವಿಧಾಯುಧಪಾತನೈಃ ।
ಬುಧಪುತ್ರೇಣ ವಾಯುವ್ಯಮಸ್ತ್ರಂ ಮುಕ್ತ್ವಾ ಯಶೋರ್ಥಿನಾ ॥ ೭೭ ॥

ಪುರಾ ಶಕ್ರೋಽಪಿ ಸಮರೇ ಯೇನ ಚಕ್ರೇ ವಿನಿರ್ಜಿತಃ ।
ಮಿತ್ರತ್ವಮಗಮತ್ತೇನ ಪಾದಾದಿಂದ್ರಾಯ ಚೋರ್ವಶೀಂ ॥ ೭೮ ॥

ತತಃ ಪ್ರಭೃತಿ ಮಿತ್ರತ್ವಗಮತ್ಪಾಕಶಾಸನಃ ।
ಸರ್ವಲೋಕಾತಿಶಯಿತಂ ಪುರೂರವಸಮೇವ ತಂ ॥ ೭೯ ॥

ಪ್ರಾಹ ವಜ್ರೀ ತು ಸಂತುಷ್ಟೋ ದೀಯತಾಂ ನಿಯಮೇನ ತು ।
ಸಾ ಪುರೂರವಸಃ ಪ್ರೀತ್ಯೈ ಗಾಯಂತೀ ಚರಿತಂ ಮಹತ್ ॥ ೮೦ ॥

ಲಕ್ಷ್ಮೀಸ್ವಯಂವರಂ ನಾಮ ಭರತೇನ ಪ್ರವರ್ತಿತಂ ।
ಮೇನಕಾಂ ಚೋರ್ವಶೀಂ ರಂಭಾಂ ನೃತ್ಯಧ್ವಮಿತಿ ಚಾದಿಶತ್ ॥ ೮೧ ॥

ನನರ್ತ ಸಲಯಂ ತತ್ರ ಲಕ್ಷ್ಮೀರೂಪೇಣ ಚೋರ್ವಶೀ ।
ಸಾ ಪುರೂರವಸಂ ದೃಷ್ಟ್ವಾ ಕಾಮಿನೀ ಕಾಮಪೀಡಿತಾ ॥ ೮೨ ॥

---

೭೭-೭೮. ಆ ಪುರೂರವನು ನಾನಾವಿಧವಾದ ಆಯುಧಗಳಿಂದ ಅವನನ್ನು ಜಯಿಸಿದನು. ಮತ್ತು ಹಿಂದೆ ಪುರೂರವನು ಯಾವ ವಾಯವ್ಯಾಸ್ತ್ರದಿಂದ ಇಂದ್ರನನ್ನು ಜಯಿಸಿ ಸ್ನೇಹವನ್ನು ಬೆಳೆಸಿಕೊಂಡನೋ ಅದೇ ವಾಯವ್ಯಾಸ್ತ್ರದಿಂದ ಆ ಕೇಶಿಯನ್ನು ಯನ್ನು ಗೆದ್ದು ಇಂದ್ರನಿಗೆ ಊರ್ವಶಿಯನ್ನು ತಂದುಕೊಟ್ಟನು.

೭೯. ಅದು ಮೊದಲುಗೊಂಡು ಇಂದ್ರನು ಪುರೂರವನೊಡನೆ ಹೆಚ್ಚು ಸ್ನೇಹವನ್ನು ಹೊಂದಿದನು. ಆಗ ಲೋಕಶ್ರೇಷ್ಠನಾದ ಪುರೂರವನ್ನು ಕುರಿತು ಇಂದ್ರನು ಒಂದು ನಿಯಮದಿಂದ ಈಕೆಯನ್ನು ನೀನು ಕರೆದುಕೊಂಡು ಹೋಗು ಎಂದನು.

೮೦-೮೧. ಆ ಮೇನಕೆಯು ಪುರೂರವನ ಮೇಲಿರುವ ಪ್ರೀತಿಯಿಂದ ಆತನ ಚರಿತ್ರೆಯನ್ನು ಹಾಡುತ್ತಿದ್ದಳು. ಹೀಗಿರಲು ಭರತನು ಕಲಿಸಿದ್ದ ಲಕ್ಷ್ಮೀಸ್ವಯಂವರವೆಂಬ ನಾಟಕವನ್ನು ಆಡುವಂತೆ ಮೇನಕೆಗೂ ರಂಭೆಗೂ ಭರತನು ಅಪ್ಪಣೆ ಮಾಡಿದನು.

೮೨-೮೪. ಲಕ್ಷ್ಮಿಯ ವೇಷವನ್ನು ಹಾಕಿದ್ದ ಊರ್ವಶಿಯು ತಾಳಕ್ಕೆ ಅನುಸಾರವಾಗಿ ಕುಣಿದಳು. ಆಕೆಯು ಪುರೂರವನನ್ನು ನೋಡಿ ಕಾಮಪೀಡಿತಳಾಗಿ ಹಿಂದೆ ಕಲಿತಿದ್ದ ಅಭಿನಯವೆಲ್ಲವನ್ನೂ ಮರೆತಳು. ಆಗ ಭರತನು ಕೋಪದಿಂದ

**ವಿಸ್ಮೃತಾಭಿನಯಂ ಸರ್ವಂ ಯತ್ಪುರಾತನವೇದಿತಂ ।**
**ಶಶಾಪ ಭರತಃ ಕೋಪಾದ್ವಿಯೋಗಾತ್ತಸ್ಯ ಭೂತಲೇ ॥ ೮೩ ॥**

**ಪಂಚಪಂಚಾಶದಬ್ದಾನಿ ಲತಾಭೂತಾ ಭವಿಷ್ಯತಿ ।**
**ಪುರೂರವಾಃ ಪಿಶಾಚತ್ತ್ವಂ ತತ್ರೈವಾಪ್ತ್ರೋ ಭವಿಷ್ಯತಿ ॥ ೮೪ ॥**

**ತತಸ್ತಮುರ್ವಶೀ ಗತ್ವಾ ಭರ್ತಾರಮಕರೋಚ್ಚಿರಂ ।**
**ಶಾಪಾನುಭವನಾಂತೇ ತು ಉರ್ವಶೀ ಬುಧಸೂನುನಾ ॥ ೮೫ ॥**

**ಅಜೀಜನತ್ಸುತಾನಷ್ಟೌ ನಾಮತಸ್ತಾನ್ನಿಬೋಧತ ।**
**ಆಯುರ್ದೃಢಾಯುರ್ವಶ್ಯಾಯುರ್ಧನಾಯುರ್ವೃತ್ತಿಮಾನ್ವಸುಃ ॥ ೮೬ ॥**

**ದಿವಿಜಾತಃ ಸುಬಾಹುಶ್ಚ ಸರ್ವೇ ದಿವ್ಯಬಲೌಜಸಃ ।**
**ಆಯುಷೋ ನಹುಷಃ ಪುತ್ರೋ ವೃದ್ಧಶರ್ಮಾ ತಥೈವ ಚ ॥ ೮೭ ॥**

**ರಜಿರ್ದಂಭೋ ವಿಪಾಪ್ಮಾ ಚ ವೀರಾಃ ಪಂಚ ಮಹಾರಥಾಃ ।**
**ರಜೇಃ ಪುತ್ರಶತಂ ಜಜ್ಞೇ ರಾಜೇಯಾ ಇತಿ ವಿಶ್ರುತಾಃ ॥ ೮೮ ॥**

---

ಆ ರಾಜನ ವಿಯೋಗದಿಂದ ಐವತ್ತೈದು ವರ್ಷಗಳು ಲತೆಯಾಗಿರು. ಪುರೂರವನು ಪಿಶಾಚನಾಗಿ ನೀನಿರುವಲ್ಲಿಯೇ ಇರುವನು ಎಂದು ಶಪಿಸಿದನು.

೮೫. ಅನಂತರ ಊರ್ವಶಿಯು ಪುರೂರವನನ್ನು ಗಂಡನನ್ನಾಗಿ ವರಿಸಿದಳು. ಹೀಗಿರಲು ಶಾಪವನ್ನು ಅನುಭವಿಸಿದನಂತರ ಆತನಿಂದ ಎಂಟು ಜನ ಮಕ್ಕಳನ್ನು ಪಡೆದಳು. ಅವರ ಹೆಸರನ್ನು ಹೇಳುತ್ತೇನೆ ಕೇಳು.

೮೬. ಆಯು, ದೃಢಾಯು, ವಶ್ಯಾಯು, ಧನಾಯು, ವೃತ್ತಿಮಾನ್, ವಸು, ದಿವಿಜಾತ, ಸುಬಾಹು ಎಂದು ಆವರ ಹೆಸರು. ಇವರೆಲ್ಲರೂ ಉತ್ತಮರಾದ ಬಲಿಷ್ಠರು.

೮೭. ಆಯುಷನಿಗೆ ನಹುಷ, ವೃದ್ಧಶರ್ಮಾ, ರಜಿ, ರಂಭ, ವಿಪಾಪ್ಮ ಎಂದು ಐವರು ಮಕ್ಕಳು. ವೀರರು ಮತ್ತು ಮಹಾರಥರು.

೮೮. ರಜಿಗೆ ನೂರು ಜನ ಮಕ್ಕಳಾವರು. ಅವರಿಗೆ ರಾಜೇಯರೆಂದು ಹೆಸರು.

ರಾಜಿರಾರಾಧಯಾಮಾಸ ನಾರಾಯಣಮಕಲ್ಮಷಂ ।
ತಪಸಾ ತೋಷಿತೋ ವಿಷ್ಣುರ್ವರಂ ಪ್ರಾದಾನ್ಮಹೀಪತೇ ॥ ೮೯ ॥

ದೇವಾಸುರಮನುಷ್ಯಾಣಾಮಭೂತ್ಸ ವಿಜಯೀ ತದಾ ।
ಅಥ ದೇವಾಸುರಂ ಯುದ್ಧಂ ಬಭೂವಾಬ್ದಶತತ್ರಯಂ ॥ ೯೦ ॥

ಪ್ರಹ್ಲಾದಶಕ್ರಯೋರ್ಭೀಮಂ ನ ಕಶ್ಚಿದ್ವಿಜಯೀ ತಯೋಃ ।
ತತೋ ದೇವಾಸುರೈಃ ಪೃಷ್ಟಃ ಪ್ರಾಹ ದೇವಶ್ಚತುರ್ಮುಖಃ ॥ ೯೧ ॥

ಅನಯೋರ್ವಿಜಯೀ ಕಃ ಸ್ಯಾದ್ರಜಿರ್ಯತ್ರೇತಿ ಸೋಽಬ್ರವೀತ್ ।
ಜಯಾಯ ಪ್ರಾರ್ಥಿತೋ ರಾಜಾ ಸಹಾಯಸ್ತ್ವಂ ಭವಸ್ವ ನಃ ॥ ೯೨ ॥

ದೈತ್ಯೈಃ ಪ್ರಾಹ ಯದಿ ಸ್ವಾಮೀ ವೋ ಭವಾಮಿ ತತಸ್ತ್ವಲಂ ।
ನಾಸುರೈಃ ಪ್ರತಿಪನ್ನಂ ತತ್ಪ್ರತಿಪನ್ನಂ ಸುರೈಸ್ತಥಾ ॥ ೯೩ ॥

---

೮೯. ರಜಿಯು ಶ್ರೀಮನ್ನಾರಾಯಣನನ್ನು ಪೂಜಿಸಲು ಆ ಪೂಜೆಯಿಂದ ಸಂತುಷ್ಟನಾದ ವಿಷ್ಣುವು ರಜಿಗೆ ವರವನ್ನು ಕೊಟ್ಟನು.

೯೦. ಆ ವರದಿಂದ ರಜಿಯು, ದೇವತೆಗಳು, ಅಸುರರು, ಮನುಷ್ಯರಲ್ಲಿ ವಿಜಯಿಯಾದನು. ಅನಂತರ ದೇವಾಸುರರಿಗೆ ಯುದ್ಧವು ಮುನ್ನೂರು ವರ್ಷಗಳ ವರೆಗೂ ಆಯಿತು.

೯೧. ಪ್ರಹ್ಲಾದ, ಇಂದ್ರ, ಇವರಿಗೆ ಭಯಂಕರವಾದ ಯುದ್ಧವು ನಡೆಯಿತು. ಇವರಿಬ್ಬರಲ್ಲಿ ಒಬ್ಬನೂ ಗೆಲ್ಲಲಿಲ್ಲ. ಆಗ ದೇವಾಸುರರು ಬ್ರಹ್ಮನನ್ನು ಕೇಳಲು ಆತನು ಇಂತೆಂದನು.

೯೨. ಇವರಿಬ್ಬರಲ್ಲಿ ಯಾವನು ಗೆಲ್ಲುತ್ತಾನೆನ್ನಲು ಬ್ರಹ್ಮನು ರಜಿಯು ಯಾವ ಕಡೆಗೆ ಸೇರುವನೋ ಅವರು ಜಯಿಸುತ್ತಾರೆಂದನು. ಆಗ ದೇವತೆಗಳು ಜಯ ಕ್ಕೋಸ್ಕರ ಆ ರಾಜನನ್ನು ಸಹಾಯಮಾಡಬೇಕೆಂದು ಕೇಳಿಕೊಂಡರು.

೯೩. ದೈತ್ಯರೂ ಕೇಳಿಕೊಳ್ಳಲು ರಜಿಯು ನನ್ನನ್ನು ನೀವು ಸ್ವಾಮಿಯನ್ನಾಗಿ ಒಪ್ಪಿಕೊಂಡರೆ ಆಗಬಹುದೆಂದನು. ಅದಕ್ಕೆ ರಾಕ್ಷಸರು ಒಪ್ಪಲಿಲ್ಲ. ದೇವತೆಗಳು ಆಗ ಬಹುದೆಂದು ಒಪ್ಪಿಕೊಂಡರು.

ಸ್ವಾಮೀ ಭವ ತ್ವಮಸ್ಮಾಕಂ ರಣೇ ನಾಶಾಯ ವಿದ್ವಿಷಃ ।
ತತೋ ವಿನಾಶಿತಾಃ ಸರ್ವೇ ಯೇಽವಧ್ಯಾ ವಜ್ರಪಾಣಿನಃ ॥ ೯೪ ॥

ಪುತ್ರತ್ವಮಗಮತ್ತುಷ್ಟಸ್ತಸ್ಯೇಂದ್ರಃ ಕರ್ಮಣಾ ವಿಭುಃ ।
ದತ್ತ್ವೇಂದ್ರಾಯ ಪುರಾ ರಾಜ್ಯಂ ಜಗಾಮ ತಪಸೇ ರಜಿಃ ॥ ೯೫ ॥

ರಜಿಪುತ್ರೈಸ್ತದಾ ಛಿನ್ನಂ ಬಲಾದ್ರಿಂದಸ್ಯ ವೈ ಪದಂ ।
ಯಜ್ಞಭಾಗಂ ಚ ರಾಜ್ಯಂ ಚ ತಪೋಬಲಗುಣಾನ್ವಿತೈಃ ॥ ೯೬ ॥

ರಾಜ್ಯಭ್ರಷ್ಟಸ್ತದಾ ಶಕ್ರೋ ರಜಿಪುತ್ರನಿಪೀಡಿತಃ ।
ಪ್ರಾಹ ವಾಚಸ್ಪತಿಂ ದೀನಃ ಪೀಡಿತೋಽಸ್ಮಿ ರಜೇಃ ಸುತೈಃ ॥ ೯೭ ॥

ನ ಯಜ್ಞಭಾಗೋ ರಾಜ್ಯಂ ಮೇ ನಿರ್ಜಿತಸ್ಯ ಬೃಹಸ್ಪತೇ ।
ರಾಜ್ಯಲಾಭಾಯ ಮೇ ಯತ್ನಂ ವಿಧತ್ಸ್ವ ಧಿಷಣಾಧಿಪ ॥ ೯೮ ॥

ತತೋ ಬೃಹಸ್ಪತಿಃ ಶಕ್ರಮಕರೋದ್ಬಲದರ್ಪಿತಂ ।
ಗ್ರಹಶಾಂತಿವಿಧಾನೇನ ಪೌಷ್ಟಿಕೇನ ಚ ಕರ್ಮಣಾ ॥ ೯೯ ॥

---

೯೪-೯೫. ದೇವತೆಗಳು ಎಲೈ ರಜಿಯೇ, ನೀನು ನಮಗೆ ಶತ್ರುಗಳ ನಾಶ ಕ್ಕೋಸ್ಕರ ಸ್ವಾಮಿಯಾಗು ಎಂದರು. ಹಾಗೆ ಆಗಲೆಂದು ಹೇಳಿ ಇಂದ್ರನ ಶತ್ರು ಗಳನ್ನು ಆ ರಜಿಯು ನಾಶಮಾಡಿದನು. ಈ ರಜಿಯ ಕರ್ಮದಿಂದ ಇಂದ್ರನು ರಜಿಗೆ ಧರ್ಮಪುತ್ರನಾದನು ಗೆದ್ದನಂತರ ರಜಿಯು ರಾಜ್ಯವನ್ನು ಇಂದ್ರನಿಗೆ ಕೊಟ್ಟು ತಾನು ತಪಸ್ಸಿಗೆ ಹೋದನು.

೯೬. ತಪಸ್ಸು, ಬಲ, ಗುಣಗಳಿಂದ ಕೂಡಿದ ರಜಪುತ್ರರು ಇಂದ್ರನ ಪದ ವನ್ನೂ ಯಜ್ಞಭಾಗವನ್ನೂ ರಾಜ್ಯವನ್ನೂ ಕಿತ್ತುಕೊಂಡರು.

೯೭-೯೮. ರಜಿಪುತ್ರರಿಂದ ತೊಂದರೆಪಡಿಸಲ್ಪಟ್ಟ, ರಾಜ್ಯಭ್ರಷ್ಟನಾದ ಇಂದ್ರನು ಬೃಹಸ್ಪತಿಯ ಬಳಿಗೆ ಬಂದು ರಜಿಯ ಮಕ್ಕಳು ಪೀಡಿಸುತ್ತಿದ್ದಾರೆ. ನಾನು ಸೋತುದ ರಿಂದ ಯಜ್ಞಭಾಗವೂ ರಾಜ್ಯವೂ ನನಗಿಲ್ಲ. ಆದ್ದರಿಂದ ರಾಜ್ಯ ಲಾಭಕ್ಕೆ ಬುದ್ಧಿವಂತ ನಾದ ನೀನು ಪ್ರಯತ್ನಪಡು ಎಂದನು.

೯೯. ಅನಂತರ ಬೃಹಸ್ಪತಿಯು ಗ್ರಹಗಳಿಗೆ ಶಾಂತಿಮಾಡುವುದರಿಂದಲೂ ಪೌಷ್ಟಿಕ ಕರ್ಮಗಳಿಂದಲೂ ಇಂದ್ರನನ್ನು ಬಲಿಷ್ಠನನ್ನಾಗಿಮಾಡಿದನು.

**ಗತ್ವಾಽಥ ಮೋಹಯಾಮಾಸ ರಜಿಪುತ್ರಾನ್ ಬೃಹಸ್ಪತಿಃ ।**
**ಸ್ವಂ ವಿಮಾನಂ ಸಮಾಸ್ಥಾಯ ದೇವರಾಜ್ಯಾಯ ವೇದವಿತ್ ॥ ೧೦೦ ॥**

**ಜಿನಧರ್ಮಂ ಸಮಾಸ್ಥಾಯ ವೇದಬಾಹ್ಯಂ ಸ ಧರ್ಮವಿತ್ ।**
**ವೇದತ್ರಯೀಪರಿಭ್ರಷ್ಟಾಂಶ್ಚಕಾರ ಧಿಷಣಾಧಿಪಃ ॥ ೧೦೧ ॥**

**ವೇದಬಾಹ್ಯಾನ್ಪರಿಜ್ಞಾಯ ಹೇತುವಾದಸಮನ್ವಿತಾನ್ ।**
**ಜಘಾನ ಶಕ್ರೋ ವಜ್ರೇಣ ಸರ್ವಾನ್ ಧರ್ಮಬಹಿಷ್ಕೃತಾನ್ ॥ ೧೦೨ ॥**

**ನಹುಷಸ್ಯ ಚ ವಕ್ಷ್ಯಾಮಿ ಪುತ್ರಾನ್ ಸಪ್ತೈವ ಧಾರ್ಮಿಕಾನ್ ।**
**ಯತಿರ್ಯಯಾತಿಃ ಸಂಯಾತಿರುದ್ಭವಃ ಪರ ಏವ ಚ ॥ ೧೦೩ ॥**

**ವಿಯತಿರ್ವಿದ್ಯಸಾತಿಶ್ಚ ಸಪ್ತೈತೇ ವಂಶವರ್ಧನಾಃ ।**
**ಯತಿಃ ಕುಮಾರಭಾವೇಽಪಿ ಯೋಗೀ ವೈಖಾನಸೋಽಭವತ್ ॥ ೧೦೪ ॥**

---

೧೦೦. ಆಗ ಬೃಹಸ್ಪತಿಯು ತನ್ನ ವಿಮಾನದಲ್ಲಿ ಕುಳಿತು ಇಂದ್ರನಿಗೆ ರಾಜ್ಯ ಕೊಡಲು ಹೋಗಿ ರಜಿಪುತ್ರರನ್ನು ಮೋಹಗೊಳಿಸಿದನು.

೧೦೧. ಧರ್ಮಜ್ಞನಾದ ಆ ಬೃಹಸ್ಪತಿಯು ಜೈನಧರ್ಮವನ್ನು ಅನುಸರಿಸಿ ಮೂರು ವೇದಗಳನ್ನೂ ತನ್ನ ಬುದ್ಧಿಯಿಂದ ಭ್ರಷ್ಟವನ್ನಾಗಿಮಾಡಿದನು.

೧೦೨. ರಜಿಯ ಮಕ್ಕಳು ವೇದಬಾಹ್ಯರಾಗಿಯೂ ಹೇತುವಾದದಿಂದ ಕೂಡಿರುವವರಾಗಿಯೂ ಇರುವುದನ್ನು ತಿಳಿದು ಇಂದ್ರನು ಆ ಧರ್ಮ ಬಹಿಷ್ಕೃತರನ್ನು ವಜ್ರಾಯುಧದಿಂದ ಕೊಂದನು.

೧೦೩. ನಹುಷನಿಗೆ ಏಳು ಜನರು ಧಾರ್ಮಿಕರಾದ ಮಕ್ಕಳು ಇದ್ದರು. ಯತಿ, ಯಯಾತಿ, ಸಂಯಾತಿ, ಉದ್ಭವ, ಪದ, ವಿಯತಿ, ವಿದ್ಯ, ಸಾತಿ. ಎಂದು ಆ ಏಳು ಜನರ ಹೆಸರುಗಳು.

೧೦೪. ಯತಿಯು ಚಿಕ್ಕತನದಲ್ಲಿಯೇ ವೈಖಾನಸಾಶ್ರಮವನ್ನು ಸ್ವೀಕರಿಸಿದನು.

ಯಯಾತಿರಕರೋದ್ರಾಜ್ಯಂ ಧರ್ಮೈಕಶರಣಃ ಸದಾ ।
ಶರ್ಮಿಷ್ಠಾ ತಸ್ಯ ಭಾರ್ಯಾಽಭೂದ್ದುಹಿತಾ ವೃಷಪರ್ವಣಃ ॥ ೧೦೫ ॥

ಭಾರ್ಗವಸ್ಯಾತ್ಮಜಾ ಚೈವ ದೇವಯಾನೀ ಚ ಸುವ್ರತಾ ।
ಯಯಾತೇಃ ಪಂಚ ದಾಯಾದಾಸ್ತಾನ್ ಪ್ರವಕ್ಷ್ಯಾಮಿ ನಾಮತಃ॥ ೧೦೬ ॥

ದೇವಯಾನೀ ಯದುಂ ಪುತ್ರಂ ತುರ್ವಸುಂ ಚಾಪ್ಯಜೀಜನತ್ ।
ತಥಾ ದ್ರುಹ್ಯಮಣುಂ ಪುರುಂ ಶರ್ಮಿಷ್ಠಾಜನಯತ್ಸುತಾನ್ ॥ ೧೦೭ ।

ಯದುಃ ಪುರುಶ್ಚ ಭವತಸ್ತೇಷಾಂ ವಂಶವಿವರ್ಧನೌ ।
ಪೂರೋರ್ವಂಶಂ ಪ್ರವಕ್ಷ್ಯಾಮಿ ಯತ್ರ ಜಾತೋಽಸಿ ಪಾರ್ಥಿವ ॥ ೧೦೮ ॥

ಯದೋಸ್ತು ಯಾದವಾ ಜಾತಾಸ್ತತ್ರ ತೌ ಬಲಕೇಶವೌ ।
ಭಾರಾವತರಣಾರ್ಥಾಯ ಪಾಂಡವಾನಾಂ ಹಿತಾಯ ಚ ॥ ೧೦೯ ॥

---

೧೦೫. ಧರ್ಮಿಷ್ಠನಾಗಿ ಯಯಾತಿಯು ರಾಜ್ಯಭಾರಮಾಡತೊಡಗಿದನು. ವೃಷಪರ್ವನ ಮಗಳಾದ ಶರ್ಮಿಷ್ಠೆಯನ್ನು ಆ ಯಯಾತಿಗೆ ಕೊಟ್ಟಿತ್ತು.

೧೦೬. ಮತ್ತು ಶುಕ್ರನ ಮಗಳಾದ. ಯೋಗ್ಯಳಾದ ದೇವಯಾನಿಯೂ ಮತ್ತೊಬ್ಬ ಹೆಂಡತಿಯು. ಯಯಾತಿಗೆ ಐದು ಜನ ಗಂಡು ಮಕ್ಕಳು, ಅವರನ್ನು ಹೇಳುತ್ತೇನೆ ಕೇಳು.

೧೦೭. ಐವರಲ್ಲಿ ಯದು, ತುರ್ವಸು ಎಂಬಿಬ್ಬರೂ ದೇವಯಾನಿಯ ಮಕ್ಕಳು. ದ್ರುಹ್ಯ, ಅಣು, ಪುರು ಎಂಬ ಮೂವರು ಶರ್ಮಿಷ್ಠೆಯ ಮಕ್ಕಳು.

೧೦೮. ಯದು ಮತ್ತು ಪುರು ಇಬ್ಬರೂ ವಂಶವೃದ್ಧಿಕರರಾಗಿ ಆದರು. ನೀನು ಹುಟ್ಟಿದ ವಂಶದ ಮೂಲಪುರುಷನಾದ ಪುರುವಿನ ವಂಶವನ್ನು ಹೇಳುತ್ತೇನೆ.

೧೦೯. ಯದುವಿನಿಂದ ಯಾದವರು ಹುಟ್ಟಿದರು. ಆ ವಂಶದಲ್ಲಿಯೇ ಬಲರಾಮ, ಕೃಷ್ಣರು ಹುಟ್ಟಿದರು. ಇವರೇ ಭೂಭಾರವನ್ನು ಇಳಿಸಲೂ ಪಾಂಡವರ ಹಿತಕ್ಕೋಸ್ಕರಲೂ ಹುಟ್ಟಿದವರು.

ಯದೋಃ ಪುತ್ರಾ ಬಭೂವುರ್ಹಿ ಪಂಚ ದೇವಸುತೋಪಮಾಃ ।
ಸಹಸ್ರಜಿತ್ತಥಾ ಜ್ಯೇಷ್ಠಃ ಕ್ರೋಷ್ಟಾ ನೀಲೋಂಜಿಕೋ ರಘುಃ ॥ ೧೧೦ ॥

ಸಹಸ್ರಜಿತೋ ದಾಯಾದಃ ಶತಜಿನ್ನಾಮ ಪಾರ್ಥಿವಃ ।
ಶತಜಿತಶ್ಚ ದಾಯಾದಾಸ್ತ್ರಯಃ ಪರಮಧಾರ್ಮಿಕಾಃ ॥ ೧೧೧ ॥

ಹೈಹಯಶ್ಚ ಹಯಶ್ಚೈವ ತಥೋತ್ತಾಲಹಯಶ್ಚ ಯಃ ।
ಹೈಹಯಸ್ಯ ತು ದಾಯಾದೋ ಧರ್ಮನೇತ್ರಃ ಪ್ರತಿಶ್ರುತಃ ॥ ೧೧೨ ॥

ಧರ್ಮನೇತ್ರಸ್ಯ ಕುಂಭಿಸ್ತು ಸಂಹತಸ್ತಸ್ಯ ಚಾತ್ಮಜಃ ।
ಸಂಹತಸ್ಯ ತು ದಾಯಾದೋ ಮಹಿಮಾ ನಾಮ ಪಾರ್ಥಿವಃ ॥ ೧೧೩ ॥

ಆಸೀನ್ಮಹಿಮತಃ ಪುತ್ರೋ ಭದ್ರಸೇನಃ ಪ್ರತಾಪವಾನ್ ।
ವಾರಾಣಸ್ಯಾಮಭೂದ್ರಾಜಾ ಕಥಿತಃ ಪೂರ್ವಮೇವ ತು ॥ ೧೧೪ ॥

ಭದ್ರಸೇನಸ್ಯ ಪುತ್ರೋಽಭೂದ್ದುರ್ದಶೋರ್ ನಾಮ ಪಾರ್ಥಿವಃ ।
ದುರ್ದರ್ಶಸ್ಯ ಸುತೋ ಭೀಮಃ ಕನಕೋ ನಾಮ ಬುದ್ಧಿಮಾನ್ ॥ ೧೧೫ ॥

---

೧೧೦. ಯದುವಿಗೆ ಸಹಸ್ರಜಿತ್, ಕ್ರೋಷ್ಟಾ, ನೀಲ, ಅಂಜಿಕ, ರಘು ಎಂಬದಾಗಿ ಐವರು ಉತ್ಕೃಷ್ಟರಾದ ಮಕ್ಕಳು, ಇವರಲ್ಲಿ ಸಹಸ್ರಜೀತೇ ದೊಡ್ಡವನು.

೧೧೧. ಸಹಸ್ರಜಿತ್ತಿಗೆ ಶತಜಿತ್ತೆಂಬುವನು ಮಗನು. ಆ ಶತಜಿತ್ತಿಗೆ ಧಾರ್ಮಿಕರಾದ ಮೂವರು ಮಕ್ಕಳು.

೧೧೨. ಹೈಹಯ, ಹಯ, ಉತ್ತಾಲಹಯರೆಂಬ ಆ ಮೂವರ ಹೆಸರು. ಹೈಹಯನಿಗೆ ಧರ್ಮನೇತ್ರನೆಂಬುವನು ಮಗನು.

೧೧೩. ಧರ್ಮನೇತ್ರನಿಗೆ ಕುಂಭಿಯು, ಕುಂಭಿಗೆ ಸಂಹತನು. ಸಂಹತನಿಗೆ ಮಹಿಮನೂ ಮಕ್ಕಳಾದರು.

೧೧೪. ಮಹಿಮಂತನಿಗೆ ಭದ್ರಸೇನನೆಂಬ ಮಗನು ಪ್ರತಾಪಶಾಲಿಯಾಗಿ ವಾರಾಣಸಿಯಲ್ಲಿ ರಾಜ್ಯವಾಳಿದನು.

೧೧೫. ಭದ್ರಸೇನನಿಗೆ ದುರ್ದರ್ಶನೂ, ದುರ್ದರ್ಶನನಿಗೆ ಕನಕನೂ ಮಕ್ಕಳಾದರು. ಆತನು ಬಹು ಬುದ್ಧಿವಂತನು.

ಕನಕಸ್ಯ ಸುತಾ ಹ್ಯಾಸಂಶ್ಚತ್ವಾರೋ ಲೋಕವಿಶ್ರುತಾಃ ।
ಕೃತಾಗ್ನಿಃ ಕೃತವೀರ್ಯಶ್ಚ ಕೃತಧರ್ಮಾ ತಥೈವ ಚ ॥ ೧೧೬ ॥

ಕೃತೌಜಾಶ್ಚ ಚತುರ್ಥಸ್ತು ಕೃತವೀರ್ಯಸ್ಯ ಸೋಽರ್ಜುನಃ ।
ಜಾತೋ ಬಾಹುಸಹಸ್ರೇಣ ಸಪ್ತದ್ವೀಪೇಶ್ವರೋ ನೃಪಃ ॥ ೧೧೭ ॥

ವರ್ಷಾಯುತಂ ತಪಸ್ತೇಪೇ ದುಶ್ಚರಂ ಪೃಥಿವೀಪತಿಃ ।
ದತ್ತಮಾರಾಧಯಾಮಾಸ ಕಾರ್ತವೀರ್ಯೋಽತ್ರಿಸಂಭವಂ ॥ ೧೧೮ ॥

ತಸ್ಮೈ ದತ್ತೋ ವರಾನ್ ಪ್ರಾದಾಚ್ಚತುರಃ ಪುರುಷೋತ್ತಮಃ ।
ಪೂರ್ವಂ ಬಾಹುಸಹಸ್ರಂ ತು ಸ ವವ್ರೇ ರಾಜಸತ್ತಮಃ ॥ ೧೧೯ ॥

ಅಧರ್ಮಂ ಧ್ಯಾಯಮಾನಸ್ಯ ಶಬ್ದೈಶ್ಚಾಪಿ ನಿವಾರಣಂ ।
ಯುದ್ಧೇನ ಪೃಥಿವೀಂ ಜಿತ್ವಾ ಧರ್ಮೇಣಾವಾಪ್ಯ ವೈ ಬಲಂ ॥ ೧೨೦ ॥

ಸಂಗ್ರಾಮೇ ವರ್ತಮಾನಸ್ಯ ವಧಶ್ಚೈವಾಧಿಕಾದ್ಭವೇತ್ ।
ಏತೇನೇಯಂ ಮಹೀ ಸರ್ವಾ ಸಪ್ತದ್ವೀಪಾ ಸಪತ್ತನಾ ॥ ೧೨೧ ॥

---

೧೧೬-೧೧೭. ಕನಕನಿಗೆ ಕೃತಾಗ್ನಿ, ಕೃತವೀರ್ಯ, ಕೃತಧರ್ಮಾ, ಕೃತೌಜಾತ ಎಂಬವಾಗಿ ನಾಲ್ವರು ಮಕ್ಕಳು. ಕೃತವೀರ್ಯನಿಗೆ ಅರ್ಜುನನೆಂಬುವನು ಮಗನು. ಈತನಿಗೆ ಸಾವಿರ ತೋಳುಗಳಿದ್ದವು, ಸಪ್ತದ್ವೀಪಾಧಿಪತಿಯಾಗಿದ್ದನು.

೧೧೮. ಈ ಅರ್ಜುನನು ಸಾವಿರ ವರ್ಷಗಳ ವರೆಗೆ ತಪಸ್ಸುಮಾಡಿ ಅತ್ರಿಪುತ್ರನಾದ ದತ್ತಾತ್ರೇಯನನ್ನು ಪೂಜಿಸಿದನು.

೧೧೯. ಮೊದಲು ಬ್ರಹ್ಮನು ಪ್ರಸನ್ನನಾದನು. ಆತನನ್ನು ಕುರಿತು ಸಾವಿರ ತೋಳುಗಳನ್ನು ಕೇಳಿಕೊಂಡನು.

೧೨೦. ಅವನು ಎಲ್ಲರನ್ನು ಕೊಂದು ತಾನು ದೊಡ್ಡವನಾಗಬೇಕೆಂಬ ಅಧರ್ಮವನ್ನು ಧ್ಯಾನಿಸುತ್ತಿದ್ದನು. ಯುದ್ಧದಿಂದ ಭೂಮಿಯನ್ನು ಗೆದ್ದು ಧರ್ಮದಿಂದ ಬಲವನ್ನು ಹೊಂದಿ ಯುದ್ಧದಲ್ಲಿ ವೀರನಾದ ಈತನಿಂದ ಬಹಳವಾಗಿ ವಧೆಯಾಗುತ್ತದೆ.

೧೨೧-೧೨೨. ಏಳು ಸಮುದ್ರದ ಒಳಗಿರುವ ಭೂಮಿಯನ್ನೆಲ್ಲಾ ಕ್ಷತ್ರಿಯ...

ಸಪ್ತೋದಧಿಪರಿಕ್ಷಿಪ್ತಾ ಕ್ಷಾತ್ರೇಣ ವಿಧಿನಾ ಜಿತಾ ।
ಜಜ್ಞೇ ಬಾಹುಸಹಸ್ರಂ ಚ ಇಚ್ಛತಸ್ತಸ್ಯ ಧೀಮತಃ ॥ ೧೨೨ ॥

ಸರ್ವೇ ಯಜ್ಞಾ ಮಹಾಬಾಹೋಸ್ತಸ್ಯಾಸನ್ ಭೂರಿದಕ್ಷಿಣಾಃ ।
ಸರ್ವೇ ಕಾಂಚನಯೂಪಾಸ್ತೇ ಸರ್ವೇ ಕಾಂಚನವೇದಿಕಾಃ ॥ ೧೨೩ ॥

ಸರ್ವೇ ದೇವೈಶ್ಚ ಸಂಪ್ರಾಪ್ತಾ ವಿಮಾನಸ್ಥೈರಲಂಕೃತಾಃ ।
ಗಂಧರ್ವೈರಪ್ಸರೋಭಿಶ್ಚ ನಿತ್ಯಮೇವೋಪಸೇವಿತಾಃ ॥ ೧೨೪ ॥

ಯಸ್ಯ ಯಜ್ಞೇ ಜಗೌ ಗಾಥಾಂ ಗಂಧರ್ವೋ ನಾರದಸ್ತಥಾ ।
ಕಾರ್ತವೀರ್ಯಸ್ಯ ರಾಜರ್ಷೇರ್ಮಹಿಮಾನಂ ನಿರೀಕ್ಷ್ಯ ಸಃ ॥ ೧೨೫ ॥

ನ ನೂನಂ ಕಾರ್ತವೀರ್ಯಸ್ಯ ಗತಿಂ ಯಾಸ್ಯಂತಿ ಪಾರ್ಥಿವಾಃ ।
ಯಜ್ಞೈರ್ದಾನೈಸ್ತಪೋಭಿರ್ವಾ ವಿಕ್ರಮೇಣ ಶ್ರುತೇನ ಚ ॥ ೧೨೬

---

ಬಲದಿಂದ ಜಯಿಸಿದನು. ಇದಕ್ಕೋಸ್ಕರ ಸಾವಿರ ತೋಳುಗಳನ್ನು ಹೊಂದಿ ಜಯಿಸಿದನು.

೧೨೩. ಅವರು ಬಹುವಾಗಿ ದಕ್ಷಿಣೆಕೊಡುತ್ತ ಎಲ್ಲ ಯಾಗಗಳನ್ನೂ ಮಾಡಿದರು. ಅವನು ನೆಟ್ಟ ಯೂಪಸ್ತಂಭವೆಲ್ಲವೂ ಚಿನ್ನದವುಗಳೇ ಆಗಿ ವೇದಿಕೆಗಳು ಚಿನ್ನದ್ದೇ ಆಗಿದ್ದವು.

೧೨೪. ವಿಮಾನದಲ್ಲಿರುವ ದೇವತೆಗಳು ಎಲ್ಲವನ್ನು ಹೊಂದಿದರು. ಗಂಧರ್ವರೂ, ಅಪ್ಸರರೂ ನಿತ್ಯವೂ ಸೇವಿಸುತ್ತಿದ್ದರು.

೧೨೫. ರಾಜರ್ಷಿಯಾದ ಕಾರ್ತವೀರ್ಯನ ಮಹಿಮೆಯನ್ನು ನೋಡಿ ನಾರದನು ಗಂಧರ್ವರೂ ಹಾಡು ಹಾಡುತ್ತಿದ್ದರು.

೧೨೬. ಯಜ್ಞದಿಂದಲಾಗಲಿ, ತಪಸ್ಸಿನಿಂದಾಗಲಿ, ಪರಾಕ್ರಮದಿಂದಾಗಲಿ ಶಾಸ್ತ್ರ ರೀತಿಯಿಂದಾಗಲಿ ಕಾರ್ತವೀರ್ಯನಂತೆ ಯಾವ ರಾಜನೂ ಆಗುವುದಿಲ್ಲ ಎಂದು ಹಾಡುತ್ತಿದ್ದರು.

**ಸಪ್ತದ್ವೀಪಾನನುಚರನ್ನುದ್ಯೋಗೇ ಪವನೋಪಮಃ ।**
**ಪಂಚಾಶೀತಿಸಹಸ್ರಾಣಿ ವರ್ಷಾಣಾಂ ಚ ನರಾಧಿಪಃ　　॥ ೧೨೭ ॥**

**ಸಪ್ತದ್ವೀಪಪೃಥಿವ್ಯಾಶ್ಚ ಚಕ್ರವರ್ತೀ ಬಭೂವ ಹ ।**
**ಸ ಏವ ಪಶುಪಾಲೋಽಭೂತ್ ಕ್ಷೇತ್ರಪಾಲಃ ಸ ಏವ ಹಿ　　॥ ೧೨೮ ॥**

**ಸ ಏವ ವೃಷ್ಟ್ಯಾ ಪರ್ಜನ್ಯೋ ಯೋಗಿತ್ವಾದರ್ಜುನೋಽಭವತ್ ।**
**ಯೋಽಸೌ ಬಾಹುಸಹಸ್ರೇಣ ಜ್ಯಾಘಾತಕಠಿನತ್ವಚಾ　　॥ ೧೨೯ ॥**

**ಭಾತಿ ರಶ್ಮಿಸಹಸ್ರೇಣ ಶರದೀವ ದಿವಾಕರಃ ।**
**ಏಷ ನಾಮ ಮನುಷ್ಯೇಷು ಮಾಹಿಷ್ಮತ್ಯಾಂ ಮಹಾದ್ಯುತಿಃ　　॥ ೧೩೦ ॥**

**ಏಷ ವೇಗಂ ಸಮುದ್ರಸ್ಯ ಪ್ರಾವೃಟ್ಕಾಲೇ ಭಜೇತ ವೈ ।**
**ಕ್ರೀಡನ್ನಿವ ಮುಖೋದ್ಗೀರ್ಣಃ ಪ್ರತಿಸ್ರೋತೋ ಮಹೀಪತಿಃ　　॥ ೧೩೧ ॥**

**ಲಲನಾಃ ಕ್ರೀಡತಾ ತೇನ ಪ್ರತಿಬದ್ಧೋರ್ಮಿಮಾಲಿನೀ ।**
**ಊರ್ಮಿಭ್ರುಕುಟಿಮಾಲಾ ಸಾ ಶಂಕಿತಾಭ್ಯೇತಿ ನರ್ಮದಾ　　॥ ೧೩೨ ॥**

---

೧೨೭. ಸಪ್ತ ದ್ವೀಪಗಳನ್ನು ಸುತ್ತುತ್ತ ಕೆಲಸದಲ್ಲಿ ವಾಯುವಿನಂತಿದ್ದು ಎಂಭತ್ತೈದು ಸಾವಿರ ವರ್ಷಗಳವರೆಗೂ ಸಪ್ತದ್ವೀಪವುಳ್ಳ ಭೂಮಿಗೆ ಚಕ್ರವರ್ತಿಯಾಗಿದ್ದನು.

೧೨೮. ಅವನೇ ತನ್ನ ಶಕ್ತಿಯಿಂದ ಪಶುಪಾಲನೂ, ಕ್ಷೇತ್ರಪಾಲನೂ ಮಳೆಯನ್ನು ಸುರಿಸುವುದರಲ್ಲಿ ಪರ್ಜನ್ಯನೂ ಆಗಿ ಯೋಗಾಭ್ಯಾಸದಿಂದ ಈ ರೀತಿಯಿದ್ದನು.

೧೨೯-೧೩೦. ಬೀವಿನ ಹೊಡೆತದಿಂದ ಜಡ್ಡು ಹಿಡಿದ ಚರ್ಮವುಳ್ಳ ಸಾವಿರ ತೋಳುಗಳಿಂದ ಪ್ರಕಾಶಿಸುವ ಈತನು ಸಾವಿರ ರಶ್ಮಿಗಳಿಂದ ಶರತ್ಕಾಲದ ಸೂರ್ಯನಂತೆ ಪ್ರಕಾಶಿಸುತ್ತಿರುವನು. ಮಾಹಿಷ್ಮತಿಯಲ್ಲಿ ಮಹಾದ್ಯುತಿಯುಳ್ಳವನಾಗಿ ಬೆಳಗುತ್ತಿದ್ದನು.

೧೩೧. ಶರತ್ಕಾಲದಲ್ಲಿ ಸಮುದ್ರದ ವೇಗವೇ ಇವನಾಗಿರುವನು. ಲೀಲೆಯಿಂದಲೇ ತನ್ನ ಮುಖದಿಂದ ಹೊರಹೊರಟ ನದಿಯಾಗಿಯೂ ಇರುವನು.

೧೩೨. ನರ್ಮದೆಯು ಅಲೆಗಳನ್ನು ಹೊರಡಿಸದೆ ಆ ಅರ್ಜುನನ ಹುಬ್ಬನ್ನೇ ವೀಕ್ಷಿಸುತ್ತಿದ್ದು ಸಂದೇಹದಿಂದ ಆತನ ಹೆಂಗಸರನ್ನು ತನ್ನ ನೀರಿನಲ್ಲಿ ಆಟವಾಡುವಂತೆ ಮಾಡುತ್ತದೆ.

ಏಷ ಏವ ಮನೋರ್ವಂಶೇ ತ್ವವಗಾಹೇನ್ಮಹಾರ್ಣವಂ ।
ಕರೇಣೋದ್ಧೃತ್ಯ ವೇಗಂ ತು ಕಾಮಿನೀಪ್ರೀಣನೇನ ತು ॥ ೧೩೩ ॥

ತಸ್ಯ ಬಾಹುಸಹಸ್ರೇಣ ಕ್ಷೋಭ್ಯಮಾಣೇ ಮಹೋದಧೌ ।
ಭವಂತಿ ಲೀನಾ ನಿಶ್ಚೇಷ್ಟಾಃ ಪಾತಾಲಸ್ಥಾ ಮಹಾಸುರಾಃ ॥ ೧೩೪ ॥

ಮಂದರಕ್ಷೋಭಚಕಿತಾ ಅಮೃತೋತ್ಥಾನಶಂಕಿತಾಃ ।
ನತಾ ನಿಶ್ಚಲಮೂರ್ಧಾನೋ ಭವಂತಿ ಚ ಮಹೋರಗಾಃ ॥ ೧೩೫ ॥

ಏಷ ಧನ್ವೀ ಚ ಚಿಕ್ಷೇಪ ರಾವಣಂ ಪ್ರತಿ ಸಾಯಕಾನ್ ।
ಏಷ ಧನ್ವೀ ಧನುರ್ಗೃಹ್ಯ ಉತ್ಸಿಕ್ತಂ ಪಂಚಭಿಃ ಶರೈಃ ॥ ೧೩೬ ॥

ಲಂಕಾಯಾಂ ಮೋಹಯಿತ್ವಾ ಸ ಸಬಲಂ ರಾವಣಂ ಬಲಾತ್ ।
ವಿಜಿತ್ಯ ಬಧ್ವಾ ತ್ವಾನೀಯ ಮಾಹಿಷ್ಮತ್ಯಾಂ ಬಬಂಧ ಹ ॥ ೧೩೭ ॥

---

೧೩೩. ಮನುವಿನ ವಂಶದಲ್ಲಿ ಶಕ್ತನಾದ ಇವನೇನೇ ಸಮುದ್ರದ ವೇಗವನ್ನು ಕೈಯಿಂದ ನಿಲ್ಲಿಸಿ ಹೆಂಗಸರೊಡನೆ ಸಮುದ್ರದಲ್ಲಿ ಇಳಿದು ಕ್ರೀಡಿಸುತ್ತಿರುವನು.

೧೩೪. ಆ ಕಾರ್ತವೀರ್ಯನು ಸಾವಿರ ತೋಳುಗಳಿಂದ ಸಮುದ್ರವನ್ನು ಕಲಕುತ್ತಿರಲು ಪಾತಾಳದಲ್ಲಿರುವ ರಾಕ್ಷಸರೆಲ್ಲರೂ ಸದ್ದುಮಾಡದೆ ಅಲ್ಲಿ ಇಲ್ಲಿ ಬಚ್ಚಿಟ್ಟು ಕೊಳ್ಳುವರು.

೧೩೫. ಆ ಅರ್ಜುನನು ಸಮುದ್ರವನ್ನು ಕಲಕುತ್ತಿರಲು ಮಂದರದಿಂದ ಮತ್ತೊಂದು ಬಾರಿ ಸಮುದ್ರವನ್ನು ಕಡೆಯುವರೋ ಏನೋ ಎಂದು ಸಂದೇಹಿಸುತ್ತ ಭೂಮಿಯನ್ನು ಹೊತ್ತಿರುವ ಸರ್ಪಗಳು ತಲೆಯನ್ನು ಅಲ್ಲಾಡಿಸದೆ ಇರುವುವು.

೧೩೬-೧೩೭. ಈ ಶೂರನು ರಾವಣನ ಮೇಲೆ ಬಾಣಗಳನ್ನು ಬಿಟ್ಟನು. ಆ ಕೊಬ್ಬಿದ ರಾವಣನ ಮೇಲೆ ಐದು ಬಾಣಗಳನ್ನು ಬಿಟ್ಟು ಲಂಕೆಯಲ್ಲಿ ಅವನನ್ನು ಸೈನ್ಯಸಹಿತ ಜ್ಞಾನತಪ್ಪಿಸಿ ಗೆದ್ದು, ಹೆಗ್ಗಟ್ಟು ಮುರಿಕಟ್ಟಿ ಮಾಹಿಷ್ಮತಿಯಲ್ಲಿ ಕಾರಾಗಾರ ದಲ್ಲಿಟ್ಟಿದ್ದನು.

ತತೋ ಗತೋಽಹಂ ತತ್ರಾಶು ಅರ್ಜುನಂ ಸಂಪ್ರಸಾದಯೇ ।
ಮುಮೋಚ ಪೌತ್ರಂ ಮೇ ರಾಜನ್ಸ್ಕೃತ್ವಾ ಸಖ್ಯಂ ತು ಪಾರ್ಥಿವಃ ॥ ೧೩೮ ॥

ತಸ್ಯ ಬಾಹುಸಹಸ್ರಸ್ಯ ಬಭೂವ ಜ್ಯಾತಲಸ್ವನಃ ।
ಯುಗಾಂತಾಗ್ನಿಪ್ರವೃತ್ತಸ್ಯ ರಾಜ್ಞೋ ಜ್ಯಾತಲನಿಸ್ವನಃ ॥ ೧೩೯ ॥

ಅಹೋ ಬತ ವಿಧೇರ್ವೀರ್ಯಂ ಭಾರ್ಗವಃ ಸ ಯದಾಚ್ಛಿನತ್ ।
ಮೃಧೇ ಸಹಸ್ರಂ ಬಾಹೂನಾಂ ಹೈಮಂ ತಾಲವನಂ ಯಥಾ ॥ ೧೪೦ ॥

ಯಂ ವಸಿಷ್ಠಸ್ತು ಸಂಕ್ರುದ್ಧೋ ಹ್ಯರ್ಜುನಂ ಶಪ್ತವಾನ್ ಪ್ರಭುಃ ।
ಯಸ್ಮಾದ್ವನಂ ಪ್ರದಗ್ಧಂ ತೇ ವಿಶ್ರುತಂ ಮಮ ಹೈಹಯ ॥ ೧೪೧ ॥

ತಸ್ಮಾತ್ತೇ ದುಷ್ಕೃತಂ ಕರ್ಮ ಕೃತಮನ್ಯೋ ಹನಿಷ್ಯತಿ ।
ಛಿತ್ವಾ ಬಾಹುಸಹಸ್ರಂ ತೇ ಪ್ರಮಥ್ಯ ತರಸಾ ಬಲೀ ॥ ೧೪೨ ॥

---

೧೩೮. ಅನಂತರ ನಾನು ಅಲ್ಲಿಗೆ ಜಾಗ್ರತೆಯಾಗಿ ಹೋಗಿ ಆ ಅರ್ಜುನನನ್ನು ಪ್ರಸನ್ನನನ್ನಾಗಿಮಾಡಿಕೊಂಡೆನು. ಅನಂತರ ಅರ್ಜುನನು ಅವನೊಡನೆ ಸ್ನೇಹಮಾಡಿ ಕೊಂಡು ನನ್ನ ಮೊಮ್ಮಗನನ್ನು ಬಿಟ್ಟುಬಿಟ್ಟನು.

೧೩೯. ಆ ಅರ್ಜುನನು ಸಾವಿರ ತೋಳುಗಳಿಂದ ಸಮ್ಪಾದಿಸುತ್ತಿರುವ ಮೌರ್ವಿಯ ಧ್ವನಿಯು ಯುಗಾಂತದಲ್ಲಿ ಹೊರಹೊರಟ ಅಗ್ನಿಯ ಧ್ವನಿಯಂತಿತ್ತು.

೧೪೦. ಆಹಾ ಅದೃಷ್ಟವನ್ನು ಏನೆಂದು ಹೇಳಲಿ ? ಅಂತಹ ಸಹಸ್ರ ಬಾಹು ಗಳನ್ನು ಯುದ್ಧದಲ್ಲಿ ಭಾರ್ಗವರಾಮನು ಚಿನ್ನದ ತಾಳವನದಂತೆ ಕತ್ತರಿಸಿದನು

೧೪೧-೧೪೨. ಆಗ ಕೋಪಗೊಂಡ ವಸಿಷ್ಠರು, ಎಲೈ ಅರ್ಜುನನೇ ನೀನು ಕೋಪಗೊಂಡು ನನ್ನ ಹೈಹಯರನ್ನು ಕೊಂದು ಕೆಟ್ಟಕೆಲಸವನ್ನು ಮಾಡಿದುದರಿಂದ ತಪಸ್ವಿಯಾದ ಬ್ರಾಹ್ಮಣನಾದ ಭಾರ್ಗವನು ನಿನ್ನನ್ನು ಕೊಲ್ಲುವನು ಎಂದು ಶಪಿಸಿದನು.

ತಪಸ್ವೀ ಬ್ರಾಹ್ಮಣಶ್ಚ ತ್ವಾಂ ವಧಿಷ್ಯತಿ ಸ ಭಾರ್ಗವಃ ।
ತಸ್ಯ ರಾಮಶ್ಚ ಹಂತಾಸೀನ್ಮುನಿಶಾಪೇನ ಧೀಮತಃ ॥ ೧೪೩ ॥

ತಸ್ಯ ಪುತ್ರಶತಂ ತ್ವಾಸೀತ್ಪಂಚ ತತ್ರ ಮಹಾರಥಾಃ ।
ಕೃತಾಸ್ತ್ರಾ ಬಲಿನಃ ಶೂರಾ ಧರ್ಮಾತ್ಮಾನೋ ಮಹಾವ್ರತಾಃ । ॥ ೧೪೪ ॥

ಶೂರಸೇನಶ್ಚ ಶೂರಶ್ಚ ಧೃಷ್ಟೋ ವೈ ಕೃಷ್ಣ ಏವ ಚ ।
ಜಯಧ್ವಜಃ ಸ ವೈ ಕರ್ತಾ ಅವಂತಿಶ್ಚ ನಿಶಾಪತಿಃ ॥ ೧೪೫ ॥

ಜಯಧ್ವಜಸ್ಯ ಪುತ್ರಸ್ತು ತಾಲಜಂಘೋ ಮಹಾಬಲಃ ।
ತಸ್ಯ ಪುತ್ರಶತಾನ್ಯೇವ ಕಾಲಜಂಘಾ ಇತಿ ಶ್ರುತಾಃ ॥ ೧೪೬ ॥

ತೇಷಾಂ ಪಂಚ ಕುಲಾನ್ಯೇವ ಹೈಹಯಾನಾಂ ಮಹಾತ್ಮನಾಂ ।
ವೀತಿಹೋತ್ರಶ್ಚ ಸಂಜಾತೋ ಭೋಜಶ್ಚಾವಂತಯಸ್ತಥಾ ॥ ೧೪೭ ॥

ತುಂಡಿಕೇರಾಶ್ಚ ವಿಖ್ಯಾತಾಸ್ತಾಲಜಂಘಾಶ್ಚ ಕೀರ್ತಿತಾಃ ।
ವೀತಿಹೋತ್ರಸುತಶ್ಚಾಪಿ ಅನಂತೋನಾಮ ವೀರ್ಯವಾನ್ ॥ ೧೪೮ ॥

---

೧೪೩. ಆ ಶೂರನಾದ ಅರ್ಜುನನನ್ನು ಮುನಿಯ ಶಾಪದಿಂದ ಭಾರ್ಗವ ರಾಮನು ಕೊಂದನು.

೧೪೪. ಆ ಕಾರ್ತವೀರ್ಯನಿಗೆ ನೂರುಜನ ಮಕ್ಕಳಾದರು. ಅವರಲ್ಲಿ ಐವರು ಮಾತ್ರ ಮಹಾರಥರೂ, ಅಸ್ತ್ರಜ್ಞರೂ, ಬಲಿಷ್ಠರೂ, ಶೂರರೂ, ಧರ್ಮಿಷ್ಠರೂ ಆಗಿದ್ದರು.

೧೪೫. ಶೂರಸೇನ, ಶೂರ, ಧೃಷ್ಟ, ಕೃಷ್ಣ ಜಯಧ್ವಜ, ಅವಂತಿ, ನಿಶಾಪತಿ ಎಂಬುವರು ಇವರಲ್ಲಿ ಪ್ರಸಿದ್ಧರು.

೧೪೬. ಜಯಧ್ವಜನಿಗೆ ತಾಳಜಂಘನೆಂಬ ಬಲಿಷ್ಠನಾದ ಮಗನಾದನು. ಆ ತಾಳಜಂಘನಿಗೆ ನೂರುಜನ ಮಕ್ಕಳಾದರು. ಅವರಿಗೆ ತಾಳಜಂಘರೆಂದು ಹೆಸರು.

೧೪೭-೧೪೮. ಆ ಹೈಹಯರ ಕುಲಗಳು ಐದಾದವು. ವೀತಿಹೋತ್ರ, ಸಂಜಾತ ಭೋಜ, ಅವಂತಿ, ತುಂಡೀಕೇಶ ಎಂಬದಾಗಿ ಆ ಐದೂ ಹೆಸರುಗೊಂಡವು. ಇವರೆಲ್ಲರಿಗೂ ತಾಳಜಂಘರೆಂದು ಹೆಸರು. ವೀತಿಹೋತ್ರನಿಗೆ ಅನಂತನೆಂಬ ಪರಾಕ್ರಮಿಯಾದ ಮಗನಾದನು.

ದುರ್ಜಯಸ್ತಸ್ಯ ಪುತ್ರೋಽಭೂತ್ಸ ಚೈವಾಮಿತ್ರಕರ್ಷಣಃ ।
ಸದ್ಭಾವೇನ ಮಹಾರಾಜಃ ಪ್ರಜಾ ಧರ್ಮೇಣ ಪಾಲಯನ್ ॥ ೧೨೯ ॥

ಕಾರ್ತವೀರ್ಯಾರ್ಜುನೋ ನಾಮ ರಾಜಾ ಬಾಹುಸಹಸ್ರವಾನ್ ।
ಯೇನ ಸಾಗರಪರ್ಯಂತಾ ಧನುಷಾ ನಿರ್ಜಿತಾ ಮಹೀ ॥ ೧೩೦ ॥

ಯಸ್ತಸ್ಯ ಕೀರ್ತಯೇನ್ನಾಮ ಪ್ರಾತುರುತ್ಥಾಯ ಮಾನವಃ ।
ನ ತಸ್ಯ ವಿತ್ತನಾಶಃ ಸ್ಯಾನ್ನಷ್ಟಂ ಚ ಲಭತೇ ಪುನಃ ॥ ೧೩೧ ॥

ಕಾರ್ತವೀರ್ಯಸ್ಯ ಯೋ ಜನ್ಮ ಕಥಯೇದಿಹ ಧೀಮತಃ ।
ಇಷ್ಟ್ವಾ ಯಜ್ಞಾನ್ಯಥಾ ದಾತಾ ಸ್ವರ್ಗಲೋಕೇ ಮಹೀಯತೇ ॥ ೧೩೨ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ
ಯದುವಂಶಕೀರ್ತನಂ ನಾಮ
ದ್ವಾದಶೋಽಧ್ಯಾಯಃ.

---

೧೨೯. ಅನಂತನಿಗೆ ದುರ್ಜಯನೆಂಬ ಮಗನು. ಅವನಿಗೆ ಅಮಿತ್ರಕರ್ಷಣನೆಂದೂ ಹೆಸರು. ಆತನು ಪ್ರಜೆಗಳನ್ನು ಒಳ್ಳೆಯಭಾವದಿಂದಲೂ, ಧರ್ಮದಿಂದಲೂ ಪಾಲಿಸುತ್ತಿದ್ದನು.

೧೩೦. ಸಮುದ್ರಮೇಖಲೆಯಾದ ಭೂಮಿಯನ್ನು ಧನುಸ್ಸಿನಿಂದ ಜಯಿಸಿದ ಕಾರ್ತವೀರ್ಯಾರ್ಜುನನು ಸಾವಿರ ತೋಳುಗಳುಳ್ಳವನಾಗಿದ್ದನು.

೧೩೧. ಆ ಕಾರ್ತವೀರ್ಯಾರ್ಜುನನ ಹೆಸರನ್ನು ಬೆಳಗ್ಗೆ ಎದ್ದು ಸ್ಮರಿಸಿದರೆ ಆ ಮನುಷ್ಯನಿಗೆ ಧನನಾಶವಾಗುವುದಿಲ್ಲ. ಮತ್ತು ಹೋದ ಪದಾರ್ಥವು ಸಿಕ್ಕುತ್ತದೆ.

೧೩೨. ಜ್ಞಾನಿಯಾದ ಕಾರ್ತವೀರ್ಯನ ಜನ್ಮವನ್ನು ಯಾವನು ಹೇಳುತ್ತಿರುವನೋ ಅವನು ಯಜ್ಞಗಳನ್ನು ಮಾಡಿ ದಾನಗಳನ್ನು ಮಾಡುತ್ತಾ ಸ್ವರ್ಗಲೋಕದಲ್ಲಿ ಸುಖಿಸುತ್ತಾನೆ.

ಇಲ್ಲಿಗೆ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ಯದುವಂಶಕೀರ್ತನವೆಂಬ
ಹನ್ನೆರಡನೆಯ ಅಧ್ಯಾಯವು ಮುಗಿದುದು.

---

॥ ಶ್ರೀಃ ॥

# ಅಥ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ತ್ರಯೋದಶೋಽಧ್ಯಾಯಃ

॥ ಪುಲಸ್ತ್ಯ ಉವಾಚ ॥

ಕ್ರೋಷ್ಟೋಃ ಶೃಣುಷ್ವ ರಾಜೇಂದ್ರ ವಂಶಮುತ್ತಮಪೂರುಷಂ ।
ಯಸ್ಯಾನ್ವವಾಯೇ ಸಂಭೂತೋ ವಿಷ್ಣುರ್ವೃಷ್ಣಿಕುಲೋದ್ವಹಃ ॥ ೧ ॥

ಕ್ರೋಷ್ಟೋರೇವಾಭವತ್ಪುತ್ರೋ ವೃಜನೀವಾನ್ಮಹಾಮನಾಃ ।
ತಸ್ಯ ಪುತ್ರೋಽಭವತ್ಸ್ವಾತೀ ಕುಶಂಕುಸ್ತತ್ಸುತೋಽಭವತ್ ॥ ೨ ॥

ಕುಶಂಕೋರಭವತ್ಪುತ್ರೋ ನಾಮ್ನಾ ಚಿತ್ರರಥೋಽಸ್ಯ ತು ।
ಶಶಬಿಂದುರಿತಿ ಖ್ಯಾತಶ್ಚಕ್ರವರ್ತೀ ಬಭೂವ ಹ ॥ ೩ ॥

---

## ಹದಿಮೂರನೆಯ ಅಧ್ಯಾಯವು.

೧. ಪುಲಸ್ತ್ಯನು ಹೇಳಿದನು:—ಯಾವನ ವಂಶದಲ್ಲಿ ಶ್ರೀ ವಿಷ್ಣುವು ಹುಟ್ಟಿ ವೃಷ್ಣಿಯ ಕುಲವನ್ನು ಉದ್ಧರಿಸಿದನೋ ಅಂತಹ ಕ್ರೋಷ್ಟುವಿನ ಉತ್ತಮವಾದ ವಂಶವನ್ನು ಹೇಳುತ್ತೇನೆ, ಕೇಳು.

೨. ಕ್ರೋಷ್ಟುವಿಗೆ ವೃಜ್ಯನೀ ಎಂಬುವನು ಒಬ್ಬ ಮಗನಾದನು. ಆ ವೃಜನಿಗೆ ಸ್ವಾತಿಯೆಂಬ ಮಗನಾದನು. ಆ ಸ್ವಾತಿಗೆ ಕುಶಂಕು ಎಂಬುವನು ಹುಟ್ಟಿದನು.

೩. ಆ ಕುಶಂಕುವಿಗೆ ಚಿತ್ರರಥನೂ, ಚಿತ್ರರಥನಿಗೆ ಶಶಬಿಂದುವೂ ಮಕ್ಕಳಾದರು. ಆ ಶಶಬಿಂದುವು ಚಕ್ರವರ್ತಿಯಾದನು.

ಅತ್ರಾನುವಂಶಶ್ಲೋಕೋಽಯಂ ಗೀತಸ್ತಸ್ಮಿನ್ಪುರಾಽಭವತ್ ।
ಶಶಬಿಂದೋಸ್ತು ಪುತ್ರಾಣಾಂ ಶತಾನಾಮಭವಚ್ಛತಂ ॥ ೪ ॥

ಧೀಮತಾಂ ಚಾರುರೂಪಾಣಾಂ ಭೂರಿದ್ರವಿಣತೇಜಸಾಂ ।
ತೇಷಾಂ ಶತಪ್ರಧಾನಾನಾಂ ಪೃಥುಸಾಹ್ವಾ ಮಹಾಬಲಾಃ ॥ ೫ ॥

ಪೃಥುಶ್ರವಾಃ ಪೃಥುಯಶಾಃ ಪೃಥುತೇಜಾಃ ಪೃಥೂದ್ಭವಃ ।
ಪೃಥುಕೀರ್ತಿಃ ಪೃಥುಮತೀ ರಾಜಾನಃ ಶಾಶಬಿಂದವಃ ॥ ೬ ॥

ಶಂಸಂತಿ ಚ ಪುರಾಣಜ್ಞಾಃ ಪೃಥುಶ್ರವಸಮುತ್ತಮಂ ।
ತತಶ್ಚಾಸ್ಯಾಭವತ್ಪುತ್ರ ಉಶನಾ ಶತ್ರುತಾಪನಃ ॥ ೭ ॥

ಪುತ್ರಶ್ಚೋಶನಸಸ್ತಸ್ಯ ಶಿನೇಯುರ್ನಾಮ ಸತ್ತಮಃ ।
ಆಸೀಚ್ಛಿನೇಯೋಃ ಪುತ್ರೋ ಯಃ ಸ ರುಕ್ಮಕವಚೋ ಮತಃ ॥ ೮ ॥

ನಿಹತ್ಯ ರುಕ್ಮಕವಚಃ ಪರಾನೀಕವಿನಾಶನಃ ।
ಧನ್ವಿನೋ ವಿವಿಧೈರ್ಬಾಣೈಶ್ಚಾವಾಪ್ಯ ಪೃಥಿವೀಮಿಮಾಂ ॥ ೯ ॥

---

೪. ಆ ಶಶಬಿಂದುವಿನ ಚರಿತ್ರೆಯನ್ನು ಎಲ್ಲರೂ ಹಾಡುತ್ತಿದ್ದರು. ಶಶಬಿಂದುವಿಗೆ ನೂರುಜನ ಮಕ್ಕಳಾದರು, ಆ ನೂರು ಜನಕ್ಕೂ ನೂರು ಜನ ಮಕ್ಕಳಾದರು.

೫. ಬುದ್ಧಿವಂತರೂ, ಸುಂದರರೂ, ಬಲಶಾಲಿಗಳೂ, ಹಣವಂತರೂ ಆದ ಆ ನೂರು ಜನಗಳಲ್ಲಿ ಪೃಥುವೆಂಬ ಆರೀತಿಯ ಹೆಸರುಳ್ಳವರು ಮಹಾಬಲಿಷ್ಠರು. ಅವರು ಶಶಬಿಂದುವಿನ ಮಕ್ಕಳು.

೬. ಪೃಥುಶ್ರವ, ಪೃಥುಯಶ, ಪೃಥುತೇಜ, ಪೃಥೂದ್ಭವ, ಪೃಥುಕೀರ್ತಿ, ಪೃಥುಮತಿ ಇವರೇ ಶಶಬಿಂದುವಿನ ಮಕ್ಕಳಲ್ಲಿ ಮುಖ್ಯರು.

೭. ಪುರಾಣಜ್ಞರು ಪೃಥುಶ್ರವಸನನ್ನು ಶೂರನೆಂದು ಹೊಗಳುತ್ತಾರೆ. ಅನಂತರದ ಆ ಪೃಥುಶ್ರವಸನಿಗೆ ಉಶನಸನೆಂಬ ಶೂರನಾದ ಮಗನಾದನು.

೮. ಉಶನಸನಿಗೆ ಶಿನೇಯುವೆಂಬ ಮಗನೂ, ಆ ಶಿನೇಯುವಿಗೆ ರುಕ್ಮನೆಂಬ ಮಗನೂ ಆದರು.

೯-೧೦. ಆ ರುಕ್ಮಕವಚನು ನಾನಾಬಗೆಯಾದ ಬಾಣಗಳಿಂದ ಶೂರರನ್ನು

**ಅಶ್ವಮೇಧೇ ದದೌ ರಾಜಾ ಬ್ರಾಹ್ಮಣೇಭ್ಯಃ ಸದಕ್ಷಿಣಾಂ ।**
**ಯಜ್ಞೇ ಚ ರುಕ್ಮಕವಚಃ ಕದಾಚಿತ್ಪರವೀರಹಾ ॥ ೧೦ ॥**

**ಜಜ್ಞಿರೇ ಪಂಚ ಪುತ್ರಾಸ್ತು ಮಹಾವೀರ್ಯಪರಾಕ್ರಮಾಃ ।**
**ರುಕ್ಮೇಷುಃ ಪೃಥುರುಕ್ಮಶ್ಚ ಜ್ಯಾಮಘಃ ಪರಿಘೋ ಹರಿಃ ॥ ೧೧ ॥**

**ಪರಿಘಂ ಚ ಹರಿಂ ಚೈವ ವಿದೇಹೇಽಸ್ಥಾಪಯತ್ಪಿತಾ ।**
**ರುಕ್ಮೇಷುರಭವದ್ರಾಜಾ ಪೃಥುರುಕ್ಮಸ್ತದಾಶ್ರಯಃ ॥ ೧೨ ॥**

**ತಾಭ್ಯಾಂ ಪ್ರವ್ರಾಜಿತೋ ರಾಜಾ ಜ್ಯಾಮಘೋಽವಸದಾಶ್ರಮೇ ।**
**ಪ್ರಶಾಂತಃ ಸ್ವಾಶ್ರಮಸ್ಥಸ್ತು ಬ್ರಾಹ್ಮಣೇನಾವಬೋಧಿತಃ ॥ ೧೩ ॥**

**ಜಗಾಮ ಧನುರಾದಾಯ ದೇಶಮನ್ಯಂ ಧ್ವಜೀ ರಥೀ ।**
**ನರ್ಮದಾತಟೆ ಏಕಾಕೀ ಕೇವಲಂ ವೃತ್ತಿಕರ್ಷಿತಃ ॥ ೧೪ ॥**

**ಋಕ್ಷವಂತಂ ಗಿರಿಂ ಗತ್ವಾ ಭುಕ್ತವನ್ಯ ಉಪಾವಿಶತ್ ।**
**ಜ್ಯಾಮಘಸ್ಯಾಭವದ್ಭಾರ್ಯಾ ಶೈಬ್ಯಾ ಪರಿಣತಾ ಸತೀ ॥ ೧೫ ॥**

---

ಜಯಿಸಿ, ಈ ಭೂಮಿಯನ್ನೆಲ್ಲಾ ಜಯಿಸಿ ಅಶ್ವಮೇಧಯಾಗವನ್ನು ಮಾಡಿ ಬ್ರಾಹ್ಮಣರಿಗೆ ಆ ಯಜ್ಞದಲ್ಲಿ ದಕ್ಷಿಣೆಯನ್ನೂ ಇನ್ನೂ ಬೇಕಾದುದನ್ನೂ ಕೊಟ್ಟನು.

೧೧-೧೨. ಈ ರುಕ್ಮಕವಚನಿಗೆ ರುಕ್ಮೇಷು, ಪೃಥುರುಕ್ಮ, ಜ್ಯಾಮಘ, ಪರಿಘ, ಹರಿ, ಎಂಬದಾಗಿ ಐವರು ಮಕ್ಕಳಾದರು. ಅವರು ಬಹು ಪರಾಕ್ರಮಿಗಳು. ಆ ರುಕ್ಮನು ಪರಿಘನನ್ನೂ, ಹರಿಯನ್ನೂ, ವಿದೇಹದಲ್ಲಿರಿಸಿದನು. ರುಕ್ಮೇಷುವು ರಾಜನಾಗಿಯೂ ಪೃಥುರುಕ್ಮನು ಅವನನ್ನು ಆಶ್ರಯಿಸಿಕೊಂಡೂ ಇದ್ದರು.

೧೩-೧೪. ರುಕ್ಮೇಷುವೂ, ಪೃಥುರುಕ್ಮನೂ ಸೇರಿಕೊಂಡು ಜ್ಯಾಮಘನನ್ನು ಓಡಿಸಿದರು. ಆತನು ಸನ್ಯಾಸವನ್ನು ತೆಗೆದುಕೊಂಡು ಆಶ್ರಮದಲ್ಲಿದ್ದನು. ಆತನು ಶಾಂತನಾಗಿ ತನ್ನ ಆಶ್ರಮದಲ್ಲಿದ್ದುಕೊಂಡಿರಲು ಒಬ್ಬ ಬ್ರಾಹ್ಮಣನು ಆತನಿಗೆ ಬುದ್ಧಿವಾದವನ್ನು ಹೇಳಿದನು. ಆ ರೀತಿ ಬುದ್ಧಿಯನ್ನು ಹೇಳಲು, ಧನಸ್ಸನ್ನು ತೆಗೆದುಕೊಂಡು ರಥದಲ್ಲಿ ಕುಳಿತು ಬೇರೆಯ ದೇಶಕ್ಕೆ ಹೋದನು. ನರ್ಮದಾನದಿಯ ದಡದಲ್ಲಿ ಒಬ್ಬಂಟಿಗನಾಗಿ ತನ್ನ ವೃತ್ತಿಯಿಂದ ಕೀರ್ತಿಯನ್ನು ಹೊಂದಿದ್ದನು.

೧೫. ಋಕ್ಷವಂತವೆಂಬ ಬೆಟ್ಟದಲ್ಲಿ ಭುಕ್ತವನ್ಯವೆಂಬಲ್ಲಿ ನಿಂತನು. ಆ ಜ್ಯಾಮಘನಿಗೆ ಶೈಬ್ಯಳೆಂಬ ಹೆಂಡತಿಯಿದ್ದಳು.

ಅಪುತ್ರೋಽಪ್ಯಭವದ್ರಾಜಾ ಭಾರ್ಯಾಮನ್ಯಾಂ ನ ವಿಂದತಿ ।
ತಸ್ಯಾಽಸೀದ್ವಿಜಯೋ ಯುದ್ಧೇ ತತ್ರ ಕನ್ಯಾಮವಾಪ ಸಃ ॥ ೧೬ ॥

ಭಾರ್ಯಾಮುವಾಚ ಸಂತ್ರಾಸಾತ್ಸ್ನುಷೇಯಂ ತೇ ಶುಚಿಸ್ಮಿತೇ ।
ಏವಮುಕ್ತಾಽಬ್ರವೀದೇನಂ ಕಸ್ಯ ಕೇಯಂ ಸ್ನುಷೇತಿ ವೈ ॥ ೧೭ ॥

॥ ರಾಜೋವಾಚ ॥

ಯಸ್ತೇ ಜನಿಷ್ಯತೇ ಪುತ್ರಸ್ತಸ್ಯ ಭಾರ್ಯಾ ಭವಿಷ್ಯತಿ ।
ತಸ್ಯಾಃ ಸಾ ತಪಸೋಗ್ರೇಣ ಕನ್ಯಾಯಾಃ ಸಮಸೂಯತ ॥ ೧೮ ॥

ಪುತ್ರಂ ವಿದರ್ಭಂ ಸುಭಗಂ ಶೈಬ್ಯಾ ಪರಿಣತಾ ಸತೀ ।
ರಾಜಪುತ್ರೌ ಸುವಿದ್ವಾಂಸೌ ಸ್ನುಷಾಯಾಂ ಕ್ರಥಕೈಶಿಕೌ ॥ ೧೯ ॥

ಲೋಮಪಾದಂ ತೃತೀಯಂ ತು ಪುತ್ರಂ ಪರಮಧಾರ್ಮಿಕಂ ।
ಪಶ್ಚಾದ್ವಿದರ್ಭೋಽಜನಯಚ್ಛೂರಾನ್ ರಣವಿಶಾರದಾನ್ ॥ ೨೦ ॥

---

೧೬. ಆ ರಾಜನಿಗೆ ಮಕ್ಕಳೇ ಆಗಲಿಲ್ಲ. ಬೇರೆ ಮದುವೆಯನ್ನು ಮಾಡಿಕೊಳ್ಳಲಿಲ್ಲ ಆತನು ಜೈತ್ರಯಾತ್ರೆ ಮಾಡುತ್ತಿರುವಾಗ ಅವನಿಗೆ ಅಲ್ಲಿ ಒಂದು ಕನ್ಯೆಯು ಸಿಕ್ಕಿತು.

೧೭. ಆತನು ಹೆಂಡತಿಯನ್ನು ಕುರಿತು ಸಡಗರದಿಂದ ಎಲೈ ಶುಚಿಸ್ಮಿತೆಯೇ, ಈಕೆಯು ನಿನ್ನ ಸೊಸೆಯೆಂದನು. ಹೀಗೆನ್ನಲು ಆಕೆಯು ಈಕೆ ಯಾರು ? ಯಾರಿಗೆ ಸೊಸೆಯೆಂದಳು.

೧೮-೧೯. ರಾಜನು ಹೇಳಿದನು:—ನಿನಗೆ ಹುಟ್ಟುತಕ್ಕ ಮಗನಿಗೆ ಹೆಂಡತಿಯಾಗುತ್ತಾಳೆ ಎಂದನು. ಆಗ ಆಕೆಯು ಉಗ್ರವಾದ ತಪಸ್ಸನ್ನು ಮಾಡಿ ಒಂದು ಗಂಡು ಮಗುವನ್ನು ಹೆತ್ತು, ಅವನಿಗೆ ಆಕೆಯನ್ನು ಮದುವೆಯನ್ನು ಮಾಡಿದಳು. ಅವಳಿಗೆ ಕ್ರಥ, ಕೈಶಿಕರೆಂಬ ಇಬ್ಬರು ಮಕ್ಕಳಾದರು. ಮತ್ತು ಲೋಮಪಾದನೆಂಬ ಧರ್ಮಿಷ್ಠನಾದ ಒಬ್ಬ ಮಗನೂ ಆದನು.

೨೦. ಅನಂತರ ಆ ವಿದರ್ಭನಿಗೆ ಶೂರರೂ ಯುದ್ಧವಿಶಾರದರೂ ಆದ ಮಕ್ಕಳು ಹುಟ್ಟಿದರು.

ಲೋಮಪಾದಾತ್ಮಜೋ ಬಭ್ರುರ್ಹೇತಿಸ್ತಸ್ಯ ತು ಚಾತ್ಮಜಃ ।
ಕೈಶಿಕಸ್ಯ ಚಿದಿಃ ಪುತ್ರಸ್ತಸ್ಮಾಚ್ಚೈದ್ಯಾ ನೃಪಾಃ ಸ್ಮೃತಾಃ ॥ ೨೦ ॥

ಕ್ರಥೋ ವಿದರ್ಭಪುತ್ರಸ್ತು ಕುಂತಿಸ್ತಸ್ಯಾತ್ಮಜೋಽಭವತ್ ।
ಕುಂತೇರ್ಧೃಷ್ಟಸ್ತತೋ ಜಜ್ಞೇ ಧೃಷ್ಟಾತ್ಪೃಷ್ಟಃ ಪ್ರತಾಪವಾನ್ ॥ ೨೨ ॥

ಪೃಷ್ಟಸ್ಯ ಪುತ್ರೋ ಧರ್ಮಾತ್ಮಾ ನಿರ್ವೃತಿಃ ಪರವೀರಹಾ ।
ದಾಶಾರ್ಹೋ ನಿರ್ವೃತೇಃ ಪುತ್ರೋ ನಾಮ್ನಾ ಸ ತು ವಿದೂರಥಃ ॥ ೨೩ ॥

ದಾಶಾರ್ಹಪುತ್ರೋ ವ್ಯೋಮಸ್ತು ವ್ಯೋಮಾಜ್ಜೀಮೂತ ಉಚ್ಯತೇ ।
ಜೀಮೂತಪುತ್ರೋ ವಿಕಲಸ್ತಸ್ಯ ಭೀಮರಥಃ ಸುತಃ ॥ ೨೪ ॥

ಅಥ ಭೀಮರಥಸ್ಯಾಪಿ ಪುತ್ರೋ ನವರಥಃ ಕಿಲ ।
ತಸ್ಯ ಚಾಸೀದ್ದೃಢರಥಃ ಶಕುನಿಸ್ತಸ್ಯ ಚಾತ್ಮಜಃ ॥ ೨೫ ॥

ತಸ್ಮಾತ್ಕರಂಭಸ್ತಸ್ಮಾಚ್ಚ ದೇವರಾತೋ ಬಭೂವ ಹ ।
ದೇವಕ್ಷತ್ರೋಽಭವದ್ರಾಜಾ ದೈವರಾತಿರ್ಮಹಾಯಶಾಃ ॥ ೨೬ ॥

---

೨೦. ಲೋಮಪಾದನಿಗೆ ಬಭ್ರುವೂ, ಬಭ್ರುವಿಗೆ ಹೇತಿಯೂ, ಮಕ್ಕಳಾದರು. ಕೈಶಿಕನಿಗೆ ಚಿದಿ ಎಂಬವನು ಮಗನಾದನು. ಅವನಿಂದ ಹುಟ್ಟಿದವರೇ ಚೈದ್ಯರೆನಿಸಿಕೊಂಡರು.

೨೨-೨೩. ವಿದರ್ಭನಿಗೆ ಕ್ರಥನೂ, ಕ್ರಥನಿಗೆ ಕುಂತಿಯೂ, ಕುಂತಿಗೆ ಧೃಷ್ಟನೂ, ಧೃಷ್ಟನಿಗೆ ಪೃಷ್ಟನೂ, ಪೃಷ್ಟನಿಗೆ ನಿರ್ವೃತಿಯೂ, ನಿರ್ವೃತಿಗೆ ದಾಶಾರ್ಹನೂ ಮಕ್ಕಳಾದರು. ಈ ದಾಶಾರ್ಹನಿಗೆ ವಿದೂರಥನೆಂದು ಮತ್ತೊಂದು ಹೆಸರು.

೨೪-೨೬. ದಾಶಾರ್ಹನಿಗೆ ವ್ಯೋಮನೂ, ವ್ಯೋಮನಿಗೆ ಜೀಮೂತನೂ, ಜೀಮೂತನಿಗೆ ವಿಕಲನೂ, ವಿಕಲನಿಗೆ ಭೀಮರಥನೂ; ಭೀಮರಥನಿಗೆ ನವರಥನೂ, ನವರಥನಿಗೆ ದೃಢರಥನೂ, ದೃಢರಥನಿಗೆ ಶಕುನಿಯೂ ಶಕುನಿಗೆ ಕರಂಭನೂ, ಕರಂಭನಿಗೆ ದೇವರಾತನೂ, ದೇವರಾತನಿಗೆ ದೇವಕ್ಷತ್ರನೂ ಮಕ್ಕಳಾದರು.

ದೇವಗರ್ಭಸಮೋ ಜಜ್ಞೇ ದೇವಕ್ಷತ್ರಸ್ಯ ನಂದನಃ ।
ಮಧುರ್ನಾಮ ಮಹಾತೇಜಾ ಮಧೋಃ ಕುರುವಶಸ್ತಥಾ ॥ ೨೭ ॥

ಆಸೀತ್ಕುರುವಶಾತ್ಪುತ್ರಃ ಪುರುಷಃ ಪುರುಷೋತ್ತಮಃ ।
ಜಂತುರ್ಜಜ್ಞೇಽಥ ವೈದರ್ಭ್ಯಾಂ ಭದ್ರಸತ್ಯಾಂ ಪುರುದ್ವಸುಃ ॥ ೨೮ ॥

ವೇತ್ರಕೀ ತ್ವಭವದ್ಭಾರ್ಯಾ ಜಂತೋಸ್ತಸ್ಯಾಂ ವ್ಯಜಾಯತ ।
ಸಾತ್ವತಃ ಸತ್ತ್ವಸಂಪನ್ನಃ ಸಾತ್ವತಾಂ ಕೀರ್ತಿವರ್ಧನಃ ॥ ೨೯ ॥

ಇಮಾಂ ವಿಸೃಷ್ಟಿಂ ವಿಜ್ಞಾಯ ಜ್ಯಾಮಘಸ್ಯ ಮಹಾತ್ಮನಃ ।
ಪ್ರಜಾವಾನೇತಿ ಸಾಯುಜ್ಯಂ ರಾಜ್ಞಃ ಸೋಮಸ್ಯ ಧೀಮತಃ ॥ ೩೦ ॥

ಸಾತ್ವತಾತ್ಸತ್ತ್ವಸಂಪನ್ನಾತ್ಕೌಶಲ್ಯಾ ಸುಷುವೇ ಸುತಾನ್ ।
ಭಜಿನಂ ಭಜಮಾನಂ ತು ದಿವ್ಯಂ ದೇವಾವೃಧಂ ನೃಪಂ ॥ ೩೧ ॥

ಅಂಧಕಂ ಚ ಮಹಾಭೋಜಂ ವೃಷ್ಣಿಂ ಚ ತದನಂತರಂ ।
ತೇಷಾಂ ಸರ್ಗಾಶ್ಚ ಚತ್ವಾರೋ ವಿಸ್ತಾರೇಣೈವ ತಾಂಚ್ಛೃಣು ॥ ೩೨ ॥

ಭಜಮಾನಸ್ಯ ಸೃಂಜಯ್ಯಾಂ ಭಾಜನಾಮಾ ಸುತೋಽಭವತ್ ।
ಸೃಂಜಯ್ಯಸ್ಯ ಸುತಾಯಾಂ ತು ಭಾಜಕಾಸ್ತು ತತೋಽಭವನ್ ॥ ೩೩ ॥

---

೨೭-೨೮. ದೇವಕ್ಷತ್ರನಿಗೆ ದೇವಗರ್ಭನೂ, ದೇವಗರ್ಭನಿಗೆ ಮಧುವೂ, ಮಧುವಿಗೆ ಕುರುವಶನೂ, ಕುರುವಶನಿಗೆ ಜಂತುವೂ, ಪುರುದ್ವಸುವೂ ಮಕ್ಕಳಾದರು.

೨೯ ಜಂತುವಿಗೆ ಚೈತ್ರಕೀ ಎಂಬುವಳು ಹೆಂಡತಿಯಾದಳು. ಆ ಜಂತುವಿಗೆ ಕೀರ್ತಿಶಾಲಿಯಾದ ಸಾತ್ವನು ಹುಟ್ಟಿದನು.

೩೦-೩೨. ಮಹಿಮವಂತನಾದ ಜ್ಯಾಮಘನ ಈ ಸೃಷ್ಟಿಯನ್ನು ಕೇಳಿದವನು ಪುತ್ರವಂತನಾಗಿ ಸೋಮನ ಸಾಯುಜ್ಯವನ್ನು ಹೊಂದುವನು. ಸಾತ್ವತನಿಗೆ ಕೌಸಲ್ಯೆ ಯಲ್ಲಿ ಭಜಿ, ಭಜಮಾನ, ದೇವಾವೃಧ, ಅಂಧಕ, ವೃಷ್ಣಿ ಎಂಬುವರು ಮಕ್ಕಳಾದರು. ಅವರಿಗೆ ನಾಲ್ಕು ವಂಶಗಳಾದವು. ಅದನ್ನು ವಿಸ್ತಾರವಾಗಿ ಹೇಳುತ್ತೇನೆ ಕೇಳು.

೩೩-೩೪. ಭಜಮಾನನಿಗೆ ಸೃಂಜಯಳಲ್ಲಿ, ಭಾಜನೆಂಬುವನು ಮಗನಾದನು. ಆ ಭಾಜನಿಗೆ ಆತನ ಮಗಳಲ್ಲಿ ಭಾಜಕರೆಂಬುವರು ಹುಟ್ಟಿದರು. ಆ ಭಾಜನಿಗೆ

ತಸ್ಯ ಭಾಜಸ್ಯ ಭಾರ್ಯೇ ದ್ವೇ ಸುಷುವಾತೇ ಸುತಾನ್ಬಹೂನ್ ।
ವಿನಯಂ ಕರುಣಂ ಚೈವ ವೃಷ್ಣಿಂ ಪರಪುರಂಜಯಂ ॥ ೩೪ ॥

ತೇ ಭಾಜಕಾಃ ಸ್ಮೃತಾ ಯಸ್ಮಾತ್ಸ್ವಜನಮಾನಾದ್ವಿಜಜ್ಞಿರೇ ।
ದೇವಾವೃಧಃ ಪೃಥುರ್ನಾಮ ಮಧೂನಾಂ ಮಿತ್ರವರ್ಧನಃ ॥ ೩೫ ॥

ಅಪುತ್ರಸ್ತ್ವಭವದ್ರಾಜಾ ಚಚಾರ ಪರಮಂ ತಪಃ ।
ಪುತ್ರಃ ಸರ್ವಗುಣೋಪೇತೋ ಮಮ ಭೂಯಾದಿತಿ ಸ್ಪೃಹನ್ ॥ ೩೬ ॥

ಸಂಯೋಜ್ಯ ಕೃಷ್ಣಮೇವಾಥ ಪರ್ಣಾಶಾಯಾ ಜಲಂ ಸ್ಪೃಶನ್ ।
ಸದೋಪಸ್ಪರ್ಶನಾತ್ತಸ್ಯ ಚಕಾರ ಪ್ರಿಯಮಾಪಗಾ ॥ ೩೭ ॥

ಕಲ್ಯಾಣಂ ಚರತಸ್ತಸ್ಯ ಶುಶೋಚ ನಿಮ್ನಗಾ ತತಃ ।
ಚಿಂತಯಾಥ ಪರೀತಾತ್ಮಾ ಜಗಾಮಾಥ ವಿನಿಶ್ಚಯಂ ॥ ೩೮ ॥

ಭೂತ್ವಾ ಗಚ್ಛಾಮ್ಯಹಂ ನಾರೀ ಯಸ್ಯಾಮೇವಂವಿಧಃ ಸುತಃ ।
ಜಾಯೇತ ತಸ್ಮಾದದ್ಯಾಹಂ ಭವಾಮ್ಯಸ್ಯ ಸುತಪ್ರದಾ ॥ ೩೯ ॥

---

ಇಬ್ಬರು ಹೆಂಡತಿಯರು. ಅವರಿಬ್ಬರಲ್ಲಿಯೂ ಬಹಳ ಜನ ಮಕ್ಕಳಾದರು. ವಿನಯ, ವರುಣ, ವೃಷ್ಣಿ, ಇವರು ಮುಖ್ಯರು. ಇವರಿಗೆ ಭಾಜಕರೆಂದು ಹೆಸರು.

೩೫-೩೬. ದೇವಾವೃಧನಿಗೆ ಪೃಥುವೆಂದು ಮತ್ತೊಂದು ಹೆಸರು, ಅವನು ಮಧುಗಳಿಗೆ ಮಿತ್ರನು. ಅವನಿಗೆ ಮಕ್ಕಳಿಲ್ಲದುದರಿಂದ ಉತ್ತಮನಾದ ಮಗನಾಗ ಬೇಕೆಂಬ ಆಸೆಯೆಂಬ ತಪಸ್ಸನ್ನು ಮಾಡಿದನು.

೩೭. ಶ್ರೀ ಹರಿಯನ್ನೇ ಧ್ಯಾನಮಾಡುತ್ತಾ ಒಣಗಿದ ತರಗನ್ನು ತಿಂದು ನೀರನ್ನು ಕುಡಿಯುತ್ತ ಇರುವ ಈ ದೇವಾವೃಧನಿಗೆ ಗಂಗೆಯು ಒಳ್ಳೆಯದನ್ನು ಮಾಡ ಬೇಕೆಂದು ಯೋಚಿಸಿದಳು.

೩೮-೩೯. ತಪಸ್ಸುಮಾಡುತ್ತಿರುವ ಈ ದೇವಾವೃಧನಿಗೆ ಒಳ್ಳೆಯದನ್ನು ಮಾಡಬೇಕೆಂದು ಯೋಚಿಸಿ ಆ ಗಂಗೆಯು ನಾನು ಹೆಂಗಸಾಗಿ ಹೋಗಿ ಅವನು ಯೋಚಿಸಿರುವ ಮಗನನ್ನು ಹೆರಬೇಕೆಂದು ಯೋಚಿಸಿದಳು.

ಅಥ ಭೂತ್ವಾ ಕುಮಾರೀ ಸಾ ಬಿಭ್ರತೀ ಪರಮಂ ವಪುಃ ।
ಜ್ಞಾಪಯಾಮಾಸ ರಾಜಾನಂ ತಾಮಿಯೇಷ ನೃಪಸ್ತತಃ ॥ ೪೦ ॥

ಅಥ ಸಾ ನವಮೇ ಮಾಸಿ ಸುಷುವೇ ಸರಿತಾಂ ವರಾ ।
ಪುತ್ರಂ ಸರ್ವಗುಣೋಪೇತಂ ಬಭ್ರುಂ ದೇವಾವೃಧಾತ್ಪರಂ ॥ ೪೧ ॥

ಅತ್ರ ವಂಶೇ ಪುರಾಣಜ್ಞಾ ಗಾಯಂತೀತಿ ಪರಿಶ್ರುತಂ ।
ಗುಣಾನ್ದೇವಾವೃಧಸ್ಯಾಥ ಕೀರ್ತಯಂತೋ ಮಹಾತ್ಮನಃ ॥ ೪೨ ॥

ಬಭ್ರುಃ ಶ್ರೇಷ್ಠೋ ಮನುಷ್ಯಾಣಾಂ ದೇವೈರ್ದೇವಾವೃಧಃ ಸಮಃ ।
ಷಷ್ಟಿಃ ಶತಂ ಚ ಪುರುಷಾಃ ಸಹಸ್ರಾಣಿ ಚ ಸಪ್ತತಿಃ ॥ ೪೩ ॥

ಏತೇಽಮೃತತ್ವಂ ಸಂಪ್ರಾಪ್ತಾ ಬಭ್ರೋರ್ದೇವಾವೃಧಾದಪಿ ।
ಯಜ್ಞದಾನತಪೋಧೀರೋ ಬ್ರಹ್ಮಣ್ಯಃ ಸುದೃಢವ್ರತಃ ॥ ೪೪ ॥

ರೂಪವಾಂಶ್ಚ ಮಹಾತೇಜಾ ಭೋಜೋಽತೋ ಮೃತಕಾವತೀಂ ।
ಶರಕಾಂತಸ್ಯ ದುಹಿತಾ ಸುಷುವೇ ಚತುರಃ ಸುತಾನ್ ॥ ೪೫ ॥

---

೪೦. ಆಗ ಆ ಗಂಗೆಯು ಒಳ್ಳೆಯ ಹುಡುಗಿಯಾಗಿ, ಸುಂದರಿಯಾಗಿ, ರಾಜನ ಒಳಗೆ ಬಂದು ಅವನಿಗೆ ಎಲ್ಲವನ್ನೂ ಹೇಳಿದಳು. ಅಂತೆಯೇ ರಾಜನು ಆಕೆಯನ್ನ ಅಪೇಕ್ಷಿಸಿದನು.

೪೧. ಅನಂತರ ಗರ್ಭವನ್ನು ಧರಿಸಿ ಒಂಬತ್ತು ತಿಂಗಳು ತುಂಬಲು ಉತ್ತಮನಾದ ಮಗನನ್ನು ಹೆತ್ತಳು.

೪೨. ಈ ವಂಶದಲ್ಲಿ ಪುರಾಣಜ್ಞರು, ದೇವಾವೃಧನ ಗುಣಗಳನ್ನು ವರ್ಣಿಸಿ ಹೇಳುತ್ತಾರೆ.

೪೩. ಮನುಷ್ಯರೊಳಗೆ ಬಭ್ರುವು ಶ್ರೇಷ್ಠನಾದವನು, ದೇವಾವೃಧನು ದೇವತೆಗಳಿಗೆ ಸಮಾನನು, ಒಂದು ಸಾವಿರದ ಆರನೂರ ಎಪ್ಪತ್ತು ಜನರು ಬಭ್ರುವಿನಿಂದಲೂ, ದೇವಾವೃಧನ ದೆಸೆಯಿಂದಲೂ ಖ್ಯಾತಿಯನ್ನು ಹೊಂದಿದರು.

೪೪-೪೫. ಯಜ್ಞದಲ್ಲಿ, ತಪಸ್ಸುಮಾಡುವುದರಲ್ಲಿ, ಬ್ರಹ್ಮಜ್ಞಾನದಲ್ಲಿ ದಕ್ಷನಾದ. ವ್ರತಗಳನ್ನು ಕ್ಲಿಷ್ಟವಾಗಿ ಮಾಡುವ ರೂಪವಂತನೂ, ತೇಜಸ್ವಿಯೂ. ಆದ ಭೋಜನು ಮೃತಕಾವತಿಯೆಂಬವಳನ್ನು ಮದುವೆಯಾದನು. ಈಕೆಯು ಶರಕಾಂತನ ಮಗಳು. ಇವಳಿಗೆ ನಾಲ್ಕು ಜನ ಮಕ್ಕಳಾದರು.

ಕುಕುರಂ ಭಜಮಾನಂ ಚ ಸಮೀಕಂ ಬಲಬರ್ಹಿಷಂ ।
ಕುಕುರುಸ್ಯಾತ್ಮಜೋ ಧೃಷ್ಣುರ್ಧೃಷ್ಣೋಸ್ತು ತನಯೋ ಧೃತಿಃ ॥ ೪೬ ॥

ಕಪೋತರೋಮಾ ತಸ್ಯಾಥ ನೈಮಿತ್ತಿಸ್ತಸ್ಯ ಚಾತ್ಮಜಃ ।
ತಸ್ಯಾಸೀತ್ಸುತಸ್ತಸ್ಮಾದ್ವಿದ್ವಾನ್ಪುತ್ರೋ ನರಿಃ ಕಿಲ ॥ ೪೭ ॥

ಖ್ಯಾಯತೇ ತಸ್ಯ ನಾಮಾನ್ಯಚ್ಚಂದನೋದಕದುಂದುಭಿಃ ।
ಅಸ್ಯಾಸೀದಭಿಜಿತ್ಪುತ್ರಸ್ತತೋ ಜಾತಃ ಪುನರ್ವಸುಃ ॥ ೪೮ ॥

ಅಪುತ್ರೋ ಹ್ಯಭಿಜಿತ್ಪೂರ್ವಮೃಷಿಭಿಃ ಪ್ರೇರಿತೋ ಮುದಾ ।
ಅಶ್ವಮೇಧಂ ತು ಪುತ್ರಾರ್ಥಮಾಜಹಾರ ನರೋತ್ತಮಃ ॥ ೪೯ ॥

ತಸ್ಯ ಮಧ್ಯೇ ವಿಚರತಃ ಸಭಾಮಧ್ಯಾತ್ಸಮುತ್ಥಿತಃ ।
ಅಂಧಸ್ತು ವಿದ್ವಾನ್ಧರ್ಮಜ್ಞೋ ಯಜ್ಞದಾನಾತ್ಪುನರ್ವಸುಃ ॥ ೫೦ ॥

ತಸ್ಯಾಸೀತ್ಪುತ್ರಮಿಥುನಂ ವಸೋಶ್ಚಾರಿಜಿತಃ ಕಿಲ ।
ಆಹುಕಶ್ಚಾಹುಕೀ ಚೈವ ಖ್ಯಾತಾ ಮತಿಮತಾಂ ವರ ॥ ೫೧ ॥

---

೪೬-೪೭. ಕುಕುರ, ಭಜಮಾನ, ಸಮೀಕ, ಬಲಬರ್ಹಿಷ ಎಂದು ಆ ನಾಲ್ವರ ಹೆಸರು, ಕುಕುರನಿಗೆ ಧೃಷ್ಣುವೂ, ಧೃಷ್ಣುವಿಗೆ ಧೃತಿಯೂ, ಧೃತಿಗೆ ಕಪೋತರೋಮನೂ ಕಪೋತರೋಮನಿಗೆ ನೈಮಿತ್ತಿಯೂ ಮಕ್ಕಳಾದರು. ಆ ನೈಮಿತ್ತಿಗೆ ನರಿ ಎಂಬ ಮಗನು ಹುಟ್ಟಿ ಬಹು ವಿದ್ಯಾವಂತನೆನಿಸಿಕೊಂಡನು.

೪೮. ಆ ನರಿಗೆ ಚಂದನೋದಕದುಂದುಭಿ ಎಂದು ಮತ್ತೊಂದು ಹೆಸರಿದ್ದಿತು. ಆ ನರಿಗೆ ಅಭಿಜಿತ್ತೆಂಬುವನೂ, ಆ ಅಭಿಜಿತ್ತಿಗೆ ಪುನರ್ವಸು ಎಂಬುವನೂ ಮಕ್ಕಳಾದರು.

೪೯-೫೦. ಈ ಅಭಿಜಿತ್ತಿಗೆ ಮೊದಲು ಮಕ್ಕಳಿರಲಿಲ್ಲ. ಋಷಿಗಳ ಹೇಳಿಕೆಯಿಂದ ಮಕ್ಕಳಾಗುವುದಕ್ಕೋಸ್ಕರ ಅಶ್ವಮೇಧಯಾಗವನ್ನು ಮಾಡಿದನು. ಯಾಗವನ್ನು ಮಾಡುತ್ತಿರುವಾಗ ಸಭೆಯ ಮಧ್ಯದಿಂದ ಕುರುಡನೂ, ಧರ್ಮವನ್ನು ಬಲ್ಲವನೂ, ವಿದ್ವಾಂಸನೂ ಆದ ಪುನರ್ವಸುವು ಹುಟ್ಟಿದನು.

೫೧. ಆ ಪುನರ್ವಸುವಿಗೆ ಆಹುಕನೆಂದೂ, ಆಹುಕಿಯೆಂದೂ ಇಬ್ಬರು ಮಕ್ಕಳಾದರು.

ಇಮಾಂಶ್ಚೋದಾಹರಂತ್ಯತ್ರ ಶ್ಲೋಕಾಂಶ್ಚಾತಿರಸಾತ್ಮಕಾನ್ ॥ ೫೨ ॥

ಸೋಽಸಾಸಂಗಾನುಕರ್ಷಾಣಾಂ ಸಧ್ವಜಾನಾಂ ವರೂಥಿನಾಂ ।
ರಥಾನಾಂ ಮೇಘಘೋಷಾಣಾಂ ಸಹಸ್ರಾಣಿ ದಶೈವ ತು ॥ ೫೩ ॥

ನಾಸತ್ಯವಾದೀ ನಾತೇಜಾ ನಾಯಜ್ವಾ ನಾಸಹಸ್ರದಃ ।
ನಾಶುಚಿರ್ನಾಪ್ಯವಿದ್ವಾಂಸೋ ನ ಭೋಜಾದಧಿಕೋಽಭವತ್ ॥ ೫೪ ॥

ಆಹುಕಾಂತಮನುಪ್ರಾಪ್ತಾ ಇತ್ಯೇತೇಽನ್ವಯ ಉಚ್ಯತೇ ॥ ೫೫ ॥

ಆಹುಕಶ್ಚಾಪ್ಯವಂತೀಷು ಸ್ವಸಾರಂ ಚಾಹುಕೀಂ ದದೌ ।
ಆಹುಕಸ್ಯೈವ ದುಹಿತಾ ಪುತ್ರೌ ದ್ವೌ ಸಮಸೂಯತ ॥ ೫೬ ॥

ದೇವಕಂ ಚೋಗ್ರಸೇನಂ ಚ ದೇವಗರ್ಭಸಮಾವುಭೌ ।
ದೇವಕಸ್ಯ ಸುತಾ ವೀರಾ ಜಜ್ಞಿರೇ ತ್ರಿದಶೋಪಮಾಃ ॥ ೫೭ ॥

ದೇವವಾನುಪದೇವಶ್ಚ ಸುದೇವೋ ದೇವರಕ್ಷಿತಃ ।
ತೇಷಾಂ ಸ್ವಸಾರಃ ಸಪ್ತೈವ ವಸುದೇವಾಯ ತಾ ದದೌ ॥ ೫೮ ॥

---

೫೨-೫೫. ಭೋಜನ ಸಮೀಪದಲ್ಲಿ ಎಂದರೆ ಅಂಗರಕ್ಷಕರ ಗುಂಪಿನಲ್ಲಿ ಧ್ವಜವನ್ನು ಹಾರಿಸಿಕೊಂಡು ಮೇಘಧ್ವನಿಗಳನ್ನು ಮಾಡುವ ಹತ್ತು ಸಾವಿರ ಸೈನಿಕರಿದ್ದರು. ಸುಳ್ಳು ಹೇಳುತ್ತಿರಲಿಲ್ಲ, ತೇಜಸ್ವಿಯಾಗಿದ್ದನು. ಯಾಗವನ್ನು ಮಾಡುತ್ತಿದ್ದನು, ಸಾವಿರ ಗಟ್ಟಲೆ ದಾನಮಾಡುತ್ತಿದ್ದನು, ಶುಚಿಯಾಗಿದ್ದನು, ವಿದ್ವಾಂಸನಾಗಿದ್ದನು, ಈ ವಿಷಯಗಳಲ್ಲಿ ಭೋಜನಿಗಿಂತಲೂ ಅತಿಶಯರಾದವರು ಯಾರೂ ಇರಲಿಲ್ಲ, ಇದೇ ರೀತಿಯಾಗಿ ಆಹುಕನವರೆಗೂ ನಡೆದುಕೊಂಡು ಬಂದಿತು. ಇವರ ವಂಶದಲ್ಲಿ ಈ ಅತಿಶಯವಿರುವುದರಿಂದ ಈ ಕೀರ್ತಿಗಳನ್ನು ಚೆನ್ನಾಗಿ ವರ್ಣಿಸುವರು.

೫೬. ಆಹುಕನು ಸೋದರಿಯಾದ ಆಹುಕಿಯನ್ನು ಅವಂತೀಶ್ವರನಿಗೆ ಕೊಟ್ಟನು. ಆಹುಕನಿಗೆ ದೇವಕನೆಂದೂ ಉಗ್ರಸೇನನೆಂದು ಇಬ್ಬರು ದೇವತೆಗಳಂತಿರುವ ಮಕ್ಕಳಾದರು.

೫೭-೫೮. ದೇವಕನಿಗೆ ದೇವತೆಗಳಂತಿರುವ ದೇವವಾನ್, ಉಪದೇವ, ಸುದೇವ, ದೇವರಕ್ಷಿತ, ಎಂಬದಾಗಿ ನಾಲ್ವರು ಮಕ್ಕಳಾದರು ಮತ್ತು ಏಳು ಜನ ಹೆಣ್ಣು ಮಕ್ಕಳೂ ಆದರು. ಆ ಏಳು ಜನರನ್ನೂ ವಸುದೇವನಿಗೆ ಮದುವೆ ಮಾಡಿಕೊಟ್ಟನು.

ದೇವಕೀ ಶ್ರುತದೇವಾ ಚ ಯಶೋದಾ ಚ ಶ್ರುತಿಶ್ರವಾ ।
ಶ್ರೀದೇವಾ ಚೋಪದೇವಾ ಚ ಸುರಾಪೀ ಚೇತಿ ಸಪ್ತಮಾ ॥ ೫೯ ॥

ನವೋಗ್ರಸೇನಸ್ಯ ಸುತಾಃ ಕಂಸಸ್ತೇಷಾಂ ತು ಪೂರ್ವಜಃ ।
ನ್ಯಗ್ರೋಧಶ್ಚ ಸುನಾಮಾ ಚ ಕಂಕಃ ಶಂಕುಃ ಸುಭೂಶ್ಚ ಯಃ ॥ ೬೦ ॥

ಅನ್ಯಸ್ತು ರಾಷ್ಟ್ರಪಾಲಶ್ಚ ಬದ್ಧಮುಷ್ಟಿಃ ಸುಮುಷ್ಟಿಕಃ ।
ತೇಷಾಂ ಸ್ವಸಾರಃ ಪಂಚಾಸನ್ಕಂಸಾ ಕಂಸವತೀ ತಥಾ ॥ ೬೧ ॥

ಸುರಭೀ ರಾಷ್ಟ್ರಪಾಲೀ ಚ ಕಂಕಾ ಚೇತಿ ವರಾಂಗನಾಃ ।
ಉಗ್ರಸೇನಃ ಸಹಾಪತ್ಯೋ ವ್ಯಾಖ್ಯಾತಃ ಕುಕ್ಕುರೋದ್ಭವಃ ॥ ೬೨ ॥

ಭಜಮಾನಸ್ಯ ಪುತ್ರೋಽಭೂದ್ರಥಿಮುಖ್ಯೋ ವಿದೂರಥಃ ।
ರಾಜಾಧಿದೇವಃ ಶೂರಶ್ಚ ವಿದೂರಥಸುತೋಽಭವತ್ ॥ ೬೩ ॥

ರಾಜಾಧಿದೇವಸ್ಯ ಸುತೌ ಜಜ್ಞಾತೇ ವೀರಸಂಮತೌ ।
ಕ್ಷತ್ರವ್ರತೇಽತಿನಿರತೌ ಶೋಣಾಶ್ವಃ ಶ್ವೇತವಾಹನಃ ॥ ೬೪ ॥

---

೫೯. ದೇವಕೀ, ಶ್ರುತದೇವೆ, ಯಶೋದೇ, ಶ್ರುತಿಶ್ರವೆ, ಶ್ರೀದೇವೇ, ಉಪದೇವೇ, ಸುರಾಪಿ ಎಂಬದಾಗಿ ಏಳು ಜನ ವಸುದೇವನ ಹೆಂಡತಿಯರ ಹೆಸರುಗಳು.

೬೦. ಉಗ್ರಸೇನನಿಗೆ ಒಂಬತ್ತು ಜನ ಮಕ್ಕಳು, ಅವರಲ್ಲಿ ಕಂಸನು ದೊಡ್ಡವನು, ನ್ಯಗ್ರೋಧ, ಸುನಾಮ, ಕಂಕ, ಶಂಕು, ಸುಭೂ, ರಾಷ್ಟ್ರಪಾಲ, ಬದ್ಧಮುಷ್ಟಿ. ಸುಮುಷ್ಟಿ ಎಂದು ಆ ಕಂಸನಿಗೆ ಎಂಟು ಜನ ತಮ್ಮಂದರು.

೬೧-೬೨. ಆ ಕಂಸಾದಿಗಳಿಗೆ ಕಂಸೇ, ಕಂಸವತೀ, ಸುರಭೀ, ರಾಷ್ಟ್ರಪಾಲೀ. ಕಂಕೇ ಎಂಬದಾಗಿ ಐದು ಜನ ತಂಗಿಯರು. ಈ ರೀತಿಯಾಗಿ ಉಗ್ರಸೇನನ ವಂಶವನ್ನೂ ಹೇಳಿದುದಾಯಿತು.

೬೩. ಭಜಮಾನನಿಗೆ ಶೂರನಾದ ವಿದೂರಥನೆಂಬ ಮಗನಾದನು. ಆ ವಿದೂರಥನಿಗೆ ರಾಜಾಧಿದೇವನೆಂದೂ ಶೂರನೆಂದೂ ಇಬ್ಬರು ಮಕ್ಕಳಾದರು.

೬೪. ರಾಜಾಧಿದೇವನಿಗೆ ಕ್ಷತ್ರಿಯ ರೀತಿಯಲ್ಲಿ ಶೂರರಾದ ಶೋಣಾಶ್ವ ಶ್ವೇತವಾಹನನೆಂದು ಇಬ್ಬರು ಮಕ್ಕಳಾದರು.

ಶೋಣಾಶ್ವಸ್ಯ ಸುತಾಃ ಪಂಚ ಶೂರಾ ರಣವಿಶಾರದಾಃ ।
ಶಮೀ ಚ ಗದಚರ್ಮಾ ಚ ನಿಮೂರ್ತಶ್ಚಕ್ರಜಿಚ್ಛುಚಿಃ ॥ ೬೫ ॥

ಶಮೀಪುತ್ರಃ ಪ್ರತಿಕ್ಷತ್ರಃ ಪ್ರತಿಕ್ಷತ್ರಸ್ಯ ಚಾತ್ಮಜಃ ।
ಪ್ರತಿಕ್ಷತ್ರಸುತೋ ಭೋಜೋ ಹೃದಿಕಸ್ತಸ್ಯ ಚಾತ್ಮಜಃ ॥ ೬೬ ॥

ಹೃದಿಕಸ್ಯಾಭವನ್ಪುತ್ರಾ ದಶ ಭೀಮಪರಾಕ್ರಮಾಃ ।
ಕೃತವರ್ಮಾಽಗ್ರಜಸ್ತೇಷಾಂ ಶತಧನ್ವಾ ಚ ಸತ್ತಮಃ ॥ ೬೭ ॥

ದೇವಾರ್ಹಶ್ಚ ಸುಭಾನುಶ್ಚ ಭೀಷಣಶ್ಚ ಮಹಾಬಲಃ ।
ಅಜಾತಶ್ಚ ವಿಜಾತಶ್ಚ ಕಾರಕಶ್ಚ ಕರಂಭಕಃ ॥ ೬೮ ॥

ದೇವಾರ್ಹಸ್ಯ ಸುತೋ ವಿದ್ವಾನ್ ಜಜ್ಞೇ ಕಂಬಲಬರ್ಹಿಷಃ ।
ಅಸಮೌಜಾಸ್ತತಸ್ತಸ್ಯ ಸಮೌಜಾಶ್ಚ ಸುತಾವುಭೌ ॥ ೬೯ ॥

ಅಜಾತಪುತ್ರಸ್ಯ ಸುತೌ ಪ್ರಜಾಯೇತೇ ಸಮೌಜಸೌ ।
ಸಮೌಜಃಪುತ್ರಾ ವಿಶ್ರಾಂತಾಸ್ತ್ರಯಃ ಪರಮಧಾರ್ಮಿಕಾಃ ॥ ೭೦ ॥

ಸುದೃಶಶ್ಚ ಸುರಾಂಶಶ್ಚ ಕೃಷ್ಣ ಇತ್ಯನುನಾಮತಃ ।
ಅಂಧಕಾನಾಮಿಮಂ ವಂಶಂ ಯೋ ಕೀರ್ತಯಂತಿ ನಿತ್ಯಶಃ ॥ ೭೧ ॥

---

೬೫. ಶೋಣಾಶ್ವನಿಗೆ ಯುದ್ಧದಲ್ಲಿ ಪಂಡಿತರಾದ ಶಮಿ, ಗದಚರ್ಮ ನಿಮೂರ್ತ, ಶಕ್ರಜಿತ್, ಶುಚಿ ಎಂದು ಐವರು ಮಕ್ಕಳಾದರು.

೬೬-೬೮. ಶಮಿಗೆ ಪ್ರತಿಕ್ಷತ್ರನೆಂಬ ಮಗನಾದನು. ಪ್ರತಿಕ್ಷತ್ರನಿಗೆ ಭೋಜನೆಂಬುವನೂ ಆ ಭೋಜನಿಗೆ ಹೃದಿಕನೆಂಬುವನೂ ಮಕ್ಕಳಾದರು. ಹೃದಿಕನಿಗೆ ಹತ್ತು ಜನ ಮಕ್ಕಳಾದರು. ಅವರೆಲ್ಲರೂ ಪರಾಕ್ರಮಿಗಳು. ಕೃತವರ್ಮ ಎಂಬವನೇ ಅವರಿಗೆಲ್ಲ ದೊಡ್ಡವನು. ಶತಧನ್ವ, ದೇವಾರ್ಹ, ಸುಭಾನು, ಭೀಷಣ, ಅಜಾತ, ವಿಜಾತ, ಕಾರಕ, ಕರಂಭಕ, ಎಂದು ಮಿಕ್ಕವರ ಹೆಸರುಗಳು.

೬೯. ದೇವಾರ್ಹನಿಗೆ ವಿದ್ವಾಂಸನಾದ ಕಂಬಳಬರ್ಹಿಷನೆಂಬ ಮಗನಾದನು. ಆ ಕಂಬಳಬರ್ಹಿಷನಿಗೆ ಅಸಮೌಜ, ಸಮೌಜರೆಂದು ಇಬ್ಬರು ಮಕ್ಕಳಾದರು.

೭೦-೭೧. ಅಜಾತನಿಗೆ ಒಬ್ಬನು ಮಗನೂ, ಆತನಿಗೆ ಶೂರರಾದ ಇಬ್ಬರು ಮಕ್ಕಳೂ ಆದರು. ಸಮೌಜನಿಗೆ ಧರ್ಮಿಷ್ಠರಾದ ಸುದೃಶ, ಸುರಾಂಶ, ಕೃಷ್ಣ ಎಂಬ ಹೆಸರಿನವರಾದರು, ಇದು ಅಂಧಕನ ವಂಶವು, ಈ ಅಂಧಕನ ವಂಶವನ್ನು ಕೇಳುವವರು

ಆತ್ಮನೋ ವಿಪುಲಂ ವಂಶಂ ಪ್ರಜಾಮಾಪ್ನುವತೇ ತತಃ ।
ಗಾಂಧಾರೀ ಚೈವ ಮಾದ್ರೀ ಚ ಕ್ರೋಷ್ಟೋರ್ಭಾರ್ಯೇ ಬಭೂವತುಃ ॥

ಗಾಂಧಾರೀ ಜನಯಾಮಾಸ ಸುಮಿತ್ರಂ ಮಿತ್ರನಂದನಂ ।
ಮಾದ್ರೀ ಯುಧಾಜಿತಂ ಪುತ್ರಂ ತತೋ ವೈ ದೇವಮೀಢುಷಂ ॥ ೭೩ ॥

ಅನಮಿತ್ರಂ ಶಿನಿಂ ಚೈವ ಪಂಚಾತ್ರ ಕೃತಲಕ್ಷಣಾಃ ।
ಅನಮಿತ್ರಸುತೋ ನಿಘ್ನೋ ನಿಘ್ನಸ್ಯಾಪಿ ಸುತಾವುಭೌ ॥ ೭೪ ॥

ಪ್ರಸೇನಶ್ಚ ಮಹಾವೀರ್ಯಃ ಶಕ್ತಿಸೇನಶ್ಚ ತಾವುಭೌ ।
ಸ್ಯಮಂತಕಂ ಪ್ರಸೇನಸ್ಯ ಮಣಿರತ್ನಮನುತ್ತಮಂ ॥ ೭೫ ॥

ಪೃಥಿವ್ಯಾಂ ಮಣಿರತ್ನಾನಾಂ ರಾಜೇತಿ ಸಮುದಾಹೃತಂ ।
ಹೃದಿ ಕೃತ್ವಾ ಸ ಬಹುಶೋ ಮಣಿಂ ತಮಭ್ಯಯಾಚತ ॥ ೭೬ ॥

ಗೋವಿಂದಶ್ಚ ನ ತಂ ಲೇಭೇ ಶಕ್ತೋಽಪಿ ನ ಜಹಾರ ಸಃ ।
ಕದಾಚಿನ್ಮೃಗಯಾಂ ಯಾತಃ ಪ್ರಸೇನಸ್ತೇನ ಭೂಷಿತಃ ॥ ೭೭ ॥

---

ತಮ್ಮ ವಂಶವನ್ನು ಬೆಳೆಸಿಕೊಂಡು ಮಕ್ಕಳನ್ನು ಹೊಂದುತ್ತಾರೆ. ಕ್ರೋಷ್ಟುವಿಗೆ ಗಾಂಧಾರಿ, ಮಾದ್ರಿ ಎಂದು ಇಬ್ಬರು ಹೆಂಡಿರು.

೭೩. ಗಾಂಧಾರಿಗೆ ಸುಮಿತ್ರ, ಮಿತ್ರನಂದನನೆಂಬ ಇಬ್ಬರು ಮಕ್ಕಳಾದರು, ಮಾದ್ರಿಗೆ ಯುಧಾಜಿತ್, ದೇವಮೀಢುಷ, ಅನಮಿತ್ರ, ಶಿನಿ, ಎಂಬವರು ಮಕ್ಕಳಾದರು. ಇವರಲ್ಲಿ ಐವರು ಲಕ್ಷಣವಂತರು.

೭೪. ಅನಮಿತ್ರನಿಗೆ ನಿಘ್ನನೆಂಬ ಮಗನಾದನು. ನಿಘ್ನನಿಗೆ ಪ್ರಸೇನ ಶಕ್ತಿಸೇನನೆಂದು ಇಬ್ಬರು ಮಕ್ಕಳಾದರು. ಇವರಿಬ್ಬರೂ, ಮಹಾವೀರ್ಯವಂತರು.

೭೫-೭೬. ಆ ಪ್ರಸೇನನ ಬಳಿ ಒಂದು ಉತ್ತಮವಾದ ರತ್ನವಿದ್ದಿತು, ಅದರ ಹೆಸರು ಸ್ಯಮಂತಕವು ಅದು ಭೂಮಿಯಲ್ಲಿನ ಮಣಿಗಳೆಲ್ಲೆಲ್ಲಾ ಉತ್ತಮವಾದ ಮಣಿಯು, ಗೋವಿಂದನು ಆ ಮಣಿಯ ಮೇಲೆ ಮನಸ್ಸಿಟ್ಟು ಅನೇಕ ಬಾರಿ ಕೇಳಿದನು. ಅದನ್ನು ಕಸಿದುಕೊಳ್ಳುವಷ್ಟು ಶಕ್ತನಾಗಿದ್ದರೂ ಕಸಿದುಕೊಳ್ಳಲಿಲ್ಲ.

೭೭-೭೯. ಒಂದು ಸಾರಿ ಪ್ರಸೇನನು ಆ ಮಣಿಯಿಂದ ಅಲಂಕೃತನಾಗಿ ಬೇಟೆಗೆ ಹೋದನು. ಅಲ್ಲಿ ಒಂದು ಗುಹೆಯಲ್ಲಿ ಪ್ರಾಣಿಯು ಕಾಲಿನಿಂದ ಸದ್ದು ಮಾಡುತ್ತಿದ್ದುದನ್ನು ಕೇಳಿದನು. ಆ ಗುರುತಿನಿಂದ ಆತನು ಆ ಗುಹೆಯೊಳಗೆ ಹೋಗಿ

ಪದಶಬ್ದಂ ಸ ಶುಶ್ರಾವ ಬಿಲಾತ್ಸಸ್ತೇನ ಕಾರಿತಂ ।
ತತಃ ಪ್ರವಿಶ್ಯ ಸ ಬಿಲಂ ಪ್ರಸೇನ ಋಕ್ಷಮಾಸದತ್ ॥ ೭೮ ॥

ಋಕ್ಷಃ ಪ್ರಸೇನಂ ಚ ತಥಾ ಋಕ್ಷಶ್ಚಾಪಿ ಪ್ರಸೇನಜಿತ್ ।
ಹತ್ವಾ ಋಕ್ಷಃ ಪ್ರಸೇನಂ ತು ತತಸ್ತಂ ಮಣಿಮಾದದತ್ ॥ ೭೯ ॥

ಗುಹಾಂತಸ್ಥಂ ವಿನಿರ್ಹೃತ್ಯ ಪ್ರಸೇನಮೃಕ್ಷ ಆವಿಶತ್ ।
ಪ್ರಸೇನಂ ತು ಹತಂ ಜ್ಞಾತ್ವಾ ಗೋವಿಂದಃ ಪರಿಶಂಕಿತಃ ॥ ೮೦ ॥

ಗೋವಿಂದೇನ ಹತೋ ವ್ಯಕ್ತಂ ಪ್ರಸೇನೋ ಮಣಿಕಾರಣಾತ್ ।
ಪ್ರಸೇನಸ್ತು ಗತೋಽರಣ್ಯಂ ಮಣಿರತ್ನೇನ ಭೂಷಿತಃ ॥ ೮೧ ॥

ತಂ ದೃಷ್ಟ್ವಾ ನಿಹತಸ್ತೇನ ಸ ತ್ಯಜಂತಂ ಸ್ಯಮಂತಕಂ ।
ಹನ್ಮಿ ಚೈನಂ ಶತ್ರುಭೂತಂ ದುರಾತ್ಮಾನಂ ಹಿ ಕೇಶವಃ ॥ ೮೨ ॥

ಅಥ ದೀರ್ಘೇಣ ಕಾಲೇನ ಮೃಗಯಾಂ ನಿರ್ಗತಃ ಪುನಃ ।
ಯದೃಚ್ಛಯಾ ಚ ಗೋವಿಂದೋ ಬಿಲಾಭ್ಯಾಶಮುಪಾಗಮತ್ ೮೩ ॥

ತತಃ ಶಬ್ದಂ ಯಥಾಪೂರ್ವಂ ಸ ಚಕ್ರೇ ಋಕ್ಷರಾಡ್ಬಲೀ ।
ಶಬ್ದಂ ಶ್ರುತ್ವಾ ತು ಗೋವಿಂದಃ ಖಡ್ಗಪಾಣಿಃ ಪ್ರವಿಶ್ಯ ಚ ॥ ೮೪ ॥

---

ಅದನ್ನು ಹೊಡೆದನು. ಮೃಗವು ಒಂದು ಕರಡಿಯಾಗಿದ್ದಿತು. ಅದೂ ಕೂಡ ಅವನ ಮೇಲೆ ಬಿದ್ದಿತು. ಇಬ್ಬರಿಗೂ ಯುದ್ಧವು ನಡೆಯಿತು, ಕೊನೆಗೆ ಆ ಕರಡಿಯು ಪ್ರಸೇನನನ್ನು ಕೊಂದು ಆ ಮಣಿಯನ್ನು ತೆಗೆದುಕೊಂಡಿತು.

೮೦-೮೨. ಪ್ರಸೇನನು ಸಾಯುತ್ತಲೂ, ಮಣಿಯನ್ನು ಕೇಳಿದರೂ ಪ್ರಸೇನನು ಕೊಡಲಿಲ್ಲವಾದುದರಿಂದ ಈಗ ಸಮಯಸಿಕ್ಕಿತೆಂದು ಆ ಮಣಿಗೋಸ್ಕರ ಕೃಷ್ಣನು, ಆ ಪ್ರಸೇನನನ್ನು ಕೊಂದಿರುವನೆಂದು ಎಲ್ಲರೂ ಶಂಕಿಸಿದರು ಅಲ್ಲದೇ ಬಲರಾಮನು ನಮ್ಮವನಾದ ಪ್ರಸೇನನನ್ನು ಕೊಂದ ಈ ಕೃಷ್ಣನು ನಮಗೂ ಶತ್ರುವೇನೇ. ಅವನನ್ನು ಕೊಲ್ಲುವೆನೆಂದು ಗರ್ಜಿಸಿದನು.

೮೩. ಹೀಗಿರುತ್ತಿರಲು ಬಹುಕಾಲದ ಮೇಲೆ ಕೃಷ್ಣನು ಬೇಟೆಗೆ ಹೋಗಿ ದೈವಾಧೀನದಿಂದ ಆ ಗುಹೆಯ ಸಮೀಪಕ್ಕೆ ಹೋದನು.

೮೪. ಅನಂತರ ಮೊದಲಿನಂತೆ ಆ ಗುಹೆಯಲ್ಲಿ ಶಬ್ದಮಾಡುತ್ತಿದ್ದ ಆ ಕರಡಿಯ ಶಬ್ದವನ್ನು ಕೇಳಿ ಖಡ್ಗವನ್ನು ತೆಗೆದುಕೊಂಡು ಒಳಗೆ ನುಗ್ಗಿ ಮಹಾ ಬಲಿಷ್ಠನಾದ ಜಾಂಬವಂತನನ್ನು ಕಂಡನು.

ಅಪಶ್ಯಚ್ಚಾಂಬವಂತಂ ಚ ಋಕ್ಷರಾಜಂ ಮಹಾಬಲಂ ।
ತತಸ್ತೂರ್ಣಂ ಹೃಷೀಕೇಶಸ್ತಮೃಕ್ಷಮತಿರಂಹಸಾ ॥ ೮೫ ॥

ಜಾಂಬವಂತಂ ಸ ಜಗ್ರಾಹ ಕ್ರೋಧಸಂರಕ್ತಲೋಚನಃ ।
ದೃಷ್ಟ್ವಾ ಚೈನಂ ತಥಾ ವಿಷ್ಣುಂ ಕರ್ಮಭಿರ್ವೈಷ್ಣವೀಂ ತನುಂ ॥ ೮೬ ॥

ತುಷ್ಟಾವ ಋಕ್ಷರಾಜೋಽಪಿ ವಿಷ್ಣುಸೂಕ್ತೇನ ಸತ್ವರಂ ।
ತತಸ್ತು ಭಗವಾಂಸ್ತುಷ್ಟೋ ವರೇಣ ಸಮರೋಚಯತ್ ॥ ೮೭ ॥

ಇಚ್ಛೇ ಚಕ್ರಪ್ರಹಾರೇಣ ತ್ವತ್ತೋಽಹಂ ಮರಣಂ ವಿಭೋ ।
ಕನ್ಯಾ ಚೇಯಂ ಮಮ ಸುತಾ ಭರ್ತಾರಂ ತ್ವಾಮವಾಪ್ನುಯಾತ್ ॥ ೮೮ ॥

ಯೋಽಯಂ ಮಣಿಃ ಪ್ರಸೇನಾತ್ತು ಹತ್ವಾ ವೈ ಪ್ರಾಪ್ತವಾನಹಂ ।
ಸ ತ್ವಯಾ ಗೃಹ್ಯತಾಂ ನಾಥ ಮಣಿರೇಷ ಪ್ರವರ್ತತೇ ॥ ೮೯ ॥

ತತಸ್ತು ಜಾಂಬವಂತಂ ವೈ ಹತ್ವಾ ಚಕ್ರೇಣ ಕೇಶವಃ ।
ಕೃತಕಾರ್ಯೋ ಮಹಾಬಾಹುಃ ಕನ್ಯಾಂ ಚಾಂದಾಯ ವೈ ಹರಿಃ ॥ ೯೦ ॥

---

೮೫. ಒಡನೆಯೇ ಕೃಷ್ಣನು ಜಾಂಬವಂತನ ಮೇಲೆ ವೇಗದಿಂದ ಬೀಳಲು ಇಬ್ಬರಿಗೂ ಯುದ್ಧವು ನಡೆಯಿತು.

೮೬. ಈ ಕೃಷ್ಣನ ಪರಾಕ್ರಮದಿಂದ ಈತನು ಸಾಕ್ಷಾದ್ವಿಷ್ಣುವೆಂದೇ ತಿಳಿದು ಆ ಜಾಂಬವಂತನು ವಿಷ್ಣುಸೂಕ್ತದಿಂದ ಸ್ತೋತ್ರಮಾಡಿದನು.

೮೭. ಆಗ ಸಂತುಷ್ಟನಾದ ಸ್ವಾಮಿಯು ವರವನ್ನು ಕೇಳಿಕೋ, ಎಂದನು

೮೮-೮೯. ಆಗ ಜಾಂಬವಂತನು ಸ್ವಾಮೀ, ನಿನ್ನ ಚಕ್ರದಿಂದ ನನಗೆ ಮರಣವಾಗಬೇಕು. ಈ ನನ್ನ ಮಗಳನ್ನು ನೀನು ಮದುವೆಯಾಗಬೇಕು. ಪ್ರಸೇನನನ್ನು ಕೊಂದು ತೆಗೆದುಕೊಂಡಿರುವ ಈ ಮಣಿಯನ್ನು ನೀನು ತೆಗೆದುಕೊಳ್ಳಬೇಕೆಂದು ಕೇಳಿಕೊಂಡನು.

೯೦. ಅನಂತರ ಆ ಜಾಂಬವಂತನನ್ನು ಕೃಷ್ಣನು ಚಕ್ರದಿಂದ ಕೊಂದು ಆ ಹುಡುಗಿಯನ್ನು ಕರೆದುಕೊಂಡು ರತ್ನವನ್ನೂ ತೆಗೆದುಕೊಂಡು ಬಂದನು.

**ತತಃ ಸತ್ರಾಜಿತೇ ಚೈನಂ ಮಣಿರತ್ನಂ ಸ ವೈ ದದೌ ।**
**ಯೋ ಲಬ್ಧ ಋಕ್ಷರಾಜಾಚ್ಚ ಸರ್ವಯಾದವಸಂಸದಿ ॥ ೯೧ ॥**

**ತೇನ ಮಿಥ್ಯಾಪವಾದೇನ ಸಂತಪ್ತೋಽಯಂ ಜನಾರ್ದನಃ ।**
**ತತಸ್ತೇ ಯಾದವಾಃ ಸರ್ವೇ ವಾಸುದೇವಮಥಾಬ್ರುವನ್ ॥ ೯೨ ॥**

**ಅಸ್ಮಾಕಂ ಮನಸಿ ಹ್ಯಾಸೀತ್ಪ್ರಸೇನಸ್ತು ತ್ವಯಾ ಹತಃ ।**
**ಏಕೈಕಸ್ಯಾಂ ಚ ಸೌಂದರ್ಯಾಂ ದಶ ಸತ್ರಾಜಿತಃ ಸುತಾಃ ॥ ೯೩ ॥**

**ಸಂಪ್ರೋತ್ಪನ್ನಾಃ ಸುತಾಸ್ತಸ್ಯ ಶತಮೇಕಂ ಚ ವಿಶ್ರುತಾಃ ।**
**ಖ್ಯಾಪಿತಾಸ್ತು ಮಹಾವೀರ್ಯಾ ಭಂಗಕಾರಸ್ತು ಪೂರ್ವಜಃ ॥ ೯೪ ॥**

**ಅಥ ವ್ರತಪತೀ ತಸ್ಯ ಭಂಗಕಾರಸ್ಯ ಪೂರ್ವಜಾ ।**
**ಸುಷುವೇ ಸಾ ಕುಮಾರಾಂಶ್ಚ ಮಹಾಬಲಪರಾಕ್ರಮಾನ್ ॥ ೯೫ ॥**

**ಅಸಂಗೋ ಯುಯುಧಾನಶ್ಚ ಶಿನಿಸ್ತಸ್ಯಾತ್ಮಜಸ್ತದಾ**
**ತಸ್ಮಾದ್ಯುಗಂಧರಃ ಪುತ್ರಾಃ ಶತಂ ತಸ್ಯ ಪ್ರಕೀರ್ತಿತಾಃ ॥ ೯೬ ॥**

---

೯೧. ಆಮೇಲೆ ಆ ಜಾಂಬವಂತನಿಂದ ತಂದ ಮಣಿಯನ್ನು ಯಾದವರ ಸಭೆಯನ್ನು ಸೇರಿಸಿ ಪ್ರಸೇನನ ತನ್ಮನಾದ ಸತ್ರಾಜಿತನಿಗೆ ಕೊಟ್ಟು ಮಿಥ್ಯಾಪವಾದ ದಿಂದ ದುಃಖಿಯಾಗಿದ್ದ ಕೃಷ್ಣನು ಅದರಿಂದ ಮುಕ್ತನಾದನು.

೯೨. ಆಗ ಯಾದವರೆಲ್ಲರೂ ಎಲೈ ಕೃಷ್ಣನೇ, ನಾವೆಲ್ಲರೂ ನೀನೇ ಪ್ರಸೇನ ನನ್ನು ಕೊಂದಿದ್ದೀಯೇ ಎಂದು ತಿಳಿದಿದ್ದೆವು. ಈಗ ಆ ಸಂದೇಹವು ಪರಿಹಾರ ವಾಯಿತು ಎಂದರು.

೯೩-೯೪. ಸತ್ರಾಜಿತನಿಗೆ ಹತ್ತು ಜನ ಹೆಂಡಿರಿದ್ದರು. ಅವರೊಬ್ಬಬ್ಬರಲ್ಲಿಯೂ ಹತ್ತು ಹತ್ತು ಜನರಂತೆ ಒಂದು ನೂರು ಜನ ಮಕ್ಕಳಾದರು. ಇವರೆಲ್ಲರೂ ಶೂರರು. ಇವರಲ್ಲಿ ಮೊದಲನೆಯವನು ಭಂಗಕಾರನೆಂಬುವನು.

೯೫. ಭಂಗಕಾರನ ಅಕ್ಕನಾದ ವ್ರತವತಿ ಯೆಂಬುವಳು ಬಹು ಬಲಿಷ್ಠರಾದ ಮಕ್ಕಳನ್ನು ಪಡೆದಳು.

೯೬. ಶಿನಿ ಎಂಬುವಳಿಗೆ ಅಸಂಗನೆಂದೂ ಯುಯಾಧಾನನೆಂದೂ ಇಬ್ಬರು ಮಕ್ಕಳು ಪ್ರಸಿದ್ಧರಾದರು. ಅವರಿಗೆ ಯುಗಂಧರನೆಂಬ ಮಗನಾದನು. ಆ ಯುಗಂಧರ ನಿಗೆ ನೂರು ಜನ ಮಕ್ಕಳಾದರು.

ಅನಮಿತ್ರಾನ್ವಯೋ ಯೋ ವೈ ವಿಖ್ಯಾತೋ ವೃಷ್ಣಿವಂಶಜಃ ।
ಅನಮಿತ್ರಾಚ್ಛಿನಿರ್ಜಜ್ಞೇ ಕನಿಷ್ಠಾದ್ವೃಷ್ಣಿನಂದನಃ ॥ ೯೭ ॥

ಅನಮಿತ್ರಾಚ್ಚ ಸಂಜಜ್ಞೇ ವೃಷ್ಣಿವೀರೋ ಯುಧಾಜಿತಃ ।
ಅನ್ಯೌ ತು ತನಯೌ ವೀರೌ ಋಷಭಃ ಕ್ಷತ್ರ ಏವ ಚ ॥ ೯೮ ॥

ಋಷಭಃ ಕಾಶಿರಾಜಸ್ಯ ಸುತಾಂ ಭಾರ್ಯಾಮವಿಂದತ ।
ಜಯಂತಶ್ಚ ಜಯಂತೀಂ ಚ ಶುಭಾಂ ಭಾರ್ಯಾಮವಿಂದತ ॥ ೯೯ ॥

ಜಯಂತಸ್ಯ ಜಯಂತ್ಯಾಸ್ತು ಪುತ್ರಃ ಸಮಭವಚ್ಛುಭಃ ।
ಸದಾ ಯಜ್ವಾತಿಧೀರಶ್ಚ ಶ್ರುತವಾನತಿಥಿಪ್ರಿಯಃ ॥ ೧೦೦ ॥

ಅಕ್ರೂರಃ ಸುಷುವೇ ತಸ್ಮಾತ್ಸದೀಕ್ಷೋ ಭೂರಿದಕ್ಷಿಣಃ ।
ರತ್ನಕನ್ಯಾ ಚ ಶೈಬ್ಯಾ ಚ ಅಕ್ರೂರಸ್ತಾಮವಾಪ್ತವಾನ್ ॥ ೧೦೧ ॥

ಪುತ್ರಾನುತ್ಪಾದಯಾಮಾಸ ಏಕಾದಶ ಮಹಾಬಲಾನ್ ।
ಉಪಲಂಭಂ ಸದಾಲಂಭಮುತ್ಕಲಂ ಚಾರ್ಯಶೈಶವಂ ॥ ೧೦೨ ॥

---

೯೭-೯೮. ವೃಷ್ಣಿವಂಶದಲ್ಲಿ ಪ್ರಸಿದ್ಧನಾದ ಅನಮಿತ್ರನೆಂಬ ಚಿಕ್ಕವನಿಂದ ಶಿನಿ ಎಂಬುವನು ಹುಟ್ಟಿದನು. ಮತ್ತೊಬ್ಬ ಅನಮಿತ್ರನಿಂದ ವೀರನಾದ ಯುಧಾಜಿತನು ಹುಟ್ಟಿದನು. ಅಲ್ಲದೆ ಋಷಭ, ಕ್ಷತ್ರ ಎಂಬ ಮತ್ತಿಬ್ಬರು ಮಕ್ಕಳೂ ಆದರು.

೯೯. ಋಷಭನು ಕಾಶಿರಾಜನ ಮಗಳನ್ನು ಮದುವೆಯಾದನು. ಕ್ಷತ್ರನೆಂಬವನಿಗೆ ಜಯಂತನೆಂದು ನಾಮಾಂತರವುಂಟು. ಆತನು ಜಯಂತೀ ಎಂಬವಳನ್ನು ಮದುವೆಯಾದನು.

೧೦೦. ಜಯಂತಜಯಂತಿಯರಿಗೆ ಒಬ್ಬ ಮಗನಾದನು. ಅವನು ಯೋಗ್ಯನು. ಯಾವಾಗಲೂ ಯಾಗ ಮಾಡುತ್ತ ಧೀರನಾಗಿ ವಿದ್ಯಾವಂತನಾಗಿ ಅತಿಥಿಸತ್ಕಾರದಲ್ಲಿ ಪ್ರಿಯನಾಗಿದ್ದನು.

೧೦೧. ಆ ಜಯಂತನ ಮಗನಿಗೆ ಅಕ್ರೂರನೆಂಬ ಮಗನಾದನು. ಅವನು ದಾನಿಯಾಗಿದ್ದನು. ಅವನು ಶಿಬಿದೇಶದ ರತ್ನರಾಜನ ಮಗಳನ್ನು ಮದುವೆಯಾದನು.

೧೦೨-೧೦೩. ಆ ಅಕ್ರೂರನಿಗೆ ಉಪಲಂಭ, ಉತ್ಕಲ, ಆರ್ಯಶೈಶವ, ಸಧೀರ

ಸಧೀರಂ ಚ ಸದಾಪಕ್ಷಂ ಶತ್ರುಘ್ನಂ ವಾರಿಮೇಜಯಂ ।
ಧರ್ಮವೃಷ್ಟಿಂ ಚ ಧರ್ಮಂ ಚ ಸೃಷ್ಟಮೌಲಿಂ ತಥೈವ ಚ　　॥ ೧೦೩ ॥

ಸರ್ವೇ ಚ ಪ್ರತಿಹರ್ತಾರೋ ರತ್ನಾನಾಂ ಜಜ್ಞಿರೇ ತು ತೇ ।
ಅಂಕುರಾಚ್ಛೂರಸೇನಾಯಾಂ ಸುತೌ ದ್ವೌ ಕುಲನಂದನೌ　　॥ ೧೦೪ ॥

ದೇವವಾನುಪದೇವಶ್ಚ ಜಜ್ಞಾತೇ ದೇವಸಂಮತೌ ।
ಅಶ್ವಿನ್ಯಾಂ ತ್ರಿಚತುಷ್ಪುತ್ರಾಃ ಪೃಥುರ್ವಿಪೃಥುರೇವ ಚ　　॥ ೧೦೫ ॥

ಅಶ್ವತ್ಥಾಮಾ ಸುಬಾಹುಶ್ಚ ಸುಪಾರ್ಶ್ವಕಗವೇಷಣೌ ।
ರಿಷ್ಟನೇಮಿಃ ಸುವರ್ಚಾ ಚ ಸುಧರ್ಮಾ ಮೃದುರೇವ ಚ　　॥ ೧೦೬ ॥

ಅಭೂಮಿರ್ಬಹುಭೂಮಿಶ್ಚ ಸ್ಥವಿಷ್ಠೋऽನುಪಿತಸ್ತಥಾ ।
ಇಮಾಂ ಮಿಥ್ಯಾಭಿಶಸ್ತಿಂ ಯೋ ವೇದ ಕೃಷ್ಣಸ್ಯ ಬುದ್ಧಿಮಾನ್　　॥ ೧೦೭ ॥

ನ ಸ ಮಿಥ್ಯಾಭಿಶಾಪೇನ ಅಭಿಗಮ್ಯಶ್ಚ ಕೇನಚಿತ್ ।
ಐಕ್ಷ್ವಾಕೀ ಸುಷುವೇ ಪುತ್ರಂ ಶೂರಮದ್ಭುತಮೀಢುಷಂ　　॥ ೧೦೮ ॥

---

ಸದಾಪಕ್ಷ, ಶತ್ರುಘ್ನ, ವಾರಿಮೇಜಯ, ಧರ್ಮವೃಷ್ಟಿ, ಧರ್ಮ, ಸೃಷ್ಟಮೌಲಿ, ಎಂಬದಾಗಿ ಹನ್ನೊಂದು ಜನ ಮಹಾ ಬಲಿಷ್ಠರಾದ ಮಕ್ಕಳಾದರು.

೧೦೪. ಅವರೆಲ್ಲರೂ ಕೂಡ ರತ್ನಗಳನ್ನೇ ತರುವಷ್ಟು ಶೂರರಾಗಿದ್ದರು. ಅಂಕುರನೆಂಬವನಿಗೆ ಶೂರಸೇನೆಯೆಂಬುವಳಲ್ಲಿ ಇಬ್ಬರು ಮಕ್ಕಳಾದರು. ಆ ಇಬ್ಬರ ಹೆಸರು ದೇವವಾನ್, ಉಪದೇವ ಎಂದು. ಇಬ್ಬರೂ ದೇವತೆಗಳಿಗೆ ಇಷ್ಟರಾಗಿದ್ದರು

೧೦೫-೧೦೬. ಆ ವಂಶದಲ್ಲಿ ಅಶ್ವಿನಿ ಎಂದು ಪ್ರಸಿದ್ಧಳಾದವಳು ಪೃಥು, ವಿಪೃಥು, ಅಶ್ವತ್ಥಾಮ, ಸುಬಾಹು, ಸುಪಾರ್ಶ್ವ, ಗವೇಷಣ, ರಿಷ್ಟನೇಮಿಃ, ಸುವರ್ಚ, ಸುಧರ್ಮಾ, ಮೃದು, ಅಭೂಮಿ, ಬಹುಭೂಮಿ, ಸ್ಥವಿಷ್ಠ, ಅನುಪಿತ ಎಂಬುದಾಗಿ ಅನೇಕ ಜನ ಮಕ್ಕಳನ್ನು ಪಡೆದಳು.

೧೦೭. ಕೃಷ್ಣನಿಗೆ ಪ್ರಾಪ್ತವಾಗಿದ್ದ ಈ ಮಿಥ್ಯಾಪವಾದವನ್ನು ತಿಳಿದವನಿಗೆ ಮುಕ್ತೊಬ್ಬರಿಂದ ಮಿಥ್ಯಾಪವಾದವು ಪ್ರಾಪ್ತವಾಗುವುದಿಲ್ಲ.

೧೦೮-೧೧೦. ಇಕ್ಷ್ವಾಕುವಿಗೆ ಶೂರನಾದ ಮೀಢುಷನೆಂಬ ಮಗನಾದನು. ಆ ಮೀಢುಷನಿಗೆ ಶೂರರಾದ ಹತ್ತುಜನ ಗಂಡುಮಕ್ಕಳಾದರು. ಇವನ ಹೆಂಡತಿ

ಮಿಥುಷಾಸ್ತ್ವಜ್ಞಿರೇ ಶೂರಾದ್ಭೋಜಾಯಾಂ ಪುರುಷಾ ದಶ ।
ವಸುದೇವೋ ಮಹಾಬಾಹುಃ ಪೂರ್ವಮಾನಕದುಂದುಭಿಃ ॥ ೧೦೯ ॥

ದೇವಭಾಗಸ್ತಥಾ ಜಜ್ಞೇ ತತೋ ದೇವಾಶ್ರವಾಃ ಪುನಃ ।
ಅನಾಧೃಷ್ಟಿಃ ಕುನಿಶ್ಚೈವ ನಂದಿಶ್ಚೈವ ಸಕೃದ್ಯಶಃ ॥ ೧೧೦ ॥

ಶ್ಯಾಮಃ ಸಮಿಾಘಃ ಶಂಸಸ್ಯುಃ ಪಂಚ ಚಾಸ್ಯ ವರಾಂಗನಾಃ ।
ಶ್ರುತಕೀರ್ತಿಃ ಪೃಥಾ ಚೈವ ಶ್ರುತದೇವೀ ಶ್ರುತಿಶ್ರವಾಃ ॥ ೧೧೧ ॥

ರಾಜಾಧಿದೇವೀ ಚ ತಥಾ ಪಂಚೈತಾ ವೀರಮಾತರಃ ।
ವೃದ್ಧಸ್ಯ ಶ್ರುತದೇವೀ ಚ ಕಾರೂಷಂ ಸುಷುವೇ ನೃಪಂ ॥ ೧೧೨ ॥

ಕೈಕೇಯಾಚ್ಛ್ರುತಕೀರ್ತೇಸ್ತು ಜಜ್ಞೇ ಸೈಂಧವಕೋ ನೃಪಃ ।
ಶ್ರುತಶ್ರವಸಿ ಚೈದ್ಯಸ್ಯ ಸುನೀಥಃ ಸಮಪದ್ಯತ ॥ ೧೧೩ ॥

ರಾಜಾಧಿದೇವ್ಯಾಃ ಸಂಭೂತೋ ಧರ್ಮಭಾರ್ಯಾಭಿನಂದಿತಾ ।
ಶೂರಃ ಸಖ್ಯೇನ ಬದ್ಧೋಽಸೌ ಕುಂತಿಭೋಜೇ ಪೃಥಾಂ ದದೌ ॥ ೧೧೪ ॥

ಏವಂ ಕುಂತೀ ಸಮಾಖ್ಯಾತಾ ವಸುದೇವಸ್ವಸಾ ಪೃಥಾ ।
ಕುಂತಿಭೋಜೋಽದದಾತ್ತಾಂ ತು ಪಾಂಡೋರ್ಭಾರ್ಯಾಮನಿಂದಿತಾಂ ॥

---

ಭೋಜದೇಶದವಳು. ವಸುದೇವ, ಆನಕದುಂದುಭಿ, ದೇವಭಾಗ, ದೇವಶ್ರವ. ಅನಾಧೃಷ್ಟಿ, ಕುನಿ, ನಂದಿ, ಶ್ಯಾಮ, ಸಮಿಾಘ, ಶಂಸಸ್ಯ ಎಂದು ಅವರ ಹೆಸರುಗಳು. ಇವರಿಗೆ ಐವರು ಸೋದರಿಯರೂ ಇದ್ದರು.

೧೧೧. ಶ್ರುತಕೀರ್ತಿ, ಪೃಥೆ, ಶ್ರುತದೇವೀ. ಶ್ರುತಿಶ್ರುವೇ ರಾಜಾಧಿದೇವಿ ಎಂದು ಅವರ ಹೆಸರು. ಇವರೆಲ್ಲರೂ ವೀರರನ್ನೇ ಹೆತ್ತರು.

೧೧೨-೧೧೪. ವೃದ್ಧರಾಜನಿಂದ ಶ್ರುತದೇವಿಯು ಕಾರೂಷನೆಂಬುವನನ್ನು ಹೆತ್ತಳು. ಕೈಕೇಯ ರಾಜನಿಂದ ಶ್ರುತಕೀರ್ತಿಯು ಸೈಂಧವನನ್ನು ಹೆತ್ತಳು. ಚೈದ್ಯ ರಾಜನಿಂದ ಶ್ರುತಶ್ರವಸೆಯು ಸುನೀಥನನ್ನು ಹಡೆದಳು. ರಾಜಾಧಿದೇವಿಯಲ್ಲಿ ಹುಟ್ಟಿದವಳು ಧರ್ಮ ಅಭಯಗಳಿಲ್ಲದವಳಾದಳು. ಶೂರನು ತನ್ನ ಸ್ನೇಹಿತನಾದ ಕುಂತಿಭೋಜನಿಗೆ ಪೃಥೆಯನ್ನು ಕೊಟ್ಟನು.

೧೧೫. ಈರೀತಿಯಾಗಿ ವಸುದೇವನ ತಂಗಿಯಾದ ಪೃಥೆ ಎಂಬುವಳು ಕುಂತಿಭೋಜನಿಗೆ ಸೇರಿದವಳಾದುದರಿಂದ ಕುಂತಿಯೆಂದು ಹೆಸರಾದಳು ಆನಂತರ ಈ ಕುಂತಿಭೋಜನು ಆ ಪೃಥೆಯನ್ನು ಪಾಂಡವನಿಗೆ ಕೊಟ್ಟನು.

**ಪಾಂಡೋರರ್ಥೇಽಸೂತ ದೇವೀ ದೇವಪುತ್ರಾನ್ಮಹಾರಥಾನ್ ।**
**ಧರ್ಮಾದ್ಯುಧಿಷ್ಠಿರೋ ಜಜ್ಞೇ ವಾತಾಜ್ಜಾತೋ ವೃಕೋದರಃ ॥ ೧೧೬ ॥**

**ಇಂದ್ರಾದ್ಧನಂಜಯಶ್ಚೈವ ಶಕ್ರತುಲ್ಯಪರಾಕ್ರಮಃ ।**
**ಯೋಽಸೌ ತ್ರಿಪುರುಷಾಜ್ಜಾತಸ್ತ್ರಿಭಿರಂಶೈರ್ಮಹಾರಥಃ ॥ ೧೧೭ ॥**

**ದೇವಕಾರ್ಯಕರಶ್ಚೈವ ಸರ್ವದಾನವಸೂದನಃ ।**
**ಅವಧ್ಯಾಶ್ಚಾಪಿ ಶಕ್ರಸ್ಯ ದಾನವಾ ಯೇನ ಘಾತಿತಾಃ ॥ ೧೧೮ ॥**

**ಸ್ಥಾಪಿತೋ ಯಃ ಸ ಶಕ್ರೇಣ ಲಬ್ಧವರ್ಚಾಸ್ತ್ರಿವಿಷ್ಟಪೇ ।**
**ಕುಶಸ್ಥಲೀಂ ಸಮಾನೀತೇ ಪ್ರತಿಮೇ ದೇವಪೂಜಿತೇ ॥ ೧೧೯ ॥**

**ಪಾರಿಜಾತೋದ್ಭವೇ ದೇವೇ ವಿಶ್ವಕರ್ಮಾ ಚಕಾರ ಯೇ ।**
**ಮರ್ತ್ಯಲೋಕಮಥಾನೀಯ ನರನಾರಾಯಣಾವುಭೌ ॥ ೧೨೦ ॥**

---

೧೧೬-೧೧೭. ಆ ಪೃಥೆಯು ಪಾಂಡುವಿಗೋಸ್ಕರ ಮಹಾರಥರಾದ ಮಕ್ಕಳನ್ನು ದೇವತೆಗಳಿಂದ ಪಡೆದಳು. ಧರ್ಮನಿಂದ ಯುಧಿಷ್ಠಿರನನ್ನೂ, ವಾಯುವಿನಿಂದ ವೃಕೋದರನನ್ನೂ, ಇಂದ್ರನಿಂದ ಧನಂಜಯನನ್ನೂ ಪಡೆದಳು. ಈ ಧನಂಜಯನು ಇಂದ್ರನಿಗೆ ಸಮನಾದ ಪರಾಕ್ರಮಿಯು. ಈತನು ಮೂರುಜನಗಳಿಂದ ಮೂರು ಅಂಶಗಳಿಂದ ಹುಟ್ಟಿದವನು.

೧೧೮. ಅವನು ದೇವತೆಗಳ ಕೆಲಸವನ್ನೂ ಮಾಡಿದನು. ಮತ್ತು ಎಲ್ಲಾ ದಾನವರನ್ನೂ ಕೊಂದನು. ಇಂದ್ರನಿಗೂ ಕೂಡ ಅವಧ್ಯನಾಗಿದ್ದನು.

೧೧೯. ಆ ಅರ್ಜುನನು ಗೌರವವನ್ನು ಹೊಂದಿದವನಾಗಿ ಇಂದ್ರನಿಂದ ದೇವಲೋಕದಲ್ಲಿ ತನ್ನ ಅರ್ಧಾಸನದಲ್ಲಿ ಕೂರಿಸಲ್ಪಟ್ಟನು. ವಿಶ್ವಕರ್ಮನು ಪಾರಿಜಾತವೃಕ್ಷದಲ್ಲಿ ಮಾಡಿದ ಎರಡು ಪ್ರತಿಮೆಗಳು ದೇವತೆಗಳಿಂದ ಪೂಜಿಸಲ್ಪಟ್ಟವುಗಳಾಗಿ ಕುಶಸ್ಥಲಿಗೆ ತರಲ್ಪಟ್ಟುವು.

೧೨೦. ಆ ಕುಶಸ್ಥಲಿಯಲ್ಲಿ ಆಪ್ರತಿಮೆಗಳಲ್ಲಿ ಒಂದು ನರನೆಂದೂ ಮತ್ತೊಂದು ನಾರಾಯಣನೆಂದೂ ಖ್ಯಾತವಾಗಿ ಪ್ರಾಣಿಗಳಂತೆ ಖ್ಯಾತವಾದುವು. ಅನಂತರ ಅವರಿಬ್ಬರನ್ನೂ ಮನುಷ್ಯಲೋಕಕ್ಕೆ ಬರಮಾಡಿ ಆಗ ಅವರಿಗೆ ಅರ್ಜುನ ವಾಸುದೇವರೆಂದು ಹೆಸರಿಟ್ಟರು. ಇವರು ದೇವತಾಸ್ವರೂಪರಾಗಿದ್ದರು.

ಅರ್ಜುನೋ ವಾಸುದೇವಶ್ಚ ದೃಷ್ಟ್ವಾ ದೇವೌ ತತ್ರ ಚಕ್ರತುಃ ।
ತೃತೀಯಮರ್ಜುನಂ ಚಕ್ರೇ ಕೇಶವಾರ್ಧಂ ತು ಕೇಶವಂ ॥ ೧೨೧ ॥

ಸ್ಥಾಪಯಿತ್ವಾ ಪುನರ್ಜಾತೌ ಭುವೋ ಭಾರಾವತಾರಣಾತ್ ।
ಮಾದ್ರವತ್ಯಾಂ ತು ಜನಿತಾವಶ್ವಿನಾವಿತಿ ನಃ ಶ್ರುತಂ ॥ ೧೨೨ ॥

ನಕುಲಃ ಸಹದೇವಶ್ಚ ರೂಪಸತ್ತ್ವಗುಣಾನ್ವಿತೌ ।
ರೋಹಿಣೀ ಪೌರವೀ ನಾಮ ಭಾರ್ಯಾ ಚಾನಕದುಂದುಭೇಃ ॥ ೧೨೩ ॥

ಲೇಭೇ ಜ್ಯೇಷ್ಠಂ ಸುತಂ ರಾಮಂ ಸಾರಣಂ ಚ ರಣಪ್ರಿಯಂ ।
ದುರ್ಧರಂ ದಮನಂ ಚೈವ ಪಿಂಡಾರಕಮಹಾಹನುಂ ॥ ೧೨೪ ॥

ಅಥ ಮಾಯಾ ತ್ವಮಾವಾಸ್ಯಾ ದೇವಕೀ ಯಾ ಭವಿಷ್ಯತಿ ।
ತಸ್ಯಾಂ ಜಜ್ಞೇ ಮಹಾಬಾಹುಃ ಪೂರ್ವಂ ತು ಸ ಪ್ರಜಾಪತಿಃ ॥ ೧೨೫ ॥

---

೧೨೧. ಮತ್ತೆ ಮೂರನೆಯಬಾರಿ ಅರ್ಜುನನ ಅಂಶದಿಂದ ಅರ್ಜುನನನ್ನೂ ಕೇಶವನಿಂದ ಕೇಶವನನ್ನೂ ಸೃಷ್ಟಿಸಲಾಯಿತು.

೧೨೨. ಈರೀತಿ ಅವರನ್ನು ಪರಮಾತ್ಮನು ಮಾಡಿ ಭೂಮಿಯ ಭಾರವನ್ನು ನಾಶಮಾಡಲು ಇಟ್ಟನು.

೧೨೩. ಪಾಂಡುವಿನ ಮತ್ತೊಬ್ಬಳು ಹೆಂಡತಿಯಾದ ಮಾದ್ರಿಯಲ್ಲಿ ಅಶ್ವಿನೀ ದೇವತೆಗಳೇ ಹುಟ್ಟಿದರೆಂದು ಕೇಳಿದ್ದೇನೆ. ಅವರೇ ನಕುಲ ಸಹದೇವರು. ರೂಪ, ಬಲಗಳಲ್ಲಿ ಬಹು ಪ್ರಖ್ಯಾತರಾಗಿದ್ದರು.

೧೨೪. ಪುರುಕುಲದಲ್ಲಿ ಹುಟ್ಟಿದ ರೋಹಿಣಿಯು ಆನಕದುಂದುಭಿಯ ಹೆಂಡತಿಯು. ಈಕೆಗೆ ರಾಮ, ಸಾರಣ, ದುರ್ಧರ, ದಮನ, ಪಿಂಡಾರಕ, ಮಹಾಹನು ಎಂಬುವರು ಮಕ್ಕಳಾದರು.

೧೨೫. ಅಮಾವಾಸ್ಯೆ ಎಂಬ ಮಾಯೆಯೇ ದೇವಕಿಯಾಗಿ ಹುಟ್ಟಿದಳು. ಈ ರಾಮನು ಮೊದಲಿನಲ್ಲಿ ಆಕೆಯಲ್ಲಿ ಗರ್ಭವಾಗಿ ಮೂಡಿದ್ದನು.

ಅನುಜಾತೋಽಭವತ್ಕೃಷ್ಣಃ ಸುಭದ್ರಾ ಭದ್ರಭಾಷಿಣೀ ।
ವಿಜಯೋ ರೋಚಮಾನಸ್ತು ವರ್ಧಮಾನಶ್ಚ ದೇವಲಂ ॥ ೧೨೬ ॥

ಏತೇ ಸರ್ವೇ ಮಹಾತ್ಮಾನ ಉಪದೇವ್ಯಾಂ ಪ್ರಜಜ್ಞಿರೇ ।
ಅಗಾವಹಂ ಮಹಾತ್ಮಾನಂ ವೃಕದೇವ್ಯಾಮಜಾಯತ ॥ ೧೨೭ ॥

ವೃಕದೇವ್ಯಾಂ ಸ್ವಯಂ ಜಜ್ಞೇ ಮಂದಕೋ ನಾಮ ನಾಮತಃ ।
ಸಪ್ತಮಂ ದೇವಕೀ ಪುತ್ರಂ ರೇಮಂತಂ ಸುಷುವೇ ನೃಪ ॥ ೧೨೮ ॥

ಗವೇಷಣಂ ಮಹಾಭಾಗಂ ಸಂಗ್ರಾಮೇಷ್ವಪರಾಜಿತಂ ।
ಶ್ರದ್ಧಾದೇವ್ಯಾಂ ವಿಹಾರೇ ತು ವನೇ ವಿಚರತಾ ಪುರಾ ॥ ೧೨೯ ॥

ವೈಶ್ಯಾಯಾಂ ಸಮಧಾಚ್ಛೌರಿಃ ಪುತ್ರಂ ಕೌಶಿಕಮಗ್ರಜಂ ।
ಶ್ರುತಂಧರಾಽಥ ರಾಜ್ಞೀ ತು ಸೌರಗಂಧಪರಿಗ್ರಹಃ ॥ ೧೩೦ ॥

ಪುತ್ರಂ ಚ ಕಪಿಲಂ ಚೈವ ವಸುದೇವಾತ್ಮಜೋ ಬಲೀ ।
ಜನಾನಾಮಭಿಷಂಗೋಽಭೂತ್ಪ್ರಥಮಃ ಸ ಧನುರ್ಧರಃ ॥ ೧೩೧ ॥

---

೧೨೬. ಆ ದೇವಕಿಯಲ್ಲಿ ಕೃಷ್ಣನು ರಾಮನ ಹಿಂದೆ ಹುಟ್ಟಿದನು. ಮತ್ತು ಸುಭದ್ರೆ ಎಂಬುವಳೂ ಹುಟ್ಟಿದಳು.

೧೨೭. ವಿಜಯ, ರೋಚಮಾನ, ವರ್ಧಮಾನರು. ಇವರೂ ದೇವಕಿಯ ಮಕ್ಕಳು. ಇವರೆಲ್ಲರೂ ಮಹಾಮಹಿಮರು. ಉಪದೇವಿಯಾದ ದೇವಕಿಯಲ್ಲಿ ಹುಟ್ಟಿದರು.

೧೨೮. ನಾನೂ ಕೂಡ ಆ ಮಹಿಮನಲ್ಲಿ ಹುಟ್ಟಬೇಕೆಂದು ಯೋಚಿಸಿ ಹೋದೆನು. ವೃಕದೇವಿಯಲ್ಲಿ ಮಂದಕನೆಂದು ಹೆಸರಿನಿಂದ ಹುಟ್ಟಿದೆನು.

೧೨೯. ದೇವಕಿಯು ಏಳನೆಯವನಾದ ರೇಮಂತನೆಂಬ ಮಗನನ್ನು ಹೊಂದಿದಳು. ಮಹಾಶೂರನಾದ ಗವೇಷಣನೆಂಬ ಮಹಾನುಭಾವನನ್ನು ವನದಲ್ಲಿ ವಿಹರಿಸುತ್ತಿದ್ದಾಗ ಶ್ರದ್ಧಾದೇವಿಯಲ್ಲಿ ಹೊಂದಿದನು.

೧೩೦. ಶೌರಿಯು (ವಸುದೇವನು) ವೈಶ್ಯೆಯಲ್ಲಿ ಕೌಶಿಕನೆಂಬ ಮಗನನ್ನೂ ಹೊಂದಿದನು.

೧೩೧. ವಸುದೇವನಿಗೆ ಸಾರಂಗಧರನ ಮಗಳಾದ ಶ್ರುತಂಧರೆಯಲ್ಲಿ ಕಪಿಲನೆಂಬ ಮಗನು ಹುಟ್ಟಿದನು. ಅವನು ಬಹು ಬಲಿಷ್ಠನು. ಈ ಕಪಿಲನು ಧನುರ್ಧಾರಿಗಳಲ್ಲಿ ಮೊದಲನೆಯವನಾಗಿ ಜನಗಳಲ್ಲಿ ಪ್ರಿಯನಾದನು.

ಸೌಭದ್ರಶ್ಚಾಭವಚ್ಚೈವ ಮಹಾಸತ್ತ್ವಾ ಬಭೂವತುಃ ।
ದೇವಭಾಗಸುತಶ್ಚಾಪಿ ಪ್ರಸ್ತಾವಃ ಸ ಬುಧಃ ಸ್ಮೃತಃ ॥ ೧೩೨ ॥

ಪಂಡಿತಂ ಪ್ರಥಮಂ ಬಾಹುದೇವಶ್ರವಸಮುತ್ತಮಂ ।
ಜಜ್ಞ ಇಕ್ಷ್ವಾಕುಕುಲತೋ ಅನಾಧೃಷ್ಟೇರ್ಯಶಸ್ವಿನೀ ॥ ೧೩೩ ॥

ನಿವೃತ್ತಶತ್ರುಃ ಶತ್ರುಘ್ನಃ ಶುದ್ಧಾತ್ತಸ್ಮಾದಜಾಯತ ।
ಗಂಡೂಷಾಯಾಮಪತ್ಯಾನಿ ತುಷ್ಟಃ ಕೃಷ್ಣಃ ಶತಂ ದದೌ ॥ ೧೩೪ ॥

ಸುಚಂದ್ರಂ ತು ಮಹಾಭಾಗಂ ವೀರ್ಯವಂತಂ ಮಹಾಬಲಂ ।
ರತಿಪಾಲಶ್ಚ ರಕ್ಷಿಶ್ಚ ನಂದನಸ್ಯ ಸುತಾವುಭೌ ॥ ೧೩೫ ॥

ಸಮೀಕಪುತ್ರಾಶ್ಚತ್ವಾರೋ ವಿಕ್ರಾಂತಾಃ ಸುಮಹಾಬಲಾಃ ।
ವಿರಜಶ್ಚ ಧನುಶ್ಚೈವ ವ್ಯೋಮಸ್ತಸ್ಯ ಸಸ್ಯಂಜಯಃ ॥ ೧೩೬ ॥

ಅನಪತ್ಯೋಽಭವದ್ವ್ಯೋಮಃ ಸಮೀಕಸ್ತು ವನಂ ಯಯೌ ।
ಯೋ ಜಾಯಮಾನೋ ಭೋಜತ್ವಂ ರಾಜರ್ಷಿತ್ವಮವಾಪ್ತವಾನ್ ॥

---

೧೩೨. ಸೌಭದ್ರ ಅಭವರೆಂಬುವರು ಬಹು ಬಲಶಾಲಿಗಳಾಗಿದ್ದರು. ದೇವಭಾಗನ ಮಗನು ಪ್ರಸ್ತಾವನೆಂಬುವನು. ಅವನು ಒಳ್ಳೆಯ ಪಂಡಿತನು.

೧೩೩. ಅನಾಧೃಷ್ಟಿಯೆಂಬ ಇಕ್ಷ್ವಾಕುಕುಲದವನಿಂದ ಪಂಡಿತನಾದ ಬಾಹುದೇವಶ್ರವನೆಂಬುವನು ಹುಟ್ಟಿದನು.

೧೩೪. ಶುದ್ಧನಾದ ಆ ಬಾಹುದೇವಶ್ರವಸನಿಂದ ಶತ್ರುಗಳಿಲ್ಲದ ಶತ್ರುಘ್ನನು ಹುಟ್ಟಿದನು. ಗಂಡೂಷಾ ಎಂಬುವಳಲ್ಲಿ ಕೃಷ್ಣನಿಗೆ ನೂರು ಜನ ಮಕ್ಕಳಾದರು.

೧೩೫. ಆ ನೂರು ಜನಗಳಲ್ಲಿ ಸುಚಂದ್ರನೇ ಮುಖ್ಯನಾದವನು. ಅವನು ಬಹು ವೀರ್ಯವಂತನೂ, ಬಲಿಷ್ಠನೂ ಆಗಿದ್ದನು. ರತಿಪಾಲನೂ, ರಕ್ಷಿಯೂ, ಇಬ್ಬರೂ ನಂದನ ಮಕ್ಕಳು.

೧೩೬. ಸಮೀಕನಿಗೆ ವಿರಜ, ಧನ, ವ್ಯೋಮ ಸಸ್ಯಂಜಯರೆಂದು ಬಹು ಶೂರರಾದ ನಾಲ್ವರು ಮಕ್ಕಳು.

೧೩೭. ವ್ಯೋಮನಿಗೆ ಮಕ್ಕಳಾಗಲಿಲ್ಲ, ಸಮೀಕನು ಕಾಡಿಗೆ ಹೋದನು. ಅವನು ಹುಟ್ಟಿದಾಗಿನಿಂದಲೇ ಆಹಾರನಿಯಮವುಳ್ಳವನಾಗಿ ರಾಜರ್ಷಿಯೆನ್ನಿಸಿಕೊಂಡಿದ್ದನು.

ಕೃಷ್ಣಸ್ಯ ಜನ್ಮಾಭ್ಯುದಯಂ ಯಃ ಕೀರ್ತಯತಿ ನಿತ್ಯಶಃ ।
ಶೃಣೋತಿ ವಾ ನರೋ ನಿತ್ಯಂ ಸರ್ವಪಾಪೈಃ ಪ್ರಮುಚ್ಯತೇ ॥ ೧೩೮ ॥

ಅಥ ದೇವೋ ಮಹಾದೇವಃ ಪೂರ್ವಂ ಕೃಷ್ಣಃ ಪ್ರಜಾಪತಿಃ ।
ವಿಹಾರಾರ್ಥಂ ಸ ದೇವೇಶೋ ಮಾನುಷೇಷ್ವಪ್ಯಜಾಯತ ॥ ೧೩೯ ॥

ದೇವಕ್ಯಾಂ ವಸುದೇವೇನ ತಪಸಾ ಪುಷ್ಕರೇಕ್ಷಣಃ ।
ಚತುರ್ಬಾಹುಸ್ತು ಸಂಜಾತೋ ದಿವ್ಯರೂಪೋ ಜನಪ್ರಿಯಃ ॥ ೧೪೦ ॥

ಶ್ರೀವತ್ಸಲಕ್ಷಣಂ ದೇವಂ ದೃಷ್ಟ್ವಾ ದೇವೈಃ ಸಲಕ್ಷಣಂ ।
ಉವಾಚ ವಸುದೇವಸ್ತಂ ರೂಪಂ ಸಂಹರ ವೈ ಪ್ರಭೋ ॥ ೧೪೧ ॥

ಭೀತೋಽಹಂ ಕಂಸದೇವಸ್ಯ ತತಸ್ತ್ವೇತದ್ಬ್ರವೀಮಿ ತೇ ।
ಮಮ ಪುತ್ರಾ ಹತಾಸ್ತೇನ ಶ್ರೇಷ್ಠಾಃ ಷಡ್ಭೀಮದರ್ಶನಾಃ ॥ ೧೪೨ ॥

ವಸುದೇವವಚಃ ಶ್ರುತ್ವಾ ರೂಪಂ ಸಂಹರದಚ್ಯುತಃ ।
ಅನುಜ್ಞಾಪ್ಯ ತು ತಂ ಶೌರಿರ್ನಂದಗೋಪಗೃಹಂ ನಯತ್ ॥ ೧೪೩ ॥

---

೧೩೮. ಶ್ರೀ ಕೃಷ್ಣನ ಹುಟ್ಟುವಿಕೆ ಏಳಿಗೆಗಳನ್ನು ನಿತ್ಯವೂ ಕೇಳುವವನೂ, ಹೇಳುವವನೂ, ಎಲ್ಲಾ ಪಾಪಗಳಿಂದಲೂ ಬಿಡುಗಡೆಹೊಂದುತ್ತಾನೆ

೧೩೯. ಆ ಮಹಾದೇವನಾದ ಪರಬ್ರಹ್ಮನೇ ಕೃಷ್ಣನು. ಅವನು ವಿಹಾರ ಕ್ರೀಡೆಸ್ಕರ ಮನುಷ್ಯರಲ್ಲಿ ಹುಟ್ಟಿದನು.

೧೪೦. ವಸುದೇವನ ತಪಸ್ಸಿನಿಂದ ಆ ಕಮಲಾಕ್ಷನು ದೇವಕಿಯಲ್ಲಿ ನಾಲ್ಕು ತೋಳುಳ್ಳವನಾಗಿ ಸುಂದರನಾಗಿ ಹುಟ್ಟಿದನು.

೧೪೧-೧೪೨. ಆ ಶ್ರೀವತ್ಸವೆಂಬ ಮಚ್ಚೆಯೇ ಗುರುತಾಗಿವುಳ್ಳ ಆ ಮಹಾ ಸ್ವಾಮಿಯನ್ನು ನೋಡಿ ವಸುದೇವನು ಎಲೈ ದೇವನೇ, ನಿನ್ನ ರೂಪವನ್ನು ಕಡಿಮೆ ಮಾಡಿ ಸಾಧಾರಣ ಮನುಷ್ಯರಂತೆ ಇರು. ಕಂಸನು ನಿನ್ನನ್ನು ಏನು ಮಾಡುವನೋ ಎಂದು ಹೆದರುತ್ತೇನೆ. ಆತನು ಉತ್ತಮರಾದ ಆರು ಜನ ನನ್ನ ಮಕ್ಕಳನ್ನು ಕೊಂದನು. ಆದ್ದರಿಂದ ಇನ್ನು ನಿನಗೆ ಹೇಳುತ್ತೇನೆ ಎಂದನು.

೧೪೩. ವಸುದೇವನ ಮಾತಿನಂತೆ ಕೃಷ್ಣನು ರೂಪವನ್ನು ಕಡಿಮೆಮಾಡಿ ಕೊಂಡನು. ಮತ್ತು ಆ ವಸುದೇವನಿಗೆ ಅನುಗ್ರಹಿಸಿ ನಂದಗೋಪನ ಮನೆಗೆ ಒಯ್ಯಲ್ಪಟ್ಟನು.

ದತ್ವಾ ತಂ ನಂದಗೋಪಾಯ ರಕ್ಷ್ಯತಾಮಿತಿ ಚಾಬ್ರವೀತ್ ।
ಅತಸ್ತು ಸರ್ವಕಲ್ಯಾಣಂ ಯಾದವಾನಾಂ ಭವಿಷ್ಯತಿ ॥ ೧೪೪ ॥

ಅಯಂ ತು ಗರ್ಭೋ ದೇವಕ್ಯಾ ಯಾವತ್ಕಂಸಂ ಹನಿಷ್ಯತಿ ।
ತಾವತ್ಪೃಥಿವ್ಯಾಂ ಭವಿತಾಕ್ಷೇಮೋ ಭಾರವಹಃ ಪರಂ ॥ ೧೪೫ ॥

ಯೇ ತು ದುಷ್ಟಾಶ್ಚ ರಾಜಾನಸ್ತಾಂಸ್ತು ಸರ್ವಾನ್ಹನಿಷ್ಯತಿ ।
ಕೌರವಾಣಾಂ ರಣೇ ಭೂತೇ ಸರ್ವಕ್ಷತ್ರಸಮಾಗಮೇ । ೧೪೬ ॥

ಸಾರಥ್ಯಮರ್ಜುನಸ್ಯೈಷ ಸ್ವಯಂ ದೇವಃ ಕರಿಸ್ಯತಿ ।
ನಿಃಕ್ಷತ್ರಿಯಾಂ ಧರಾಂ ಕೃತ್ವಾ ಭೋಕ್ಷ್ಯತೇ ಶೇಷತಾಂ ಗತಾಂ ।
ಸರ್ವಂ ಯದುಕುಲಂ ಚೈವ ದೇವಲೋಕಂ ನಯಿಷ್ಯತಿ ॥ ೧೪೭ ॥

॥ ಭೀಷ್ಮ ಉವಾಚ ॥

ಕ ಏಷ ವಸುದೇವಸ್ತು ದೇವಕೀ ಕಾ ಯಶಸ್ವಿನೀ ।
ನಂದಗೋಪಶ್ಚ ಕಶ್ಚೈಷ ಯಶೋದಾ ಕಾ ಮಹಾವ್ರತಾ ॥ ೧೪೮ ॥

ಯಾ ವಿಷ್ಣುಂ ಪೋಷಿತವತೀ ಯಾಂ ಚ ಮಾತೇತ್ಯಭಾಷತ ।
ಯಾ ಗರ್ಭಂ ಜನಯಾಮಾಸ ಯಾ ಚೈನಂ ಸಮವರ್ಧಯತ್ ॥ ೧೪೯ ॥

---

೧೪೪. ಆ ಕೃಷ್ಣನನ್ನು ನಂದಗೋಪನಿಗೆ ಕೊಟ್ಟು ಇವನನ್ನು ಕಾಪಾಡು. ಇವನಿಂದ ಯಾದವರಿಗೆ ಸಕಲ ಕಲ್ಯಾಣವೂ ಆಗುತ್ತದೆಂದು ಹೇಳಿದನು.

೧೪೫. ದೇವಕಿಯ ಆ ಗರ್ಭವನ್ನು ಕಂಸನು ಕೊಲ್ಲುವವರೆಗೂ ಭೂಭಾರವು ಕಡಿಮೆಯಾಗದೆ ಕ್ಷೇಮವುಂಟಾಗುವುದಿಲ್ಲ. ಅಲ್ಲದೆ ಈತನು ದುಷ್ಟರಾದ ರಾಜರೆಲ್ಲರನ್ನೂ ಕೊಲ್ಲುವನು. ಇವನು ದೇವಕಿಯ ಮಗನು, ಕಂಸನನ್ನು ಕೊಲ್ಲುವನು.

೧೪೬-೧೪೭. ಕೌರವರಿಗೆ ಯುದ್ಧವಾಗುವಾಗ ಎಲ್ಲಾ ಕ್ಷತ್ರಿಯರೂ ಸೇರುವರು. ಆಗ ಅರ್ಜುನನಿಗೆ ಈತನು ಸಾರಥ್ಯವನ್ನು ಮಾಡುವನು, ಭೂಮಿಯಲ್ಲಿ ಕ್ಷತ್ರಿಯರೆಲ್ಲರನ್ನೂ ಸಂಹರಿಸಿ ಉಳಿದವರನ್ನು ಆಳುತ್ತಾನೆ. ಯದುಕುಲದವರೆಲ್ಲರನ್ನೂ ಒಯ್ಯುತ್ತಾನೆ ಎಂದನು.

೧೪೮. ಭೀಷ್ಮನು ಹೇಳಿದನು:—ಈ ವಸುದೇವನಾರು? ಆ ಮಹಿಮಳಾದ ದೇವಕಿಯಾರು? ನಂದಗೋಪನೂ ಯಾರೂ? ಯಶೋದೆ ಯಾರು?

೧೪೯. ವಿಷ್ಣುವನ್ನು ಯಾವಾಕೆಯು ಪೋಷಿಸಿದಳೋ, ಯಾವಳನ್ನು ವಿಷ್ಣುವು ತಾಯಿಯೆಂದು ಕರೆದನೋ, ಯಾವಾಕೆಯು ಹೆತ್ತು ಅವನನ್ನು ಪೋಷಿಸಿದಳೋ ಅಂತಹ ಯಶೋದೆಯು ಯಾರು?

॥ ಪುಲಸ್ತ್ಯ ಉವಾಚ ॥
ಪುರುಷಃ ಕಶ್ಯಪಶ್ಚಾಸಾವದಿತಿಸ್ತು ಪ್ರಿಯಾ ಸ್ಮೃತಾ ।
ಬ್ರಹ್ಮಣಃ ಕಶ್ಯಪಸ್ತ್ವಂಶಃ ಪೃಥಿವ್ಯಾಸ್ತ್ವದಿತಿಸ್ತಥಾ ॥ ೧೫೦ ॥

ನಂದೋ ದ್ರೋಣಃ ಸಮಾಖ್ಯಾತೋ ಯಶೋದಾಥ ಧರಾಽಭವತ್ ।
ಅಥ ಕಾಮಾನ್ಮಹಾಬಾಹುರ್ದೇವಕ್ಯಾಃ ಸಮಪೂರಯತ್ ॥ ೧೫೧ ॥

ಯತ್ತಯಾ ಪ್ರಾರ್ಥಿತಂ ಪೂರ್ವಮಜಾತಸ್ಯ ಮಹಾತ್ಮನಃ ।
ಅಚಿರಂ ಸ ಮಹಾದೇವಃ ಪ್ರವಿಷ್ಟೋ ಮಾನುಷೀಂ ತನುಂ ॥ ೧೫೨ ॥

ಮೋಹಯನ್ಸರ್ವಭೂತಾನಿ ಯೋಗಾದ್ಯೋಗೀ ಸಮಾಯಯೌ ।
ನಷ್ಟೇ ಯಜ್ಞೇ ತಥಾ ಧರ್ಮೇ ವಿಷ್ಣುರ್ವೃಷ್ಣಿಕುಲೇ ಪ್ರಭುಃ ॥ ೧೫೩ ॥

ಕರ್ತುಂ ಧರ್ಮವ್ಯವಸ್ಥಾನಮಸುರಾಣಾಂ ಪ್ರಣಾಶನಂ ।
ರುಕ್ಮಿಣೀ ಸತ್ಯಭಾಮಾ ಚ ಸತ್ಯಾ ನಾಗ್ನಜಿತೀ ತಥಾ ॥ ೧೫೪ ॥

ಸುಮಿತ್ರಾ ಚ ತಥಾ ಶೈಬ್ಯಾ ಗಾಂಧಾರೀ ಲಕ್ಷ್ಮಣಾ ತಥಾ ।
ಸುಭೀಮಾ ಚ ತಥಾ ಮಾದ್ರೀ ಕೌಶಲ್ಯಾ ವಿರಜಾ ಚ ಯಾ ॥ ೧೫೫ ॥

---

೧೫೦. ಪುಲಸ್ತ್ಯನು ಹೇಳಿದನು :—ಕಶ್ಯಪನು ವಸುದೇವನಾಗಿಯೂ, ಅವನ ಹೆಂಡತಿಯಾದ ಅದಿತಿಯು ದೇವಕಿಯಾಗಿಯೂ ಅವತರಿಸಿದರು. ಆ ಕಶ್ಯಪನು ಬ್ರಹ್ಮನ ಅಂಶವು. ಅದಿತಿಯು ಪೃಥ್ವಿಯ ಅಂಶವು.

೧೫೧-೧೫೨. ನಂದನು ದ್ರೋಣನ ಅಂಶವು, ಯಶೋದೆಯು ಭೂಮಿಯ ಅಂಶವು, ದೇವಕಿಯು ಹಿಂದೆ ಕೇಳಿದ್ದಂತೆ ಆಕೆಯ ಇಷ್ಟವನ್ನು ಸ್ವಾಮಿಯು ಪ್ರಾರ್ಥಿಗೊಳಿಸಲು ಆಕೆಯ ಹೊಟ್ಟೆಯಲ್ಲಿ ಹುಟ್ಟಿದನು. ಆದ್ದರಿಂದಲೇ ಆ ಸ್ವಾಮಿಯು ಮನುಷ್ಯನ ಶರೀರವನ್ನು ಪ್ರವೇಶಿಸಿ ದೇವಕಿಯಲ್ಲಿ ಹುಟ್ಟಿದನು.

೧೫೩. ಯಜ್ಞಗಳೆಲ್ಲವೂ ನಾಶವಾಗಲು, ಧರ್ಮವು ಲೋಕದಲ್ಲಿ ನಾಶವಾಗಲು, ಆ ಮಹಾಸ್ವಾಮಿಯು ಧರ್ಮವನ್ನು ಸ್ಥಾಪಿಸಲು, ಅಸುರರನ್ನು ನಾಶಮಾಡಲು, ಆ ಯೋಗಿಯು ಎಲ್ಲಾ ಪ್ರಾಣಿಗಳನ್ನು ಮೋಹಗೊಳಿಸಿ ವೃಷ್ಣಿವಂಶದಲ್ಲಿ ಹುಟ್ಟಿದನು.

೧೫೪-೧೫೫. ರುಕ್ಮಿಣಿ, ಸತ್ಯಭಾಮಾ, ಸತ್ಯೆ, ನಾಗ್ನಜಿತೀ, ಸುಮಿತ್ರೆ, ಶೈಬ್ಯೆ, ಗಾಂಧಾರೀ, ಲಕ್ಷ್ಮಣಾ, ಸುಭೀಮಾ, ಮಾದ್ರೀ, ಕೌಶಲ್ಯೆ, ವಿರಜೆ, ಇವರೇ ಮುಂತಾದ ಹದಿನಾರು ಸಾವಿರ ಜನ ಹೆಂಡಿರು ಕೃಷ್ಣನಿಗಿದ್ದರು.

ಏವಮಾದೀನಿ ದೇವೀನಾಂ ಸಹಸ್ರಾಣಿ ಚ ಷೋಡಶ ।
ರುಕ್ಮಿಣೀ ಜನಯಾಮಾಸ ಪುತ್ರಾನ್ರಣವಿಶಾರದಾನ್ ॥ ೧೫೬ ॥

ಚಾರುದೇಷ್ಣಂ ರಣೇ ಶೂರಂ ಪ್ರದ್ಯುಮ್ನಂ ಚ ಮಹಾಬಲಂ ।
ಸುಚಾರುಂ ಚಾರುಭದ್ರಂ ಚ ಸದಶ್ವಂ ಹ್ರಸ್ವಮೇವ ಚ ॥ ೧೫೭ ॥

ಸಪ್ತಮಂ ಚಾರುಗುಪ್ತಂ ಚ ಚಾರುಭದ್ರಂ ಚ ಚಾರುಕಂ ।
ಚಾರುಹಾಸಂ ಕನಿಷ್ಠಂ ಚ ಕನ್ಯಾಂ ಚಾರುಮತೀಂ ತಥಾ ॥ ೧೫೮ ॥

ಜಜ್ಞಿರೇ ಸತ್ಯಭಾಮಾಯಾಃ ಸಪ್ತ ಭೀಮರಥರ್ಕ್ಷಮಾಃ ।
ರೋಹಿತೋ ದೀಪ್ತಿಮಾಂಶ್ಚೈವ ತಾಮ್ರಬಂಧೋ ಜಲಂಧಮಃ ॥ ೧೫೯ ॥

ತತಸ್ತೇ ಜಜ್ಞಿರೇ ತೇಷಾಂ ಸ್ವಸಾರಂ ಚ ಯವೀಯಸೀ ।
ಜಾಂಬವತ್ಯಾಂ ಸುತೋ ಜಜ್ಞೇ ಸಾಂಬ ಇತ್ಯೇವ ಶೋಭನಃ ॥ ೧೬೦ ॥

ಸೌರಶಾಸ್ತ್ರಸ್ಯ ಕರ್ತಾ ಚ ಪ್ರತಿಮಾ ಮಂದಿರಸ್ಯ ಚ ।
ಮೂಲಸ್ಥಾನಂ ನಿವೇಶಶ್ಚ ಕೃತಸ್ತೇನ ಮಹಾತ್ಮನಾ ॥ ೧೬೧ ॥

---

೧೫೬-೧೫೮. ರಣಶೂರನಾದ ಚಾರುದೇಷ್ಣ, ಮಹಾಬಲಿಷ್ಠನಾದ, ಪ್ರದ್ಯುಮ್ನ-ಸುಚಾರು, ಚಾರುಭದ್ರ, ಸದಶ್ವ, ಹ್ರಸ್ವ, ಚಾರುಗುಪ್ತ, ಎರಡನೆಯ ಚಾರುಭದ್ರ, ಚಾರುಕ, ಚಾರುಹಾಸರೆಂಬ ಗಂಡುಮಕ್ಕಳನ್ನೂ, ಚಾರುಮತಿಯೆಂಬ ಹೆಣ್ಣನ್ನೂ ಪಡೆದಳು.

೧೫೯. ಭೀಮರಥರಾದ ರೋಹಿತ, ದೀಪ್ತಿಮಂತ, ತಾಮ್ರಬಂಧ, ಜಲಂಧಮ ಮುಂತಾದ ಏಳು ಜನ ಮಕ್ಕಳೂ, ಒಬ್ಬಳು ಹೆಣ್ಣು ಮಗಳೂ, ಸತ್ಯಭಾಮೆಗೆ ಉದಯಿಸಿದರು.

೧೬೦-೧೬೧. ಜಾಂಬವತಿಗೆ ಸಾಂಬನೆಂಬುವನು ಒಬ್ಬನೇ ಮಗನು, ಆತನು ಜ್ಯೋತಿಶ್ಶಾಸ್ತ್ರಕ್ಕೆ ಕರ್ತನು, ಪ್ರತಿಮೆಗಳು, ಮನೆಗಳು, ಮೂಲಸ್ಥಾನ. ಕಟ್ಟಿತಕ್ಕ ನಿವೇಶನ, ಇವೆಲ್ಲದರ ಲಕ್ಷಣಗಳನ್ನೂ ಬರೆದನು. ಈತನಿಗೆ ಕುಷ್ಠರೋಗವಿದ್ದಿತು. ತುಷ್ಟನಾದ ಸ್ವಾಮಿಯು ಅದನ್ನು ಹೋಗಲಾಡಿಸಿದನು.

ತುಷ್ಟೇನ ದೇವದೇವೇನ ಕುಷ್ಠರೋಗೋ ವಿನಾಶಿತಃ ।
ಸುಮಿತ್ರಂ ಚಾರುಮಿತ್ರಂ ಚ ಮಿತ್ರವಂದಂ ವರಾಶನಂ　　　॥ ೧೬೨ ॥

ಮಿತ್ರಬಾಹುಂ ಸುನೀಥಂ ಚ ನಾಗ್ನಜಿತ್ಯಾಃ ಸುತಾ ಅಮೀ ।
ಏವಮಾದೀನಿ ಪುತ್ರಾಣಾಂ ಸಹಸ್ರಾಣಿ ನಿಬೋಧತ　　　॥ ೧೬೩ ॥

ಅಶೀತಿಶ್ಚ ಸಹಸ್ರಾಣಾಂ ವಾಸುದೇವಸುತಾಸ್ತಥಾ ।
ಪ್ರದ್ಯುಮ್ನಸ್ಯ ಚ ದಾಯಾದೋ ವೈದರ್ಭ್ಯಾಂ ಬುದ್ಧಿಸತ್ತಮಃ　　　॥ ೧೬೪ ॥

ಅನಿರುದ್ಧೋ ರಣೇ ಯೋದ್ಧಾ ಜಜ್ಞೇಽಸ್ಯ ಮೃಗಕೇತನೀ ।
ಕಾಮ್ಯಾ ಸುಪಾರ್ಶ್ವತನಯಾ ಸಾಂಬಂ ಲೇಭೇ ತರಸ್ವಿನಂ　　　॥ ೧೬೫ ॥

ಸಪ್ತ ಪ್ರಕೃತಯೋ ದೇವಾಃ ಪರಾಃ ಪಂಚ ಪ್ರಕೀರ್ತಿತಾಃ ।
ತಿಸ್ರಃ ಕೋಟ್ಯಃ ಪ್ರವೀರಾಣಾಂ ಯಾದವಾನಾಂ ಮಹಾತ್ಮನಾಂ　　　॥ ೧೬೬ ॥

ಷಷ್ಟಿಃ ಶತಸಹಸ್ರಾಣಿ ವೀರ್ಯವಂತೋ ಮಹಾಬಲಾಃ ।
ತೇ ದೇವಾಃ ಸರ್ವ ಏವೇಹ ಉತ್ಪನ್ನಾಸ್ತೇ ಮಹೌಜಸಃ　　　॥ ೧೬೭ ॥

---

೧೬೨-೧೬೩. ಸುಮಿತ್ರ, ಚಾರುಮಿತ್ರ, ಮಿತ್ರವಂದ, ವರಾಶನ, ಮಿತ್ರಬಾಹು, ಸುನೀಥ, ಇವರು ನಾಗ್ನಜಿತಿಯ ಮಕ್ಕಳು, ಈ ರೀತಿ ಸಾವಿರ ಜನ ಮಕ್ಕಳು ಕೃಷ್ಣನಿಗೆ ಉತ್ಪನ್ನರಾದರು ಎಂದು ತಿಳಿ.

೧೬೪-೧೬೫. ಪ್ರದ್ಯುಮ್ನನಿಗೆ ವಿದರ್ಭರಾಜನ ಮಗಳನ್ನು ಕೊಟ್ಟಿದ್ದಿತು. ಆ ಪ್ರದ್ಯುಮ್ನನಿಗೆ ಆಕೆಯಲ್ಲಿ ಶೂರನಾದ ಅನಿರುದ್ಧನೆಂಬ ಮಗನು ಹುಟ್ಟಿದನು ಈ ಅನಿರುದ್ಧನಿಗೆ ಮೃಗಕೇತನಿ ಎಂಬುವಳು ಹೆಂಡತಿಯಾದಳು. ಶಕ್ತನಾದ ಸಾಂಬನಿಗೆ ಸುಪಾರ್ಶ್ವನ ಮಗಳಾದ ಕಾಮ್ಯೆಯನ್ನು ಕೊಟ್ಟು ವಿವಾಹವಾಗಿದ್ದಿತು.

೧೬೬. ಈ ಮಕ್ಕಳುಗಳಲ್ಲಿ ಏಳು ಜನ ಸ್ವಭಾವವಾಗಿಯೇ ದೇವತೆಗಳು. ಮತ್ತು ಐದು ಜನರು, ಎಂದರೆ ಹನ್ನೆರಡು ಜನರು ಸ್ವಭಾವದಿಂದಲೇ ದೇವತೆಗಳು, ಮಹಾತ್ಮರಾದ ಯಾದವರಲ್ಲಿ ಮೂರು ಕೋಟಿ ಜನರು ವೀರರಾಗಿದ್ದರು.

೧೬೭. ಇವರಲ್ಲಿ ಸಾವಿರದನೂರು ಅರವತ್ತು ಜನರು ಮಹಾಬಲಶಾಲಿಗಳು, ಅವರೆಲ್ಲರೂ ದೇವಾಂಶದಿಂದ ಅವತರಿಸಿದವರೇ ಆಗಿದ್ದರು.

ದೇವಾಸುರೇ ಹತಾ ಯೇ ಚ ಅಸುರಾ ಸ್ತೈ ಮಹಾಬಲಾಃ ।
ಇಹೋತ್ಪನ್ನಾ ಮನುಷ್ಯೇಷು ಬಾಧಂತೇ ಸರ್ವಮಾನರ್ವಾ ॥ ೧೬೮ ॥

ತೇಷಾಮುತ್ಸಾದನಾರ್ಥಾಯ ಉತ್ಪನ್ನೋ ಯಾದವೇ ಕುಲೇ ।
ಕುಲಾನಾಂ ಶತಮೇಕಂ ಚ ಯಾದವಾನಾಂ ಮಹಾತ್ಮನಾಂ ॥ ೧೬೯ ॥

ಸರ್ವಮೇತತ್ಕುಲೇ ಜಾತಂ ವರ್ಧನೇ ವೈಷ್ಣವೇ ಕುಲೇ ।
ವಿಷ್ಣುಸ್ತೇಷಾಂ ಪ್ರಣೇತಾ ಚ ಪ್ರಭುತ್ವೇ ಚ ವ್ಯವಸ್ಥಿತಃ ।
ನಿದೇಶಸ್ಥಾಯಿನಸ್ತಸ್ಯ ಋಧ್ಯಂತೇ ಸರ್ವಯಾದವಾಃ ॥ ೧೭೦ ॥

॥ ಭೀಷ್ಮ ಉವಾಚ ॥

ಸಪ್ತರ್ಷಯಃ ಕುಬೇರಶ್ಚ ಯಕ್ಷೋ ಮಣಿಧರಸ್ತಥಾ ।
ಸಾತ್ಯಕಿರ್ನಾರದಶ್ಚೈವ ಸಿದ್ಧಾ ಧನ್ವಂತರಿಸ್ತಥಾ ॥ ೧೭೧ ॥

ಆದಿದೇವಸ್ತಥಾ ವಿಷ್ಣುರೇಭಿಸ್ತು ಸಹ ದೈವತೈಃ ।
ಕಿಮರ್ಥಂ ಸಹ ಸಂಭೂತಾಃ ಸುರಸಂಭೂತಯಃ ಕ್ಷಿತೌ ॥ ೧೭೨ ॥

---

೧೬೮. ದೇವಾಸುರ ಯುದ್ಧದಲ್ಲಿ ಸತ್ತ ಮಹಾಬಲಿಷ್ಠರಾದ ರಾಕ್ಷಸರು ಈ ಮನುಷ್ಯ ಲೋಕದಲ್ಲಿ ಹುಟ್ಟಿ ಎಲ್ಲರನ್ನೂ ಬಾಧಿಸುತ್ತಿದ್ದರು.

೧೬೯. ಅವರೆಲ್ಲರನ್ನೂ ನಾಶಮಾಡಲು ಯಾದವರ ಕುಲದಲ್ಲಿ ಸ್ವಾಮಿಯು ಅವತರಿಸಿದನು. ಯಾದವರ ಕುಲವು ನೂರೊಂದು ಭಾಗವಾಗಿದ್ದಿತು.

೧೭೦. ವೃದ್ಧಿಹೊಂದುತ್ತಿರುವ ಈ ವಿಷ್ಣುವಿನ ಕುಲದಲ್ಲಿ ಎಲ್ಲವೂ ಸಮೃದ್ಧಿಯಾಗಿದ್ದಿತು. ಈ ವಿಷ್ಣುವೇ ಅವರೆಲ್ಲರಿಗೂ ಸೇನಾಪತಿಯಾಗಿಯೂ, ಯಜಮಾನನಾಗಿಯೂ ಇದ್ದನು. ಅವನ ಅಪ್ಪಣೆಯಂತೆ ಇದ್ದುಕೊಂಡು ಎಲ್ಲಾ ಯಾದವರೂ ಏಳಿಗೆಗೆ ಬಂದರು.

೧೭೧-೧೭೨. ಭೀಷ್ಮನು ಹೇಳಿದನು :—ಸಪ್ತರ್ಷಿಗಳು, ಕುಬೇರ, ಮಣಿಧರನೆಂಬ ಯಕ್ಷ, ಸಾತ್ಯಕಿ, ನಾರದ, ಸಿದ್ಧರು, ಧನ್ವಂತರಿ, ಸ್ವಾಮಿಯಾದ ವಿಷ್ಣು ಇವರೆಲ್ಲರೂ ದೇವತೆಗಳೊಡನೆ ಏತಕ್ಕೆ ಈ ಭೂಮಿಯಲ್ಲಿ ಹುಟ್ಟಿದರು ?

ಭವಿಷ್ಯಾಃ ಕತಿ ಚೈವಾನ್ಯೇ ಪ್ರಾದುರ್ಭಾವಾ ಮಹಾತ್ಮನಃ ।
ಬ್ರಹ್ಮ ಕ್ಷತ್ರೇಷು ಸರ್ವೇಷು ಕಿಮರ್ಥಮಿಹ ಜಾಯತೇ ॥ ೧೭೩ ॥

ಯದರ್ಥಮಿಹ ಸಂಭೂತೋ ವಿಷ್ಣುರ್ವೃಷ್ಣ್ಯಂಧಕೇ ಕುಲೇ ॥ ೧೭೪ ॥

॥ ಪುಲಸ್ತ್ಯ ಉವಾಚ ॥

ಶೃಣು ಭೂಪ ಪ್ರವಕ್ಷ್ಯಾಮಿ ರಹಸ್ಯಾತಿರಹಸ್ಯಕಂ ।
ಯಥಾ ದಿವ್ಯಾತನುರ್ವಿಷ್ಣುರ್ಮಾನುಷೇಷ್ವಿಹ ಜಾಯತೇ ॥ ೧೭೫ ॥

ಯುಗಾಂತೇ ತು ಪುರಾ ವೃತ್ತೇ ಕಾಲೇ ಪ್ರಶಿಥಿಲೇ ಪ್ರಭುಃ ।
ದೇವಾಸುರಮನುಷ್ಯೇಷು ಜಾಯತೇ ಹರಿರೀಶ್ವರಃ ॥ ೧೭೬ ॥

ಹಿರಣ್ಯಕಶಿಪುರ್ದೈತ್ಯಸ್ತ್ರೈಲೋಕ್ಯಸ್ಯ ಪ್ರಶಾಸಿತಾ ।
ಬಲಿನಾಧಿಷ್ಠಿತೇ ಚೈವ ಪುನರ್ಲೋಕತ್ರಯೇ ಕ್ರಮಾತ್ ॥ ೧೭೭ ॥

ಸಖ್ಯಮಾಸೀತ್ಪರಮಕಂ ದೇವಾನಾಮಸುರೈಃ ಸಮಂ ।
ಯುಗಾಖ್ಯಾ ದಶ ಸಂಪೂರ್ಣಾ ಆಸೀದವ್ಯಾಕುಲಂ ಜಗತ್ ॥ ೧೭೮ ॥

---

೧೭೩. ಮುಂದೆ ಎಷ್ಟು ಜನರು ಮಹಾತ್ಮರು ಹುಟ್ಟುತ್ತಾರೆ? ಬ್ರಾಹ್ಮಣರಲ್ಲಿಯೂ, ಕ್ಷತ್ರಿಯರಲ್ಲಿಯಲ್ಲಿಯೂ, ಹೀಗೆ ಅವರು ಹುಟ್ಟಲು ಕಾರಣವೇನು ?

೧೭೪. ವೃಷ್ಣಿ ಅಂಧಕರ ವಂಶದಲ್ಲಿ ವಿಷ್ಣುವು ಏಕೆ ಅವತರಿಸಿದನು? ಬಾರಿಬಾರಿಗೂ ವಿಷ್ಣುವು ಮನುಷ್ಯರಲ್ಲಿ ಹುಟ್ಟುವುದೇತಕ್ಕೆ? ಅದನ್ನು ನನಗೆ ಹೇಳು.

೧೭೫. ಪುಲಸ್ತ್ಯನು ಹೇಳಿದನು:—ಉತ್ತಮ ಶರೀರವುಳ್ಳ ವಿಷ್ಣುವು ಮನುಷ್ಯರಲ್ಲಿ ಏಕೆ, ಹೇಗೆ, ಹುಟ್ಟುತ್ತಾನೆಂಬ ಅತಿ ರಹಸ್ಯವನ್ನು ಹೇಳುತ್ತೇನೆ, ಎಲೈ ಭೂಪನೇ ಕೇಳು.

೧೭೬. ಕಾಲವು ಬಹಳವಾಗಿ ಕಳೆದಮೇಲೆ ಯುಗಾಂತ್ಯದಲ್ಲಿ ದೇವತೆಗಳು, ಅಸುರರು, ಮನುಷ್ಯರುಗಳಲ್ಲಿ ಸ್ವಾಮಿಯಾದ ಹರಿಯು ಹುಟ್ಟುತ್ತಾನೆ.

೧೭೭-೧೭೮. ಹಿರಣ್ಯಕಶಿಪುವು ಮೂರು ಲೋಕವನ್ನೂ ಆಳುತ್ತಿದ್ದನು. ಬಲಿಯೂ ಕೂಡ ಲೋಕತ್ರಯವನ್ನೂ ಆಳುತ್ತಿರಲು, ದೇವತೆಗಳಿಗೂ, ರಾಕ್ಷಸರಿಗೂ ಸ್ನೇಹವಿದ್ದಿತು. ಈ ರೀತಿ ಹತ್ತು ಯುಗಗಳು ಕಳೆದುವು. ಆಗ ಪ್ರಪಂಚವು ಯಾವ ತೊಂದರೆಯೂ ಇಲ್ಲದೇ ಇದ್ದಿತು.

ನಿದೇಶಸ್ಥಾಯಿನಶ್ಚಾಪಿ ತಯೋರ್ದೇವಾಸುರಾಃ ಸ್ವಯಂ ।
ಬದ್ಧೇ ಬಲೌ ವಿಮರ್ದೋಽಯಂ ಸಂಪ್ರವೃತ್ತಃ ಸುದಾರುಣಃ ॥ ೧೭೯ ॥

ದೇವಾನಾಮಸುರಾಣಾಂ ಚ ಘೋರಃ ಕ್ಷಯಕರೋ ಮಹಾನ್ ।
ಕರ್ತುಂ ಧರ್ಮವ್ಯವಸ್ಥಾನಂ ಜಾಯತೇ ಮಾನುಷೇಷ್ವಿಹ ।
ಭೃಗೋಃ ಶಾಪನಿಮಿತ್ತಂ ತು ದೇವಾಸುರಕೃತೇ ತದಾ ॥ ೧೮೦ ॥

॥ ಭೀಷ್ಮ ಉವಾಚ ॥

ಕಥಂ ದೇವಾಸುರಕೃತೇ ಹರಿರ್ದೇಹಮವಾಪ್ತವಾನ್ ।
ದೇವಾಸುರಂ ಯಥಾವೃತ್ತಂ ತನ್ಮೇ ಕಥಯ ಸುವ್ರತ ॥ ೧೮೧ ॥

॥ ಪುಲಸ್ತ್ಯ ಉವಾಚ ॥

ತೇಷಾಂ ಜಯನಿಮಿತ್ತಂ ವೈ ಸಂಗ್ರಾಮಾಃ ಸ್ಯುಃ ಸುದಾರುಣಾಃ ।
ಅವತಾರಾ ದಶ ದ್ವೌ ಚ ಶುದ್ಧಾ ಮನ್ವಂತರೇ ಸ್ಮೃತಾಃ ॥ ೧೮೨ ॥

---

೧೭೯. ದೇವತೆಗಳೂ, ರಾಕ್ಷಸರೂ ಅವರಿಬ್ಬರ ಅಪ್ಪಣೆಯಂತೆಯೇ ನಡೆಯುತ್ತಿದ್ದರು. ಬಲಿಯನ್ನು ವಾಮನನು ಸೆರೆಹಾಕಿದ ಮೇಲೆ ದೇವತೆಗಳಿಗೂ, ರಾಕ್ಷಸರಿಗೂ ಬಹು ಕ್ರೂರವಾದ ಹೊಡೆದಾಟಗಳು ನಡೆದುವು.

೧೮೦. ಆಗ ದೇವತೆಗಳಿಗೂ ರಾಕ್ಷಸರಿಗೂ ಬಹು ನಾಶಕರವಾದ ದ್ವೇಷವುಂಟಾಯಿತು. ಧರ್ಮದ ವ್ಯವಸ್ಥಾಪನೆಯನ್ನು ಮಾಡಲು ವಿಷ್ಣುವು ಈ ಲೋಕದಲ್ಲಿ ಮನುಷ್ಯರಲ್ಲಿ ಹುಟ್ಟುತ್ತಾನೆ. ಆದರೆ ದೇವಾಸುರರನ್ನು ನಿಮಿತ್ತಮಾಡಿಕೊಂಡು ಭೃಗುವು ಶಾಪವನ್ನು ಕೊಟ್ಟನು.

೧೮೧. ಭೀಷ್ಮನು ಹೇಳಿದನು:—ದೇವಾಸುರರಿಗೋಸ್ಕರ ಹರಿಯು ದೇಹವನ್ನು ಹೇಗೆ ಹೊಂದಿದನು ? ದೇವಾಸುರರ ಯುದ್ಧವು ಹೇಗೆ ನಡೆಯಿತು ಹೇಳು.

೧೮೨. ಪುಲಸ್ತ್ಯನು ಹೇಳಿದನು :—ಆ ದೇವತೆಗಳ ಜಯಕ್ಕೋಸ್ಕರ ಅನೇಕ ಯುದ್ಧಗಳು ಘೋರವಾಗಿ ನಡೆದುವು. ಆ ಮನ್ವಂತರಗಳಲ್ಲಿ ಹನ್ನೆರಡು ಅವತಾರಗಳನ್ನು ಸ್ವಾಮಿಯು ಮಾಡಿದನು.

ನಾಮತಸ್ತು ಸಮಾಸೇ ನ ಶೃಣು ತೇಷಾಂ ವಿವಕ್ಷಿತಂ ।
ಪ್ರಥಮೋ ನಾರಸಿಂಹಸ್ತು ದ್ವಿತೀಯಶ್ಚಾಪಿ ವಾಮನಃ ॥ ೧೮೩ ॥

ತೃತೀಯಸ್ತು ವರಾಹಶ್ಚ ಚತುರ್ಥೋಽಮೃತಮಂಥನಃ ।
ಸಂಗ್ರಾಮಃ ಪಂಚಮಶ್ಚೈವ ಸುಘೋರಸ್ತಾರಕಾಮಯಃ ॥ ೧೮೪ ॥

ಷಷ್ಠೋ ಹ್ಯಾಜೀವಕಾಖ್ಯಶ್ಚ ಸಪ್ತಮಸ್ತ್ರೈಪುರಸ್ತಥಾ ।
ಅಷ್ಟಮಶ್ಚಾಂಧಕವಧೋ ನವಮೋ ವೃತ್ರಘಾತಕಃ ॥ ೧೮೫ ॥

ಪಾತಸ್ತು ದಶಮಶ್ಚೈವ ತತೋ ಹಾಲಾಹಲಃ ಸ್ಮೃತಃ ।
ಪ್ರಥಿತೋ ದ್ವಾದಶಸ್ತೇಷಾಂ ಘೋರಃ ಕೋಲಾಹಲಸ್ತಥಾ ॥ ೧೮೬ ॥

ಹಿರಣ್ಯಕಶಿಪುರ್ದೈತ್ಯೋ ನರಸಿಂಹೇನ ಸೂದಿತಃ ।
ವಾಮನೇನ ಬಲಿರ್ಬದ್ಧಸ್ತ್ರೈಲೋಕ್ಯಾಕ್ರಮಣೇ ಪುರಾ ॥ ೧೮೭ ॥

ಹಿರಣ್ಯಾಕ್ಷೋ ಹತೋ ದ್ವಂದ್ವೇ ಪ್ರತಿವಾದೇ ತು ದೈವತೈಃ ।
ದಂಷ್ಟ್ರಯಾ ತು ವರಾಹೇಣ ಸಮುದ್ರಸ್ಥೋ ದ್ವಿಧಾ ಕೃತಃ ॥ ೧೮೮ ॥

---

೧೮೩-೧೮೬. ಹನ್ನೆರಡು ಅವತಾರಗಳನ್ನೂ ಹೆಸರು ಹೇಳಿ ಹೇಳುತ್ತೇನೆ, ಕೇಳು ಒಂದನೆಯದು ನರಸಿಂಹ, ಎರಡನೆಯದು ವಾಮನ, ಮೂರನೆಯದು ವರಾಹ, ನಾಲ್ಕನೆಯದು ಅಮೃತಮಂಥನದಲ್ಲಿ ಮಾಡಿದುದು (ಮೋಹಿನಿ) ಐದನೆಯದು ತಾರವು ತಾರಕಸುರನ ವಿಜಯುದ್ದು, ಆರನೆಯದು ಆಜೀವಕನೆಂಬುವುದು, ಏಳನೆಯದು ತ್ರಿಪುರದ್ದು, ಎಂಟನೆಯದು ಅಂಧಕವಧ, ಒಂಭತ್ತನೆಯದು ವೃತ್ರಾಸುರ ಸಂಹಾರದ್ದು, ಹತ್ತನೆಯದು ಪಾತಾವತಾರವು, ಹನ್ನೊಂದನೆಯದು ಹಾಲಾಹಲವು, ಹನ್ನೆರಡನೆಯದು ಕೋಲಾಹಲವು, ಇವುಗಳ ರೂಪವಾದ ಅವತಾರವು.

೧೮೭. ನರಸಿಂಹಾವತಾರದಲ್ಲಿ ಹಿರಣ್ಯಕಶಿಪುವೆಂಬ ದೈತ್ಯನು ಕೊಲ್ಲಲ್ಪಟ್ಟನು. ವಾಮನಾವತಾರದಲ್ಲಿ ತ್ರೈಲೋಕ್ಯಗಳನ್ನು ಆಕ್ರಮಿಸುತ್ತ ಬಲಿಯು ಬಂಧಿಸಲ್ಪಟ್ಟನು.

೧೮೮. ಹಿರಣ್ಯಾಕ್ಷನು ದೇವತೆಗಳೊಡನೆ ಯುದ್ಧಮಾಡುತ್ತಿದ್ದಾಗ ಭೂಮಿಯನ್ನು ಸಮುದ್ರದಲ್ಲಿ ಸುತ್ತಿಕೊಂಡು ಮುಳುಗಿರಲು ಸ್ವಾಮಿಯು ವರಾಹಾವತಾರದಿಂದ ಕೋರೆದಾಡೆಯಿಂದ ಆತನನ್ನು ಸೀಳಿದನು.

ಪ್ರಹ್ಲಾದೋ ನಿರ್ಜಿತೋ ಯುದ್ಧ ಇಂದ್ರೇಣಾಮೃತಮಂಥನೇ ।
ವಿರೋಚನಸ್ತು ಪ್ರಾಹ್ಲಾದಿರ್ನಿತ್ಯಮಿಂದ್ರವಧೋದ್ಯತಃ ॥ ೧೮೯ ॥

ಇಂದ್ರೇಣೈವ ವ್ಯತಿಕ್ರಮ್ಯ ನಿಹತಸ್ತಾರಕಾಮಯೇ
ಅಶಕ್ನುವತ್ಸು ದೇವೇಷು ಗೋಚರೇ ತ್ರಿಪುರೇ ವರ್ಸ ॥ ೧೯೦ ॥

ನಿಹತಾಃ ದಾನವಾಃ ಸರ್ವೇ ತ್ರೈಲೋಕ್ಯೇ ತ್ರ್ಯಂಬಕೇಣ ತು ।
ಅಸುರಾಶ್ಚ ಪಿಶಾಚಾಶ್ಚ ದಾನವಾಶ್ಚಾಂಧಕೇ ವಧೇ ॥ ೧೯೧ ॥

ಹತಾ ದೇವಮನುಷ್ಯೈಸ್ತೇ ಪಿತೃಭಿಶ್ಚೈವ ಸರ್ವಶಃ ।
ಸಂಪೃಕ್ತೇ ದಾನವೈರ್ವೃತ್ರೋ ಘೋರೇ ಕೋಲಾಹಲೇ ಹತಃ ॥ ೧೯೨ ॥

ತದಾ ವಿಷ್ಣುಸಹಾಯೇನ ಮಹೇಂದ್ರೇಣ ನಿಪಾತಿತಃ ।
ಹತೇ ಧ್ವಜೇ ಮಹೇಂದ್ರೇಣ ಮಾಯಾಚ್ಛನ್ನಸ್ತು ಯೋಗವಿತ್ ॥ ೧೯೩ ॥

---

೧೮೯. ಶೂರನಾದ ಪ್ರಹ್ಲಾದನು ಅಮೃತಮಂಥನ ಕಾಲದಲ್ಲಿ ಇಂದ್ರನಿಂದ ಜಿತನಾದನು. ಪ್ರಹ್ಲಾದನ ಮಗನಾದ ವಿರೋಚನನು ಯಾವಾಗಲೂ ಇಂದ್ರನನ್ನು ಕೊಲ್ಲಲು ಪ್ರಯತ್ನಿಸುತ್ತಿದ್ದನು. ತಾರಕಾಸುರ ಯುದ್ಧವಲ್ಲಿ ಇಂದ್ರನು ಆತನನ್ನು ಆಕ್ರಮಿಸಿ ಕೊಂದನು.

೧೯೦. ರಾಕ್ಷಸರು ಸಂಚರಿಸುತ್ತಿದ್ದ ತ್ರಿಪುರದಲ್ಲಿ ವಾಸಮಾಡುತ್ತ ದೇವತೆಗಳಿಗೆ ಕೊಲ್ಲಲು ಅಸಾಧ್ಯವಾಗಿರಲು ಮುಕ್ಕಣನಾದ ರುದ್ರನು ಅವರನ್ನೂ, ಇನ್ನೂ ಉಳಿದವರನ್ನೂ, ಆ ಪಟ್ಟಣಗಳೊಡನೆ ಕೊಂದನು.

೧೯೧. ಅಸುರರು, ಪಿಶಾಚಿಗಳು, ದಾನವರೂ, ಕೂಡ ಅಂಧಕಾಸುರವಧ ಕಾಲದಲ್ಲಿ ದೇವತೆಗಳು, ಮನುಷ್ಯರು ಪಿತೃಗಳು ಇವರಿಂದ ಕೊಲ್ಲಲ್ಪಟ್ಟರು.

೧೯೨. ದಾನವರಿಂದ ಕೂಡಿದ ವೃತ್ರನು ಘೋರವಾದ ಯುದ್ಧಮಾಡುತ್ತಿರುವಾಗ ವಿಷ್ಣು ಸಹಾಯದಿಂದ ಕೂಡಿದ ಇಂದ್ರನಿಂದ ಕೊಲ್ಲಲ್ಪಟ್ಟನು.

೧೯೩-೧೯೪. ವಿಪ್ರಚಿತ್ತಿಯು ಯುದ್ಧಮಾಡುತ್ತಿರುವಾಗ ತನ್ನ ಯೋಗಬಲದಿಂದ ಧ್ವಜದಲ್ಲಿ ಸೇರಿಕೊಂಡನು. ಮತ್ತು ಅವನ ಪರಿವಾರವೂ ಸೇರಿಕೊಂಡಿತು.

ಧ್ವಜೇನ ಕ್ಷಣಮಾವಿಶ್ಯ ವಿಪ್ರಚಿತ್ತಿಃ ಸಹಾನುಗಃ ।
ದೈತ್ಯಾಶ್ಚ ದಾನವಾಶ್ಚೈವ ಸಂಜಾತಾಃ ಕೃತ್ಸ್ನಶಸ್ತು ತೇ ॥ ೧೯೪ ॥

ಜಯಕೋಲಾಹಲೇ ಸರ್ವೈರ್ದೇವೈಃ ಪರಿವೃತೋ ವೃಷಃ ।
ಯಜ್ಞಸ್ಯಾವಭೃಥೇ ಜಿತ್ವಾ ಶಂಡಾಮುರ್ಕಾಸ್ತು ದೈವತೈಃ ॥ ೧೯೫ ॥

ಏತೇ ದೇವಾಸುರಾ ವೃತ್ತಾಃ ಸಂಗ್ರಾಮಾ ದ್ವಾದಶೈವ ತು ।
ದೇವಾಸುರಕ್ಷಯಕರಾಃ ಪ್ರಜಾನಾಂ ಚ ಹಿತಾಯ ವೈ ॥ ೧೯೬ ॥

ಹಿರಣ್ಯಕಶಿಪೋ ರಾಜ್ಯಂ ವರ್ಷಾಣಾಮರ್ಬುದದ್ವಯಂ ।
ದ್ವಿಸಪ್ತತಿಸ್ತಥಾನ್ಯಾನಿ ನಿಯುತಾನ್ಯಧಿಕಾನಿ ಚ ॥ ೧೯೭ ॥

ಅಶೀತಿಶ್ಚ ಸಹಸ್ರಾಣಿ ತ್ರೈಲೋಕ್ಯೈಶ್ವರ್ಯತಾಭವತ್ ।
ಪರ್ಯಾಯೇಣ ತು ರಾಜ್ಯಾಭೂದ್ಬಲಿರ್ವರ್ಷಾರ್ಬುದಂ ಪುನಃ ॥ ೧೯೮ ॥

ಷಷ್ಟಿಶ್ಚೈವ ಸಹಸ್ರಾಣಿ ನಿಯುತಾನಿ ಚ ವಿಂಶತಿಃ ।
ಬಲೇ ರಾಜ್ಯಾಧಿಕಾರಸ್ತು ಯಾವತ್ಕಾಲಂ ಬಭೂವ ಹ ॥ ೧೯೯ ॥

ಆಗ ಯಜ್ಞವನ್ನು ಮಾಡಿ ಅದರ ಅವಭೃಥಸ್ನಾನದಲ್ಲಿ ದೇವತೆಗಳಿಂದ ವೃಷರೂಪದಲ್ಲಿದ್ದ ಆ ವಿಪ್ರಚಿತ್ತಿಯು ಅನುಗರೊಡನೆ ದೇವತೆಗಳಿಂದ ಕೊಲ್ಲಲ್ಪಟ್ಟನು.

೧೯೬. ಈ ಹನ್ನೆರಡು ದೇವಾಸುರ ಯುದ್ಧಗಳು ಪ್ರಜೆಗಳ ಹಿತಕ್ಕೂ, ದೇವಾಸುರ ನಾಶಕ್ಕೂ ಕಾರಣವಾದುವು.

೧೯೭. ಹಿರಣ್ಯಕಶಿಪುವು ಎರಡು ಅರ್ಬುದ ವರ್ಷಗಳೂ, ಎಪ್ಪತ್ತೆರಡು ನಿಯುತ ವರ್ಷಗಳೂ ರಾಜ್ಯಭಾರಮಾಡಿದನು.

೧೯೮. ಆ ಹಿರಣ್ಯಕಶಿಪುವಿನ ರಾಜ್ಯಭಾರದಲ್ಲಿ ಎಂಬತ್ತು ಸಾವಿರ ವರ್ಷಗಳವರೆಗೆ ತ್ರೈಲೋಕ್ಯೈಶ್ವರ್ಯವೂ, ಅವನ ಅಧೀನದಲ್ಲಿದ್ದಿತು. ಅನಂತರ ಕ್ರಮರೀತಿಯಿಂದ ಬಲಿಯು ರಾಜನಾದನು. ಅವನು ಒಂದು ಅರ್ಬುದ ವರ್ಷಗಳೂ, ಅರವತ್ತು ಸಾವಿರ ವರ್ಷಗಳೂ, ಇಪ್ಪತ್ತು ನಿಯುತ ವರ್ಷಗಳೂ ರಾಜ್ಯವಾಳಿದನು.

೧೯೯. ಬಲಿಯು ರಾಜ್ಯಭಾರಮಾಡುತ್ತಿರುವವರೆಗೂ, ಪ್ರಹ್ಲಾದನು ಅಸುರರೊಡನೆ ಸುಖವಾಗಿದ್ದನು.

ತಾವತ್ಕಾಲಂ ತು ಪ್ರಹ್ಲಾದೋ ನಿರ್ವೃತೋ ಹ್ಯಸುರೈಃ ಸಹ ।
ಇಂದ್ರಾರ್ಥಮೇತೇ ವಿಜ್ಞೇಯಾ ಅಸುರಾಣಾಂ ಮಹೌಜಸಾಂ ॥ ೨೦೦ ॥

ತ್ರೈಲೋಕ್ಯಮಿದಮವ್ಯಗ್ರಂ ಮಹೇಂದ್ರೇಣಾನುಪಾಲ್ಯತೇ ।
ಅಸಂಪನ್ನಮಿದಂ ಸರ್ವಂ ಯಾವದ್ವರ್ಷಾಯುತಂ ಪುನಃ ॥ ೨೦೧ ॥

ಪ್ರಹ್ಲಾದಸ್ಯ ಕೃತೇ ಹ್ಯಸ್ಮಿಂಸ್ತ್ರೈಲೋಕ್ಯೇ ಕಾರ್ಯಪರ್ಯಯಾತ್ ।
ಪರ್ಯಾಯೇಣೈವ ಸಂಪ್ರಾಪ್ತೇ ತ್ರೈಲೋಕ್ಯೇ ಪಾಕಶಾಸನೇ ॥ ೨೦೨ ॥

ತತೋಽಸುರಾನ್ಪರಿತ್ಯಜ್ಯ ಯಜ್ಞೋ ದೇವಾನಗಚ್ಛತ ।
ಯಜ್ಞೇ ದೇವಾನಥ ಗತೇ ದಿತಿಜಾಃ ಕಾವ್ಯಮಬ್ರುವನ್ ॥ ೨೦೩ ॥

॥ ದೈತ್ಯಾ ಊಚುಃ ॥

ಹೃತಂ ಮಘವತಾ ರಾಜ್ಯಂ ತ್ಯಕ್ತ್ವಾ ಯಜ್ಞಃ ಸುರಾನ್ ಗತಃ ।
ಸ್ಥಾತುಂ ನ ಶಕ್ನುಮೋ ಹ್ಯತ್ರ ಪ್ರವಿಶಾಮೋ ರಸಾತಲಂ ॥ ೨೦೪ ॥

---

೨೦೦. ಶಕ್ತರಾದ ಆ ಅಸುರರು ಇಂದ್ರನ ಸ್ಥಳಕ್ಕೋಸ್ಕರ ಈ ಯುದ್ಧಗಳನ್ನು ಮಾಡಿದರು. ಮಹೇಂದ್ರನಾಗಿರುವವನೊಬ್ಬನೇ ಈ ಸಮಗ್ರವಾದ ಮೂರು ಲೋಕಗಳನ್ನು ಪಾಲಿಸುತ್ತಾನೆ.

೨೦೧. ಅಯುತ ಸಂಖ್ಯಾಕ ವರ್ಷಗಳವರೆಗೂ ಈ ಮೂರು ಲೋಕದಧಿಕಾರವು ಇಂದ್ರನ ಕೈಸೇರಲಿಲ್ಲ.

೨೦೨-೨೦೩. ಪ್ರಹ್ಲಾದನಿಗೋಸ್ಕರ ಈ ಯುದ್ಧಗಳೆಲ್ಲವೂ ನಡೆದುವು. ಆದರೆ ಕ್ರಮದಿಂದ ಇಂದ್ರಾಧಿಕಾರವು ದೇವತೆಗಳಿಗೆ ಬರಲು ಯಜ್ಞವು ದೇವತೆಗಳನ್ನು ಹೊಂದಿತು. ಯಜ್ಞವು ದೇವತೆಗಳನ್ನು ಹೊಂದಿದುದನ್ನು ನೋಡಿ ಅಸುರರು ತಮ್ಮ ಗುರುವಾದ ಶುಕ್ರನನ್ನು ಕುರಿತು ಇಂತೆಂದರು.

೨೦೪. ದೈತ್ಯರು ಹೇಳಿದರು :—ಎಲೈ ಗುರುವೇ ಇಂದ್ರನು ರಾಜ್ಯವನ್ನು ಕಿತ್ತುಕೊಂಡನು. ಯಜ್ಞವು ನಮ್ಮನ್ನು ಬಿಟ್ಟು ದೇವತೆಗಳನ್ನು ಸೇರಿತು. ಆದ್ದರಿಂದ ಇಲ್ಲಿರಲು ನಮಗೆ ಸಾಧ್ಯವಿಲ್ಲ, ರಸಾತಳಕ್ಕೆ ಹೋಗುತ್ತೇವೆ.

ಏವಮುಕ್ತ್ವೋಽಬ್ರವೀದೇತಾನ್ವಿಷಣ್ಣಾನ್ಸಾಂತ್ವಯನ್ಗಿರಾ ।
ಮಾ ಭೈಷ್ಟ ಧಾರಯಿಷ್ಯಾಮಿ ತೇಜಸಾ ಸ್ವೇನ ವೋಽಸುರಾಃ ॥ ೨೦೫ ॥

ಇಷ್ಟಿಶ್ಚೌಷಧಯಶ್ಚೈವ ಧರಾಯಾಂ ಯಚ್ಚ ವರ್ತತೇ ।
ಮಯಿ ತಿಷ್ಠತಿ ತತ್ಸರ್ವಂ ಪಾದಮಾತ್ರಂ ಸುರೇಷು ವೈ ॥ ೨೦೬ ॥

ತತ್ಸರ್ವಂ ವಃ ಪ್ರದಾಸ್ಯಾಮಿ ಯುಷ್ಮದರ್ಥೇ ಧೃತಾ ಮಯಾ ।
ತತೋ ದೇವಾಸ್ತು ತಾನ್ ದೃಷ್ಟ್ವಾ ಧೃತಾನ್ಕಾವ್ಯೇನ ಧೀಮತಾ ॥ ೨೦೭ ॥

ಆಮಂತ್ರಯಂತ ದೇವಾ ವೈ ಸಜ್ಜಾಃ ಸರ್ವೇ ಜಿಘೃಕ್ಷಯಾ ।
ಕಾವ್ಯೋ ಹ್ಯೇಷ ಇದಂ ಸರ್ವಂ ವ್ಯಾವರ್ತಯತಿ ನೋ ಬಲಾತ್ ॥ ೨೦೮ ॥

ಸಾಧು ಗಚ್ಛಾಮಹೇ ತೂರ್ಣಂ ಯಾವನ್ನ ಚ್ಯಾವಯೇತ ವೈ ।
ಪ್ರಸಹ್ಯ ಹತ್ವಾ ಶಿಷ್ಟಾಂಸ್ತು ಪಾತಾಲಂ ಪ್ರಾಪಯಾಮಹೇ ॥ ೨೦೯ ॥

---

೨೦೫. ಅಸುರರು ಹೀಗೆನ್ನಲು, ಖೇದಗೊಂಡ ಅವರನ್ನು ಒಳ್ಳೆಯ ಮಾತಿನಿಂದ ಸಮಾಧಾನಪಡಿಸುತ್ತಾ ಎಲೈ ಅಸುರರೆ! ನೀವು ಹೆದರಬೇಡಿ. ನಿಮ್ಮನ್ನು ನನ್ನ ತೇಜಸ್ಸಿನಿಂದ ಕಾಪಾಡುತ್ತೇನೆ

೨೦೬. ಇಷ್ಟಿಗಳು, ಔಷಧಿಗಳು, ಮುಂತಾದವು ಯಾವುವು ಭೂಮಿಯ... ವೆಯೋ ಅವೆಲ್ಲವೂ ನಾನಿರುತ್ತಿರುವಾಗ ದೇವತೆಗಳಲ್ಲಿ ಕಾಲುಭಾಗ ಮಾತ್ರವಿರುತ್ತ...

೨೦೭. ಅದೆಲ್ಲವನ್ನೂ ನಿಮಗೆ ಕೊಡುತ್ತೇನೆ. ನಿಮಗೋಸ್ಕರವೇ ಅವೆಲ್ಲ ವನ್ನೂ ಇಟ್ಟುಕೊಂಡಿದ್ದೇನೆ ಎಂದನು. ಅನಂತರ ಆ ರಾಕ್ಷಸರನ್ನು ಶುಕ್ರನು ಧರಿಸಿರು ವುದನ್ನು ತಿಳಿದುಕೊಂಡರು.

೨೦೮-೨೦೯. ಶುಕ್ರನು ನಮ್ಮಲ್ಲಿರುವುದನ್ನೆಲ್ಲಾ ತನ್ನ ಬಲದಿಂದ ರಾಕ್ಷಸರಿಗ ತೆಗೆದುಕೊಡುತ್ತಾನೆ. ಅವನು ಹಾಗೆ ತೆಗೆಯುವುದರೊಳಗೆ ನಾವು ಬೇಗ ಹೋಗಿ ಉಳಿದವರನ್ನೂ ಕೊಂದು ಪಾತಾಳಕ್ಕಾದರೂ ಓಡಿಸೋಣ ಎಂದು ಅವರನ್ನು ಕೊಲ್ಲಲು ಸಿದ್ಧರಾಗಿ ರಾಕ್ಷಸರನ್ನು ಕರೆದರು.

ತತೋ ದೇವಾಸ್ತು ಸಂರಬ್ಧಾ ದಾನವಾನುಪಸೃತ್ಯ ಹ ।
ತತಸ್ತೇ ವಧ್ಯಮಾನಾಸ್ತು ಕಾವ್ಯಮೇವಾಭಿದುದ್ರುವುಃ ॥ ೨೧೦ ॥

ತತಃ ಕಾವ್ಯಸ್ತು ತಾನ್ ದೃಷ್ಟ್ವಾ ತೂರ್ಣಂ ದೇವೈರಭಿದ್ರುತಾನ್ ।
ರಕ್ಷಾಕಾರ್ಯೇಣ ಸಂಸ್ಮೃತ್ಯ ದೇವೇಭ್ಯಸ್ತಾನ್ಸುರಾರ್ದಿತಾನ್ ॥ ೨೧೧ ॥

ಕಾವ್ಯಂ ದೃಷ್ಟ್ವಾ ಸ್ಥಿತಂ ದೇವಾ ನಿರ್ವಿಶಂಕಾಸ್ತು ತೇ ಜಹುಃ ।
ತತಃ ಕಾವ್ಯೋ ವಿಚಿಂತ್ಯಾಥ ಬ್ರಹ್ಮಣೋ ವಚನಂ ಹಿತಂ ॥ ೨೧೨ ॥

ತಾನುವಾಚ ತತಃ ಕಾವ್ಯಃ ಪೂರ್ವವೃತ್ತಮನುಸ್ಮರನ್ ।
ತ್ರೈಲೋಕ್ಯಂ ವೋ ಹೃತಂ ಸರ್ವಂ ವಾಮನೇನ ತ್ರಿಭಿಃ ಕ್ರಮೈಃ ॥ ೨೧೩ ॥

ಬಲಿರ್ಬದ್ಧೋ ಹತೋ ಜಂಭೋ ನಿಹತಶ್ಚ ವಿರೋಚನಃ ।
ಮಹಾಸುರಾ ದ್ವಾದಶಸು ಸಂಗ್ರಾಮೇಷು ಸುರೈರ್ಹತಾಃ ॥ ೨೧೪ ॥

ತೈಸ್ತೈರುಪಾಯೈರ್ಭೂಯಿಷ್ಠೈರ್ನಿಹತಾಸ್ತು ಪ್ರಧಾನತಃ ।
ಕೇಚಿಚ್ಛಿಷ್ಟಾಸ್ತು ಯೂಯಂ ಹಿ ಯುದ್ಧಂ ನಾಸ್ತೀತಿ ಮೇ ಮತಂ ॥

---

೨೧೦. ಅನಂತರ ದೇವತೆಗಳು ಕೋಪಗೊಂಡು ದಾನವರ ಮೇಲೆ ಬಿದ್ದರು. ಆ ದಾನವರು ಏಟನ್ನು ತಿನ್ನುತ್ತಾ ಮತ್ತೆ ಶುಕ್ರನ ಬಳಿಗೆ ಹೋದರು.

೨೧೧. ಅನಂತರ ದೇವತೆಗಳಿಂದ ಬಾಧಿಸಲ್ಪಡುತ್ತಿರುವ ಆ ದಾನವರನ್ನು ಶುಕ್ರನು ರಕ್ಷಣೆಯ ಕೆಲಸದಿಂದ ಕಾಪಾಡಿದನು.

೧೧೨. ಓಡಿಸಿಕೊಂಡು ಹೋಗುತ್ತಿರುವಾಗ ಅಲ್ಲಿ ಶುಕ್ರನಿದ್ದುದನ್ನು ನೋಡಿ ಆ ದೇವತೆಗಳು ಸ್ವಲ್ಪವೂ ಹೆದರದೆ ನಕ್ಕರು. ಅನಂತರ ಶುಕ್ರನು ಬ್ರಹ್ಮನು ಹೇಳಿದ್ದ ಹಿತಕರವಾದ ಮಾತನ್ನು ಜ್ಞಾಪಿಸಿಕೊಂಡನು.

೨೧೩-೨೧೫. ಆಗ ಶುಕ್ರನು ಹಿಂದಿನ ವಿಷಯವನ್ನು ಸ್ಮರಿಸಿಕೊಳ್ಳುತ್ತ ಆ ದಾನವರನ್ನು ಕುರಿತು ಇಂತೆಂದನು. ಎಲೈ ದಾನವರೇ, ನಿಮ್ಮ ಮೂರು ಲೋಕದ ಆಧಿಪತ್ಯವನ್ನು ವಾಮನನು ಮೂರು ಹೆಜ್ಜೆಗಳಿಂದ ಆಕ್ರಮಿಸಿಕೊಂಡನು. ಬಲಿಯನ್ನು ಪಾತಾಳದಲ್ಲಿ ಬಂಧನದಲ್ಲಿಟ್ಟನು, ಜಂಭಾಸುರನನ್ನು ಕೊಂದನು, ವಿರೋಚನನನ್ನು ಕೊಂದನು. ಯುದ್ಧದಲ್ಲಿ ಹನ್ನೆರಡು ಜನ ಮಹಾಶೂರರಾದ ರಾಕ್ಷಸರನ್ನು ದೇವತೆಗಳು ಕೊಂದರು. ಆಯಾ ಕಾಲಕ್ಕೆ ಬೇಕಾದಂತೆ ಉಪಾಯಗಳನ್ನು ಹುಡುಕಿ

ತಾಂ ನೀತಿಂ ವೋ ವಿಧಾಸ್ಯಾಮಿ ಉಪಾಸ್ಯೇ ಕಾಲಪರ್ಯಯಂ ।
ಯಾಸ್ಯಾಮ್ಯಹಂ ಮಹಾದೇವಂ ಮಂತ್ರಾರ್ಥೇ ವಿಜಯಾವಹಂ ॥ ೨೧೬ ॥

ಅಪ್ರತೀಪಾಂಸ್ತತೋ ಮಂತ್ರಾನ್ಪ್ರಾಪ್ಯ ತಾಂಸ್ತು ಮಹೇಶ್ವರಾತ್ ।
ಸಂಯೋತ್ಸ್ಯಥ್ವೇ ಪುನರ್ದೇವೈಸ್ತತಃ ಪ್ರಾಪ್ಸ್ಯಥ ವೈ ಜಯಂ ॥ ೨೧೭ ॥

ತತಸ್ತೇ ಕೃತಸಂವಾದಾ ದೇವಾನೂಚುಸ್ತದಾಸುರಾಃ ।
ನ್ಯಸ್ತಶಸ್ತ್ರಾ ವಯಂ ಸರ್ವೇ ನಿಃಸನ್ನಾಹಾ ರಥಂ ವಿನಾ ॥ ೨೧೮ ॥

ವಯಂ ತಪಶ್ಚರಿಷ್ಯಾಮಃ ಸಂವೃತಾ ವಲ್ಕಲೈಸ್ತಥಾ ।
ಪ್ರಹ್ಲಾದಸ್ಯ ವಚಃ ಶ್ರುತ್ವಾ ಸತ್ಯಾಭಿವ್ಯಾಹೃತಂ ತತಃ ॥ ೨೧೯ ॥

---

ಅನೇಕರಾದ ಗಟ್ಟಿಗರಾದ ರಾಕ್ಷಸರನ್ನು ಮುಖ್ಯವಾಗಿ ಕೊಂದರು. ನೀವುಗಳು ಬಹು ಸ್ವಲ್ಪ ಮಂದಿ ಉಳಿದುಕೊಂಡಿರುವಿರಿ. ಆದ್ದರಿಂದ ಯುದ್ಧದ ವಿಷಯವೇ ಬೇಡ ವೆಂದು ನನಗೆ ತೋರುತ್ತದೆ.

೨೧೬. ನೀವು ಜಯಿಸುವ ರೀತಿಯಲ್ಲಿ ಒಂದು ಉಪಾಯವನ್ನು ಮಾಡು ತ್ತೇನೆ, ಸಮಯವನ್ನು ನಿರೀಕ್ಷಿಸುತ್ತಿದ್ದೇನೆ. ವಿಜಯವನ್ನುಂಟುಮಾಡುವ ಮಂತ್ರ ಕ್ಕೋಸ್ಕರ ಮಹಾದೇವನ ಬಳಿಗೆ ಹೋಗಿ ಆತನನ್ನು ಸೇವಿಸುತ್ತೇನೆ.

೨೧೭. ಒಬ್ಬರಿಗೂ ಗೊತ್ತಿಲ್ಲದ ಮಂತ್ರಗಳನ್ನು ಆ ಮಹೇಶ್ವರನಿಂದ ಹೊಂದು ತ್ತೇನೆ. ದೇವತೆಗಳೊಡನೆ ಯುದ್ಧಮಾಡಿಸುತ್ತೇನೆ. ಆಮೇಲೆ ಜಯವನ್ನು ಹೊಂದುವಿರಿ.

೨೧೮. ಆಗ ಅಸುರರು ದೇವತೆಗಳನ್ನು ಕುರಿತು, ಎಲೈ ದೇವತೆಗಳೇ! ನಾವು ಗಳೆಲ್ಲರೂ ಶಸ್ತ್ರಗಳನ್ನು ಕೆಳಗಿಟ್ಟಿದ್ದೇವೆ, ಯುದ್ಧಕ್ಕೆ ಸಿದ್ಧರಾಗಿಲ್ಲ, ರಥವಂದು ಹೊರತು ಮತ್ತಾವುದೂ ನಮಗೆ ಸಿದ್ಧವಾಗಿಲ್ಲ.

೨೧೯. ನಾವೆಲ್ಲರೂ ನಾರು ಬಟ್ಟೆಯನ್ನುಟ್ಟು ತಪಸ್ಸನ್ನು ಮಾಡುತ್ತೇವೆ ಎಂದು ಮುಂದಾಳಾಗಿ ಪ್ರಹ್ಲಾದನು ಹೇಳಲು, ಅದನ್ನು ಕೇಳಿ ಇದು ಸತ್ಯವೆಂದು ಆ ದೇವತೆಗಳು ನಂಬಿದರು.

ತತೋ ನ್ಯವರ್ತಯನ್ಸರ್ವೇ ವಿಜ್ವರಾ ಮುದಿತಾಶ್ಚ ಯೇ ।
ನ್ಯಸ್ತಶಸ್ತ್ರೇಷು ದೈತ್ಯೇಷು ವಿನಿವೃತ್ತಾಸ್ತದಾ ಸುರಾಃ ॥ ೨೨೦ ॥

ತತಸ್ತಾನಬ್ರವೀತ್ಕಾವ್ಯಃ ಕಂಚಿತ್ಕಾಲಮುಪಾಸಿತಾಃ ।
ನಿರುತ್ಸಿಕ್ತಾಸ್ತಪೋಯುಕ್ತಾಃ ಕಾಲಕಾರ್ಯಾರ್ಥಸಾಧಕಾಃ ॥ ೨೨೧ ॥

ಪಿತುರಾಶ್ರಮಸಂಸ್ಥಾ ವೈ ಮಾಂ ಪ್ರತೀಕ್ಷಥ ದಾನವಾಃ ।
ತಾನುದ್ದಿಶ್ಯಾಸುರಾನ್ಕಾವ್ಯೋ ಮಹಾದೇವಮುಪದ್ಯತ ॥ ೨೨೨ ॥

॥ ಶುಕ್ರ ಉವಾಚ ॥

ಮಂತ್ರಾನಿಚ್ಛಾಮ್ಯಹಂ ದೇವ ಯೇ ನ ಸಂತಿ ಬೃಹಸ್ಪತೌ ।
ಪರಾಭವಾಯ ದೇವಾನಾಮಸುರಾಣಾಂ ಜಯಾಯ ಚ ॥ ೨೨೩ ॥

ಏವಮುಕ್ತೋಽಬ್ರವೀದ್ದೇವೋ ವ್ರತಂ ತ್ವಂ ಚರ ಭಾರ್ಗವ ।
ಪೂರ್ಣಂ ವರ್ಷಸಹಸ್ರಂ ತು ಕಣಧೂಮಮಧಃಶಿರಾಃ ॥ ೨೨೪ ॥

---

೨೨೦. ಆಗ ಆ ದೇವತೆಗಳೆಲ್ಲರೂ ಸಂತೋಷದಿಂದ ಸ್ವಲ್ಪವೂ ನೋವಿಲ್ಲದೇ ಸುಮ್ಮನಾದರು. ಈ ರೀತಿ ದೈತ್ಯರು ಶಸ್ತ್ರಗಳನ್ನು ಕೆಳಗಿಡಲು ದೇವತೆಗಳೆಲ್ಲರೂ ಹೊರಟುಹೋದರು.

೨೨೧. ಈ ರೀತಿ ಕೆಲವು ಕಾಲ ದಾನವರು ಉತ್ಸಾಹವಿಲ್ಲದೆ ತಪಸ್ಸನ್ನು ಮಾಡುತ್ತ, ಕಾಲವನ್ನು ತಮ್ಮ ಕೆಲಸಕ್ಕೋಸ್ಕರ ನಿರೀಕ್ಷಿಸುತ್ತ, ಆಶುಕ್ರನನ್ನು ಸೇವಿಸುತ್ತಿರಲು ಅವರನ್ನು ಕುರಿತು ಆ ಶುಕ್ರನು ಇಂತೆಂದನು.

೨೨೨. ಎಲೈ ದಾನವರೇ! ನೀವು ನಮ್ಮ ತಂದೆಯಾದ ಭೃಗುವಿನ ಆಶ್ರಯದಲ್ಲಿದ್ದುಕೊಂಡು ನನ್ನನ್ನು ನಿರೀಕ್ಷಿಸುತ್ತಿರಿ ಎಂದು ಹೇಳಿ, ಅವರಿಗೋಸ್ಕರ ಆ ಶುಕ್ರನು ಮಹಾದೇವನ ಬಳಿಗೆ ಹೋದನು.

೨೨೩. ಶುಕ್ರನು ಹೇಳಿದನು :—ಎಲೈ ಸ್ವಾಮಿಯೇ! ದೇವತೆಗಳ ಸೋಲಿಗೂ, ದಾನವರ ಜಯಕ್ಕೂ ಸಾಧಕವಾದ, ಬೃಹಸ್ಪತಿಗೆ ತಿಳಿಯದಮಂತ್ರಗಳನ್ನು ನಾನು ತಿಳಿಯಲು ಅಪೇಕ್ಷಿಸುತ್ತೇನೆ.

೨೨೪. ಹೀಗೆಂಬದಾಗಿ ಕೇಳಲು, ಮಹಾದೇವನು ಎಲೈ ಶುಕ್ರನೇ! ನೀನು ಒಂದು ಸಾವಿರ ವರ್ಷಗಳು ಪೂರ್ತಿಯಾಗಿ ಕೆಳಗೆ ಹೊಗೆಯನ್ನು ಹಾಕಿಕೊಂಡು, ಆ ಹೊಗೆಯು ಕೆಳಗೆ ತಲೆಕೆಳಗಾಗಿದ್ದು ಕಣ ಧೂಮವೆಂಬ ವ್ರತವನ್ನು ಮಾಡು, ಅದನ್ನು ಸುಗಮವಾಗಿ ಪೂರ್ತಿಗೊಳಿಸಿದರೆ ಆಮೇಲೆ ಮಂತ್ರಗಳನ್ನು ಕೊಡುತ್ತೇನೆ.

ಯದಿ ಪಶ್ಯಸಿ ಭದ್ರಂ ತೇ ತತೋ ಮಂತ್ರಾನವಾಪ್ಸ್ಯಸಿ ।
ತಥೇತಿ ಸಮನುಜ್ಞಾಯ ಶುಕ್ರಸ್ತು ಭೃಗುನಂದನಃ ॥ ೨೨೫ ॥

ಪಾದೌ ಸಂಸ್ಪೃಶ್ಯ ದೇವಸ್ಯ ಬಾಢಮಿತ್ಯಬ್ರವೀದ್ವಚಃ ।
ವ್ರತಂ ಚರಾಮ್ಯಹಂ ದೇವ ತ್ವಯಾಽದಿಷ್ಟೋಽಥ ವೈ ಪ್ರಭೋ ॥ ೨೨೬ ॥

ಆದಿಷ್ಟೋ ದೇವದೇವೇನ ಕೃತವಾನ್ಭಾರ್ಗವೋ ಮುನಿಃ ।
ತದಾ ತಸ್ಮಿನ್ಗತೇ ಶುಕ್ರೇ ಅಸುರಾಣಾಂ ಹಿತಾಯ ವೈ ॥ ೨೨೭ ॥

ಮಂತ್ರಾರ್ಥೇ ತನುತೇ ಕಾವ್ಯೇ ಬ್ರಹ್ಮಚರ್ಯಂ ಮಹೇಶ್ವರಾತ್ ।
ತದ್ಬುಧ್ವಾ ನೀತಿಪೂರ್ವಂ ತು ರಾಜನ್ಯಾಸ್ತು ತದಾ ಸುಖಂ ॥ ೨೨೮ ॥

ಅಸ್ಮಿಂಶ್ಛಿದ್ರೇ ತದಾಽಮರ್ಷಾದ್ದೇವಾಸ್ತಾನಭಿದುದ್ರುವುಃ ।
ದಂಶಿತಾಃ ಸಾಯುಧಾಃ ಸರ್ವೇ ಬೃಹಸ್ಪತಿಪುರಃಸರಾಃ ॥ ೨೨೯ ॥

ದೃಷ್ಟ್ವಾಽಸುರಗಣಾ ದೇವಾನ್ಪ್ರಗೃಹೀತಾಯುಧಾನ್ಪುನಃ ।
ಉತ್ಪೇತುಃ ಸಹಸಾ ಸರ್ವೇ ಸಹತ್ರಾಸಾ ವಚೋಽಬ್ರುವನ್ ॥ ೨೩೦ ॥

---

೨೨೫-೨೨೬. ಭೃಗುವಿನ ಮಗನಾದ ಶುಕ್ರನು ಹಾಗೇ ಆಗಲೆಂದು ಒಪ್ಪಿಕೊಂಡು ಆ ಸ್ವಾಮಿಯ ಪಾದಗಳನ್ನು ಮುಟ್ಟಿ ನಮಸ್ಕರಿಸಿ, ಎಲೈ ಸ್ವಾಮಿಯೇ! ನೀನು ಅಪ್ಪಣೆಮಾಡಿದಂತೆಯೇ ವ್ರತವನ್ನು ಮಾಡುತ್ತೇನೆ ಆಗಲಿ ಎಂದನು.

೨೨೭. ದೇವದೇವನು ಹೀಗೆ ಹೇಳಲು ಅಂತೆಯೇ ಆ ಶುಕ್ರನು ಆ ಕಾಡಿನಲ್ಲಿ ದಾನವರ ಹಿತಕ್ಕೋಸ್ಕರ ಬ್ರಹ್ಮಚರ್ಯವನ್ನು ಧರಿಸಿ ಮಂತ್ರಕ್ಕೋಸ್ಕರ ವ್ರತವನ್ನು ಮಾಡಲು ಮೊದಲು ಮಾಡಿದನು.

೨೨೮. ಇತ್ತ ರಾಜರಾಗಿರುವ ಈ ದೇವತೆಗಳು ನೀತಿಯನ್ನು ಉಪಯೋಗಿಸಿ ತಾವು ಇಷ್ಟಾರ್ಥ ಪೂರ್ತಿಮಾಡಿಕೊಳ್ಳುವುದನ್ನು ತಿಳಿದುಕೊಂಡರು.

೨೨೯. ಇಷ್ಟರಲ್ಲಿ ತಪ್ಪನ್ನು ಹುಡುಕಿ ಹೊಟ್ಟೆಗಿಚ್ಚಿನಿಂದ ದೇವತೆಗಳು ಬೃಹಸ್ಪತಿಯನ್ನು ಮುಂದು ಮಾಡಿಕೊಂಡು ಕವಚಗಳನ್ನು ತೊಟ್ಟು ಆಯುಧಗಳನ್ನು ಹಿಡಿದು ದಾನವರ ಮೇಲೆ ಯುದ್ಧಕ್ಕೆ ಹೊರಟರು.

೨೩೦. ದೇವತೆಗಳು ಆಯುಧ ಹಿಡಿದು ಯುದ್ಧಕ್ಕೆ ಬಂದುದನ್ನು ನೋಡಿ ಈ ದಾನವರೂ ಕೂಡ ಅವಸರದಿಂದೆದ್ದರು, ಆಗ ಹೆದರಿಕೆಯಿಂದ ಇಂತೆಂದರು.

॥ ದೈತ್ಯಾ ಊಚುಃ ॥

ನ್ಯಸ್ತಶಸ್ತ್ರಾ ವಯಂ ದೇವಾ ಆಚಾರ್ಯೇ ವ್ರತಮಾಸ್ಥಿತೇ ।
ದತ್ತ್ವಾ ಭವಂತಸ್ತ್ವಭಯಂ ಸಂಪ್ರಾಪ್ತಾ ನೋ ಜಿಘಾಂಸಯಾ ॥ ೨೩೧ ॥

ಅನಮರ್ಷಾ ವಯಂ ಸರ್ವೇ ತ್ಯಕ್ತಶಸ್ತ್ರಾಶ್ಚ ಸಂಸ್ಥಿತಾಃ ।
ಚೀರಕೃಷ್ಣಾಜಿನಧರಾ ನಿಷ್ಕ್ರಿಯಾ ನಿಷ್ಪರಿಗ್ರಹಾಃ ॥ ೨೩೨ ॥

ರಣೇ ವಿಜೇತುಂ ದೇವಾಂಶ್ಚ ನ ಶಕ್ಷ್ಯಾಮಃ ಕಥಂಚನ ।
ಅಯುದ್ಧೇನ ಪ್ರಪತ್ಸ್ಯಾಮಃ ಶರಣಂ ಕಾವ್ಯಮಾತರಂ ॥ ೨೩೩ ॥

ಜ್ಞಾಪಯಾಮಃ ಕೃಚ್ಛ್ರಮಿದಂ ಯಾವನ್ನಾಭ್ಯೇತಿ ನೋ ಗುರುಃ ।
ನಿವೃತ್ತೇ ಚ ತಥಾ ಶುಕ್ರೇ ಯೋತ್ಸ್ಯಾಮೋ ದಂಶಿತಾಯುಧಾಃ ॥ ೨೩೪ ॥

ಏವಮುಕ್ತ್ವಾ ಚ ತೇಽನ್ಯೋನ್ಯಂ ಶರಣಂ ಕಾವ್ಯಮಾತರಂ ।
ಪ್ರಾಪದ್ಯಂತ ತತೋ ಭೀತಾಸ್ತೇಭ್ಯೋ ದತ್ತ್ವಾಽಭಯಂ ತು ಸಾ ॥ ೨೩೫ ॥

---

೨೩೧. ದೈತ್ಯರು ಹೇಳಿದರು:—ಎಲೈ ದೇವತೆಗಳಿರಾ! ನಮ್ಮ ಗುರುವು ವ್ರತವನ್ನು ಆಚರಿಸುತ್ತಿರುವನಾದುದರಿಂದ ನಾವು ಶಸ್ತ್ರವನ್ನು ಕೆಳಗಿಟ್ಟಿದ್ದೇವೆ, ನೀವೂ ಕೂಡ ನಮಗೆ ಅಭಯವನ್ನು ಕೊಟ್ಟು, ಈಗ ಕೊಲ್ಲಬೇಕೆಂದು ಬಂದಿದ್ದೀರಿ.

೨೩೨. ನಾವು ಕೋಪವನ್ನೂ ಹೊಂದಿಲ್ಲ, ಶಸ್ತ್ರಗಳನ್ನೂ ಧರಿಸಿಲ್ಲ, ನಾರು ಮಡಿ ಕೃಷ್ಣಾಜಿನಗಳನ್ನು ಧರಿಸಿದ್ದೇವೆ. ಯುದ್ಧದ ವ್ಯಾಪಾರವೊಂದನ್ನೂ ಮಾಡುತ್ತಿಲ್ಲ. ಒಬ್ಬರಿಂದಲೂ ಒಂದನ್ನೂ ತೆಗೆದುಕೊಳ್ಳುತ್ತಿಲ್ಲ.

೨೩೩-೨೩೪. ಯುದ್ಧದಲ್ಲಿ ದೇವತೆಗಳನ್ನು ಗೆಲ್ಲಲು ನಮಗೆ ಹೇಗೂ ಶಕ್ತಿಯಿಲ್ಲ. ಆದ್ದರಿಂದ ಯುದ್ಧದಲ್ಲಿ ಮನಸ್ಸಿಡದೆ ನಮ್ಮ ಶುಕ್ರಾಚಾರ್ಯರ ತಾಯಿಯನ್ನೇ ಶರಣಹೊಂದೋಣ, ನಮ್ಮ ಗುರುವು ಬರುವವರೆಗೂ ನಮ್ಮ ಈ ದುಸ್ಥಿತಿಯನ್ನು ಹೇಳಿಕೊಳ್ಳೋಣ. ಶುಕ್ರಾಚಾರ್ಯರು ಬಂದಮೇಲೆ ಯುದ್ಧದ ವೇಷವನ್ನು ಧರಿಸಿ ಯುದ್ಧಮಾಡೋಣ.

೨೩೫. ಹೀಗೆಂದು ಆ ರಾಕ್ಷಸರು ಒಬ್ಬರಿಗೊಬ್ಬರು ಮಾತನಾಡಿಕೊಂಡು ದೇವತೆಗಳಿಗೆ ಹೆದರಿ ಶುಕ್ರಾಚಾರ್ಯರ ತಾಯಿಯನ್ನು ಮರೆಹೊಕ್ಕರು. ಆಕೆಯು ಅವರಿಗೆ ಅಭಯವನ್ನು ಕೊಟ್ಟಳು.

॥ ಕಾವ್ಯಮಾತೋವಾಚ ॥

ನ ಭೇತವ್ಯಂ ನ ಭೇತವ್ಯಂ ಭಯಂ ತ್ಯಜತ ದಾನವಾಃ ।
ಮತ್ಸನ್ನಿಧೌ ವರ್ತತಾಂ ವೋ ನ ಭೀರ್ಭವಿತುಮರ್ಹತಿ ॥ ೨೩೬ ॥

ತಯಾ ಚಾಪ್ಯುಪಪನ್ನಾಂಸ್ತಾನ್ ದೃಷ್ಟ್ವಾ ದೇವಾಸ್ತು ದಾನವಾನ್ ।
ಅಭಿಜಗ್ಮುಃ ಪ್ರಸಹ್ಯೈತಾನವಿಚಾರ್ಯ ಬಲಾಬಲಂ ॥ ೨೩೭ ॥

ತತಃ ಸಾ ವಧ್ಯಮಾನಾಂಸ್ತಾನ್ ದೇವೈರ್ದೃಷ್ಟ್ವಾಸುರಾಂಸ್ತಥಾ ।
ದೇವೀ ಕ್ರುದ್ಧಾಬ್ರವೀದ್ದೇವಾನ್ನಿದ್ರಯಾ ಮೋಹಯಾಮ್ಯಹಂ ॥ ೨೩೮ ॥

ಸಂವೃತ್ಯ ಸರ್ವಸಂಭಾರಾನ್ನಿದ್ರಾಂ ಸಾ ವ್ಯಸೃಜತ್ತದಾ ।
ಸಂಸ್ತಭ್ಯ ದೇವೀ ವ್ಯಚರದ್ಯೋಗಯುಕ್ತಾ ತಪೋಧನಾ ॥ ೨೩೯ ॥

ತತಸ್ತಂ ಸ್ತಂಭಿತಂ ದೃಷ್ಟ್ವಾ ಇಂದ್ರಂ ದೇವಾಶ್ಚ ಮೂಢವತ್ ।
ಪ್ರಾದ್ರವಂತ ತತೋ ಭೀತಾ ಇಂದ್ರಂ ದೃಷ್ಟ್ವಾ ವಶೀಕೃತಂ ।
ಗತೇಷು ಸುರಸಂಘೇಷು ವಿಷ್ಣುರಿಂದ್ರಮಭಾಷತ ॥ ೨೪೦ ॥

---

೨೩೬. ಶುಕ್ರಾಚಾರ್ಯನ ತಾಯಿಯು ಹೇಳಿದಳು :—ಎಲೈ ದಾನವರೇ ಹೆದರಬೇಡಿ, ಭಯವನ್ನು ಬಿಟ್ಟುಬಿಡಿ, ನನ್ನ ಹತ್ತಿರವಿರುವಾಗ ನೀವು ಭಯಪಡುವುದು ಸರಿಯಲ್ಲ.

೨೩೭. ಆರೀತಿ ಆಕೆಯು ದಾನವರನ್ನು, ಬೆನ್ನುಹಾಕಿಕೊಂಡಿರುವುದನ್ನು, ದೇವತೆಗಳು ನೋಡಿ, ತಮ್ಮ ಆಕೆಯ ಬಲಾಬಲಗಳನ್ನು ತಿಳಿಯದೇ ಆ ದಾನವರ ಮೇಲೆ ಮತ್ತೆ ಬಿದ್ದರು.

೨೩೮-೨೩೯. ಆಗ ಆಕೆಯು ದೇವತೆಗಳು ದಾನವರನ್ನು ಕೊಲ್ಲುತ್ತಿರುವುದನ್ನು ನೋಡಿದಳು. ಆದರಿಂದ ಕೋಪಗೊಂಡು ಈ ದೇವತೆಗಳನ್ನು ನಿದ್ರೆಯು ಆವರಿಸುವಂತೆ ಮಾಡುತ್ತೇನೆ ಎಂದು ತಪಸ್ವಿನಿಯೂ ಯೋಗಿನಿಯೂ ಆದ ಆಕೆಯು ಅಂತೆಯೇ ಮಾಡಿದಳು.

೨೪೦. ಆಗ ದೇವತೆಗಳು ಇಂದ್ರನು ಮೂಢನಂತೆ ಸುಮ್ಮನಿರುವುದನ್ನು ನೋಡಿ ಅವನನ್ನು ವಶಮಾಡಿಕೊಂಡಳೆಂದು ತಿಳಿದು ಹೆದರಿ ಓಡಿದರು. ಹೀಗೆ ದೇವತೆಗಳೆಲ್ಲರೂ ಹೊರಟುಹೋಗಲು ವಿಷ್ಣುವು ಇಂದ್ರನಿಗೆಂತೆಂದನು.

॥ ವಿಷ್ಣುರುವಾಚ ॥

ಮಾಂ ತ್ವಂ ಪ್ರವಿಶ ಭದ್ರಂ ತೇ ನಯಿಷ್ಯೇ ತ್ವಾಂ ಸುರೋತ್ತಮ ।
ಏವಮುಕ್ತಸ್ತತೋ ವಿಷ್ಣುಂ ಪ್ರವಿವೇಶ ಪುರಂದರಃ ॥ ೨೪೧ ॥

ವಿಷ್ಣುನಾ ರಕ್ಷಿತಂ ದೃಷ್ಟ್ವಾ ದೇವೀ ಕ್ರುದ್ಧಾಽಬ್ರವೀದ್ವಚಃ ॥ ೨೪೨ ॥

॥ ಕಾವ್ಯಮಾತೋವಾಚ ॥

ಏಷಾ ತ್ವಾಂ ವಿಷ್ಣುನಾ ಸಾರ್ಧಂ ದಹಾಮಿ ಮಘವನ್ಬಲಾತ್ ।
ಮಿಷತಾಂ ಸರ್ವಭೂತಾನಾಂ ದೃಶ್ಯತಾಂ ಮೇ ತಪೋಬಲಂ ॥ ೨೪೩ ॥

ಭಯಾಭಿಭೂತೌ ತೌ ದೇವಾವಿಂದ್ರವಿಷ್ಣೂ ಬಭೂವತುಃ ।
ಕಥಂ ಮುಚ್ಯೇವ ಸಹಿತೌ ವಿಷ್ಣುರಿಂದ್ರಮಭಾಷತ ॥ ೨೪೪ ॥

ಇಂದ್ರೋಽಬ್ರವೀಜ್ಜಹಿಹ್ಯೇನಾಂ ಯಾವನ್ನೌ ನ ದಹೇತ್ಪ್ರಭೋ ।
ವಿಶೇಷೇಣಾಭಿಭೂತೋಽಸ್ಮಿ ತದಿಮಾಂ ಜಹಿ ಮಾ ಚಿರಂ ॥ ೨೪೫ ॥

---

೨೪೧-೨೪೨. ವಿಷ್ಣುವು ಹೇಳಿದನು :—ಎಲೈ ಇಂದ್ರನೇ, ನೀನು ನನ್ನನ್ನು ಒಳಹೋಗು, ಕರೆದುಕೊಂಡು ಹೋಗುತ್ತೇನೆ, ಎನ್ನಲು ವಿಷ್ಣುವಿನ ದೇಹವನ್ನು ಹೊಕ್ಕನು. ಈಕೆಯು ಇಂದ್ರನನ್ನು ವಿಷ್ಣುವು ಸಂರಕ್ಷಿಸಿದುದನ್ನು ತಿಳಿದು ಕೋಪಗೊಂಡು ಇಂತೆಂದಳು.

೨೪೩. ಶುಕ್ರನ ತಾಯಿಯು ಹೇಳಿದಳು :—ಎಲೈ ಇಂದ್ರನೇ, ಎಲ್ಲಾ ಪ್ರಾಣಿಗಳ ಕಣ್ಣೆದುರಿಗೇನೇ ನಿನ್ನನ್ನು ನನ್ನ ತಪೋಬಲದಿಂದ ವಿಷ್ಣುವಿನೊಡನೆ ಸುಟ್ಟುಹಾಕುತ್ತೇನೆ, ನನ್ನ ತಪೋಬಲವನ್ನು ನೋಡು ಎಂದಳು.

೨೪೪. ಆಗ ಇಂದ್ರನೂ ವಿಷ್ಣುವೂ ಭಯದಿಂದ ಕೂಡಿದವರಾದರು. ಆಗ ವಿಷ್ಣುವು ಎಲೈ ಇಂದ್ರನೇ, ನಾವಿಬ್ಬರೂ ಹೇಗೆ ಪಾರಾದೇವು ಎಂದನು.

೨೪೫. ಆಗ ಇಂದ್ರನು ಎಲೈ ಪ್ರಭುವೇ, ಈಕೆಯು ನಮ್ಮನ್ನು ಸುಡುವಷ್ಟರೊಳಗೆ ಬೇಗನೇ ಈಕೆಯನ್ನು ಕತ್ತರಿಸು, ವಿಳಂಬಮಾಡಬೇಡ, ನಾನು ಈಕೆಯಿಂದ ಬಿಗಿಯಲ್ಪಟ್ಟಿದ್ದೇನೆ, ನೀನೇ ವಧಿಸು.

ತತಃ ಸಮೀಕ್ಷ್ಯ ವಿಷ್ಣುಸ್ತಾಂ ಸ್ತ್ರೀವಧೇ ಕೃಚ್ಛ್ರಮಾಸ್ಥಿತಃ ।
ಅಭಿಧ್ಯಾಯ ತತಶ್ಚಕ್ರಮಾಪನ್ನಂ ಸತ್ವರಂ ಪ್ರಭುಃ　　॥ ೨೪೬ ॥

ತತಃ ಸ ತ್ವರಯಾ ಯುಕ್ತಃ ಶೀಘ್ರಕಾರೀ ಭಯಾನ್ವಿತಃ ।
ಜ್ಞಾತ್ವಾ ವಿಷ್ಣುಸ್ತತಸ್ತಸ್ಯಾಃ ಕ್ರೂರಂ ದೇವ್ಯಾಶ್ಚಿಕೀರ್ಷಿತಂ　　॥ ೨೪೭ ॥

ಕ್ರುದ್ಧಶ್ಚಕ್ರಂ ಸಮಾದಾಯ ಶಿರಶ್ಚಿಚ್ಛೇದ ವೈ ಭಯಾತ್ ।
ತಂ ದೃಷ್ಟ್ವಾ ಸ್ತ್ರೀವಧಂ ಘೋರಂ ಚುಕ್ರೋಧ ಭೃಗುರೀಶ್ವರಃ ।
ತತೋಽಭಿಶಪ್ತೋ ಭೃಗುಣಾ ವಿಷ್ಣುರ್ಭಾರ್ಯಾವಧೇ ಕೃತೇ　　॥ ೨೪೮ ॥

॥ ಭೃಗುರುವಾಚ ॥

ಯಸ್ಮಾತ್ತೇ ಜಾನತಾ ಧರ್ಮಮವಧ್ಯಾ ಸ್ತ್ರೀ ನಿಷೂದಿತಾ ।
ತಸ್ಮಾತ್ತ್ವಂ ಸಪ್ತಕೃತ್ವೋ ಹ ಮಾನುಷೇಷೂಪಯಾಸ್ಯಸಿ　　॥ ೨೪೯ ॥

ತತಸ್ತೇನಾಭಿಶಾಪೇನ ನಷ್ಟೇ ಧರ್ಮೇ ಪುನಃ ಪುನಃ ।
ಲೋಕಸ್ಯ ಚ ಹಿತಾರ್ಥಾಯ ಜಾಯತೇ ಮಾನುಷೇಷ್ವಿಹ　　॥ ೨೫೦ ॥

---

೨೪೬. ಆಗ ವಿಷ್ಣುವು ಯೋಚಿಸುತ್ತಾ, ಹೆಂಗಸಿನ ವಧೆಯಲ್ಲಿ ಹಿಂತೆಗೆಯ ಬೇಕಾದರೂ ಹಿಂಜರಿಯದೆ ಚಕ್ರವನ್ನು ಧ್ಯಾನಮಾಡಿದನು. ಚಕ್ರವು ಬಂದಿತು.

೨೪೭. ಭಯಂಕರದಿಂದ ಕೂಡಿದ ಮತ್ತು ಶೀಘ್ರಕಾರಿಯಾದ ಆ ವಿಷ್ಣುವು ಆ ದೇವಿಯ ದುರಭಿಪ್ರಾಯವನ್ನು ತಿಳಿದುಕೊಂಡು ಜಾಗ್ರತೆಯಾಗಿ ಚಕ್ರವನ್ನು ತೆಗೆದುಕೊಂಡು ಆಕೆಯ ತಲೆಯನ್ನು ತನಗುಂಟಾಗಿದ್ದ ಭಯದಿಂದ ಕತ್ತರಿಸಿದನು.

೨೪೮. ಸರ್ವಶಕ್ತನಾದ ಭೃಗುವು ಈ ಸ್ತ್ರೀವಧೆಯನ್ನು ನೋಡಿ ಬಹುವಾಗಿ ಕೋಪಗೊಂಡನು. ತನ್ನ ಹೆಂಡತಿಯನ್ನು ಕೊಂದುದರಿಂದ ಆ ಭೃಗುವು ವಿಷ್ಣುವನ್ನು ಶಪಿಸಿದನು.

೨೪೯. ಭೃಗುವು ಹೇಳಿದನು :—ನೀನು ಧರ್ಮವನ್ನು ತಿಳಿದಿದ್ದರೂ ಕೊಲ್ಲಬಾರದ ಸ್ತ್ರೀಯನ್ನು ಕೊಂದಿದ್ದೀಯೆ. ಆದ್ದರಿಂದ ಏಳು ಬಾರಿ ಮನುಷ್ಯರಲ್ಲಿ ಹುಟ್ಟು ಎಂದನು.

೨೫೦. ಹಾಗೆ ಶಾಪಬಂದುದರಿಂದಲೇ ಧರ್ಮವು ನಾಶವಾದಾಗಲೆಲ್ಲಾ ಲೋಕದ ಹಿತಕ್ಕೋಸ್ಕರ ಮತ್ತೆ ಮತ್ತೆ ಆ ವಿಷ್ಣುವು ಮನುಷ್ಯರಲ್ಲಿ ಹುಟ್ಟುತ್ತಾನೆ.

ಅಥ ವ್ಯಾಹೃತ್ಯ ವಿಷ್ಣುಂ ಸ ತದಾದಾಯ ಶಿರಃ ಸ್ವಯಂ ।
ಸಮಾನೀಯ ತತಃ ಕಾಯಂ ಪಾಣೌ ಗೃಹ್ಯೇದಮಬ್ರವೀತ್ ॥ ೨೫೧ ।

॥ ಭೃಗುರುವಾಚ ॥

ಏಷಾ ತ್ವಂ ವಿಷ್ಣುನಾ ದೇವಿ ಹತಾ ಸಂಜೀವಯಾಮ್ಯಹಂ ।
ಯದಿ ಕೃತ್ಸ್ನೋ ಮಯಾ ಧರ್ಮೋ ಜ್ಞಾಯತೇ ಚರಿತೋಽಪಿ ವಾ

ತೇನ ಸತ್ಯೇನ ಜೀವಸ್ವ ಯದಿ ಸತ್ಯಂ ಬ್ರವೀಮ್ಯಹಂ ।
ತತಸ್ತಾಂ ಪ್ರೋಕ್ಷ್ಯ ಶೀತಾಭಿರದ್ಭಿರ್ಜೀವೇತಿ ಸೋಽಬ್ರವೀತ್ ॥ ೨೫೩ ॥

ತತೋಽಭಿವ್ಯಾಹೃತೇ ತಸ್ಮಿನ್ ದೇವೀ ಸಂಜೀವಿತಾ ತದಾ ।
ತತಸ್ತಾಂ ಸರ್ವಭೂತಾನಿ ದೃಷ್ಟ್ವಾ ಸುಪ್ತೋತ್ಥಿತಾಮಿವ ॥ ೨೫೪ ॥

ಸಾಧು ಸಾಧ್ವಿತಿ ದೃಷ್ಟ್ವೈವ ವಾಚಸ್ತಾಃ ಸರ್ವತೋಽಬ್ರುವನ್
ಏವಂ ಪ್ರತ್ಯಾಹೃತಾ ತೇನ ದೇವೀ ಸಾ ಭೃಗುಣಾ ತದಾ ॥ ೨೫೫ ॥

---

೨೫೧. ಹೀಗೆಂದು ವಿಷ್ಣುವನ್ನು ಶಪಿಸಿ ಆ ಭೃಗುವು ಆಕೆಯ ತಲೆಯನ್ನು ತೆಗೆದುಕೊಂಡು ದೇಹದೊಂದಿಗೆ ಸೇರಿಸಿ ಹಿಡಿದುಕೊಂಡು ಇಂತೆಂದನು.

೨೫೨. ಭೃಗುವು ಹೇಳಿದನು :—ಎಲೈ ದೇವಿಯೇ, ಈ ನೀನು ವಿಷ್ಣುವಿನಿಂದ ಕೊಲ್ಲಲ್ಪಟ್ಟಿದ್ದೀಯೆ, ಈ ನಾನು ಬದುಕಿಸುತ್ತೇನೆ, ಧರ್ಮವೆಲ್ಲವನ್ನೂ ನಾನು ತಿಳಿದಿದ್ದರೂ, ಅದರಂತೆ ನಡೆದಿದ್ದರೂ ಆ ಎಲ್ಲಾ ಧರ್ಮಗಳಿಂದ ನಿನ್ನನ್ನು ಬದುಕಿಸುತ್ತೇನೆ. ಸತ್ಯವನ್ನು ಹೇಳುತ್ತೇನೆ.

೨೫೩. ಅನಂತರ ಆಕೆಯನ್ನು ತಣ್ಣೀರಿನಿಂದ ಚುಮುಕಿಸಿ ಮೇಲೆ ಹೇಳಿದಂತೆ ಹೇಳಿದನು.

೨೫೪. ಅತನು ಹೀಗೆಂದು ಹೇಳಲು, ಆಕೆಯು ಜೀವಿಸಿದಳು. ಆಗ ಎಲ್ಲಾ ಪ್ರಾಣಿಗಳೂ ಆಕೆಯನ್ನು ಮಲಗಿದ್ದು ಎದ್ದವಳಂತೆ ಎದ್ದುದನ್ನು ನೋಡಿ ಸಾಧು. ಸಾಧು, ಎಂದೆನ್ನುತ್ತ ನೋಡುತ್ತಿದ್ದರು. ಆ ಮಾತು ಅಲ್ಲೆಲ್ಲವೂ ಹರಡಿತು.

೨೫೫. ಎಲ್ಲಾ ದೇವತೆಗಳ ಎದುರಿಗೂ ಭೃಗುವು ಆಕೆಯನ್ನು ಹೀಗೆ ಬದುಕಿಸಿದನು. ಇದು ಆಶ್ಚರ್ಯಕರವಾಗಿದ್ದಿತು.

ಮಿಷತಾಂ ದೇವತಾನಾಂ ಹಿ ತದದ್ಭುತಮಿವಾಭವತ್ ।
ಅಸಂಭ್ರಾಂತೇನ ಭೃಗುಣಾ ಪತ್ನೀ ಸಂಜೀವಿತಾ ಪುನಃ ॥ ೨೫೬ ॥

ದೃಷ್ಟ್ವಾ ಚೇಂದ್ರೋ ನಾಲಭತ ಶರ್ಮ ಕಾವ್ಯಭಯಾತ್ಪುನಃ ।
ಪ್ರಜಾಗರೇ ತತಶ್ಚೇಂದ್ರೋ ಜಯಂತೀಮಿದಮಬ್ರವೀತ್ ॥ ೨೫೭ ॥

ಸಂಧಿಕಾಮೋಽಭ್ಯಧಾದ್ವಾಕ್ಯಂ ಸ್ವಾಂ ಕನ್ಯಾಂ ಪಾಕಶಾಸನಃ ॥ ೨೫೮ ॥

॥ ಇಂದ್ರ ಉವಾಚ ॥

ಏಷ ಕಾವ್ಯೋ ಹ್ಯನಿಂದ್ರಾಯ ವ್ರತಂ ಚರತಿ ದಾರುಣಂ ।
ತೇನಾಹಂ ವ್ಯಾಕುಲಃ ಪುತ್ರಿ ಕೃತೋ ಮತಿಮತಾ ದೃಢಂ ॥ ೨೫೯ ॥

ಗಚ್ಛ ನೋಪಯ ತಂ ಕಾವ್ಯಂ ಶೀಘ್ರಮಾಯತಲೋಚನೇ ।
ತೈಸ್ತೈರ್ಮನೋನುಕೂಲೈಶ್ಚ ಉಪಚಾರೈರತಂದ್ರಿತಾ ॥ ೨೬೦ ॥

ಆರಾಧಯ ತಥಾ ಪುತ್ರಿ ಯಥಾ ತುಷ್ಯೇತ ತೇ ದ್ವಿಜಃ ।
ಗಚ್ಛ ತ್ವಂ ತಸ್ಯ ದತ್ತಾಽಸಿ ಪ್ರಯತ್ನಂ ಕುರು ಸುವ್ರತೇ ॥ ೨೬೧ ॥

---

೨೫೬. ಆ ಭೃಗುವು ಸ್ವಲ್ಪವೂ ಹೆದರದೆ ಈ ರೀತಿಯಾಗಿ ಹೆಂಡತಿಯನ್ನು ಮತ್ತೆ ಬದುಕಿಸಿದನು. ಇದನ್ನು ನೋಡಿ, ಇಂದ್ರನು ಶುಕ್ರನ ಹೆದರಿಕೆಯಿಂದ ಶಾಂತಿಯನ್ನೂ, ಸುಖವನ್ನೂ ಹೊಂದಲಿಲ್ಲ.

೨೫೭-೨೫೮. ಅನಂತರ ಇಂದ್ರನು ಮುಂದಿನ ಆಲೋಚನೆಯನ್ನು ಹೊಂದಿ ಆ ಶುಕ್ರನೊಡನೆ ಸಂಧಿಯನ್ನು ಅಪೇಕ್ಷಿಸಿ ತನ್ನ ಮಗಳಾದ ಜಯಂತಿಯನ್ನು ಕುರಿತು ಇಂತೆಂದನು.

೨೫೯. ಇಂದ್ರನು ಹೇಳಿದನು:—ಎಲೈ ಮಗಳೇ! ಈ ಶುಕ್ರನು ಇಂದ್ರನೇ ಲೋಕದಲ್ಲಿ ಇಲ್ಲದಂತೆ ಮಾಡಬೇಕೆಂದು ದೃಢಮಾಡಿಕೊಂಡು ತಪಸ್ಸುಮಾಡುತ್ತಿದ್ದಾನೆ. ಆದ್ದರಿಂದ ನನಗೆ ಮನಸ್ಸಿನಲ್ಲಿ ದುಃಖವಾಗಿದೆ.

೨೬೦. ಅಮ್ಮಾ, ನೀನು ಬೇಗನೆ ಆತನ ಬಳಿಗೆ ಹೋಗಿ, ಅವನಿಗೆ ಬೇಕಾದ ಉಪಚಾರಗಳನ್ನು ಮಾಡುತ್ತ, ಸ್ವಲ್ಪವೂ ಬೇಸರಪಡದೆ, ಅವನನ್ನು ವಶಮಾಡಿಕೋ.

೨೬೧. ಆ ಶುಕ್ರನು ಸಂತೋಷಪಡುವಂತೆ ಅವನನ್ನು ಸೇವಿಸು ಹೋಗು, ಅವನಿಗೆ ನಿನ್ನನ್ನು ಕೊಟ್ಟಿದ್ದೇನೆ, ಹೋಗು. ಆರೀತಿ ಪ್ರಯತ್ನಮಾಡು.

ಏವಮುಕ್ತಾ ಜಯಂತೀ ಸಾ ವಚಃ ಸಂಗೃಹ್ಯ ತತ್ಪಿತುಃ ।
ಅಗಚ್ಛದ್ಯತ್ರ ಘೋರಂ ಸ ತಪೋ ಹ್ಯಾರಭ್ಯ ತಿಷ್ಠತಿ ॥ ೨೬೨ ॥

ತಂ ದೃಷ್ಟ್ವಾ ತು ಪಿಬಂತಂ ಸಾ ಕಣಧೂಮಮಧೋಮುಖಂ ।
ಯಜ್ಞೇನ ಯಾಪ್ಯಮಾನಂ ಚ ಕುಂಡಧಾರೇಣ ಪಾವಕಂ ॥ ೨೬೩ ॥

ದೃಷ್ಟ್ವಾ ತಂ ಯಾತಮಾಸಂ ತು ದೇವೀ ಕಾವ್ಯಮವಸ್ಥಿತಂ ।
ಶತ್ರೂಪಧಾಸಂ ಶ್ರಾಂಮ್ಯಂತಂ ದುರ್ಬಲಸ್ಥಿತಿಮಾಸ್ಥಿತಂ ॥ ೨೬೪ ॥

ಪಿತ್ರಾ ಯದುಕ್ತಂ ವಾಕ್ಯಂ ಸಾ ಕಾವ್ಯೇ ಕೃತವತೀ ತದಾ ।
ಗೀರ್ಭಿಶ್ಚೈವಾನುಕೂಲಾಭಿಃ ಸ್ತುವಂತೀ ವಲ್ಗುಭಾಷಿಣೀ ॥ ೨೬೫ ॥

ಗಾತ್ರಸಂವಾಹನೈಃ ಕಾಲೇ ಸೇವಮಾನಾ ತ್ವಚಃ ಸುಖೈಃ ।
ವ್ರತಚರ್ಯಾನುಕೂಲಾಭಿರುಪಾಸ್ಯ ಬಹುಲಾಃ ಸಮಾಃ ॥ ೨೬೬ ॥

---

೨೬೨. ತಂದೆಯು ಹೀಗೆಂದು ಹೇಳಲು, ಆ ಮಾತಿನಂತೆ ಘೋರವಾಗಿ ತಪಸ್ಸುಮಾಡುತ್ತಿದ್ದ ಸ್ಥಳಕ್ಕೆ ಆಕೆಯು ಹೋದಳು.

೨೬೩. ಕುಂಡಾಧಾರದ ರೀತಿಯಿಂದ ಅಗ್ನಿಯನ್ನು ಪ್ರತಿಷ್ಠೆಮಾಡಿಕೊಂಡು ಅದರ ಮೇಲೆ ತಲೆಕೆಳಗೆ ಮಾಡಿಕೊಂಡು ಹೊಗೆಯನ್ನು ಕುಡಿಯುತ್ತ ತಪಸ್ಸುಮಾಡುತ್ತಿರುವ ಆ ಶುಕ್ರನನ್ನು ನೋಡಿದಳು.

೨೬೪. ಶತ್ರುಗಳಿಗೆ ಆಶ್ರಯಭೂತನಾದ, ಕಷ್ಟಪಡುತ್ತಿರುವ ದುರ್ಬಲನಾಗಿರುವ ಈ ಶುಕ್ರಾಚಾರ್ಯನನ್ನು ನೋಡಿದಳು.

೨೬೫. ಅವನಿಗೆ ಅನುಕೂಲವಾದ ಮಾತುಗಳಿಂದ ಅಸಾರವಾದ ಮಾತುಗಳನ್ನಾಡುತ್ತ ಸ್ತೋತ್ರಮಾಡುತ್ತ ತಂದೆಯು ಹೇಳಿದಂತೆ ಆತನನ್ನು ಸೇವಿಸಿದಳು.

೨೬೬. ಅವನು ಕಷ್ಟಪಟ್ಟಾಗ ಮೈಕೈಗಳ ನೋವು ಹೋಗುವಂತೆ ಅವುಗಳನ್ನು ಒತ್ತುತ್ತ, ಅವನ ವ್ರತಕ್ಕೆ ಬೇಕಾದುದನ್ನು ಒದಗಿಸುತ್ತ ಬಹಳ ವರ್ಷಗಳ ವರೆಗೂ ಸೇವಿಸಿದಳು.

ಪೂರ್ಣೇ ಧೂಮ್ರವ್ರತೇ ತಸ್ಮಿನ್ಘೋರೇ ವರ್ಷಸಹಸ್ರಕೇ ।
ವರೇಣ ಚ್ಛಂದಯಾಮಾಸ ಶಿವಃ ಪ್ರೀತೋಽಭವತ್ತದಾ　　॥ ೨೬೭ ॥

॥ ಮಹೇಶ್ವರ ಉವಾಚ ॥

ಏತದ್ವ್ರತಂ ತ್ವಯ್ಯೈಕೇನ ಚೀರ್ಣಂ ನಾನ್ಯೇನ ಕೇನಚಿತ್ ।
ತಸ್ಮಾದ್ವೈ ತಪಸಾ ಬುದ್ಧ್ಯಾ ಶ್ರುತೇನ ಚ ದಮೇನ ಚ　　॥ ೨೬೮ ॥

ಓಜಸಾ ಚ ಸುರಾನ್ಸರ್ವಾಂಸ್ತ್ವಮೇಕೋಽಭಿಭವಿಷ್ಯಸಿ ।
ಯಚ್ಚ ಕಿಂಚಿನ್ಮಯಿ ಬ್ರಹ್ಮನ್ವಿದ್ಯತೇ ಭೃಗುನಂದನ　　॥ ೨೬೯ ॥

ಪ್ರತಿದಾಸ್ಯಾಮಿ ತತ್ಸರ್ವಂ ತ್ವಯಾ ವಾಚ್ಯಂ ನ ಕಸ್ಯ ಚಿತ್ ।
ಕಿಂ ಭಾಷಿತೇನ ಬಹುನಾ ಅವಧ್ಯಸ್ತ್ವಂ ಭವಿಷ್ಯಸಿ　　॥ ೨೭೦ ॥

ಏವಂ ದತ್ವಾ ವರಂ ತಸ್ಮೈ ಭಾರ್ಗವಾಯ ಭವಃ ಪುನಃ ।
ಪ್ರಜೇಶತ್ವಂ ಧನೇಶತ್ವಮವಧ್ಯತ್ವಂ ಚ ವೈ ದದೌ　　॥ ೨೭೧ ॥

---

೨೬೭. ಅವನ ಆ ಧೂಮವ್ರತವು ಸಾವಿರ ವರ್ಷಗಳನಂತರ ಮುಗಿಯಲು ಶಿವನು ಪ್ರೀತನಾಗಿ ವರವನ್ನು ಕೊಟ್ಟನು.

೨೬೮. ಮಹೇಶ್ವರನು ಹೇಳಿದನು:—ಎಲೈ ಶುಕ್ರನೇ, ಈ ವ್ರತವನ್ನು ನೀನೊಬ್ಬನೇ ಮಾಡಿರುವವನು, ಇದುವರೆಗೂ ಮತ್ತೊಬ್ಬನೂ ಮಾಡಿಲ್ಲ. ಆದ್ದರಿಂದ ತಪಸ್ಸು, ಬುದ್ಧಿ, ಜ್ಞಾನ, ಇಂದ್ರಿಯನಿಗ್ರಹ, ಓಜಸ್ಸು ಇವುಗಳಿಂದ ದೇವತೆಗಳನ್ನೆಲ್ಲಾ ನೀನೊಬ್ಬನೇ ಜಯಿಸುತ್ತೀಯೆ.

೨೬೯-೨೭೦. ಎಲೈ ಶುಕ್ರನೇ, ನನ್ನಲ್ಲಿ ಯಾವಾವುದು ಇವೆಯೋ ಅವೆಲ್ಲವನ್ನೂ ನಿನಗೆ ಕೊಟ್ಟುಬಿಡುತ್ತೇನೆ. ಅದನ್ನು ನೀನು ಯಾರಿಗೂ ಹೇಳಕೂಡದು, ಬಹಳ ಹೇಳಿದುದರಿಂದೇನು ! ನಿನಗೆ ಸಾವೇ ಇರುವುದಿಲ್ಲ.

೨೭೧. ಮೊದಲು ಈ ಬಗೆಯಾದ ವರವನ್ನು ಕೊಟ್ಟು ಅನಂತರ ಆ ಶುಕ್ರನಿಗೆ ಪ್ರಜೆಗಳ ಒಡೆತನವನ್ನೂ ಧನದ ಒಡೆತನವನ್ನೂ, ಸಾವಿಲ್ಲದಿರುವಿಕೆಯನ್ನೂ ಕೊಟ್ಟನು.

ಏತಾಂಲ್ಲಬ್ಧ್ವಾ ವರಾನ್ಕಾವ್ಯಃ ಸಂಪ್ರಹೃಷ್ಟತನೂರುಹಃ ।
ಏವಮಾಭಾಷ್ಯ ದೇವೇಶಮೀಶ್ವರಂ ನೀಲಲೋಹಿತಂ ॥ ೨೭೨ ॥

ಪ್ರಹ್ವಃ ಕವಿಸ್ತತಸ್ತಸ್ಮೈ ಪ್ರಾಂಜಲಿಃ ಪ್ರಣತೋಽಭವತ್ ।
ತತಃ ಸೋಽಂತರ್ಹಿತೇ ದೇವೇ ಜಯಂತೀಮಿದಮಬ್ರವೀತ್ ॥ ೨೭೩ ॥

॥ ಭಾರ್ಗವ ಉವಾಚ ॥

ಕಸ್ಯ ತ್ವಂ ಸುಭಗೇ ಕಾ ವಾ ದುಃಖಿತೇ ಮಯಿ ದುಃಖಿತಾ ।
ಮಹತಾ ತಪಸಾ ಯುಕ್ತಾ ಕಿಮರ್ಥಂ ಮಾಂ ಜುಗುಪ್ಸಸಿ ॥ ೨೭೪ ॥

ಅನಯಾ ಸಂಸ್ಥಿತಾ ಭಕ್ತ್ಯಾ ಪ್ರಶ್ರಯೇಣ ದಮೇನ ಚ ।
ಸ್ನೇಹೇನ ಚೈವ ಸುಶ್ರೋಣಿ ಪ್ರೀತೋಽಸ್ಮಿ ವರವರ್ಣಿನಿ ॥ ೨೭೫ ॥

ಕಿಮಿಚ್ಛಸಿ ವರಾರೋಹೇ ಕಸ್ತೇ ಕಾಮಃ ಸಮುದ್ಧೃತಃ ।
ತತ್ತೇ ಸಂಪಾದಯಾಮ್ಯದ್ಯ ಯದ್ಯಪಿ ಸ್ಯಾತ್ಸುದುಷ್ಕರಂ ॥ ೨೭೬ ॥

---

೨೭೨-೨೭೩. ಶುಕ್ರನು ಈ ವರಗಳನ್ನು ಹೊಂದಿ ಸಂತೋಷಗೊಂಡನು. ಈರೀತಿ ಹೇಳಿದ ಸ್ವಾಮಿಯಾದ ಶಿವನಿಗೆ ಶುಕ್ರನು ನಮ್ರನಾಗಿ ಕೈಕಟ್ಟಿಗೊಂಡು ನಮಸ್ಕರಿಸಿದನು. ಅನಂತರ ಶಿವನು ಹೊರಟುಹೋದನು. ಅನಂತರ ಜಯಂತಿಯನ್ನು ಕುರಿತು ಆ ಶುಕ್ರನಿಂತೆಂದನು.

೨೭೪. ಶುಕ್ರನು ಹೇಳಿದನು :—ಎಲೈ ಕಲ್ಯಾಣಿಯೇ, ನೀನಾರು, ಯಾರ ಹೆಂಡತಿ ? ಯಾರ ಮಗಳು ? ನಾನು ದುಃಖಪಟ್ಟರೆ ನೀನು ದುಃಖಪಡುತ್ತೀಯೇ, ಕಾರಣವೇನು ? ನೀನು ಕೂಡ ಬಹಳವಾದ ತಪಸ್ಸಿನಿಂದ ಕೂಡಿದವಳಾಗಿ ನನಗೇಕೆ ಬೇಸರಪಡಿಸುತ್ತಿ ?

೨೭೫. ಭಕ್ತಿಯಿಂದಲೂ, ನಮ್ರತೆಯಿಂದಲೂ, ಇಂದ್ರಿಯ ನಿಗ್ರಹದಿಂದಲೂ. ಸ್ನೇಹದಿಂದಲೂ, ನೀನು ಈರೀತಿ ಇರುವುದನ್ನು ನೋಡಿ ನಿನಗೆ ಪ್ರೀತನಾಗಿದ್ದೇನೆ.

೨೭೬. ಎಲೈ ಪುಣ್ಯವಂತಳೇ, ನಿನಗೇನು ಬೇಕು? ನಿನ್ನ ಇಷ್ಟವೇನು ? ನಿನಗೇನು ಕೊಡಲಿ ಹೇಳು, ನಿನಗೆ ಬೇಕಾದುದನ್ನು ನನಗೆ ಕಷ್ಟವಾದರೂ ಮಾಡಿ ಕೊಡುತ್ತೇನೆ.

ಏವಮುಕ್ತ್ವಾಬ್ರವೀದೇನಂ ತಪಸಾ ಜ್ಞಾತುಮರ್ಹಸಿ ।
ಚಿಕೀರ್ಷಿತಂ ಹಿ ಮೇ ಬ್ರಹ್ಮಂಸ್ತ್ವಂ ಹಿ ವೇದ ಯಥಾತಥಂ　　॥ ೨೭೭ ॥

ಏತಚ್ಛ್ರುತ್ವಾಬ್ರವೀದೇನಾಂ ದೃಷ್ಟ್ವಾ ದಿವ್ಯೇನ ಚಕ್ಷುಷಾ ।
ಮಯಾ ಸಹ ತ್ವಂ ಸುಶ್ರೋಣಿ ಶತವರ್ಷಾಣಿ ಭಾಮಿನಿ　　॥ ೨೭೮ ॥

ಸರ್ವಭೂತೈರದೃಶ್ಯಾ ನಃ ಸಂಪ್ರಯೋಗಮಿಹೇಚ್ಛಸಿ ।
ದೇವಿ ಇಂದೀವರಶ್ಯಾಮೇ ವರಾರ್ಹೇ ವಾಮಲೋಚನೇ　　॥ ೨೭೯ ॥

ಏವಂ ವೃಣೋಷಿ ಕಾಮಾಂಸ್ತ್ವಂ ಯದಿ ವೈ ವಲ್ಗುಭಾಷಿಣೀ ।
ಏವಂ ಭವತು ಗಚ್ಛಾವೋ ಗೃಹಂ ಮೇ ಮತ್ತಕಾಶಿನಿ　　॥ ೨೮೦ ॥

ತತಃ ಸ ಗೃಹಮಾಗತ್ಯ ಜಯಂತ್ಯಾ ಸಹ ಚೋಶನಾ ।
ತಯೋಃವವಸತ್ಸಮಂ ದೇವ್ಯಾ ಶತವರ್ಷಾಣಿ ಭಾರ್ಗವಃ　　॥ ೨೮೧ ॥

---

೨೭೭. ಶುಕ್ರನು ಹೀಗೆನ್ನಲು, ಆಕೆಯು ಎಲೈ ಬ್ರಾಹ್ಮಣನೇ! ನನಗೆ ಬೇಕಾದುದನ್ನು ನೀನು ತಪಸ್ಸಿನಿಂದ ತಿಳಿದುಕೊಳ್ಳಲು ಯೋಗ್ಯನಾಗಿದ್ದೀಯೇ. ನೀನು ಯಥಾರ್ಥವನ್ನು ತಿಳಿದುಕೋ.

೨೭೮. ಇದನ್ನು ಕೇಳಿ ಜ್ಞಾನದೃಷ್ಟಿಯಿಂದ ಆತನು ಎಲ್ಲವನ್ನೂ ನೋಡಿ ತಿಳಿದುಕೊಂಡು ಎಲೈ ಸುಭಗೆಯೇ, ನೀನು ನನ್ನೊಡನೆ ನೂರು ವರ್ಷಗಳು ಇದ್ದು.

೨೭೯. ಎಲೈ ದೇವಿಯೇ, ನೀನು ಒಂದು ಪ್ರಾಣಿಗೂ ತಿಳಿಯದಂತೆ ನಮ್ಮ ಪ್ರಯೋಗಗಳನ್ನು ತಿಳಿಯಲು ಅಪೇಕ್ಷಿಸುತ್ತಿ, ನೀನು ವರಕ್ಕೆ ಯೋಗ್ಯಳೂ ಆಗಿದ್ದೀಯೆ.

೨೮೦. ಎಲೈ ಮತ್ತಕಾಶಿನಿಯೇ, ಈ ರೀತಿಯಾದ ವರಗಳನ್ನು ನೀನು ಅಪೇಕ್ಷಿಸುತ್ತೀಯೆ, ಹಾಗೇ ಆಗಲಿ, ನಮ್ಮ ಮನೆಗೆ ಹೋಗೋಣ ನಡೆ.

೨೮೧. ಆ ಶುಕ್ರನು ಜಯಂತಿಯೊಡನೆ ಮನೆಗೆ ಹೋಗಿ ಆವಳೊಡನೆ ಆತನು ನೂರು ವರ್ಷಗಳವರೆಗೂ ಸುಖದಿಂದ ಇದ್ದನು.

ಅದೃಶ್ಯಃ ಸರ್ವಭೂತಾನಾಂ ಮಾಯಯಾ ಸಂಶಿತವ್ರತಃ ।
ಕೃತಾರ್ಥಮಾಗತಂ ಜ್ಞಾತ್ವಾ ಶುಕ್ರಂ ಸರ್ವೇ ದಿತೇಃ ಸುತಾಃ ॥ ೨೮೨ ॥
ಅಭಿಜಗ್ಮುರ್ಗೃಹಂ ತಸ್ಯ ಮುದಿತಾಶ್ಚ ದಿದೃಕ್ಷವಃ ।
ಗತಾ ಯೇ ನೈವ ಪಶ್ಯಂತಿ ಮಾಯಯಾ ಸಂವೃತಂ ಗುರುಂ ॥ ೨೮೩ ॥
ಲಕ್ಷಣಂ ತಸ್ಯ ಸಂಬುಧ್ಯ ನಾದ್ಯಾಗಚ್ಛತಿ ನೋ ಗುರುಃ ।
ಏವಂ ತೇ ಸ್ವಾನಿ ಧಿಷ್ಣ್ಯಾನಿ ಗತಾಃ ಸರ್ವೇ ಯಥಾ ಗತಾಃ ।
ತತೋ ದೇವಗಣಾಃ ಸರ್ವೇ ಗತ್ವಾಂಗಿರಸಮಬ್ರುವನ್ ॥ ೨೮೪ ॥

॥ ದೇವಾ ಊಚುಃ ॥

ದಾನವಾಲಯಂ ತು ಭಗವಾನ್ಗತ್ವಾ ತತ್ರ ಚ ತಾಂ ಚಮೂಂ ।
ಮೋಹಯಿತ್ವಾತ್ಮವಶಗಾಂ ಕ್ಷಿಪ್ರಮೇವ ತಥಾ ಕುರು ॥ ೨೮೫ ॥
ಧಿಷಣಸ್ತಾನ್ಸುರಾನಾಹ ಏವಮೇವ ವ್ರಜಾಮ್ಯಹಂ ।
ತೇನ ಗತ್ವಾ ದಾನವೇಂದ್ರಃ ಪ್ರಹ್ಲಾದಸ್ತು ವಶೀಕೃತಃ ॥ ೨೮೬ ॥

---

೨೮೨. ಆ ಭಾರ್ಗವನು ಮಾಯೆಯಿಂದ ಒಂದು ಪ್ರಾಣಿಗೂ ಕಾಣದಂತೆ ವ್ರತಸ್ಥನಾಗಿದ್ದನು. ಆಗ ದಾನವರೆಲ್ಲರೂ ಕೃತಾರ್ಥನಾಗಿ ಬಂದ ಶುಕ್ರನನ್ನು ತಿಳಿದು ಸಂತೋಷಿಸಿದರು.

೨೮೩. ಆಗ ದಾನವರೆಲ್ಲರೂ ಸಂತೋಷಗೊಂಡು ಆತನನ್ನು ನೋಡಲು ಅವನ ಮನೆಗೆ ಹೋದರು. ಅಲ್ಲಿಗೆ ಹೋದವರಾರು ಕೂಡಾ ಮಾಯೆಯಿಂದ ಕೂಡಿದ ಆ ಗುರುವನ್ನು ನೋಡಲೇ ಇಲ್ಲ.

೨೮೪. ಆ ಮನೆಯಲ್ಲಿ ಯಾರೂ ಇಲ್ಲದಿರುವುದನ್ನು ಕಂಡು ನಮ್ಮ ಗುರುವು ಇದುವರೆಗೂ ಬರಲಿಲ್ಲ ಎಂದು ಅವರು ತಮ್ಮ ತಮ್ಮ ಮನೆಗೆ ಬಂದಂತೆ ಹೊರಟು ಹೋದರು. ಅನಂತರ ಇತ್ತ ದೇವತೆಗಳು ತಮ್ಮ ಗುರುವಿನ ಬಳಿಗೆ ಹೋಗಿ ಇಂತೆಂದರು.

೨೮೫. ದೇವತೆಗಳು ಹೇಳಿದರು:—ಎಲೈ ಗುರುವೆ, ನೀನು ದಾನವರ ಮನೆಗೆ ಹೋಗಿ ಅಲ್ಲಿ ಅವರ ಸೈನ್ಯವನ್ನು ಮೋಹಗೊಳಿಸಿ ಜಾಗ್ರತೆಯಾಗಿ ನಿನ್ನ ವಶವಾಗುವಂತೆ ಮಾಡಿಕೋ.

೨೮೬. ಆಗ ಆ ಗುರುವು ಹಾಗೆಯೇ ಆಗಲಿ ಹೋಗುತ್ತೇನೆ ಎಂದು ಆ ದೇವತೆಗಳಿಗೆ ಹೇಳಿ ಹೋದನು. ಹೋಗಿ, ಮೊದಲು ದಾನವರ ಒಡೆಯನಾದ ಪ್ರಹ್ಲಾದನನ್ನು ವಶಮಾಡಿಕೊಂಡನು.

**ಶುಕ್ರೋ ಭೂತ್ವಾ ಸ್ಥಿತಸ್ತತ್ರ ಪೌರೋಹಿತ್ಯಂ ಚಕಾರ ಸಃ ।**
**ಸ್ಥಿತೋ ವರ್ಷಶತಂ ಸಾಗ್ರಮುಶನಾ ತಾವದಾಗತಃ　　॥ ೨೮೭ ।**

**ದನುಪುತ್ರೈಸ್ತತೋ ದೃಷ್ಟಃ ಸಭಾಯಾಂ ತು ಬೃಹಸ್ಪತಿಃ ।**
**ಉಶನಾ ಏಕ ಏವಾತ್ರ ದ್ವಿತೀಯೋ ಬಹಿರಾಗತಃ　　॥ ೨೮೮ ॥**

**ಸುಮಹತ್ಕೌತುಕಂ ಚಾತ್ರ ಭವಿತಾ ವಿಗ್ರಹೋ ದೃಢಃ ।**
**ಕಿಂ ವದಿಷ್ಯತಿ ಲೋಕೋಽಯಂ ವಿರೋಧೋಽಯಂ ವ್ಯವಸ್ಥಿತಃ　　॥ ೨೮೯ ॥**

**ಸಭಾಯಾಮಾಸ್ಥಿತೋ ಯೋಽಯಂ ಗುರುಃ ಕಿಂ ನೋ ವದಿಷ್ಯತಿ ।**
**ಏವಂ ಪ್ರಜಲ್ಪತಾಂ ತೇಷಾಂ ದನೂನಾಂ ಕವಿರಾಗತಃ　　॥ ೨೯೦ ॥**

**ಸ್ವರೂಪಧಾರಿಣಂ ತತ್ರ ದೃಷ್ಟ್ವಾಽಸೀನಂ ಬೃಹಸ್ಪತಿಂ ।**
**ಉವಾಚ ವಚನಂ ಕ್ರುದ್ಧಃ ಕಿಮರ್ಥಂ ತ್ವಮಿಹಾಗತಃ　　॥ ೨೯೧ ॥**

---

೨೮೭. ಅವರುಗಳ ಮನೆಯಲ್ಲಿ ಗುರುವು ಶುಕ್ರನ ವೇಷವನ್ನು ಹಾಕಿಕೊಂಡು ಪುರೋಹಿತನಾಗಿದ್ದನು. ಇಂತು ನೂರು ವರ್ಷಗಳು ಇದ್ದನು, ಅಷ್ಟರೊಳಗೆ ಶುಕ್ರನು ಬಂದನು.

೨೮೮. ದಾನವರು ಅನಂತರ ಸಭೆಯಲ್ಲಿದ್ದವನು ಬೃಹಸ್ಪತಿಯೆಂದು ತಿಳಿದರು. ಆಗ ಒಬ್ಬ ಶುಕ್ರನು ಸಭೆಯಲ್ಲಿ ನಿಂತನು. ಮತ್ತೊಬ್ಬ ಶುಕ್ರನು ಹೊರಗಿನಿಂದ ಬಂದನು.

೨೮೯. ಈ ವಿಷಯದಲ್ಲಿ ಬಹು ಆಶ್ಚರ್ಯವು ನಡೆಯುತ್ತದೆ. ಇನ್ನು ಮೇಲೆ ಖಂಡಿತವಾಗಿಯೂ ಇವರಿಬ್ಬರಿಗೂ ಯುದ್ಧವು ನಡೆಯುತ್ತದೆ, ಜನಗಳೇನೆನ್ನುವರೋ, ವಿರೋಧವು ಮಾತ್ರ ಬಲವಾಗುತ್ತದೆ.

೨೯೦. ಸಭೆಯಲ್ಲಿ ಕುಳಿತಿರುವ ನಮ್ಮ ಗುರುವು ಏನು ಹೇಳುವನೋ ನೋಡಬೇಕು. ಈರೀತಿ ದಾನವರು ಮಾತಾಡಿಕೊಳ್ಳುತ್ತಿರಲು ಹೊರಗಿನಿಂದ ಶುಕ್ರನು ಬಂದನು.

೨೯೧. ಶುಕ್ರನು ತನ್ನ ವೇಷವನ್ನು ಹಾಕಿಕೊಂಡಿರುವ ಬೃಹಸ್ಪತಿಯನ್ನು ಆ ಸಭೆಯಲ್ಲಿ ನೋಡಿ ಕೋಪಗೊಂಡು ಎಲೈ ಬೃಹಸ್ಪತಿಯೇ ಇಲ್ಲಿಗೆ ನೀನೇಕೆ ಬಂದೆ!

ಶಿಷ್ಯಾನ್ಮೋsಪಯಸೇ ಮಹ್ಯಂ ಯುಕ್ತಂ ಸುರಗುರೋಸ್ತ್ವವ ।
ಮೂಢಾಸ್ತ್ವಮೀ ನ ಜಾನಂತಿ ತ್ವನ್ಮಾಯಾಮೋಹಿತಾ ಧ್ರುವಂ ॥ ೨೯೨ ॥

ತನ್ನ ಯುಕ್ತಂ ತವ ಬ್ರಹ್ಮನ್ಪರಶಿಷ್ಯಪ್ರಧರ್ಷಣಂ ।
ವ್ರಜಸ್ವ ದೇವಲೋಕಂ ತ್ವಂ ತಿಷ್ಠನ್ ಧರ್ಮಮವಾಪ್ಸ್ಯಸಿ ॥ ೨೯೩ ॥

ಶಿಷ್ಯೋ ಹಿ ಮೇ ಕಚಃ ಪೂರ್ವಂ ಹತೋ ದಾನವಪುಂಗವೈಃ ।
ವಿದ್ಯಾರ್ಥೀ ತನಯೋ ಬ್ರಹ್ಮಂಸ್ತವಾಯೋಗ್ಯಾ ಗತಿಸ್ತ್ವಿಹ ॥ ೨೯೪ ॥

ಶ್ರುತ್ವಾ ತು ತಸ್ಯ ತದ್ವಾಕ್ಯಂ ಸ್ಮಿತಂ ಕೃತ್ವಾ ಪುನಃ ಪುನಃ ।
ಸಂತಿ ಚೋರಾಃ ಪೃಥಿವ್ಯಾಂ ಯೇ ಪರದ್ರವ್ಯಾಪಹಾರಕಾಃ ॥ ೨೯೫ ॥

ಏವಂವಿಧಾ ನ ದೃಷ್ಟಾಶ್ಚ ರೂಪದೇಹಾಪಹಾರಿಣಃ ।
ವೃತ್ರಘಾತೇನ ಚೇಂದ್ರಸ್ಯ ಬ್ರಹ್ಮಹತ್ಯಾ ಪುರಾಽಭವತ್ ॥ ೨೯೬ ॥

---

೨೯೨. ನೀನು ನನ್ನ ವಿಷಯದಲ್ಲಿ ಶಿಷ್ಯರಿಗೆ ದುರುಪದೇಶವನ್ನು ಮಾಡು ತ್ತಿದ್ದೀಯೇ, ಸುರಗುರುವಾದ ನಿನಗೆ ಇದು ಯುಕ್ತವೇ! ಇವರು ಮೂಢರು, ತಿಳಿದುಕೊಳ್ಳಲಾರರು, ನಿಶ್ಚಯವಾಗಿಯೂ ನಿನ್ನ ಮಾಯೆಯಿಂದ ಮೋಹಿತ ರಾಗಿದ್ದಾರೆ.

೨೯೩. ಎಲೈ ಬ್ರಾಹ್ಮಣನೇ, ಈ ಪರರ ಶಿಷ್ಯರ ವಂಚನೆಯು ನಿನಗೆ ಸರಿಯಲ್ಲ ದೇವಲೋಕಕ್ಕೆ ನೀನು ಹೋಗು, ಅಲ್ಲಿದ್ದುಕೊಂಡು ನಿನ್ನ ಧರ್ಮವನ್ನು ಆಚರಿಸು.

೨೯೪. ಹಿಂದೆ ನನ್ನ ಶಿಷ್ಯನಾದ ಕಚನನ್ನು ದಾನವರು ಕೊಂದರು. ಆವನಿನ್ನೂ ವಿದ್ಯಾರ್ಥಿಯು, ಮಗನಿಗೆ ಸಮಾನನು, ನಿನಗೆ ಅದು ಅಧರ್ಮವಲ್ಲವೇ !

೨೯೫-೨೯೬. ಶುಕ್ರನು ಬೃಹಸ್ಪತಿಯ ಆ ಮಾತನ್ನು ಕೇಳಿ ಪದೇ ಪದೇ ನಗುತ್ತ, ಭೂಮಿಯಲ್ಲಿ ಜನರ ದ್ರವ್ಯವನ್ನು ಅಪಹರಿಸುವ ಕಳ್ಳರು ಬೇಕಾದಷ್ಟು ಜನ ಇದ್ದಾರೆ. ಆದರೆ ನಿನ್ನಂತೆ ರೂಪದೇಹ ಮುಂತಾದುವುಗಳನ್ನು ಕದಿಯುವವರನ್ನು ನೋಡಿಲ್ಲ, ಹಿಂದೆ ವೃತ್ರನನ್ನು ಕೊಂದುದರಿಂದ ಇಂದ್ರನಿಗೆ ಬ್ರಹ್ಮಹತ್ಯಾ ದೋಷವು ಬಂದಿತು.

ಲೋಕಾಯತಿಕಶಾಸ್ತ್ರೇಣ ಭವತಾ ಸಾ ತಿರಸ್ಕೃತಾ ।
ಜಾನಾಮಿ ತ್ವಾಮಾಂಗಿರಸಂ ದೇವಾಚಾರ್ಯಂ ಬೃಹಸ್ಪತಿಂ ॥ ೨೯೭ ॥

ಮದ್ರೂಪಧಾರಿಣಂ ಪ್ರಾಪ್ತಂ ಸರ್ವೇ ಪಶ್ಯತ ದಾನವಾಃ ।
ಏಷ ವೋ ಮೋಹನಾಯಾಲಂ ಪ್ರಾಪ್ತೋ ವಿಷ್ಣುವಿಚೇಷ್ಟಿತೈಃ ॥ ೨೯೮ ॥

ತದೇನಂ ಶೃಂಖಲೈರ್ಬಧ್ವಾ ಕ್ಷಿಪ್ಯತಾಂ ಲವಣಾರ್ಣವೇ ।
ಪುನರೇವಾಬ್ರವೀಚ್ಛುಕ್ರಃ ಪುರೋಧ್ಯಾಯಂ ದಿವೌಕಸಾಂ ॥ ೨೯೯ ॥

ಮೋಹಿತಾ ನೂನಮೇತೇನ ಕ್ಷಯಂ ಯಾಸ್ಯಥ ದಾನವಾಃ ।
ಭೋ ಭೋಽಹಂ ದಾನವೇಂದ್ರೇಹ ಮೋಹಿತೋಽಸಿ ದುರಾತ್ಮನಾ ॥ ೩೦೦ ॥
ಕಿಮರ್ಥಂ ಭವತಾ ತ್ಯಕ್ತಃ ಕೃತಶ್ಚಾನ್ಯಃ ಪುರೋಹಿತಃ ।
ದೇವಾಚಾರ್ಯೋಽಂಗಿರಃಪುತ್ರ ಏಷ ರಾಜನ್ಬೃಹಸ್ಪತಿಃ ೩೦೧ ॥

ವಂಚಿತೋಽಸಿ ನ ಸಂದೇಹೋ ಹಿತಾರ್ಥಂ ತು ದಿವೌಕಸಾಂ ।
ತ್ಯಜಸ್ವೈನಂ ಮಹಾಭಾಗ ಶತ್ರುಪಕ್ಷಜಯಾವಹಂ ॥ ೩೦೨ ॥

---

೨೯೭. ಆ ಬ್ರಹ್ಮಹತ್ಯೆಯನ್ನು ಲೋಕಾಯತಿಕ ಶಾಸ್ತ್ರವಾದ ನಾಸ್ತಿಕಮತ ದಿಂದ ತಿರಸ್ಕರಿಸಿದೆ. ನೀನು ದೇವಾಚಾರ್ಯನಾದ ಬೃಹಸ್ಪತಿಯೆಂದು ಬಲ್ಲೆ.

೨೯೮. ಎಲೈ ದಾನವರಿರಾ, ನನ್ನ ರೂಪವನ್ನು ಧರಿಸಿ ಇಲ್ಲಿಗೆ ಬಂದಿದ್ದು ನೋಡಿರಿ. ಈತನು ವಿಷ್ಣುವಿನ ಮಾತಿನಂತೆ ಇಲ್ಲಿಗೆ ಬಂದು ನಿಮ್ಮನ್ನು ವಂಚಿಸಲು ಸಮರ್ಥನಾಗಿರುವನು. ಆದ್ದರಿಂದ ಈತನನ್ನು ಸರಪಣಿಯಿಂದ ಕಟ್ಟಿ ಉಪ್ಪಿನ ಸಮುದ್ರಕ್ಕೆ ಎಸೆಯಿರಿ.

೨೯೯. ಮತ್ತೆಯೂ ಕೂಡ ಆ ಶುಕ್ರನು ದಾನವೇಂದ್ರನೇ. ಈತನು ದೇವತೆಗಳ ಪುರೋಹಿತನು, ನಿಶ್ಚಯವಾಗಿಯೂ ಈ ದುಷ್ಟನಿಂದ ವಂಚಿಸಲ್ಪಟ್ಟಿದ್ದೀರಿ, ನಾಶವಾಗಿಹೋಗುತ್ತೀರಿ.

೩೦೦. ಎಲೈ ದಾನವೇಂದ್ರನೇ, ದುಷ್ಟನಾದ ಈ ಬೃಹಸ್ಪತಿಯಿಂದ ವಂಚಿತ ನಾಗಿದ್ದೀಯೆ, ನನ್ನನ್ನು ಬಿಟ್ಟು, ಈತನನ್ನೇಕೆ ಪುರೋಹಿತನನ್ನಾಗಿ ಮಾಡಿ ಕೊಂಡಿದ್ದೀರಿ?

೩೦೧-೩೦೨. ಈತನು ದೇವಾಚಾರ್ಯನು, ಅಂಗಿರನ ಮಗನು, ಬೃಹಸ್ಪತಿಯು. ದೇವತೆಗಳ ಹಿತಕ್ಕೋಸ್ಕರ ವಂಚಿಸಿದ್ದಾನೆ, ಎಲೈ ಮಹಾನುಭಾವನೇ, ಶತ್ರುಗಳಿಗೆ ಜಯವನ್ನುಂಟುಮಾಡುವ ಈತನನ್ನು ಬಿಟ್ಟು ಬಿಡು.

ನನು ಶಿಷ್ಯಭಯಾದ್ಭ್ಯಾತಃ ಪೂರ್ವಮೇವಮಹಂ ವಿಭೋ ।
ಜಲಮಧ್ಯಸ್ಥಿತಃ ಪೀತೋ ಮಹಾದೇವೇನ ಶಂಭುನಾ ॥ ೩೦೩ ॥

ಉದರಸ್ಥಸ್ಯ ಮೇ ಜಾತಂ ಸಾಗ್ರಂ ವರ್ಷಶತಂ ಕಿಲ ।
ಉದರಾಚ್ಛುಕ್ರ ಇತ್ಯಾಹ ಶಿಷ್ಯೇಷ್ವಹಂ ಪ್ರವೇಶಿತಃ ॥ ೩೦೪ ॥

ವರದಃ ಪ್ರಾಹ ಮಾಂ ದೇವಃ ಶುಕ್ರೇಷ್ಟಂ ತ್ವಂ ವರಂ ವೃಣು ।
ಮಾಯಾ ವೃತೋ ವರೋ ರಾಜನ್‌ದೇವದೇವಾತ್ಪಿನಾಕಿನಃ ॥ ೩೦೫ ॥

ಮನಸಾ ಚಿಂತಿತಾಶ್ಚಾರ್ಥಾ ಮೇ ಭವಂತು ಸುರೇಶ್ವರ ।
ಅನ್ಯಚ್ಚ ಸಕಲಮಿಷ್ಟಂ ಪ್ರಸಾದಾತ್ತವ ಶಂಕರ ॥ ೩೦೬ ॥

ಏವಮಸ್ತ್ವಿತಿ ದೇವೇನ ಪ್ರೇಷಿತೋಽಸ್ಮಿ ತವಾಂತಿಕಂ ।
ತಾವದತ್ರಾಭವಚ್ಚಾನ್ಯಃ ಪುರೋಧಾಸ್ತೇ ಬೃಹಸ್ಪತಿಃ ॥ ೩೦೭ ॥

ದೃಷ್ಟಃ ಸತ್ಯಂ ದಾನವೇಂದ್ರ ಮಯೋಕ್ತಂ ತನ್ನಿಶಾಮಯ ।
ಬೃಹಸ್ಪತಿಸ್ತದಾ ವಾಕ್ಯಂ ಪ್ರಹ್ಲಾದಂ ಪ್ರತ್ಯಭಾಷತ ॥ ೩೦೮ ॥

---

೩೦೩-೩೦೪. ಎಲೈ ದಾನವಿರರಾ! ನಾನು ಶಿಷ್ಯರಿಗೋಸ್ಕರ ಒಳ್ಳೆಯದಾಗ ಬೇಕೆಂಬ ಭಯದಿಂದ ನೀರನ್ನು ಹೊಕ್ಕೆನು, ಮಹಾದೇವನು ನನ್ನೊಡನೆ ಆ ನೀರನ್ನು ಕುಡಿದನು, ನಾನು ಆ ದೇವನ ಹೊಟ್ಟೆಯನ್ನು ಹೊಕ್ಕು ನೂರು ವರ್ಷಗಳು ಪೂರ್ತಿಯಾಗಿ ಇದ್ದೆನು. ಆಮೇಲೆ ಶುಕ್ರನೇ ಎಂದು ಕೂಗಿ ತನ್ನ ಶಿಷ್ಯರಲ್ಲಿ ಸೇರಿಸಿಕೊಂಡನು, ವರದನಾದ ಆ ಶಂಭುವು ವರವನ್ನು ಕೇಳಿಕೋ ಎಂದನು.

೩೦೫-೩೦೬. ಆಗ ನಾನು ಆ ದೇವದೇವನಾದ ಪಿನಾಕಿಯಿಂದ ಎಲೈ ಸುರೇಶ್ವರನೇ, ನಾನು ಮನಸ್ಸಿನಲ್ಲಿ ಯೋಚಿಸಿದುದೆಲ್ಲಾ ಫಲಿಸಲಿ. ಅಲ್ಲದೆ ಸಕಲ ಇಷ್ಟಾರ್ಥಗಳೂ ನೆರವೇರಲಿ ಎಂದು ವರವನ್ನು ಕೇಳಿಕೊಂಡೆನು.

೩೦೭. ಹಾಗೇ ಆಗಲೆಂದು ದೇವದೇವನಾದ ಶಂಭುವು ನಿಮ್ಮ ಬಳಿಗೆ ಕಳುಹಿಸಿಕೊಟ್ಟನು. ಅಷ್ಟರೊಳಗೆ ಬೇರೆಯವನಾದ ಬೃಹಸ್ಪತಿಯು ಇಲ್ಲಿಗೆ ಬಂದಿದ್ದಾನೆ. ನಿಶ್ಚಯವಾಗಿಯೂ ಆತನೇ ಇವನು, ನಾನು ಬಲ್ಲೆ, ನಾನು ಹೇಳುವುದನ್ನು ಕೇಳು.

೩೦೮. ಇದನ್ನು ಕೇಳಿ ಆ ಬೃಹಸ್ಪತಿಯು ಪ್ರಹ್ಲಾದನನ್ನು ಕುರಿತು ಹೇಳಿದನು.

॥ ಬೃಹಸ್ಪತಿರುವಾಚ ।
ನಾಹಮೇತಂ ಪ್ರಜಾನಾಮಿ ದೇವಂ ವಾ ದಾನವಂ ಪರಂ ।
ಮದ್ರೂಪಧಾರಿಣಂ ರಾಜನ್ವಂಚನಾರ್ಥಂ ತವಾಗತಂ ॥ ೩೦೯ ॥

ತತಸ್ತೇ ದಾನವಾಃ ಸರ್ವೇ ಸಾಧು ಸಾಧ್ವಿತಿ ಚಾಬ್ರುವನ್ ।
ಪುರೋಧಾಃ ಪೌರ್ವಿಕೋ ನೋಽಸ್ತು ಯೋ ವಾ ಕೋ ವಾ ಭವತ್ವಿತಿ ॥

ನಾನೇನ ಕಾರ್ಯಮಸ್ಮಾಕಂ ಯಾತು ಹ್ಯೇಷ ಯಥಾಗತಃ ।
ಸಕ್ರೋಧಮಶಪತ್ಕಾವ್ಯೋ ದಾನವೇಂದ್ರಾನ್ ಸಮಾಗತಾನ್ ॥ ೩೧೧ ॥

॥ ಕಾವ್ಯ ಉವಾಚ ॥
ತ್ಯಕ್ತೋ ಯಥಾಹಂ ಯುಷ್ಮಾಭಿಸ್ತಥಾ ಸರ್ವೇಽಚಿರಾದಿವ ।
ಗತಶ್ರೀಕಾನ್ ಗತಪ್ರಾಣಾನ್ಪಶ್ಯೇಽಹಂ ದುಃಖಜೀವಿನಾನ್ ॥ ೩೧೨ ॥

ಸುಘೋರಾಮಾಪದಂ ಪ್ರಾಪ್ತಾನಚಿರಾದೇವ ಸರ್ವಶಃ ।
ಏವಮುಕ್ತ್ವಾ ಗತಃ ಕಾವ್ಯೋ ಯದೃಚ್ಛಾತಸ್ತಪೋವನಂ ॥ ೩೧೩ ॥

---

೩೦೯. ಬೃಹಸ್ಪತಿಯು ಹೇಳಿದನು:—ಎಲೈ ರಾಜನೇ, ಇವನು ದೇವನೋ ದಾನವನೋ ನನಗೆ ಬೇರೆ ಗೊತ್ತಿಲ್ಲ, ನನ್ನ ಆಕಾರವನ್ನು ಧರಿಸಿ ನಿಮ್ಮನ್ನು ವಂಚಿಸಲು ಬಂದಿದ್ದಾನೆ.

೩೧೦. ಅನಂತರ ಎಲ್ಲಾ ದಾನವರೂ ಅದು ಸಾಧುವಾದುದು, ಸಾಧುವಾದುದು, ಎಂದು ಹೇಳುತ್ತ ನಮಗೆ ಮೊದಲಿನ ಪುರೋಹಿತನೇ ಇರಲಿ. ಅವನು ಯಾವನಾದರೂ ಆಗಿರಲಿ ಎಂದರು.

೩೧೧. ಈತನು ಬಂದಂತೆ ಹೊರಟುಹೋಗಲಿ, ಇವನಿಂದ ನಮಗೆ ಕೆಲಸವಿಲ್ಲ, ಎನ್ನಲು ಶುಕ್ರನಿಗೆ ಕೋಪ ಬಂದು ಅಲ್ಲಿಗೆ ಬಂದ ದಾನವೇಂದ್ರರನ್ನೆಲ್ಲಾ ಶಪಿಸಿದನು.

೩೧೨-೩೧೩. ಶುಕ್ರನು ಹೇಳಿದನು:—ನೀವು ನನ್ನನ್ನು ಹೇಗೆ ಬಹು ಬೇಗ ಅಟ್ಟಿದಿರೋ ಹಾಗೇ ಬಹು ಬೇಗನೇ ಸಂಪತ್ತನ್ನು ಕಳೆದುಕೊಂಡು, ಪ್ರಾಣವನ್ನೂ ಕಳೆದುಕೊಂಡು, ದುಃಖದಿಂದ ಜೀವಿಸುತ್ತಿರುವ ಬಹು ಕೆಟ್ಟ ಆಪತ್ತನ್ನು ಹೊಂದಿರುವ ನಿಮ್ಮನ್ನು ನೋಡುತ್ತೇನೆ ಎಂದು ಹೇಳಿ ಆ ಶುಕ್ರನು ತಾನು ಬಂದಿಷ್ಟಂತೆಯೇ ತಪಸ್ಸಿಗೆ ಕಾಡಿಗೆ ಹೊರಟುಹೋದನು.

ತಸ್ಮಿನ್ಗತೇ ತತಃ ಶುಕ್ರೇ ಸ್ಥಿತಸ್ತತ್ರ ಬೃಹಸ್ಪತಿಃ ।
ಪಾಲಯನ್ ದಾನವಾಂಸ್ತತ್ರ ಕಿಂಚಿತ್ಕಾಲಮತಿಷ್ಠತ ॥ ೩೧೪ ॥

ತತೋ ಬಹುತಿಥೇ ಕಾಲೇ ಹ್ಯತಿಕ್ರಾಂತೇ ನರೇಶ್ವರ ।
ಸಂಭೂಯ ದಾನವಾಃ ಸರ್ವೇ ಸಂಪರ್ಯಪೃಚ್ಛಂಸ್ತದಾ ಗುರುಂ ॥ ೩೧೫ ॥

॥ ದಾನವಾ ಊಚುಃ ॥

ಸಂಸಾರೇಽಸ್ಮಿನ್ನಸಾರೇ ತು ಕಿಂಚಿಜ್ಜ್ಞಾನಂ ಪ್ರಯಚ್ಛ ನಃ ।
ಯೇನ ಮೋಕ್ಷಂ ವ್ರಜಾಮೋಽತ್ರ ಪ್ರಸಾದಾತ್ತವ ಸುವ್ರತ ॥ ೩೧೬ ॥

ತತಃ ಸುರಗುರುಃ ಪ್ರಾಹ ಕಾವ್ಯರೂಪೀ ತದಾ ಗುರುಃ ॥ ೩೧೭ ॥

॥ ಬೃಹಸ್ಪತಿರುವಾಚ ॥

ಮಮಾಪ್ಯೇಷಾ ಮತಿಃ ಪೂರ್ವಂ ಯಾ ಯುಷ್ಮಾಭಿರುದಾಹೃತಾ ।
ಕ್ಷಣಂ ಕುರ್ವಂತು ಸಹಿತಾಃ ಶುಚೀಭೂತ್ವಾ ಸಮಾಹಿತಾಃ ॥ ೩೧೮ ॥

ಜ್ಞಾನಂ ವಕ್ಷ್ಯಾಮಿ ವೋ ದೈತ್ಯಾ ಅಹಂ ಚ ಮೋಕ್ಷದಾಯಿ ತು ।
ಏಷಾ ಶ್ರುತಿರ್ವೈದಿಕೀಯಾ ಋಗ್ಯಜುಃಸಾಮಸಂಜ್ಞಿತಾ ॥ ೩೧೯ ॥

---

೩೧೪. ಹೀಗೆ ಶುಕ್ರನು ಹೊರಟುಹೋಗಲು ಬೃಹಸ್ಪತಿಯು ದಾನವರನ್ನು ಕಾಪಾಡುತ್ತಾ ಕೊಂಚ ದಿವಸವಿದ್ದನು.

೩೧೫. ಎಲೈ ಭೀಷ್ಮನೇ, ಇಂತು ಬಹುಕಾಲವು ಕಳೆಯಲು ದಾನವರೆಲ್ಲರೂ ಸೇರಿಕೊಂಡು ಗುರುವನ್ನು ಕುರಿತು ಇಂತು ಕೇಳಿದರು.

೩೧೬-೩೧೭. ದಾನವರು ಹೇಳಿದರು :—ಸಾರವಿಲ್ಲದ ಈ ಸಂಸಾರದಲ್ಲಿ ನಿನ್ನ ಅನುಗ್ರಹದಿಂದ ನಾವು ಮೋಕ್ಷವನ್ನು ಹೊಂದುವಂತೆ ಸ್ವಲ್ಪ ಜ್ಞಾನವನ್ನುಂಟುಮಾಡಿ ಕೊಡು, ಎನ್ನಲು ಅನಂತರ ಅದಕ್ಕೆ ಶುಕ್ರನ ವೇಷಧಾರಿಯಾದ ಗುರುವು ಇಂತೆಂದನು.

೩೧೮. ಬೃಹಸ್ಪತಿಯು ಹೇಳಿದನು :—ನೀವು ಕೇಳಿದಂತೆಯೇ ಹೇಳಬೇಕೆಂಬ ಬುದ್ಧಿಯು ನನಗೆ ಮೊದಲೇ ಇದ್ದಿತು, ಈಗ ನೀವೇ ಕೇಳಿದಿರಿ, ಶುಚಿಯಾಗಿ ಮನಸ್ಸನ್ನು ಸ್ತಿಮಿತದಲ್ಲಿಟ್ಟುಕೊಂಡು ಎಲ್ಲರೂ ಸೇರಿ ಒಮ್ಮನಸ್ಸಿನಿಂದ ಕೇಳಿರಿ. ಮೋಕ್ಷವನ್ನು ಕೊಡುವ ಜ್ಞಾನವನ್ನು ನಾನು ಉಪದೇಶಿಸುತ್ತೇನೆ.

೩೧೯. ಋಕ್, ಯಜಸ್ಸು, ಸಾಮಗಳಲ್ಲಿ ಹೇಳಿರುವುದನ್ನು ನೋಡಿದರೆ

ವೈಶ್ವಾನರಪ್ರಸಾದಾತ್ತು ದುಃಖದಾ ಇಹ ಪ್ರಾಣಿನಾಂ ।
ಯಜ್ಞಾಃ ಶ್ರಾದ್ಧಂ ಕೃತಂ ಕ್ಷುದ್ರೈರೈಹಿಕಸ್ವಾರ್ಥತತ್ಪರೈಃ　　॥ ೩೨೦ ॥

ಯಥಾಸನ್ವೈಷ್ಣವಾ ಧರ್ಮಾ ಯೇ ಚ ರುದ್ರಕೃತಾಸ್ತಥಾ ।
ಕುಧರ್ಮಾ ಭಾರ್ಯಾಸಹಿತೈರ್ಹಿಂಸಾಪ್ರಾಯಾಃ ಕೃತಾ ಹಿ ತೇ　　॥ ೩೨೧ ॥

ಅರ್ಧನಾರೀಶ್ವರೋ ರುದ್ರಃ ಕಥಂ ಮೋಕ್ಷಂ ಗಮಿಷ್ಯತಿ ।
ವೃತೋ ಭೂತಗಣೈರ್ವೀರೋ ಭೂಷಿತಶ್ಚಾಸ್ಥಿಭಿಸ್ತಥಾ　　॥ ೩೨೨ ॥

ನ ಸ್ವರ್ಗೋ ನೈವ ಮೋಕ್ಷೋಽತ್ರ ಲೋಕಾಃ ಕ್ಲಿಶ್ಯಂತಿ ವೈ ವೃಥಾ ।
ಹಿಂಸಾಯಾಮಾಸ್ಥಿತೋ ವಿಷ್ಣುಃ ಕಥಂ ಮೋಕ್ಷಂ ಗಮಿಷ್ಯತಿ　　॥ ೩೨೩ ॥

ರಜೋಗುಣಾತ್ಮಕೋ ಬ್ರಹ್ಮಾ ಸ್ವಾಂ ಸೃಷ್ಟಿಮುಪಜೀವತಿ ।
ದೇವರ್ಷಯೋಽಥ ಯೇ ಚಾನ್ಯೇ ವೈದಿಕಂ ಪಕ್ಷಮಾಶ್ರಿತಾಃ　　॥ ೩೨೪ ॥

---

ಅಗ್ನಿಯ ಅನುಗ್ರಹದಿಂದ ಯಾವುದನ್ನು ಮಾಡುತ್ತೇವೆಯೋ ಅದು ಪ್ರಾಣಿಗಳಿಗೆ ದುಃಖಗಳನ್ನು ಕೊಡುತ್ತದೆ.

೩೨೦-೩೨೧. ಐಹಿಕದ ಸಂಬಂಧ ಮತ್ತು ಸ್ವಾರ್ಥದಲ್ಲಿ ಆಸಕ್ತರಾದವರಿಂದ ಯಜ್ಞನ್ನೂ ಶುದ್ಧವು ಮಾಡಲ್ಪಡುತ್ತದೆ. ಮತ್ತು ರುದ್ರನ ಧರ್ಮಗಳು, ವೈಷ್ಣವ ಧರ್ಮಗಳು, ಹೆಂಡತಿಯೊಡನೆ ಮಾಡುವ ಧರ್ಮಗಳೂ (ಗೃಹಸ್ಥಾಶ್ರಮಿಗಳ) ಕೆಟ್ಟ ಧರ್ಮಗಳು. ಹಿಂಸಾಪ್ರಾಯಗಳು.

೩೨೨. ರುದ್ರನು ಕಾಮಿಯಾಗಿ ಹೆಂಡತಿಯನ್ನು ಜೊತೆಯಲ್ಲಿಯೇ ಸೇರಿಸಿಕೊಂಡಿದ್ದಾನೆ. ಅಲ್ಲದೆ ಭೂತಗಳೊಡನೆ ಸೇರಿಕೊಂಡು ಮೂಳೆಯನ್ನು ಅವಯವಗಳಿಗೆ ಕಟ್ಟಿಗೊಂಡಿದ್ದಾನೆ. ಇಂತಹವನು ಮೋಕ್ಷವನ್ನು ಹೇಗೆ ಹೊಂದುವನು ?

೩೨೩. ಪ್ರಪಂಚದಲ್ಲಿ ಮೋಕ್ಷವೂ ಇಲ್ಲ, ಸ್ವರ್ಗವೂ ಇಲ್ಲ, ಜನರು ವ್ಯರ್ಥವಾಗಿ ಕಷ್ಟಪಡುತ್ತಾರೆ.

೩೨೪. ವಿಷ್ಣುವು ಯಾವಾಗಲೂ ಹಿಂಸೆಯಲ್ಲಿಯೇ ಆಸಕ್ತನಾಗಿರುವಾಗ ಅವನಿಗೆ ಮೋಕ್ಷವು ಹೇಗೆ ಸಿಕ್ಕುತ್ತದೆ? ರಜೋಗುಣದಿಂದ ಕೂಡಿರುವ ಬ್ರಹ್ಮನು ತನ್ನ ಸೃಷ್ಟಿಯಲ್ಲಿನ ಪ್ರಾಣಿಗಳಿಗೆ ಯಾವುದೋ ಒಂದೊಂದು ನೆಪವನ್ನು ಕಲ್ಪಿಸಿದ್ದಾನೆ.

ಹಿಂಸಾಸ್ತ್ರಾಯೋಃ ಸದಾ ಕ್ರೂರಾ ಮಾಂಸಾಪಾಃ ಪಾಪಕಾರಿಣಃ ।
ಸುರಾಸ್ತು ಮದ್ಯಪಾನೇನ ಮಾಂಸಾದಾ ಬ್ರಾಹ್ಮಣಾಸ್ತ್ವಮೀ ॥ ೩೨೫ ॥

ಧರ್ಮೇಣಾನೇನ ಕಃ ಸ್ವರ್ಗಂ ಕಥಂ ಮೋಕ್ಷಂ ಗಮಿಷ್ಯತಿ ।
ಯಚ್ಚ ಯಜ್ಞಾದಿಕಂ ಕರ್ಮ ಸ್ಮಾರ್ತಂ ಶ್ರಾದ್ಧಾದಿಕಂ ತಥಾ ೩೨೬ ॥

ತತ್ರ ನೈವಾಪವರ್ಗೋಽಸ್ತಿ ಯತ್ರೈಷಾ ಶ್ರೂಯತೇ ಶ್ರುತಿಃ ।
ಯೂಪಂ ಛಿತ್ವಾ ಪಶೂನ್ಹತ್ವಾ ಕೃತ್ವಾ ರುಧಿರಕರ್ದಮಂ ॥ ೩೨೭ ॥

ಯದ್ಯೇವಂ ಗಮ್ಯತೇ ಸ್ವರ್ಗೋ ನರಕಃ ಕೇನ ಗಮ್ಯತೇ ।
ಯದಿ ಭುಕ್ತಮಿಹಾನ್ಯೇನ ತೃಪ್ತಿರನ್ಯಸ್ಯ ಜಾಯತೇ ॥ ೩೨೮ ॥

ದದ್ಯಾತ್ಪ್ರವಸತಃ ಶ್ರಾದ್ಧಂ ನ ಸ ಭೋಜನಮಾಹರೇತ್ ।
ಆಕಾಶಗಾಮಿನೋ ವಿಪ್ರಾಃ ಪತಿತಾ ಮಾಂಸಭಕ್ಷಣಾತ್ ॥ ೩೨೯ ॥

---

೩೨೫. ವೇದವ ಪಕ್ಷವನ್ನು ಆಶ್ರಯಿಸಿರುವ ದೇವರ್ಷಿಗಳೇ ಆಗಲಿ ಮಿಕ್ಕವರೇ ಆಗಲಿ, ಅವರೆಲ್ಲರೂ ವೇದದ ನೆಪದಿಂದ ಹಿಂಸೆಯನ್ನೇ ಮಾಡುತ್ತ ಕ್ರೂರರಾಗಿ ಮಾಂಸವನ್ನು ತಿನ್ನುತ್ತ ಯಾವಾಗಲೂ ಪಾಪವನ್ನೇ ಮಾಡುತ್ತಿರುತ್ತಾರೆ.

೩೨೬. ದೇವತೆಗಳು ಮದ್ಯಪಾನಮಾಡುತ್ತಾರೆ, ಮಾಂಸವನ್ನು ತಿನ್ನುತ್ತಾರೆ, ಇವರ ಬ್ರಾಹ್ಮಣರಂತೆ ಈ ರೀತಿಯಾದ ಕ್ರೂರಧರ್ಮದಿಂದ ಸ್ವರ್ಗವನ್ನಾಗಲೀ, ಮೋಕ್ಷವನ್ನಾಗಲೀ, ಯಾವನು ತಾನೇ ಹೊಂದುತ್ತಾನೆ?

೩೨೭. ವೇದೋಕ್ತವಾದ ಯಜ್ಞಾದಿಗಳನ್ನಾಗಲೀ, ಸ್ಮೃತ್ಯುಕ್ತವಾದ ಶ್ರಾದ್ಧಗಳನ್ನಾಗಲೀ ಮಾಡಬೇಕೆಂದೂ, ಅದರಿಂದ ಸ್ವರ್ಗವುಂಟೆಂದೂ, ಶ್ರುತಿಯು ಹೇಳುತ್ತವೆ, ಈ ವಿಷಯದಲ್ಲಿ ಸ್ವಲ್ಪವೂ ಮೋಕ್ಷವೆಂಬುದೇ ಇಲ್ಲ.

೩೨೮. ಕಂಬವನ್ನು ಕಡಿದು, ಪ್ರಾಣಿಯನ್ನು ಕೊಂದು, ರಕ್ತದ ಕೆಸರನ್ನು ಮಾಡಿ ಅದರಿಂದ ಸ್ವರ್ಗವನ್ನು ಹೊಂದುವುದಾದರೆ ನರಕವನ್ನು ಯಾರು ಹೊಂದಬೇಕು ?

೩೨೯. ಈ ಜಾಗದಲ್ಲಿ ಒಬ್ಬನು ಊಟಮಾಡಿದರೆ ಅದರಿಂದ ಮತ್ತೊಬ್ಬನಿಗೆ ಹೊಟ್ಟೆ ತುಂಬ ತೃಪ್ತಿಯಾಗುವುದಾದರೆ, ಬೇರೇ ಊರಿಗೆ ಪ್ರಯಾಣಮಾಡಿರುವವನಿಗೆ ಶ್ರಾದ್ಧಮಾಡಿದರೆ ಸಾಕು, ಅವನು ಊಟಕ್ಕೋಸ್ಕರ ಪ್ರಯತ್ನಪಡಬೇಕಾದುದಿಲ್ಲ.

ನ ತೇಷಾಂ ವಿದ್ಯತೇ ಸ್ವರ್ಗೋ ಮೋಕ್ಷೋ ನೈವೇಹ ದಾನವಾಃ ।
ಜಾತಸ್ಯ ಜೀವಿತಂ ಜಂತೋರಿಷ್ಟಂ ಸರ್ವಸ್ಯ ಜಾಯತೇ ॥ ೩೩೦ ॥

ಆತ್ಮಮಾಂಸೋಪಮಂ ಮಾಂಸಂ ಕಥಂ ಖಾದೇತ ಪಂಡಿತಃ ।
ಯೋನಿಜಾಸ್ತು ಕಥಂ ಯೋನಿಂ ಶ್ರಯಂತೇ ಜಂತವಸ್ತ್ವಮಿಾ ॥ ೩೩೧ ॥

ಮೈಥುನೇನ ಕಥಂ ಸ್ವರ್ಗಂ ಯಾಸ್ಯಂತಿ ದಾನವೇಶ್ವರ ।
ಮೃದ್ಭಸ್ಮನಾ ಯತ್ರ ಶುದ್ಧಿಸ್ತತ್ರ ಶುದ್ಧಿಸ್ತು ಕಾ ಭವೇತ್ ॥ ೩೩೨ ॥

ವಿಪರೀತಮಿಮಂ ಲೋಕಂ ಪಶ್ಯ ದಾನವ ಯಾದೃಶಂ ।
ವಿಣ್ಮೂತ್ರಸ್ಯ ಕೃತೋತ್ಸರ್ಗೇ ಶಿಶ್ನಾಪಾನಸ್ಯ ಶೋಧನಂ ॥ ೩೩೩ ॥

ನ ಸಂಭವೋಽಸ್ತಿ ವದನೇ ಮೃದಾ ತೋಯೇನ ವಾ ಪುನಃ ।
ಭುಕ್ತೇ ವಾ ಭೋಜನೇ ರಾಜನ್ಕಥಂ ನಾಪಾನಶಿಶ್ನಯೋಃ ॥ ೩೩೪ ॥

---

೩೩೦. ಪುಣ್ಯದಿಂದ ಆಕಾಶದಲ್ಲಿ ಸಂಚರಿಸುತ್ತಿದ್ದ ಬ್ರಾಹ್ಮಣರು ಮಾಂಸ ತಿಂದುದರಿಂದ ಕೆಳಗೆ ಬಿದ್ದರು. ಆದ್ದರಿಂದ ಮಾಂಸ ತಿಂದವರಿಗೆ ಸ್ವರ್ಗವಾಗಲೀ, ಮೋಕ್ಷವಾಗಲೀ ಯಾವುದೂ ಇಲ್ಲ. ಹುಟ್ಟಿದವನಿಗೆ ಪ್ರಾಣವಿರುವವರೆಗೆ ಯಾವುನು ಇಷ್ಟವೋ ಅವೆಲ್ಲವೂ ಉಂಟಾಗುತ್ತದೆ

೩೩೧. ತಮ್ಮ ಮಾಂಸಕ್ಕೆ ಸಮಾನವಾದ ಮಾಂಸವನ್ನು ತಿಳಿವಳಿಕೆಯುಳ್ಳ, ವನು ಯಾವನು ತಾನೇ ತಿನ್ನುತ್ತಾನೆ, ಯೋನಿಯಲ್ಲಿ ಹುಟ್ಟಿದ ಪ್ರಾಣಿಗಳು ಮತ್ತೆ ಹೇಗೆ ಯೋನಿಯಲ್ಲಿ ರಮಿಸಿಯಾರು?

೩೩೨. ಎಲೈ ದಾನವೇಶ್ವರನೇ, ಮೈಥುನದಿಂದ ಸ್ವರ್ಗವು ಹೇಗೆ ಸಿಕ್ಕೀತು? ಮಣ್ಣು ಬೂದಿಗಳಿಂದ ಶುದ್ಧಿಯಾಗುವ ಪಕ್ಷದಲ್ಲಿ ಅದರಲ್ಲಿ ಆಗುವ ಶುದ್ಧಿಯು ಎಂತಹದು?

೩೩೩. ಎಲೈ ದಾನವನೇ! ಈ ಜನದ ಸ್ಥಿತಿಯು ವ್ಯತ್ಯಾಸವಾದುದು ನೋಡು, ಮೂತ್ರವನ್ನು ವಿಸರ್ಜಿಸಿದರೂ, ಅಮೇಧ್ಯವನ್ನೂ ವಿಸರ್ಜಿಸಿದರೂ ಶಿಶ್ನಕ್ಕೂ ಅಮೇಧ್ಯವನ್ನು ವಿಸರ್ಜಿಸಿದ ಜಾಗಕ್ಕೂ ಶೋಧನೆಮಾಡುವುದೆಂದರೇನು? ಹಾಗೇ ಮಾಡಿದರೆ ಬಾಯನ್ನು ನೀರಿನಿಂದಲೂ, ಉಳಿದ ಜಾಗಗಳನ್ನು ಮಣ್ಣಿನಿಂದಲೂ ಶುದ್ಧಿಮಾಡಲು ಕಾರಣವೇನಿದೆ? ಅದಕ್ಕೆ ಸಂಬಂಧವೇ ಇಲ್ಲ.

೩೩೪-೩೩೫. ಎಲೈ ದೊರೆಯೇ. ಹಾಗಾದರೆ ಊಟಮಾಡಿದರೇಕೆ, ಗುದವನ್ನೂ ಶಿಶ್ನವನ್ನೂ ಶುದ್ಧಿಮಾಡಿಕೊಳ್ಳುವುದಿಲ್ಲ? ಈ ರೀತಿಯಾಗಿ ಜನಗಳ ಸ್ಥಿತಿಯೇ

ಕ್ರಿಯತೇ ಶೌಚನಂ ತದ್ವದ್ವಿಪರೀತಾ ಸ್ಥಿತಾ ಸ್ಥಿತಿಃ ।
ಯತ್ರ ವೈ ಕ್ಷಾಲನಂ ಪ್ರೋಕ್ತಂ ತತ್ರ ತೇನೈವ ಕುರ್ವತೇ ॥ ೩೩೫ ॥

ತಾರಾಂ ಬೃಹಸ್ಪತೇರ್ಭಾರ್ಯಾಂ ಹೃತ್ವಾ ಸೋಮಃ ಪುರಾ ಗತಃ ।
ತಸ್ಯಾಂ ಜಾತೋ ಬುಧಃ ಪುತ್ರೋ ಗುರುರ್ಜಗ್ರಾಹ ತಾಂ ಪುನಃ ॥ ೩೩೬ ॥

ಗೌತಮಸ್ಯ ಮುನೇಃ ಪತ್ನೀ ಅಹಲ್ಯಾ ನಾಮ ನಾಮತಃ ।
ಅಗೃಹ್ಣಾತ್ತಾಂ ಸ್ವಯಂ ಶಕ್ರಃ ಪಶ್ಯ ಧರ್ಮೋ ಯಥಾ ಸ್ಥಿತಃ ॥ ೩೩೭ ॥

ಏತದನ್ಯಚ್ಚ ಜಗತಿ ದೃಶ್ಯತೇ ಪಾರದಾರಿಕಂ ।
ಏವಂವಿಧೋ ಯತ್ರ ಧರ್ಮಃ ಪರಮಾರ್ಥೋ ಮತಸ್ತು ಕಃ ॥ ೩೩೮ ॥

ವದಸ್ವ ತ್ವಂ ದಾನವೇಂದ್ರ ವದ ಭೂಯೋ ವದಾಮಿ ತೇ ।
ಗುರೋಸ್ತು ಗದಿತಂ ಶ್ರುತ್ವಾ ಪರಮಾರ್ಥಾನ್ವಿತಂ ವಚಃ ॥ ೩೩೯ ॥

ಜಾತಕೌತೂಹಲಾಸ್ತತ್ರ ವಿರಕ್ತಾಸ್ತು ಭವಾರ್ಣವಾತ್ ॥ ೩೪೦ ॥

---

ವ್ಯತ್ಯಾಸವಾದುದು, ಎಲ್ಲಿ ತೊಳೆದುಕೊಳ್ಳಬೇಕೋ, ಅಲ್ಲಿ ಅವನೇ ತೊಳೆದುಕೊಳ್ಳು ತ್ತಾನೆ, ಇವಕ್ಕೆ ವೇದಾದಿಗಳ ಮಾತೇತಕ್ಕೆ?

೩೩೬-೩೩೭. ಪೂರ್ವದಲ್ಲಿ ಬೃಹಸ್ಪತಿಯು ಹೆಂಡತಿಯಾದ ತಾರೆಯನ್ನು ಚಂದ್ರನು ಕದ್ದುಕೊಂಡು ಹೋದನು. ಅವನಿಗೆ ಅವಳಲ್ಲಿ, ಬುಧನೆಂಬ ಮಗನು ಹುಟ್ಟಿದನು. ಆ ತಾರೆಯನ್ನು ಮತ್ತೆ ಬೃಹಸ್ಪತಿಯು ಸ್ವೀಕರಿಸಿದನು. ಗೌತಮಋಷಿಯ ಅಹಲ್ಯೆಯೆಂಬ ಹೆಂಡತಿಯನ್ನು ಇಂದ್ರನು ಕಾಮಿಸಿ ರಮಿಸಿದನು. ಆ ಅಹಲ್ಯೆಯನ್ನು ಗೌತಮನು ಸ್ವೀಕರಿಸಿದನು. ನೋಡು, ಧರ್ಮದ ಸ್ಥಿತಿಯು ಹೇಗಿರುವುದು?

೩೩೮. ಇವೂ ಇನ್ನೂ ಇತರವಾದುವೂ ಪ್ರಪಂಚದಲ್ಲಿ ಕಾಣುತ್ತವೆ. ಧರ್ಮವು ಇವೆಲ್ಲವೂ ಹೌದು ಎಂದರೆ ಸರಿಯಾದ ಧರ್ಮವಾವುದು ?

೩೩೯. ಎಲೈ ದಾನವೇಂದ್ರನೇ, ನೀನೇ ಇದನ್ನೆಲ್ಲಾ ನೋಡಿ ಉತ್ತರ ಹೇಳು, ಅನಂತರ ಇನ್ನೂ ಹೇಳುತ್ತೇನೆ.

೩೪೦. ಗುರುವಿನ ಈ ಯಥಾರ್ಥವಾದ ಮಾತನ್ನು ಕೇಳಿ ಕುತೂಹಲಶಾಲಿ ಗಳಾಗಿದ್ದ ಈ ದಾನವರೆಲ್ಲರೂ ಸಂಸಾರದಲ್ಲಿ ವೈರಾಗ್ಯವನ್ನು ಹೊಂದಿದರು.

॥ ದಾನವಾ ಊಚುಃ ॥

ದೀಕ್ಷಯಸ್ವ ಗುರೋ ಸರ್ವಾನ್ಪ್ರಪನ್ನಾನ್ಭಕ್ತಿತಃ ಸ್ಥಿತಾನ್ ।
ಯೇನ ನೈವ ಪುನರ್ಮೋಹಂ ವ್ರಜಾಮಸ್ತವ ಶಾಸನಾತ್ ॥ ೩೪೧ ॥

ಸುವಿರಕ್ತಾಃ ಸ್ಮ ಸಂಸಾರೇ ಶೋಕಸಾಹಸ್ರದಾಯಿನಿ ।
ಉದ್ಧರಸ್ವ ಗುರೋ ಸರ್ವಾನ್ಕೇಶಾಕರ್ಷೇಣ ಕೂಪತಃ ॥ ೩೪೨ ॥

ಕಸ್ಯ ದೇವಸ್ಯ ಶರಣಂ ಗಚ್ಛಾಮೋ ಬ್ರಾಹ್ಮಣೋತ್ತಮ ।
ದೈವತಂ ಚ ಪ್ರಪನ್ನಾನಾಂ ಪ್ರಕಾಶಯ ಮಹಾಮತೇ ॥ ೩೪೩ ॥

ಸ್ಮರಣೇನೋಪವಾಸೇನ ಧ್ಯಾನಧಾರಣಯಾ ತಥಾ ।
ಪೂಜೋಪಹಾರೇ ಚ ಕೃತೇ ಅಪವರ್ಗಸ್ತು ಲಭ್ಯತೇ ॥ ೩೪೪ ॥

ವಿರಕ್ತಾಃ ಸ್ಮ ಕುಟುಂಬೇನ ಭೂಯೋ ನಾತ್ರ ಯತಾಮಹೇ ।
ಏವಂ ವೈ ಸ ಗುರುಶ್ಛನ್ನಸ್ತೈರುಕ್ತೋ ದನುಪುಂಗವೈಃ ॥ ೩೪೫ ॥

---

೩೪೧. ದಾನವರು ಹೇಳಿದರು :—ಎಲೈ ಗುರುವೇ ! ನಾವೆಲ್ಲರೂ ಭಕ್ತಿಯಿಂದ ಕೂಡಿ ನಿನ್ನಲ್ಲಿ ಸೇರಿದ್ದೇವೆ. ನಮಗೆ ದೀಕ್ಷೆಯನ್ನು ಕೊಡು. ನೀನು ಹೇಳಿದನಂತರ ನಾವು ಮತ್ತೆ ಮೋಹವನ್ನು ಹೊಂದಬಾರದು.

೩೪೨. ಅನೇಕ ಶೋಕಗಳನ್ನು ಕೊಡುವ ಈ ಸಂಸಾರಗಳಲ್ಲಿ ವೈರಾಗ್ಯವನ್ನು ಹೊಂದಿದ್ದೇವೆ. ಎಲೈ ಗುರುವೇ ! ಬಾವಿಯಲ್ಲಿ ಬಿದ್ದವನನ್ನು ಜುಟ್ಟನ್ನು ಹಿಡಿದು ಮೇಲಕ್ಕೆತ್ತುವಂತೆ ನಮ್ಮೆಲ್ಲರನ್ನೂ ಕಾಪಾಡು.

೩೪೩. ಎಲೈ ಬ್ರಾಹ್ಮಣೋತ್ತಮನೇ ! ಯಾವ ದೇವರನ್ನು ಶರಣು ಹೊಂದೋಣ ? ಶರಣುಹೊಕ್ಕವರನ್ನು ಕಾಪಾಡುವ ದೇವರಾವುದು ? ದಯವಿಟ್ಟು ಹೇಳು.

೩೪೪. ಸ್ಮರಿಸುವುದು, ಉಪವಾಸ, ಧ್ಯಾನಮಾಡುವುದು, ಮನಸ್ಸಿನಲ್ಲಿ ದೃಢವಾಗಿಟ್ಟುಕೊಳ್ಳುವುದು, ಪೂಜೆಮಾಡುವುದು, ನೈವೇದ್ಯಸಮರ್ಪಣೆ, ಇವನ್ನು ಯಾವ ದೇವರಿಗೆ ಮಾಡಿದರೆ ಮೋಕ್ಷ ಸಿಕ್ಕುತ್ತದೆ ?

೩೪೫. ನಾವು ನಮ್ಮ ಕುಟುಂಬದಲ್ಲಿ ವೈರಾಗ್ಯವನ್ನು ಹೊಂದಿದ್ದೇವೆ. ಮತ್ತೆ ಸಂಸಾರದಲ್ಲಿ ಸೇರಲು ಪ್ರಯತ್ನಿಸುವುದಿಲ್ಲ ಎಂಬುದಾಗಿ ಆ ಕಪಟಶುಕ್ರನಾದ ಗುರುವಾದ ಬೃಹಸ್ಪತಿಗೆ ಹೇಳಿದರು.

ಚಿಂತಯಾಮಾಸ ತತ್ಕಾರ್ಯಂ ಕಥಮೇತತ್ಕರೋಮ್ಯಹಂ ।
ಕಥಮೇತೇ ಮಯಾ ಪಾಪಾಃ ಕರ್ತವ್ಯಾ ನರಕೌಕಸಃ ॥ ೩೪೬ ॥

ವಿಡಂಬನಾಚ್ಛ್ರುತಿಬಾಹ್ಯಾಸ್ತ್ರೈಲೋಕ್ಯೇ ಹಾಸ್ಯಕಾರಿಣಃ ।
ಇತ್ಯುಕ್ತ್ವಾ ಧಿಷಣೋ ರಾಜಂಶ್ಚಿಂತಯಾಮಾಸ ಕೇಶವಂ ॥ ೩೪೭ ॥

ತಸ್ಯ ತಚ್ಚಿಂತಿತಂ ಜ್ಞಾತ್ವಾ ಮಹಾಮೋಹಂ ಜನಾರ್ದನಃ ।
ಸಮುತ್ಪಾದ್ಯ ದದೌ ತಸ್ಮೈ ಪ್ರಾಹ ಚೇದಂ ಬೃಹಸ್ಪತಿಂ ॥ ೩೪೮ ॥

॥ ವಿಷ್ಣುರುವಾಚ ॥

ಮಹಾಮೋಹೋಽಯಮಖಿಲಾಂಸ್ತಾನ್ ದೈತ್ಯಾನ್ಮೋಹಯಿಷ್ಯತಿ ।
ಭವತಾ ಸಹಿತಃ ಸರ್ವಾನ್ವೇದಮಾರ್ಗಬಹಿಷ್ಕೃತಾನ್ ॥ ೩೪೯ ॥

ಏವಮಾದಿಶ್ಯ ಭಗವಾನಂತರ್ಧಾನಂ ಜಗಾಮ ಹ ।
ತಪಸ್ಯಭಿರತಾನ್ಸೋಽಥ ಮಾಯಾಮೋಹೋ ಮಹಾಮತಿಃ ।
ತೇಷಾಂ ಸಮೀಪಮಾಗತ್ಯ ಬೃಹಸ್ಪತಿಮುವಾಚ ಹ ॥ ೩೫೦ ॥

---

೩೪೬-೩೪೭. ಇವರಿಗೆ ಏನು ಮಾಡಬೇಕೆಂಬುದನ್ನು ಆ ಗುರುವು ಯೋಚಿಸಿದನು. ಈ ಪಾಪಿಗಳನ್ನು ಯಾವಾಗಲೂ ನರಕದಲ್ಲಿರುವಂತೆ ಮಾಡುವುದು ಹೇಗೆ? ಇವರೆಲ್ಲರೂ ವೇದಬಾಹ್ಯರಾಗಿ ಡಂಬಾಚಾರ ಮಾಡುತ್ತಾ ಮೂರು ಲೋಕದಲ್ಲಿಯೂ ಹಾಸ್ಯಕ್ಕೊಳಗಾಗುವಂತೆ ಹೇಗೆ ಮಾಡಲಿ ಎಂದು ಯೋಚಿಸಿದನು. ಅವರು ಹೀಗೆ ಹೇಳಿದನಂತರ ಯೋಚಿಸಿ ಆ ಬೃಹಸ್ಪತಿಯು ಕೇಶವನನ್ನು ಧ್ಯಾನಮಾಡಿದನು.

೩೪೮. ವಿಷ್ಣುವು, ಆ ಗುರುವು ಧ್ಯಾನಿಸಿದುದನ್ನು ತಿಳಿದು ಮಹಾಮೋಹವನ್ನು ಸೃಷ್ಟಿಸಿ ಆ ಗುರುವಿಗೆ ಕೊಟ್ಟು ಇಂತೆಂದನು.

೩೪೯. ವಿಷ್ಣುವು ಹೇಳಿದನು:—ಈ ಮಹಾಮೋಹನು ನಿನ್ನೊಡನೆ ಕೂಡಿರುವ ಈ ವೇದಮಾರ್ಗವನ್ನು ಬಿಡಲ್ಪಟ್ಟ ಎಲ್ಲರನ್ನೂ ಮೋಹಗೊಳಿಸುತ್ತಾನೆ.

೩೫೦. ವಿಷ್ಣುವು ಹೀಗೆಂದು ಹೇಳಿ ಅಂತರ್ಧಾನನಾದನು. ಅನಂತರ ಮಹಾಮೋಹನು ತಪಸ್ಸಿನಲ್ಲಿ ಆಸಕ್ತರಾದ ಅವರ ಸಮೀಪಕ್ಕೆ ಬಂದನು. ಮತ್ತು ಬೃಹಸ್ಪತಿಯನ್ನು ಕುರಿತು ಇಂತೆಂದನು.

॥ ಮಹಾಮೋಹ ಉವಾಚ ॥

ಶುಕ್ರೈಹಿ ಮಾಮಿದಾನೀಂ ವಾ ಇಚ್ಛಾಮೀತಿ ಪ್ರಬೋಧಯೇ ।
ಅನುಗ್ರಹಾರ್ಥಂ ಯುಷ್ಮಾಕಂ ಭಕ್ತ್ಯಾ ಹ್ಯತಸ್ತ್ವಿಹಾಗತಃ ॥ ೩೫೧ ॥

ತತೋ ದಿಗಂಬರೋ ಮುಂಡೋ ಬರ್ಹಿಪತ್ರಧರೋ ನೃಪ ।
ಮಾಯಾಮೋಹೋಽಭವದ್ಭೂಯ ಇದಂ ವಚನಮಬ್ರವೀತ್ ॥ ೩೫೨ ॥

ದಿಗಂಬರ ಉವಾಚ ॥

ಭೋ ಭೋ ದೈತ್ಯಾಧಿಪತಯೋ ಬ್ರುವಧ್ವಂ ತಪಸಿ ಸ್ಥಿತಾಃ ।
ಐಹಿಕಾರ್ಥಂ ತು ಪಾರಕ್ಯಂ ತಪಸಃ ಫಲಮಿಚ್ಛಥ ॥ ೩೫೩ ॥

॥ ದಾನವಾ ಊಚುಃ ॥

ಪರತ್ರ ಧರ್ಮಲಾಭಾಯ ತಪಶ್ಚರ್ಯಾ ಹಿ ನಃ ಕೃತಾ ।
ಅಸ್ಮಾಭಿರಿಯಮಾರಬ್ಧಾ ಕಿಂ ವಾ ತತ್ರ ವಿವಕ್ಷಿತಂ ॥ ೩೫೪ ॥

॥ ದಿಗಂಬರ ಉವಾಚ ॥

ಕುರುಧ್ವಂ ಮಮ ವಾಕ್ಯಾನಿ ಯದಿ ಮುಕ್ತಿಮಭೀಪ್ಸಥ ।
ಅರ್ಹಧ್ವಂ ಸರ್ವಮೇತಚ್ಚ ಮುಕ್ತಿದ್ವಾರಮಸಂವೃತಂ ॥ ೩೫೫ ॥

---

೩೫೧. ಮಹಾಮೋಹನು ಹೇಳಿದನು:—ಶುಕ್ರನೇ ಇಲ್ಲಿ ಬಾ. ಈಗ ನಿನ್ನನ್ನು ನಾನು ಇಚ್ಛಿಸುತ್ತೇನೆ. ನಿನಗೆ ಜ್ಞಾನವನ್ನುಂಟುಮಾಡುತ್ತೇನೆ ನಿನಗೆ ಅನುಗ್ರಹಿಸುವುದಕ್ಕೋಸ್ಕರ ನಿಮ್ಮ ಭಕ್ತಿಯಿಂದ ಇಲ್ಲಿಗೆ ನಾನು ತರಲ್ಪಟ್ಟಿದ್ದೇನೆ.

೩೫೨. ಅನಂತರ ಬತ್ತಲೆಯಿರುವ, ಬೋಳಾದ ನವಿಲುಗರಿಯನ್ನು ಹಿಡಿದಿರುವ ಮಾಯಾಮೋಹನು ಮತ್ತೆ ಇಂತೆಂದನು.

೩೫೩. ದಿಗಂಬರನು ಹೇಳಿದನು:—ಎಲೈ ತಪಸ್ಸಿನಲ್ಲಿರುವ ದೈತ್ಯಾಧಿಪತಿಗಳೇ, ನೀವು ಈ ಲೋಕದ ಸುಖಕ್ಕೋಸ್ಕರ ಮತ್ತೊಬ್ಬರಿಗೆ ಫಲವುಂಟಾಗುವಂತೆ ತಪಸ್ಸಿನ ಫಲವನ್ನು ಅಪೇಕ್ಷಿಸಿರಿ.

೩೫೪. ದಾನವರು ಹೇಳಿದರು:—ನಾವು ಪರಲೋಕದಲ್ಲಿ ಸುಖವುಂಟಾಗಲೆಂದು ತಪಸ್ಸನ್ನು ಮಾಡಿದೆವು. ಈಗಲಾದರೋ ಇಹಲೋಕದ ಸ್ಥಿತಿಯು ಆರಂಭವಾಗಿದೆ. ಇವುಗಳಲ್ಲಿ ನಮಗೆ ಬೇಕಾದುದು ಯಾವುದು ?

೩೫೫. ದಿಗಂಬರನು ಹೇಳಿದನು:—ನಿಮಗೆ ಮುಕ್ತಿಯು ಬೇಕಾಗಿದ್ದರೆ ನನ್ನ ಮಾತಿನಂತೆ ನಡೆಯಿರಿ, ಎಲ್ಲಕ್ಕೂ ನೀವು ಯೋಗ್ಯರಾಗಿದ್ದೀರಿ, ಮುಕ್ತಿಯ ಬಾಗಿಲು ತೆಗೆದೇ ಇದೆ.

ಧರ್ಮಾದ್ವಿಮುಕ್ತಿರಹೋಽಯಂ ನ ತಪಸ್ತ್ಯಾತ್ಪರೋಽವರಃ ।
ಅತ್ರೈವಾವಸ್ಥಿತಾಃ ಸ್ವರ್ಗಂ ಮುಕ್ತಿಂ ಚಾಪಿ ಗಮಿಷ್ಯಥ ॥ ೩೫೬ ॥

ಏವಂ ಪ್ರಕಾರೈರ್ಬಹುಭಿರ್ಯುಕ್ತಿದರ್ಶನವರ್ಜಿತೈಃ ।
ಮಾಯಾಮೋಹೇನ ತೇ ದೈತ್ಯಾ ವೇದಮಾರ್ಗಬಹಿಷ್ಕೃತಾಃ ॥ ೩೫೭ ॥

ಧರ್ಮಾಯೈತದಧರ್ಮಾಯ ಸದೇತದಸದಿತ್ಯಪಿ ।
ವಿಮುಕ್ತಯೇ ತ್ವಿದಂ ನೈತದ್ವಿಮುಕ್ತಿಂ ಸಂಪ್ರಯಚ್ಛತಿ ॥ ೩೫೮ ॥

ಪರಮಾರ್ಥೋಽಯಮತ್ಯರ್ಥಂ ಪರಮಾರ್ಥೋ ನ ಚಾಪ್ಯಯಂ ।
ಕಾರ್ಯಮೇತದಕಾರ್ಯಂ ಚ ನೈತದೇವ ಸ್ಫುಟಂ ತ್ವಿದಂ ॥ ೩೫೯ ॥

ದಿಗ್ವಾಸಸಾಮಯಂ ಧರ್ಮೋ ಧರ್ಮೋಽಯಂ ಬಹುಸಂಮತಃ ।
ಇತ್ಯನೇಕಾರ್ಥವಾದಾಂಸ್ತು ಮಾಯಾಮೋಹೇನ ತೇ ಯತಃ ॥ ೩೬೦ ॥

---

೩೫೬. ಧರ್ಮದಿಂದಲೇ ಮುಕ್ತಿಯು ಬರುವುದು, ಅದಕ್ಕಿಂತ ಬೇರೇ ಉತ್ತಮವಾದುದಿಲ್ಲ, ನೀವು ಇಲ್ಲಿಯೇ ಇದ್ದುಕೊಂಡು ಸ್ವರ್ಗವನ್ನಾಗಲೀ ಮುಕ್ತಿಯನ್ನಾಗಲಿ ಹೊಂದಿರಿ.

೩೫೭. ಮೋಕ್ಷವನ್ನು ಕೊಡುವ, ಶಾಸ್ತ್ರವಲ್ಲದ ಅನೇಕ ಪ್ರಕಾರಗಳಿಂದ ಮಾಯಾಮೋಹನಿಂದ ಈ ದಾನವರು ವೇದಮಾರ್ಗದಿಂದ ದೂರರಾದರು.

೩೫೮-೩೬೦. ಈ ಕೆಲಸವು ಧರ್ಮವನ್ನು ಕೊಡತಕ್ಕದ್ದು, ಇದು ಅಧರ್ಮ, ಇದು ಒಳ್ಳೆಯದು, ಇದು ಕೆಟ್ಟುದು, ಇದು ಮುಕ್ತಿಯನ್ನು ಕೊಡುತ್ತದೆ, ಇದು ಮುಕ್ತಿಯನ್ನು ಕೊಡುವುದಿಲ್ಲ, ಇದು ಪರಮಾರ್ಥವಾದುದು, ಇದು ಪರಮಾರ್ಥವಲ್ಲದುದು, ಇದನ್ನು ಮಾಡಬಹುದು, ಇದನ್ನು ಮಾಡಬಾರದು, ಇದೇ ಸರಿ, ಇದಲ್ಲ, ಇದೇನೇ ದಿಗಂಬರರ ಧರ್ಮವು, ಈ ಧರ್ಮವು. ಬಹು ಜನರಿಗೆ ಇಷ್ಟವಾದುದು, ಈ ರೀತಿ ಮಾಯಾಮೋಹನಿಂದ ಅನೇಕ ಅರ್ಥಗಳುಳ್ಳ ವಾದಗಳನ್ನು ತೋರಿಸುತ್ತ ಅವರನ್ನು ಅವರ ಧರ್ಮದಿಂದ ಬಿಡುವಂತೆ ಮಾಡಿದನು.

ತೇನ ದರ್ಶಯತಾ ದೈತ್ಯಾಃ ಸ್ವಧರ್ಮಂ ತ್ಯಾಜಿತಾ ನೃಪ ।
ಆರ್ಹದ್ಧ್ವಂ ಮಾಮಕಂ ಧರ್ಮಂ ಮಾಯಾಮೋಹೇನ ತೇ ಯತಃ ॥

ಉಕ್ತಾಸ್ತಮಾಶ್ರಿತಾ ಧರ್ಮಮಾರ್ಹತಾಸ್ತೇನ ತೇಽಭವನ್ ।
ತ್ರಯೀಮಾರ್ಗಂ ಸಮುತ್ಸೃಜ್ಯ ಮಾಯಾಮೋಹೇನ ತೇಽಸುರಾಃ ॥

ಕಾರಿತಾಸ್ತನ್ಮಯಾ ಹ್ಯಾಸಂಸ್ತಥಾಽನ್ಯೇ ತತ್ಪ್ರಬೋಧಿತಾಃ ।
ತೈರಪ್ಯನ್ಯೇ ಪರೇ ತೈಶ್ಚ ತೈರನ್ಯೇಽನ್ಯೈಸ್ತಥಾಽಪರೇ ॥ ೩೬೩ ॥

ನಮೋಽರ್ಹಂತಾಯೇತಿ ಸರ್ವೇ ಸಂಗಮೇ ಸ್ಥಿರವಾದಿನಃ ।
ಅಲ್ಪೈರಹೋಭಿಃ ಸಂತ್ಯಕ್ತಾಸ್ತೈರ್ದೈತ್ಯೈಃ ಪ್ರಾಯಶಸ್ತ್ರಯೀ ॥ ೬೬೪ ॥

ಪುನಾ ರಕ್ತಾಂಬರಧರೋ ಮಾಯಾಮೋಹೋ ಜಿತೇಕ್ಷಣಃ ।
ಸೋಽಪ್ಯನ್ಯಾನಸುರಾನ್ ಗತ್ವಾ ತಾನುವಾಚ ಮಧುರಾಕ್ಷರಂ ॥ ೩೬೫ ॥

॥ ರಕ್ತಾಂಬರ ಉವಾಚ ॥

ಸ್ವರ್ಗಾರ್ಥಂ ಯದಿ ವೋ ವಾಂಛಾ ನಿರ್ವಾಣಾರ್ಥಾಯ ವಾ ಪುನಃ ।

---

೩೬೧-೩೬೨. ನಾನು ಹೇಳಿದ ಧರ್ಮಕ್ಕೆ ಅರ್ಹರಾಗಿ ಎಂದು ಆ ಮಾಯಾಮೋಹನಿಂದ ಹೇಳಲ್ಪಟ್ಟವರಾಗಿ ಅವನನ್ನೇ ಆಶ್ರಯಿಸಿದರು. ಅವರಿಂದಲೇ ಅವರು ಆರ್ಹತರಾದರು. ಈರೀತಿ ವೇದಮಾರ್ಗವನ್ನು ಬಿಡಿಸಿ ಆ ಮಾಯಾಮೋಹನು ಅವರನ್ನು ತನ್ನಂತೆ ಮಾಡಿಕೊಂಡನು, ಮಿಕ್ಕವರಿಗೂ ಅದರಂತೇ ಬೋಧಿಸಿದನು.

೩೬೩-೩೬೪. ಒಬ್ಬರಿಂದ ಮತ್ತೊಬ್ಬರು, ಅವರಿಂದ ಇನ್ನೊಬ್ಬರು, ಬೋಧಿಸಲ್ಪಟ್ಟು ಅರ್ಹಂತನಿಗೆ ನಮಸ್ಕಾರವೆನ್ನುತ್ತಾ, ಅವರೆಲ್ಲರೂ ಅಸ್ಥಿರತ್ವವನ್ನು ಹೇಳುತ್ತ ಅವನ ಸಹವಾಸದಲ್ಲಿ ಸೇರಿದರು. ಹೀಗೆ ಸ್ವಲ್ಪ ದಿನಗಳಲ್ಲೇ ಅವರುಗಳು ವೇದವನ್ನೂ, ವೇದಮಾರ್ಗವನ್ನೂ ಬಿಟ್ಟುಬಿಟ್ಟರು.

೩೬೫. ಆಗ ರಕ್ತಾಂಬರವನ್ನು ಧರಿಸಿದ ಮತ್ತೊಬ್ಬ ಮಾಯಾಮೋಹನು ಮಿಕ್ಕವರಾದ ರಾಕ್ಷಸರ ಬಳಿಗೆ ಹೋಗಿ ಆ ರಾಕ್ಷಸರೊಂದಿಗೆ ಒಳ್ಳೆಯ ಮಾತಿನಿಂದ ಇಂತೆಂದನು.

೩೬೬. ರಕ್ತಾಂಬರನು ಹೇಳಿದನು :—ಎಲೈ ದಾನವವೀರರಾ! ಸ್ವರ್ಗಕ್ಕಾಗಲೀ,

ತದಲಂ ಪಶುಘಾತಾದಿದುಷ್ಟಧರ್ಮೈರ್ನಿಬೋಧತ ॥ ೩೬೬ ॥

ವಿಜ್ಞಾನಮಯಮೇವೈತದಶೇಷಮುಪಗಚ್ಛಥ ।
ಬುಧ್ಯಧ್ವಂ ಮೇ ವಚಃ ಸಮ್ಯಗ್‌ಬುಧೈರಿವ ಪ್ರಮೋದಿತಂ ॥ ೩೬೭ ॥

ಜಗದೇತದನಾಧಾರಂ ಭ್ರಾಂತಿಜ್ಞಾನಾರ್ಥತತ್ಪರಂ ।
ರಾಗಾದಿದುಷ್ಟಮತ್ಯರ್ಥಂ ಭ್ರಾಮ್ಯತೇ ಭವಸಂಕಟೇ ॥ ೩೬೮ ॥

ನಾನಾಪ್ರಕಾರವಚನಂ ಸ ತೇಷಾಂ ಮುಕ್ತಿಯೋಜಿತಂ ।
ತಥಾ ತಥಾವದದ್ಧರ್ಮಂ ತತ್ಯಜುಸ್ತೇ ಯಥಾ ಯಥಾ ॥ ೩೬೯ ॥

ಕೇಚಿದ್ವಿನಿಂದಾಂ ವೇದಾನಾಂ ದೇವಾನಾಮಪರೇ ನೃಪ
ಯಜ್ಞಕರ್ಮಕಲಾಪಸ್ಯ ತಥಾ ಚಾನ್ಯೇ ದ್ವಿಜನ್ಮನಾಂ ॥ ೩೭೦ ॥

ನೈತದ್ಯುಕ್ತಿಸಹಂ ವಾಕ್ಯಂ ಹಿಂಸಾ ಧರ್ಮಂ ಜನಿಷ್ಯತೇ ।
ಹವೀಂಷ್ಯನಲದಗ್ಧಾನಿ ಫಲಾನ್ಯರ್ಹಂತಿ ಕೋವಿದಾಃ ॥ ೩೭೧ ॥

---

ಮೋಕ್ಷಕ್ಕಾಗಲೀ ನಿಮಗೆ ಅಪೇಕ್ಷೆ ಇದ್ದರೆ ಪಶುಗಳನ್ನು ಕೊಲ್ಲುವ ಈ ದುಷ್ಟ ಧರ್ಮಗಳು ಬೇಡಿ.

೩೬೭. ಇವೆಲ್ಲವೂ ವಿಜ್ಞಾನದಿಂದ ಕೂಡಿಕೊಂಡಿರುವುದೆಂದು ತಿಳಿಯಿರಿ ನನ್ನ ಮಾತನ್ನು ನಂಬಿ. ಎಲ್ಲರೂ ದಡ್ಡರು ಮೋಹಗೊಂಡಂದಿರುವುದು.

೩೬೮. ಈ ಜಗತ್ತಿಗೆ ಆಧಾರವಿಲ್ಲ, ಎಲ್ಲವೂ ಭ್ರಾಂತಿಯಿಂದ ಕೂಡಿರುವುದು. ಬಹುವಾಗಿ ಮಾತ್ಸರ್ಯಾದಿಗಳಿಂದ ಕೂಡಿದೆ, ಈ ಸಂಸಾರವೆಂಬ ಸಂಕಟದಲ್ಲಿ ಸುತ್ತುತ್ತವೆ.

೩೬೯. ಅವರಿಗೆ ಮುಕ್ತಿಯು ಸಿಕ್ಕುವ ಪ್ರಕಾರದ ಅನೇಕ ಬಗೆಯ ಮಾತುಗಳನ್ನು ಹೇಳಿದಂತೆಲ್ಲಾ ಅವರು ವೇದಧರ್ಮವನ್ನು ಬಿಡುತ್ತ ಬಂದರು.

೩೭೦. ಕೆಲವರು ವೇದವನ್ನು ನಿಂದಿಸಿದರು, ಕೆಲವರು ದೇವತೆಗಳನ್ನು ನಿಂದಿಸಿದರು, ಕೆಲವರು ಯಜ್ಞಾದಿ ಕರ್ಮಗಳನ್ನು ನಿಂದಿಸಿದರು, ಮತ್ತೆ ಕೆಲವರು ಬ್ರಾಹ್ಮಣರನ್ನು ನಿಂದಿಸಿದರು.

೩೭೧. ಹಿಂಸೆಯಿಂದ ಧರ್ಮವುಂಟಾಗುತ್ತವಂತೆ. ಇದು ಯುಕ್ತಿಯಿಂದ ಕೂಡಿದ ಮಾತಲ್ಲ. ಬೆಂಕಿಯಲ್ಲಿ ಸುಟ್ಟ, ಹವಿಸ್ಸು ಫಲವನ್ನು ಕೊಡುತ್ತದೆಂದು ತಿಳಿದುಕೊಳ್ಳುತ್ತಾರೆ, ಇವರು ಪಂಡಿತರಂತೆ.

ಯಜ್ಞೈರನೇಕೈರ್ದೇವತ್ವಮವಾಪ್ಯೇಂದ್ರೇಣ ಭುಜ್ಯತೇ ।
ಶಮ್ಯಾದಿ ಯದಿ ಚೇತ್ಕಾಷ್ಠಂ ತದ್ವರಂ ಪತ್ರಭುಕ್ಪಶುಃ ॥ ೩೭೨ ॥

ನಿಹತಸ್ಯ ಪಶೋರ್ಯಜ್ಞೇ ಸ್ವರ್ಗಪ್ರಾಪ್ತಿರ್ಯದೀಷ್ಯತೇ ।
ಸ್ವಪಿತಾ ಯಜಮಾನೇನ ಕಿಂ ವಾ ತತ್ರ ನ ಹನ್ಯತೇ ॥ ೩೭೩ ॥

ತೃಪ್ತಯೇ ಜಾಯತೇ ಪುಂಸೋ ಭುಕ್ತಮನ್ಯೇನ ಚೇದ್ಯದಿ ।
ದದ್ಯಾಚ್ಛ್ರಾದ್ಧಂ ಪ್ರವಸತೋ ನ ವಹೇಯುಃ ಪ್ರವಾಸಿನಃ ॥ ೩೭೪ ॥

ಜನಾಶ್ರದ್ಧೇಯಮಿತ್ಯೇತದವಗಮ್ಯ ತತೋ ವಚಃ ।
ಉಪೇಕ್ಷ್ಯ ಶ್ರೇಯಸೇ ವಾಕ್ಯಂ ರೋಚತಾಂ ಯನ್ಮಯೇರಿತಂ ॥ ೩೭೫ ॥

ನ ಹ್ಯಾಪ್ತವಾದಾ ನಭಸೋ ನಿಪತಂತಿ ಮಹಾಸುರಾಃ ।
ಯುಕ್ತಿಮದ್ವಚನಂ ಗ್ರಾಹ್ಯಂ ಮಯಾನ್ಯೈಶ್ಚ ಭವದ್ವಿಧೈಃ ॥ ೩೭೬ ॥

---

೩೭೨. ಅನೇಕ ಯಜ್ಞಗಳನ್ನು ಮಾಡಿ ಇಂದ್ರನು ದೇವನಾಗಿ ಭೋಗವನ್ನನುಭವಿಸುವನಾದರೆ ಬನ್ನಿ, ಕಡ್ಡಿ ಮುಂತಾದುವು ನಮಗಿಂತ ಉತ್ತಮವಾದುವಾದಂತಾಯಿತು, ಹುಲ್ಲು ತಿನ್ನುವ ಹಸುವೂ ಕೂಡ ನಮಗಿಂತ ಉತ್ತಮವಾಯಿತು ಇದು ಸರಿಯೇ ?

೩೭೩. ಯಜ್ಞದಲ್ಲಿ ಕೊಂದುಹಾಕಿದ ಪಶುವಿಗೆ ಸ್ವರ್ಗ ಬರುವುದಾದರೆ ಆ ಯಜಮಾನನು ತನ್ನ ತಂದೆಯನ್ನು ಕೊಂದು ಸ್ವರ್ಗಕ್ಕೇಕೆ ಕಳುಹಿಸಬಾರದು ?

೩೭೪. ಒಬ್ಬನು ಮಾಡಿದ ಶ್ರಾದ್ಧದ ಊಟದಿಂದ ಇನ್ನೊಬ್ಬನಿಗೆ ಹೊಟ್ಟೆ ತುಂಬುವುದಾದರೆ ಬೇರೇ ದೇಶಗಳಿಗೆ ಪ್ರಯಾಣಮಾಡುವವರು ತಿನ್ನುವುದಕ್ಕೇನನ್ನೂ ಹೊತ್ತುಕೊಂಡು ಹೋಗಬೇಕಾದುದೇ ಇಲ್ಲ.

೩೭೫. ಎಲೈ ಜನರೇ, ಇವೆಲ್ಲವೂ ನಂಬತಕ್ಕವುಗಳೇ ! ಇದನ್ನು ಯೋಚಿಸಿ ತಿರಸ್ಕರಿಸಿರಿ, ಅನಂತರ ನಾನು ಹೇಳುವುದರಲ್ಲಿ ಮನಸ್ಸನ್ನಿಡಿರಿ.

೩೭೬. ಎಲೈ ದಾನವರಿರಾ, ಆತ್ಮವಾದವು ಅಂತರಿಕ್ಷದಿಂದ ಬೀಳುವುದಿಲ್ಲ, ನಾನಾಗಲೀ ನೀವೇ ಆಗಲಿ ಯುಕ್ತಿಯಿಂದ ಕೂಡಿದ ಮಾತನ್ನು ಗ್ರಹಿಸಬೇಕು.

॥ ದಾನವಾ ಊಚುಃ ॥
ತತ್ತ್ವವಾದೇ ವಯಂ ಸರ್ವೇ ಪ್ರಪನ್ನಾಸ್ತವ ಭಕ್ತಿತಃ ।
ಕುರುಷ್ವಾನುಗ್ರಹಂ ಚಾದ್ಯ ಪ್ರಸನ್ನೋಽಸಿ ಯದಿ ಪ್ರಭೋ ॥ ३೭೭ ॥

ಸಂಭಾರಾನಾಹರಾಮೋಽದ್ಯ ದೀಕ್ಷಾಯೋಗ್ಯಾಂಶ್ಚ ಸರ್ವಶಃ ।
ಪ್ರಸಾದಾತ್ತವ ಯೇನಾಶು ಮೋಕ್ಷೋ ಹಸ್ತಗತೋ ಭವೇತ್ ।
ತತಸ್ತಾನಬ್ರವೀತ್ಸರ್ವಾನ್ಮಾಯಾಮೋಹೋಽಸುರೋತ್ತಮಾನ್ ॥ ३೭೮ ॥

॥ ರಕ್ತಾಂಬರ ಉವಾಚ ॥
ಪ್ರಪನ್ನಃ ಶಾಸನೇ ಹ್ಯೇಷ ಮದೀಯೋ ಗುರುರಗ್ರ್ಯಧೀಃ ।
ದೀಕ್ಷಯಿಷ್ಯತಿ ಯುಷ್ಮಾಕಂ ನಿರ್ದೇಶಾನ್ಮಮ ಸತ್ತಮಾಃ ॥ ३೭೯ ॥

ಏತಾನ್ದೀಕ್ಷಯ ಭೋ ಬ್ರಹ್ಮನ್ವಚನಾನ್ಮಮ ಪುತ್ರಕಾನ್ ।
ಸಂದಿಶ್ಯೈವಂ ಗತೋ ಮೋಹೋ ಗತಿಂ ಸ್ವಾಂ ಮನಸಃ ಪ್ರಿಯಾಂ ३೮೦ ॥

ಗತೇ ಮೋಹೇ ದಾನವಾಸ್ತೇ ಭಾರ್ಗವಂ ವಾಕ್ಯಮಬ್ರುವನ್ ॥ ३೮೧ ॥

---

३೭೭. ದಾನವರು ಹೇಳಿದರು :— ಎಲೈ ಪ್ರಭುವೇ, ತತ್ತ್ವವಾದವನ್ನು ಕೇಳಿ ನಾವೆಲ್ಲರೂ ನಿನ್ನ ಭಕ್ತರಾಗಿದ್ದೇವೆ. ನೀನು ಪ್ರಸನ್ನನಾಗಿದ್ದರೆ ನಮಗೆ ಅನುಗ್ರಹಿಸು.

३೭೮. ದೀಕ್ಷೆಗೆ ಯೋಗ್ಯವಾದ ಪದಾರ್ಥಗಳೆಲ್ಲವನ್ನೂ ಈಗಲೇ ತರುತ್ತೇವೆ. ನಿನ್ನ ಅನುಗ್ರಹದಿಂದಲೇ ಮೋಕ್ಷವು ನಮಗೆ ಸಿಕ್ಕಬೇಕು ಎಂದರು. ಆಗ ಆ ಮಾಯಾ ಮೋಹನು ದಾನವರನ್ನು ಕುರಿತು ಇಂತೆಂದನು.

३೭೯. ರಕ್ತಾಂಬರನು ಹೇಳಿದನು ;—ನಿನ್ನ ಗುರುವು ಈ ಶಾಸನದಲ್ಲಿ ನಿರತ ನಾಗಿದ್ದಾನೆ. ಅವನು ನನ್ನ ಅಪ್ಪಣೆಯಂತೆ ನಿಮ್ಮೆಲ್ಲರಿಗೂ ದೀಕ್ಷೆಯನ್ನು ಕೊಡುತ್ತಾನೆ.

३೮೦-३೮೧. ಎಲೈ ಬ್ರಾಹ್ಮಣನೇ, ಈ ನನ್ನ ಮಕ್ಕಳಿಗೆ ದೀಕ್ಷೆಯನ್ನು ಕೊಡು ಎಂದು ಹೇಳಿ ಮೋಹನು ತನ್ನ ಮನಸ್ಸು ಬಂದಂತೆ ಹೊರಟುಹೋದನು. ಮೋಹನು ಹೊರಟುಹೋಗಲು ದಾನವರು ಆ ವೇಷಧಾರಿ ಶುಕ್ರನಿಗಿಂತೆಂದರು.

॥ ದಾನವಾ ಊಚುಃ ॥

ದದ ದೀಕ್ಷಾಂ ಮಹಾಭಾಗ ಸರ್ವಸಂಸಾರಮೋಚನೀಂ ।
ತಥೇತ್ಯಾಹೋಶನಾ ದೈತ್ಯಾನ್ ಗಚ್ಛಾಮೋ ನರ್ಮದಾಮನು ॥ ೩೮೨ ॥

ಭೋ ಭೋಸ್ತ್ಯಜತ ವಾಸಾಂಸಿ ದೀಕ್ಷಾಂ ಕಾರಯಿತಾಸ್ಮಿ ವಃ ।
ಏವಂ ತೇ ದಾನವಾ ಭೀಷ್ಮ ಭೃಗುರೂಪೇಣ ಧೀಮತಾ ॥ ೩೮೩ ॥

ಆಂಗಿರಸೇನ ತೇ ತತ್ರ ಕೃತ್ವಾ ದಿಗ್ವಾಸಸೋಽಸುರಾಃ ।
ಬರ್ಹಿಪಿಚ್ಛಧ್ವಜಂ ತೇಷಾಂ ಗುಂಜಿಕಾಚಾರುಮಾಲಿಕಾಂ ॥ ೩೮೪ ॥

ದತ್ವಾ ಚಕಾರ ತೇಷಾಂ ತು ಶಿರಸೋ ಲುಂಚನಂ ಪುನಃ ।
ಕೇಶಾನಾಮುತ್ಪಾಟನಂ ಚ ಪರಮಂ ಧರ್ಮಸಾಧನಂ ॥ ೩೮೫ ॥

ಧನಾನಾಮೀಶ್ವರೋ ದೇವೋ ಧನದಃ ಕೇಶಲುಂಚನಾತ್ ।
ಸಿದ್ಧಿಂ ಪರಮಿಕಾಂ ಪ್ರಾಪ್ತಃ ಸದಾ ವೇಷಸ್ಯ ಧಾರಣಾತ್ ॥ ೩೮೬ ॥

---

೩೮೨. ದಾನವರು ಹೇಳಿದರು :—ಎಲೈ ಮಹಾನುಭಾವನೇ, ದೀಕ್ಷೆಯನ್ನು ನಮಗೆ ಕೊಡು ಎನ್ನಲು, ಅವನು ಹಾಗೇ ಆಗಲಿ, ನರ್ಮದಾನದಿಯ ದಡಕ್ಕೆ ಹೋಗೋಣವೆಂದನು.

೩೮೩. ಎಲೈ ದಾನವರಿರಾ! ನಿಮ್ಮ ಬಟ್ಟೆಗಳನ್ನೆಲ್ಲಾ ತೆಗೆದುಹಾಕಿರಿ. ನಿಮಗೆ ದೀಕ್ಷೆಯನ್ನು ಕೊಡುತ್ತೇನೆ ಎಂದನು. ಈ ರೀತಿ ಆ ಕೃತ್ರಿಮ ಶುಕ್ರನು ಅವರ ಬಟ್ಟೆಯನ್ನೆಲ್ಲಾ ತೆಗೆಸಿದನು

೩೮೪-೩೮೫. ನವಿಲುಗರಿಯ ಕಂತೆಯನ್ನು ಗುಲಗಂಜಿಯ ಮಾಲೆಯನ್ನೂ ಅವರಿಗೆ ಕೊಟ್ಟು ತಲೆಯ ಕೂದಲನ್ನೂ ಕೀಳಿಸಿದನು, ತಲೆಯ ಕೂದಲನ್ನು ಕೀಳುವುದು ಉತ್ತಮವಾದ ಧರ್ಮವು.

೩೮೬. ಹಣಕ್ಕೆ ಒಡೆಯನಾದ ಕುಬೇರನು ಈ ರೀತಿ ತಲೆಗೂದಲನ್ನು ಕೀಳಿಸಿಕೊಂಡುದರಿಂದಲೂ, ಈ ವೇಷವನ್ನು ಧರಿಸಿರುವುದರಿಂದಲೂ ಉತ್ತಮವಾದ ಸ್ಥಿತಿಯನ್ನು ಹೊಂದಿದನು.

ಮುನಿತ್ವಂ ಲಭ್ಯತೇ ಹ್ಯೇವಂ ಪುರಾ ಪ್ರಾಹಾರ್ಹತಃ ಸ್ವಯಂ ।
ವಾಲೋತ್ಪಾಟೇನ ದೇವತ್ವಂ ಮನುಷ್ಯೈರ್ಲಭ್ಯತೇ ತ್ವಿಹ ॥ ೩೮೭ ॥

ಕಿಂ ನ ಕುರ್ವಂತಿ ತತ್ತಸ್ಮಾನ್ಮಹಾಪುಣ್ಯಪ್ರದಂ ಯತಃ ।
ಮನೋರಥೋ ಹಿ ದೇವಾನಾಂ ಲೋಕೇ ವೈ ಮಾನುಷೇ ಕದಾ ॥ ೩೮೮ ॥

ಅಸ್ಮಿನ್ ವೈ ಭಾರತೇ ವರ್ಷೇ ಜನ್ಮ ವೈ ಶ್ರಾವಕೇ ಕುಲೇ ।
ತಪಸಾ ಯುಕ್ತಮಾತ್ಮಾನಂ ಕೇಶೋತ್ಪಾಟನಪೂರ್ವಕಂ ॥ ೩೮೯ ॥

ತೀರ್ಥಂಕರಾಶ್ಚತುರ್ವಿಂಶತ್ತಥಾ ತೈಸ್ತು ಪುರಸ್ಕೃತಂ ।
ಛಾಯಾಕೃತಂ ಫಣೀಂದ್ರೇಣ ಧ್ಯಾನಮಾತ್ರಪ್ರದೇಶಿಕಂ ॥ ೩೯೦ ॥

ಸ್ತುವಂತಂ ಮಂತ್ರವಾದೇನ ಸ್ವರ್ಗೋ ಹಸ್ತಗತೋ ಹಿ ಸಃ ।
ಮೋಕ್ಷೋ ವಾ ಭವಿತಾ ನೂನಂ ವಿಚಾರಾಂಶೋ ನ ಕಥ್ಯತೇ ॥ ೩೯೧ ॥

---

೩೮೭. ಹೀಗೆ ಮಾಡಿದರೆ ಮುನಿತ್ವವು ಬರುವುದೆಂದೂ, ಕೂದಲನ್ನು ಕೀಳಿಸಿ ಕೊಂಡರೆ ದೇವತೆಯಾಗುವನೆಂದೂ, ಅರ್ಹತನು ತಾನೇ ಹೇಳಿರುವನು.

೩೮೮. ಆದ್ದರಿಂದ ಬಹು ಪುಣ್ಯವನ್ನು ಕೊಡುವ ಧರ್ಮವನ್ನೇಕೆ ಕೊಡ ಬಾರದು, ಮನುಷ್ಯಲೋಕವಲ್ಲಿಯೇ ಇದ್ದುಕೊಂಡು ದೇವತೆಗಳ ಇಷ್ಟವನ್ನು ಹೊಂದಬಹುದು

೩೮೯. ಈ ಭಾರತವರ್ಷದಲ್ಲಿ ಶ್ರಾವಕನ ಕುಲದಲ್ಲಿ ಹುಟ್ಟಿ ಕೇಶಗಳನ್ನು ಕೀಳಿಸಿಕೊಂಡು ತಪಸ್ಸಿನಿಂದ ಕೂಡಿದವರನ್ನಾಗಿ ಮಾಡಿಕೊಳ್ಳಿರಿ.

೩೯೦. ಇಪ್ಪತ್ತನಾಲ್ಕು ಜನ ತೀರ್ಥಂಕರರುಗಳನ್ನು ಗೌರವಿಸುತ್ತಿರಬೇಕು. ಧ್ಯಾನಮಾಡುವ ಜಾಗವು ಆದಿಶೇಷನಿಂದ ನೆರಳು ಮಾಡಲ್ಪಡುತ್ತವೆ. ಅಲ್ಲವೇ ಧ್ಯಾನ ಮಾಡುವ ಜಾಗವು ಹಾವಿನಂತಿರಬೇಕು.

೩೯೧. ಈರಿತಿ ಇದ್ದು ಮಂತ್ರವಾದದಿಂದ ಸೋತ್ರಮಾಡುತ್ತಿದ್ದರೆ ಸ್ವರ್ಗವು ಅಂಗೈಯ್ಯಲ್ಲಿಯೇ ಇರುವುದು, ಅಥವಾ ಮೋಕ್ಷವನ್ನಾದರೂ, ಹೊಂದಬಹುದು ಈ ವಿಷಯದಲ್ಲಿ ಚರ್ಚೆಯೇ ಬೇಕಿಲ್ಲ.

ಕದಾ ವಾ ಋಷಯೋ ಭೂತ್ವಾ ಸೂರ್ಯಾಗ್ನಿ ಸಾಧನೇ ತಪಃ ।
ಜಪ್ತ್ವಾ ವಿರಾಗಿಣಶ್ಚೈವ ಮನುಪಂಚಾಂಗಕಂ ತಥಾ ॥ ೩೯೨ ॥

ತಥಾ ತಪಸ್ಯತಾಂ ಮೃತ್ಯುಂ ಗತಾನಾಂ ಕಾಲಪರ್ಯಯಾತ್ ।
ಪಾಷಾಣೇನ ಶಿರೋ ಭಗ್ನಂ ಭವತೇ ಪುಣ್ಯಕರ್ಮಣಾಂ ॥ ೩೯೩ ॥

ದಧಿಮಿಷ್ಟಾನ್ನಭಕ್ತೇಷು ಪಶ್ಚಾದ್ವೈ ರೋಪಣಂ ಕೃತಂ ।
ಅರಣ್ಯೇ ನಿರ್ಜನೇ ನ್ಯಾಸಃ ಕದಾ ವೈ ಭವಿತಾ ಹಿ ನಃ ॥ ೩೯೪ ॥

ಕರ್ಣಜಾಪ್ಯಂ ಶ್ರಾವಕಾಶ್ಚ ಕರಿಷ್ಯಂತಿ ಸಮಾಹಿತಾಃ ।
ಭೋ ಭೋ ಋಷೇ ನ ಗಂತವ್ಯಂ ಯಥ್ವಾಹ್ವಯಂತಿ ತೇ ಸುರಾಃ ॥

ವಿಘ್ನಂ ಕರ್ತುಂ ಹಿ ತೇ ನುತ್ವಾ ತ್ಯಾಜ್ಯಾಃ ಸರ್ವೇ ದಿವೌಕಸಃ ।
ಕ್ಷಣವಿಧ್ವಂಸಿನೋ ರೌದ್ರಾ ಮಾಯಾವಂತೋ ದುರಾಸದಾಃ ॥ ೩೯೬ ॥

---

೩೯೨. ಋಷಿಗಳಾಗಿ ಸೂರ್ಯ, ಅಗ್ನಿಗಳನ್ನೇ ಸಾಧನವನ್ನಾಗಿಟ್ಟುಕೊಂಡು ಮಂತ್ರಗಳನ್ನು ಜಪಿಸಿ ವೈರಾಗ್ಯವನ್ನು ಹೊಂದಿ ಪಂಚಾಂಗ ಮಂತ್ರವನ್ನು ಯಾವಾಗ ತಾನೇ ಜಪಿಸುವೆವು ?

೩೯೩. ಆರೀತಿ ತಪಸ್ಸುಮಾಡುತ್ತ ಕಾಲವನ್ನು ಕಳೆದು ಮೃತ್ಯುವನ್ನು ಹೊಂದುವೆವು. ಅದಿಲ್ಲದಿದ್ದರೆ ಪುಣ್ಯ ಕರ್ಮಿಗಳಾದ ನಮಗೆ ಪಾಷಾಣದಿಂದ ಯಾವಾಗ ತಾನೇ ತಲೆಯೊಡದೀತು ?

೩೯೪. ಮೊಸರು ಮುಂತಾದ ಮಿಷ್ಟಾನ್ನಗಳಲ್ಲಿ ಆಸೆಯುಳ್ಳವರು, ಅನಂತರ ಕೇಶಲುಂಛನೆಯನ್ನು ಮಾಡಿಸಿಕೊಳ್ಳಬೇಕು, ನಿರ್ಜನವಾಗಿರುವ ಅರಣ್ಯದಲ್ಲಿ ಯಾವಾಗ ತಾನೇ ಇರುವೆವು ?

೩೯೫. ಆಗ ಶ್ರಾವಕರು ಎಲ್ಲಿ ನೋಡಿದರೂ ಮಂತ್ರಗಳನ್ನು ಕಿವಿಯಲ್ಲಿ ಕೇಳುತ್ತಿರುವರು, ಎಲೈ ಋಷಿಯೇ, ಹೋಗಬೇಡ ಹೋಗಬೇಡ ಎಂದು ದೇವತೆಗಳು ಕರೆಯುವರು.

೩೯೬-೩೯೭. ಆಗ ಎಲ್ಲಾ ದೇವತೆಗಳೂ ನಿನಗೆ ವಿಘ್ನವನ್ನು ಮಾಡಲು ಬರುವರು. ಅವರನ್ನು ಬಿಟ್ಟುಬಿಡು. ಕ್ಷಣಕಾಲದಲ್ಲಿ, ನಾಶವಾಗುವ ಮಾಯಾವಿಗಳಾದ ರುದ್ರನ ಸಂಬಂಧಿ ಭೂತಗಳು, ನಿನ್ನನ್ನು ಕರೆದರೂ ಹೋಗಬಾರದು. ವಿಘ್ನ

ಯದಿ ತ್ವಾಮಾಹ್ವಯೇದ್ಬ್ರಹ್ಮಾ ವಿಷ್ಣುರ್ವಾಪಿ ಮಹೇಶ್ವರಃ ।
ವರುಣಃ ಪಾವಕೋ ವಾಽಪಿ ನ ಗಂತವ್ಯಂ ತಥಾ ತ್ವಯಾ ೩೯೭ ॥

ಸ್ವರ್ಗಸ್ಯಾರ್ಧಂ ಬಹಿಃಸ್ಥಾಸಮರ್ಹತಾನಾಂ ಪ್ರತಿಷ್ಠಿತಂ ।
ತತ್ರ ತ್ವಯಾ ಚ ಗಂತವ್ಯಂ ಮೋಕ್ಷಭಾಗೀ ಯತೋ ಭವಾನ್ ॥ ೩೯೮ ॥

ಲಘೂನೀಮಾನಿ ಸ್ಥಾನಾನಿ ಭೂಯೋಽಪ್ಯುತ್ಪತ್ತಿಕರಾಣಿ ಚ ।
ತ್ಯಾಜ್ಯಾನಿ ತೇನ ಚೈತಾನಿ ಸತ್ಯಮೇವಂ ವಚೋ ಹಿ ನಃ ॥ ೩೯೯ ॥

ಅಸ್ಮದೀಯೇನ ತಪಸಾ ನಿಯಮೈರ್ವಿವಿಧೈಸ್ತಥಾ ।
ವ್ರಜ ತ್ವಂ ಚೋತ್ತಮಂ ಸ್ಥಾನಂ ಮೋಕ್ಷಮಾರ್ಗಂ ಚ ಯೇ ಬುಧಾಃ ॥

ವಿಂದಂತಿ ಭಕ್ತಿಭಾವೇನ ತಪೋಯುಕ್ತಾಸ್ತಪಸ್ವಿನಃ ।
ಅಕ್ಷೇಷು ನಿಗ್ರಹೋ ಯತ್ರ ದಯಾ ಭೂತೇಷು ಸರ್ವದಾ ॥ ೪೦೦ ॥

---

ವನ್ನು ಮಾಡುತ್ತವೆ. ವಿಷ್ಣು, ಬ್ರಹ್ಮ, ಮಹೇಶ್ವರ, ವರುಣ, ಪಾವಕ, ಯಾರು ಕರೆದರೂ ನೀನು ಹೋಗಬಾರದು.

೩೯೮. ಸ್ವರ್ಗದಲ್ಲಿ ಅರ್ಹತರಿಗೆ ಹೊರಗಿನ ಅರ್ಧಭಾಗವು ಬಿಡಲ್ಪಟ್ಟಿದೆ. ಅಲ್ಲಿಗೆ ನೀನು ಹೋಗಬೇಕು, ನೀನು ಮೋಕ್ಷಭಾಗಿಯಾಗಿರುತ್ತೀಯೇ.

೩೯೯. ಈ ಸ್ವರ್ಗ ಮುಂತಾದ ಸ್ಥಾನಗಳು ಅಲ್ಪವಾದವು. ಮತ್ತೆ ಜನ್ಮವನ್ನು ಕೊಡತಕ್ಕವು. ಆದ್ದರಿಂದ ಅದನ್ನು ಬಿಟ್ಟುಬಿಡಿ. ನನ್ನ ಮಾತು ಸತ್ಯವಾದುದು.

೪೦೦. ನಮ್ಮ ಮತದ ತಪಸ್ಸಿನಿಂದಲೂ, ಅನೇಕ ಬಗೆಯಾದ ನಿಯಮಗಳಿಂದಲೂ ಉತ್ತಮಸ್ಥಾನವಾದ ಮೋಕ್ಷಮಾರ್ಗವನ್ನು ಹೊಂದು. ಅದೇ ಉತ್ತಮವಾದುದು.

೪೦೧-೪೦೨. ತಪಸ್ಸಿನಿಂದ ಸಾಧಿಸಿದ ತಪಸ್ವಿಗಳು ಭಕ್ತಿಯಿಂದ ಈ ಧರ್ಮವನ್ನು ಉತ್ತಮವವನ್ನಾಗಿ ತಿಳಿಯುತ್ತಾರೆ. ಇಂದ್ರಿಯ ನಿಗ್ರಹ, ಸದಾ ಕಾಲದಲ್ಲಿಯೂ,

ತತ್ತ್ವಪೋ ಧರ್ಮಮಿತ್ಯುಕ್ತಂ ಸರ್ವಾ ಚಾನ್ಯಾ ವಿಡಂಬನಾ ।
ಜ್ಞಾತ್ವೈತದ್ಭವತಾ ಸಾಧೋ ಗಂತವ್ಯಂ ಪರಮಂ ಪದಂ　　॥ ೪೦೨॥

ಯಾಂ ವೈ ತೀರ್ಥಕರಾ ಯಾತಾ ಯಾಂ ಗತಿಂ ಯೋಗಿನೋ ಗತಾಃ ।
ಏವಂ ವೈ ದೇವತಾಃ ಪೂರ್ವಂ ವಿದ್ಯಾಧರಮಹೋರಗಾಃ　　॥ ೪೦೩ ॥

ಮನೋರಥಾಭಿಲಾಷಾಸ್ತೇ ಚಿಂತಯಂತೋ ದಿವಾನಿಶಂ ।
ಯದ್ಯೇಷ ಭಾವೋ ಯುಷ್ಮಾಕಂ ಸಂಸಾರೇ ವಿರತಿಃ ಕೃತಾ　　॥ ೪೦೪ ॥

ಪರಿತ್ಯಜಧ್ವಂ ದಾರಾನ್ವೈ ಸ್ವರ್ಗಮಾರ್ಗಾರ್ಗಲಾನಪಿ ।
ಯತ್ರಾಸೌ ತೇ ಪಿತಾ ಜಾತಸ್ತಾಂ ಯೋನಿಂ ಸೇವಸೇ ಕಥಂ　　॥ ೪೦೫ ॥

ಆತ್ಮಮಾಂಸೋಪಮಂ ಮಾಂಸಂ ಕಥಂ ಖಾದಂತಿ ಮಾನವಾಃ ।
ತತಸ್ತೇ ದಾನವಾ ಭೀಷ್ಮ ಊಚುಃ ಸರ್ವೇ ಗುರುಂ ವಚಃ　　೪೦೬ ॥

॥ ದಾನವಾ ಊಚುಃ ॥

ದೀಕ್ಷಸ್ವ ನೋ ಮಹಾಭಾಗ ಭ್ರೂಣಕಾನಗ್ರತಃ ಸ್ಥಿತಾ ।

---

ಎಲ್ಲಾ ಪ್ರಾಣಿಗಳಲ್ಲಿಯೂ ದಯೆ ಇವೇ ತಪಸ್ಸು, ಧರ್ಮವು. ಮಿಕ್ಕವೆಲ್ಲವೂ ವಿಡಂಬನೆಯೇ. ಎಲೈ ಸಾಧುವೇ, ಇದನ್ನು ತಿಳಿದು ಪರಮಪದವನ್ನು ಹೊಂದು.

೪೦೩-೪೦೪. ತೀರ್ಥಕರರೂ ಮತ್ತು ಯೋಗಿಗಳು ಹೊಂದಿದ ಗತಿಯನ್ನು ಹೊಂದಿರಿ. ಪೂರ್ವದಲ್ಲಿ ವಿದ್ಯಾಧರರೂ, ಮಹೋರಗರೂ, ದೇವತೆಗಳೂ, ಹಗಲೂ, ರಾತ್ರಿಯೂ, ಧ್ಯಾನಿಸುತ್ತ, ಮನೋರಥವನ್ನು ಹೊಂದಿದರು. ಈರೀತಿ ಭಾವವು ನಿಮ್ಮ ಲ್ಲಿದೆ, ಸಂಸಾರದಲ್ಲಿ ವೈರಾಗ್ಯ ಬಂದಂತಾಯಿತು.

೪೦೫. ಸ್ವರ್ಗಮಾರ್ಗಕ್ಕೆ ಅಡ್ಡಿಯನ್ನು ತರುವ ಹೆಂಡಿರನ್ನು ಬಿಟ್ಟುಬಿಡಿರಿ. ನಿಮ್ಮ ತಂದೆಯು ಹುಟ್ಟಿದ ಆ ಯೋನಿಯನ್ನು, ಹೇಗೆ ತಾನೇ ಸೇವಿಸುತ್ತೀಯೆ ?

೪೦೬. ನಿಮ್ಮ ದೇಹದ ಮಾಂಸದಂತಿರುವ ಮಾಂಸವನ್ನು ಹೇಗೆ ತಾನೇ ತಿನ್ನುವಿರಿ, ಎಂದನು. ಎಲೈ ಭೀಷ್ಮನೇ. ಆ ದಾನವರು, ಇದನ್ನು ಕೇಳಿ ಅನಂತರ ಗುರುವಿಗೆ ಇಂತೆಂದರು.

೪೦೭. ದಾನವರು ಹೇಳಿದರು :—ಎಲೈ ಗುರುವೇ, ನಿನ್ನ ಮುಂದೆ ನಿಂತಿರುವ

ತಥಾ ಕ್ಷತ್ವೋಶನಾ ಚಾಪ ಸಮೇತಾನ್ಸ ಪುರೋಹಿತಃ ॥ ೪೦೭ ॥

ಪ್ರಣಾಮೋ ನಾನ್ಯದೇವೇಷು ಕರ್ತವ್ಯೋ ವಃ ಕದಾಚನ ।
ಏಕಸ್ಯ ವೈ ಸದಾ ಭಕ್ತಂ ಭೋಕ್ತವ್ಯಂ ಕರಸಂಪುಟೇ ॥ ೪೦೮ ॥

ತತ್ರ ಪೇಯಂ ಸ್ಥಿತೈಸ್ತೋಯಂ ಕೇಶಕೀಟವಿವರ್ಜಿತಂ ।
ತುಲ್ಯಂ ಪ್ರಿಯಾಪ್ರಿಯಂ ಕಾರ್ಯಂ ನಾನ್ಯದೃಷ್ಟಿಹಿತಂ ಕ್ವಚಿತ್ ॥ ೪೦೯ ॥

ಭೋಕ್ತವ್ಯಮೇತೇನ ವಿಭೋ ಆಚಾರೇಣ ತಥಾ ಕುರು ।
ಭವಧ್ವಂ ಸಹಿತಾ ಯೂಯಂ ತೇನ ವೋ ಮೋಕ್ಷಭಾಗಿತಾ ।
ಏವಂ ದತ್ವಾ ಚ ನಿಯಮಾನ್ಕೃತ್ವಾ ತಾನ್ದನುಪುಂಗವಾನ್ ॥ ೪೧೦ ॥

ಜಗಾಮ ಧಿಷಣೋ ರಾಜನ್ದೇವಲೋಕಂ ದಿವೌಕಸಾಂ ।
ಆಚಚಕ್ಷೇ ಸ ತತ್ಸರ್ವಂ ದಾನವಾನಾಂ ಚ ಕಾರಿತಂ ॥ ೪೧೧ ॥

ತತಸ್ತೇ ಚ ಸುರಾ ಜಗ್ಮುರ್ನರ್ಮದಾಮಭಿತೋ ನದೀಂ ।
ದೃಷ್ಟ್ವಾ ತಾನ್ದಾನವಾಂಸ್ತತ್ರ ಪ್ರಹ್ಲಾದೇನ ವಿನಾ ಕೃತಾನ್ ।
ದೇವರಾಜಸ್ತದಾ ಹೃಷ್ಟೋ ನಮುಚಿಂ ಪ್ರಾಹ ವೈ ವಚಃ ॥ ೪೧೨ ॥

---

ಈ ಮುಕ್ಕಳಾದ ನಮಗೆ ದೀಕ್ಷೆಯನ್ನು ಕೊಡು ಎನ್ನಲು, ಗುರುವು ಹಾಗೇ ಮಾಡಿ ಅವರೆಲ್ಲರಿಗೂ ಇಂತೆಂದನು.

೪೦೮. ನೀವು ಬೇರೆಯ ದೇವರಿಗೆ ಯಾವಾಗಲೂ ನಮಸ್ಕರಿಸಬೇಡಿರಿ. ಒಂದೇ ಜಾಗವಲ್ಲಿ ಬೊಗಸೆಯಲ್ಲಿ, ಯಾವಾಗಲೂ ಅನ್ನವನ್ನು ತಿನ್ನಬೇಕು.

೪೦೯. ನೀರು ಇರುವ ಜಾಗವಲ್ಲೇ ಕೂದಲು ಹುಳುಗಳಿಲ್ಲದಿರುವುದನ್ನು ಕುಡಿಯಬೇಕು, ಇತರರಿಗೆ ಪ್ರಿಯ, ಅಪ್ರಿಯಗಳು, ನನಗೆ ಪ್ರಿಯಾಪ್ರಿಯಗಳು, ಇವುಗಳಲ್ಲಿ ಒಂದೇ ರೀತಿಯಾಗಿರಬೇಕು, ಇನ್ನೊಬ್ಬರು ನೋಡುತ್ತಿರುವಂತೆ ಊಟಮಾಡಬಾರದು, ಈ ಆಚಾರಗಳನ್ನು ಅನುಸರಿಸಿರಿ, ನೀವೆಲ್ಲರೂ ಗುಂಪಾಗಿ ಸೇರಿಕೊಂಡೇ ಇರಿ.

೪೧೦-೪೧೧. ಈ ರೀತಿ ಅವರಿಗೆ ನಿಯಮಗಳನ್ನು ಹೇಳಿ, ಬೃಹಸ್ಪತಿಯು ದೇವತೆಗಳಿರುವ ದೇವಲೋಕಕ್ಕೆ ಹೋಗಿ ದಾನವರಿಗೆ ತಾನು ಮಾಡಿದುದನ್ನೆಲ್ಲಾ ಹೇಳಿದನು.

೪೧೨. ಅನಂತರ ದೇವತೆಗಳು ನರ್ಮದೆಯ ಹತ್ತಿರ ಹೋಗಿ, ಪ್ರಹ್ಲಾದನಿಂದ ಬಿಡಲ್ಪಟ್ಟ ದಾನವರನ್ನು ನೋಡಿದರು. ಆಗ ಇಂದ್ರನು ಸಂತುಷ್ಟನಾಗಿ ನಮುಚಿಯನ್ನು ಕುರಿತು ಇಂತೆಂದನು.

ಹಿರಣ್ಯಾಕ್ಷಂ ಯಜ್ಞಹನಂ ಧರ್ಮಘ್ನಂ ವೇದನಿಂದಕಂ ।
ರಾಕ್ಷಸಂ ಕ್ರೂರಕರ್ಮಾಣಂ ಪ್ರಘಸಂ ವಿಘಸಂ ತಥಾ ॥ ೪೧೩ ॥

ನಮುಚಿಂ ಚ ತಥಾ ಬಾಣಂ ವೈರೋಚನಮಥಾಪಿ ಚ ।
ಮಹಿಷಾಖ್ಯಂ ತಥಾ ರೌದ್ರಂ ಚಂಡಂ ಪ್ರಚಂಡಕಂ ತಥಾ ॥ ೪೧೪ ॥

ರೋಚಮಾನಂ ತಥಾತ್ಯುಗ್ರಂ ಸುಖದಂ ದಾನವೋತ್ತಮಂ ।
ಏತಾನ್ ದೃಷ್ಟ್ವಾ ತಥಾ ಚಾನ್ಯಾನ್ ದಾನವೇಂದ್ರಾನಥಾಬ್ರವೀತ್ ॥ ೪೧೫ ॥

॥ ಇಂದ್ರ ಉವಾಚ ॥

ದಾನವೇಂದ್ರಾಃ ಪುರಾ ಭೂತಾಃ ಕೃತರಾಜ್ಯಾಸ್ತ್ರಿವಿಷ್ಟಪೇ ।
ಇದಾನೀಂ ಕಥಮೇವೇದಂ ವ್ರತಂ ವೇದಾನಲೋಪಕಂ ॥ ೪೧೬ ॥

ಭವದ್ಭಿಃ ಕರ್ತುಮಾರಬ್ಧಂ ನಗ್ನಮುಂಡಿಕಮಂಡಲು ।
ಮಯೂರಧ್ವಜಧಾರಿತ್ವಂ ಕಥಂ ಚೈವೇಹ ತಿಷ್ಠಥ ॥ ೪೧೭ ॥

॥ ದಾನವಾ ಊಚುಃ ॥

ತ್ಯಕ್ತ್ವಾ ಸರ್ವಾಸುರಭಾವಾ ಋಷಿಧರ್ಮೇ ವ್ಯವಸ್ಥಿತಾಃ ।
ಧರ್ಮವೃದ್ಧಿಕರಂ ಸರ್ವಂ ವದಾಮಃ ಸರ್ವಜಂತುಷು ॥ ೪೧೮ ॥

---

೪೧೩-೪೧೫. ಯಜ್ಞವನ್ನು ನಾಶಮಾಡುವ, ಧರ್ಮಕಂಟಕನಾದ ವೇದ ನಿಂದಕನಾದ, ಹಿರಣ್ಯಾಕ್ಷನನ್ನೂ, ಕ್ರೂರಕರ್ಮಿಗಳಾದ ಪ್ರಘಸವಿಘಸರನ್ನೂ, ನಮುಚಿ, ಬಾಣ, ವೈರೋಚನಿಗಳನ್ನೂ, ಕ್ರೂರನಾದ ಮಹಿಷನನ್ನೂ, ಚಂಡ, ಪ್ರಚಂಡರನ್ನೂ, ದಾನವಶ್ರೇಷ್ಠನಾದ ರೋಚಮಾನನ್ನೂ, ಇನ್ನೂ ಅನೇಕ ದಾನವ ರನ್ನೂ, ನೋಡಿ ದೇವರಾಜನಾದ ಇಂದ್ರನು ಇಂತೆಂದನು.

೪೧೬-೪೧೭. ಇಂದ್ರನು ಹೇಳಿದನು:—ಅಯ್ಯಾ, ನೀವೆಲ್ಲರೂ ಮೊದಲು ದಾನವೇಂದ್ರರಾಗಿ ಸ್ವರ್ಗದಲ್ಲಿ ರಾಜ್ಯಭಾರಮಾಡಿ, ಈಗ ವೇದಬಾಹ್ಯವಾದ ವ್ರತವನ್ನು ನೀವು ಹೇಗೆ ಆರಂಭಿಸಿದಿರಿ? ಈ ಬೆತ್ತಲೇ ಇರುವುದೇನು? ಬೋಳುತನವೇನು? ಕಮಂಡಲವೇಕೆ? ನವಿಲುಗರಿಯೇಕೆ? ಇಲ್ಲೇಕಿದ್ದೀರಿ?

೪೧೮. ದಾನವರು ಹೇಳಿದರು:—ನಾವುಗಳು ಅಸುರಭಾವವನ್ನು ಬಿಟ್ಟು ಋಷಿ ಧರ್ಮದಲ್ಲಿದ್ದೇವೆ. ನಾವು ಯಾವಾಗಲೂ ಪ್ರಾಣಿಗಳಿಗೆ ಧರ್ಮ ವೃದ್ಧಿಕರವಾದ ವಿಷಯವನ್ನೇ ಹೇಳುತ್ತೇವೆ.

ತ್ರೈಲೋಕ್ಯರಾಜ್ಯಮಖಿಲಂ ಭುಂಕ್ಷ್ವ ಶಕ್ರ ವ್ರಜಸ್ವ ಚ ।
ತಥೇತಿ ಚೋಕ್ತ್ವಾ ಮಘವಾ ಪುನರ್ಯಾತಸ್ತ್ರಿವಿಷ್ಟಪಂ ॥ ೪೧೯ ॥

ಏವಂ ತೇ ಮೋಹಿತಾಃ ಸರ್ವೇ ಭೀಷ್ಮ ದೇವಪುರೋಧಸಾ ।
ನರ್ಮದಾಸರಿತಂ ಪ್ರಾಪ್ಯ ಸ್ಥಿತಾ ದಾನವಸತ್ತಮಾಃ ॥ ೪೨೦ ॥

ಜ್ಞಾತ್ವಾ ಶುಕ್ರೇಣ ತೇ ಸರ್ವೇ ವ್ರತಾತ್ಸಮನುಬೋಧಿತಾಃ ।
ತತ್ರ ತ್ರೈಲೋಕ್ಯಹರಣೇ ಚಕ್ರುಃ ಕ್ರೂರಾಂ ಪುನರ್ಮತಿಂ ॥ ೪೨೧ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ
ತ್ರಯೋದಶೋಽಧ್ಯಾಯಃ.

---

೪೧೯. ಎಲೈ ಇಂದ್ರನೇ, ಮೂರು ಲೋಕದ ರಾಜ್ಯವನ್ನೆಲ್ಲಾ ನೀನೇ ಸುಖವಾಗಿ ಅನುಭವಿಸು ಹೋಗು ಎಂದರು. ಇಂದ್ರನು ಹಾಗೇ ಆಗಲೆಂದು ಮತ್ತೆ ಸ್ವರ್ಗಕ್ಕೆ ಹೋದನು.

೪೨೦. ಈರೀತಿ ಆ ಬೃಹಸ್ಪತಿಯು ಅವರೆಲ್ಲರನ್ನೂ ಮೋಹಿಸುವಂತೆ ವಂಚಿಸಿದನು. ಅವರೆಲ್ಲರೂ ನರ್ಮದಾತೀರಕ್ಕೆ ಬಂದು ನಿಂತರು.

೪೨೧. ಇದನ್ನು ಶುಕ್ರಾಚಾರ್ಯನು ತಿಳಿದು ಅವರೆಲ್ಲರಿಗೂ ಹೇಳಿ ಆ ವ್ರತದಿಂದ ಪಾರುಮಾಡಿದನು, ಅನಂತರ ಮೂರುಲೋಗಳನ್ನು ಅಪಹರಿಸುವುದರಲ್ಲಿ ಅವರೆಲ್ಲರೂ ಮತ್ತೆ ಪ್ರಯತ್ನಪಡಲು ಬುದ್ಧಿಯನ್ನು ಹೊಂದಿದರು.

ಇಲ್ಲಿಗೆ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ಹದಿಮೂರನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಚತುರ್ದಶೋಽಧ್ಯಾಯಃ

---

॥ ಭೀಷ್ಮ ಉವಾಚ ॥

ಕಥಂ ತ್ರಿಪುರುಷಾಜ್ಜಾತೋ ಹ್ಯರ್ಜುನಃ ಪರವೀರಹಾ ।
ಕಥಂ ಕರ್ಣಸ್ತು ಕಾನೀನಃ ಸೂತಜಃ ಪರಿಕೀರ್ತ್ಯತೇ ॥ ೧ ॥

ವೈರಂ ತಯೋಃ ಕಥಂಭೂತಂ ನಿಸರ್ಗಾದೇವ ತದ್ವದ ।
ಬೃಹತ್ಕೌತೂಹಲಂ ಮಹ್ಯಂ ತದ್ಭವಾನ್ವಕ್ತುಮರ್ಹತಿ ॥ ೨ ॥

॥ ಪುಲಸ್ತ್ಯ ಉವಾಚ ॥

ಭಿನ್ನೇ ವಕ್ತ್ರೇ ಪುರಾ ಬ್ರಹ್ಮಾ ಕ್ರೋಧೇನ ಮಹತಾ ವೃತಃ ।
ಲಲಾಟೇ ಸ್ವೇದಮುತ್ಪನ್ನಂ ಗೃಹೀತ್ವಾತಾಡಯದ್ಭುವಿ ॥ ೩ ॥

---

## ಹದಿನಾಲ್ಕನೆಯ ಅಧ್ಯಾಯವು.

೧-೨. ಭೀಷ್ಮನು ಹೇಳಿದನು :—ಶೂರನಾದ ಅರ್ಜುನನು ಮೂವರಿಂದ ಹುಟ್ಟಿದುದು ಹೇಗೆ ? ಕನ್ಯೆಯಲ್ಲಿ ಉತ್ಪನ್ನನಾದ ಕರ್ಣನನ್ನು ಸೂತನೆಂದು ಕರೆಯಲು ಕಾರಣವೇನು ? ಇದರಲ್ಲಿ ಬಹು ಕುತೂಹಲವುಂಟಾಗಿದೆ, ಅದನ್ನು ನೀನು ನನಗೆ ಹೇಳು.

೩. ಪುಲಸ್ತ್ಯನು ಹೇಳಿದನು :—ಪೂರ್ವದಲ್ಲಿ ಶಿವನಿಗೂ, ಬ್ರಹ್ಮನಿಗೂ, ಮನಸ್ತಾಪವುಂಟಾಗಿ ಶಿವನು ಬ್ರಹ್ಮನ ತಲೆಯನ್ನು ಕತ್ತರಿಸಲು ಬ್ರಹ್ಮನಿಗೆ ಬಹು ಕೋಪ ಬಂದು, ಮೈಬೆವರಿತು. ಆಗ ಮುಖದ ಬೆವರಿನ ನೀರನ್ನು ಕೈಯಿಂದ ಸವರಿ ತೆಗೆದುಕೊಂಡು ಭೂಮಿಗೆ ಬಡಿದನು.

ಸ್ವೇದಾತ್ಸ ಪುರುಷೋ ಜಜ್ಞೇ ಸಧನುಃ ಸಮಹೇಷುಧಿಃ ।
ಸಹಸ್ರಕವಚೀ ಧೀರಃ ಕಿಂ ಕರೋಮೀತ್ಯುವಾಚ ಹ ॥ ೪ ॥

ತಮುವಾಚ ವಿರಿಂಚೋಽಥ ಜಯ ತ್ವಂ ರುದ್ರಮೋಜಸಾ ।
ಹನ್ಯತಾಮೇಷ ದುರ್ಬುದ್ಧಿರ್ಜಾಯತೇ ನ ಯಥಾ ಪುನಃ ॥ ೫ ॥

ಬ್ರಹ್ಮಣೋಕ್ತಂ ವಚಃ ಶ್ರುತ್ವಾ ಧನುರುದ್ಯಮ್ಯ ಪೃಷ್ಠತಃ ।
ಸಂಪ್ರತಸ್ಥೇ ಮಹೇಶಸ್ಯ ಬಾಣಹಸ್ತೋಽತಿರೌದ್ರದೃಕ್ ॥ ೬ ॥

ದೃಷ್ಟ್ವಾ ಪುರುಷಮತ್ಯುಗ್ರಂ ಭೀತಸ್ತಸ್ಯ ತ್ರಿಲೋಚನಃ ।
ಅಪಕ್ರಾಂತಸ್ತತೋ ವೇಗಾದ್ವಿಷ್ಣೋರಾಶ್ರಮಮಭ್ಯಗಾತ್ ॥ ೭ ॥

ತ್ರಾಹಿ ತ್ರಾಹೀತಿ ಮಾಂ ವಿಷ್ಣೋ ನರಾದಸ್ಮಾಚ್ಚ ಶತ್ರುಹನ್ ।
ಬ್ರಹ್ಮಣಾ ನಿರ್ಮಿತಃ ಪಾಪೋ ಮ್ಲೇಚ್ಛರೂಪೋ ಭಯಾನಕಃ ॥ ೮ ॥

---

೪. ಆಗ ಆ ಬೆವರಿನಿಂದ ಧನುಸ್ಸು, ಬತ್ತಳಿಕೆಗಳನ್ನು ಧರಿಸಿ, ಸಹಸ್ರ ಕವಚಗಳನ್ನು ತೊಟ್ಟಿರುವ ಒಬ್ಬ ಧೀರನು ಹುಟ್ಟಿ ಏನು ಮಾಡಲಿ ಎಂದು ಕೇಳಿದನು.

೫. ಅವನನ್ನು ಕುರಿತು, ಬ್ರಹ್ಮನು ರುದ್ರನನ್ನು ಬೇಗ ಜಯಿಸು, ಈ ರುದ್ರನು ಮತ್ತೆ ಹುಟ್ಟದಂತೆ ಕೊಂದುಹಾಕು ಎಂದನು.

೬. ಆತನು ಬ್ರಹ್ಮನು ಹೇಳಿದ ಮಾತನ್ನು ಕೇಳಿ, ಧನಸ್ಸನ್ನು ತೆಗೆದುಕೊಂಡು, ಬಾಣವನ್ನು ಹೂಡಿಕೊಂಡು, ರೌದ್ರವಾದ ಕಣ್ಣುಗಳನ್ನು ಧರಿಸಿ ಆ ರುದ್ರನ ಹಿಂದೆಹೋದನು.

೭. ಆ ಉಗ್ರಪುರುಷನನ್ನು ನೋಡಿ ತ್ರಿಲೋಚನನು ಭಯಪಟ್ಟು ಹಿಂತಿರುಗಿ ಓಡುತ್ತ ವಿಷ್ಣುವಿನ ಆಶ್ರಮಕ್ಕೆ ಹೋದನು.

೮. ಎಲೈ ಶತ್ರುಸಂಹಾರಕನಾದ ವಿಷ್ಣುವೇ, ಈ ಮನುಷ್ಯನ ದೆಸೆಯಿಂದ ನನ್ನನ್ನು ಕಾಪಾಡು, ಕಾಪಾಡು, ಮ್ಲೇಛರೂಪಿಯೂ, ಭಯವನ್ನುಂಟುಮಾಡುವನೂ ಆದ ಇವನನ್ನು ಬ್ರಹ್ಮನು ನಿರ್ಮಿಸಿದನು.

ಯಥಾ ಮಾಂ ನ ಹನೇತ್ಕ್ರುದ್ಧಸ್ತಥಾ ಕುರು ಜಗತ್ಪತೇ ।
ಹುಂಕಾರಧ್ವನಿನಾ ವಿಷ್ಣುರ್ಮೋಹಯಿತ್ವಾ ತು ತಂ ನರಂ ॥ ೯ ॥

ಅದೃಶ್ಯಃ ಸರ್ವಭೂತಾನಾಂ ಯೋಗಾತ್ಮಾ ವಿಶ್ವಭುಗ್ವಿಭುಃ ।
ತತ್ರ ಪ್ರಾಪ್ತಂ ಮಹಾದೇವಂ ಸ್ವಾಂತಯಾಮಾಸ ಕೇಶವಃ ॥ ೧೦ ॥

ತತಃ ಸ ಪ್ರಣತೋ ಭೂಮೌ ದೃಷ್ಟೋ ದೇವೇನ ವಿಷ್ಣುನಾ ॥ ೧೧ ॥

॥ ವಿಷ್ಣುರುವಾಚ ॥

ಭಗವಂಸ್ತ್ವಂ ಮಹಾರುದ್ರಃ ಕಿಂ ತೇ ಕಾರ್ಯ್ಯಂ ಕರೋಮ್ಯಹಂ ।
ದೃಷ್ಟ್ವಾ ನಾರಾಯಣಂ ದೇವಂ ಭಿಕ್ಷಾಂ ದೇಹೀತ್ಯುವಾಚ ಹ ॥ ೧೨ ॥

ಕಪಾಲಂ ದರ್ಶಯಿತ್ವಾಗ್ರೇ ಪ್ರಜ್ವಲಂಸ್ತೇಜಸೋತ್ಕಟಂ ।
ಕಪಾಲಪಾಣಿಂ ಸಂಪ್ರೇಕ್ಷ್ಯ ರುದ್ರಂ ವಿಷ್ಣುರಚಿಂತಯತ್ ॥ ೧೩ ॥

ಕೋಽನ್ಯೋ ಯೋಗ್ಯೋ ಭವೇದ್ಭಿಕ್ಷುರ್ಭಿಕ್ಷಾದಾನಸ್ಯ ಸಾಂಪ್ರತಂ ।
ಯೋಗ್ಯೋಽಯಮಿತಿ ಸಂಕಲ್ಪ್ಯ ದಕ್ಷಿಣಂ ಭುಜಮರ್ಪಯತ್ ॥ ೧೪ ॥

---

೯. ಎಲೈ ಜಗತ್ಪತಿಯೇ, ಈತನು ಕೋಪದಿಂದ ನನ್ನನ್ನು ಕೊಲ್ಲದಂತೆ ಮಾಡು ಎಂದನು. ಆಗ ವಿಷ್ಣುವು ಹುಂಕಾರದ ಧ್ವನಿಯಿಂದ ಆ ಮನುಷ್ಯನು ಮೂರ್ಛೆಹೋಗುವಂತೆ ಮಾಡಿದನು.

೧೦-೧೧. ಯೋಗಿಯೂ, ವಿಶ್ವರೂಪನೂ, ವಿಭುವೂ, ಆದ ಆ ವಿಷ್ಣುವು ಪ್ರಾಣಿಗಳಿಗೆ ಅದೃಶ್ಯನಾಗಿ ಆ ಮಹಾದೇವನನ್ನು ಸಮಾಧಾನಪಡಿಸಿದನು. ಆಗ ಮಹಾದೇವನು ನಮಸ್ಕರಿಸಿದುದನ್ನು ವಿಷ್ಣುವು ನೋಡಿದನು.

೧೨. ವಿಷ್ಣುವು ಹೇಳಿದನು :—ಪೂಜ್ಯನೇ, ನೀನು ಮಹಾರುದ್ರನು, ನಿನಗೆ ಯಾವ ಕೆಲಸವನ್ನು ಮಾಡಿಕೊಡಲಿ, ಎನ್ನಲು, ಸ್ವಾಮಿಯಾದ ನಾರಾಯಣನನ್ನು ನೋಡಿ ಭಿಕ್ಷೆಯನ್ನು ಕೊಡು ಎಂದನು.

೧೩. ಹಾಗೆಂದು ಹೇಳಿ ಒಳ್ಳೆಯ ತೇಜಸ್ಸಿನಿಂದ ಕೂಡಿರುವ ಕಪಾಲವನ್ನು ಮುಂದೆ ನೀಡಿದನು. ಶಿವನು ಕಪಾಲವನ್ನು ಹಿಡಿದು ಭಿಕ್ಷೆ ಬೇಡುವುದನ್ನು ನೋಡಿ, ವಿಷ್ಣುವು ಯೋಚಿಸಿದನು.

೧೪. ಇವನಿಗಿಂತಲೂ ಭಿಕ್ಷಾದಾನಕ್ಕೆ ಯೋಗ್ಯನಾದವನು ಮತ್ತಾವನಿರುವನು? ಇವನೇ ಯೋಗ್ಯನು ಎಂದು ಮನಸ್ಸುಮಾಡಿ ಬಲಭುಜವನ್ನು ಕೊಟ್ಟನು.

ತಂ ಬಿಭೇದಾತಿತೀಕ್ಷ್ಣೇನ ಶೂಲೇನ ಶಶಿಶೇಖರಃ ।
ಪ್ರಾವರ್ತತ ತತೋ ಧಾರಾ ಶೋಣಿತಸ್ಯ ವಿಭೋರ್ಭುಜಾತ್ ॥ ೧೫ ॥

ಜಾಂಬೂನದರಸಾಕಾರಾ ವಹ್ನಿಜ್ವಾಲೇವ ನಿರ್ಮಲಾ ।
ನಿಪಪಾತ ಕಪಾಲಾಂತಃ ಶಂಭುನಾ ಸಾ ಪ್ರತೀಕ್ಷಿತಾ ॥ ೧೬ ॥

ಋಜ್ವೀ ವೇಗವತೀ ತೀವ್ರಾ ಪ್ರವಂತೀವ ಧ್ವಜಂ ರವೇಃ ।
ಪಂಚಾಶದ್ಯೋಜನಾ ದೈರ್ಘ್ಯಾದ್ವಿಸ್ತಾರಾದ್ದಶಯೋಜನಾ ॥ ೧೭ ॥

ದಿವ್ಯಂ ವರ್ಷಸಹಸ್ರಂ ಸಾ ಸಮುವಾಹ ಹರೇರ್ಭುಜಾತ್ ।
ಇಯಂತಂ ಕಾಲಮೀಶೋಽಸೌ ಭಿಕ್ಷಾಂ ಜಗ್ರಾಹ ಭಿಕ್ಷುಕಃ ॥ ೧೮ ॥

ದತ್ತಾಂ ನಾರಾಯಣೇನಾಥ ಕಪಾಲೇ ಪಾತ್ರ ಉತ್ತಮೇ ।
ತತೋ ನಾರಾಯಣಃ ಪ್ರಾಹ ಹರಂ ಪರಮಿದಂ ವಚಃ ॥ ೧೯ ॥

॥ ನಾರಾಯಣ ಉವಾಚ ॥

ಸಂಪೂರ್ಣಂ ನೇತಿ ವಾ ಪಾತ್ರಂ ತತೋ ವೈ ಪರಮೇಶ್ವರಃ ।
ಸತೋಯಾಂಬುದನಿರ್ಘೋಷಂ ಶ್ರುತ್ವಾ ವಾಕ್ಯಂ ಹರೇರ್ಹರಃ ॥ ೨೦ ॥

---

೧೫. ಅದನ್ನು ಶಿವನು ಹರಿತವಾದ ಶೂಲದಿಂದ ಚುಚ್ಚಿದನು. ಆಗ ಅದರಿಂದ ರಕ್ತದ ಧಾರೆಯು ಹೊರಟಿತು.

೧೬. ಚಿನ್ನದ ನೀರಿನಂತೆಯೂ, ಬೆಂಕಿಯ ಜ್ವಾಲೆಯಂತೆಯೂ, ನಿರ್ಮಲ ವಾಗಿದ್ದ ಆ ರಕ್ತವು ಕಪಾಲದೊಳಕ್ಕೆ ಬೀಳುತ್ತಿರಲು ಶಂಭುವು ಅದನ್ನು ನೋಡಿದನು.

೧೭. ಐವತ್ತು ಯೋಜನ ಉದ್ದವೂ, ಹತ್ತು ಯೋಜನ ಅಗಲವೂ, ಇದ್ದು, ನೇರವಾಗಿ, ವೇಗವಾಗಿ, ಸುರಿಯುತ್ತಿರುವ ಆ ರಕ್ತವು ಸೂರ್ಯನ ಧ್ವಜದಂತೆ ಕಾಣಿಸುತ್ತಿದ್ದಿತು.

೧೮. ಆ ರಕ್ತಧಾರೆಯು ಹರಿಯ ಭುಜದಿಂದ ದೇವತೆಗಳ ಸಾವಿರ ವರ್ಷಗಳ ವರೆಗೂ ಸುರಿಯಿತು. ಈಶ್ವರನೂ ಕೂಡ ಭಿಕ್ಷುಕನಾಗಿ ಅಷ್ಟರವರೆಗೆ ಅದನ್ನು ತೆಗೆದುಕೊಂಡನು.

೧೯. ಉತ್ತಮವಾದ ಕಪಾಲಪಾತ್ರದಲ್ಲಿ ನಾರಾಯಣನು ಕೊಟ್ಟ ಆ ಭಿಕ್ಷೆ ಯನ್ನು ಸ್ವೀಕರಿಸಿದನು. ಆಮೇಲೆ ನಾರಾಯಣನು ಹರನನ್ನು ಕುರಿತು ಇಂತೆಂದನು.

೨೦. ನಾರಾಯಣನು ಹೇಳಿದನು:— ನಿನ್ನ ಪಾತ್ರೆಯು ತುಂಬಿತೋ, ಇಲ್ಲವೋ ಎಂದು ಗುಡುಗಿನಂತಿರುವ ಮಾತನ್ನು ಹರನು ಕೇಳಿದನು,

**ಶಶಿಸೂರ್ಯಾಗ್ನಿನಯನಃ ಶಶಿಶೇಖರಶೋಭಿತಃ ।**
**ಕಪಾಲೇ ದೃಷ್ಟಿಮಾವೇಶ್ಯ ತ್ರಿಭಿರ್ನೇತ್ರೈರ್ಜನಾರ್ದನಂ ॥ ೨೧ ॥**

**ಅಂಗುಲ್ಯಾ ಘಟಯನ್ಪ್ರಾಹ ಕಪಾಲಂ ಪರಿಪೂರಿತಂ ।**
**ಶ್ರುತ್ವಾ ಶಿವಸ್ಯ ತಾಂ ವಾಣೀಂ ವಿಷ್ಣುರ್ಧಾರಾಂ ಸಮಾಹರತ್ ॥ ೨೨ ॥**

**ಪಶ್ಯತೋಽಥ ಹರೇರೀಶಃ ಸ್ವಾಂಗುಲ್ಯಾ ರುಧಿರಂ ತದಾ ।**
**ದಿವ್ಯಂ ವರ್ಷಸಹಸ್ರಂ ತು ದೃಷ್ಟಿಪಾತಂ ಮಮಂಥ ಸಃ ॥ ೨೩ ॥**

**ಮಥ್ಯಮಾನೇ ತತೋ ರಕ್ತೇ ಕಲಲಂ ಬುದ್ಬುದಂ ಕ್ರಮಾತ್ ।**
**ಬಭೂವ ಚ ತತಃ ಪಶ್ಚಾತ್ಕಿರೀಟೀ ಸಶರಾಸನಃ ॥ ೨೪ ॥**

**ಬದ್ಧತೂಣೀರಯುಗಲೋ ವೃಷಸ್ಕಂಧೋಽಂಗುಲಿತ್ರವಾನ್ ।**
**ಪುರುಷೋ ವಹ್ನಿಸಂಕಾಶಃ ಕಪಾಲೇ ಸಮದೃಶ್ಯತ ।**
**ತಂ ದೃಷ್ಟ್ವಾ ಭಗವಾನ್ವಿಷ್ಣುಃ ಪ್ರಾಹ ರುದ್ರಮಿದಂ ವಚಃ ॥ ೨೫ ॥**

---

೨೧-೨೨. ಸೂರ್ಯಚಂದ್ರರು ಕಣ್ಣಾಗಿಯೂ, ಚಂದ್ರನು ಭೂಷಣನಾಗಿಯೂ, ಇರುವ ಆ ಶಿವನು ಕಪಾಲವನ್ನು ನೋಡಿ, ಅನಂತರ ಮೂರು ಕಣ್ಣುಗಳಿಂದಲೂ ಹರಿಯನ್ನು ನೋಡಿ, ಬೆರಳಿನಿಂದ ಆ ಕಪಾಲವನ್ನು ಮುಟ್ಟಿ, ಅದು ತುಂಬಿರುವುದನ್ನು ತಿಳಿದು ತುಂಬಿದೆ ಎಂದನು. ಅದನ್ನು ಕೇಳಿ ಹರಿಯು ಆ ರಕ್ತಧಾರೆಯನ್ನು ನಿಲ್ಲಿಸಿದನು.

೨೩. ಆಗ ಶಿವನು ವಿಷ್ಣುವಿನ ಎದುರಿಗೆ ತನ್ನ ಬೆರಳಿನಿಂದ ದೇವತೆಗಳ ಸಾವಿರ ವರ್ಷಗಳವರೆಗೂ ಆ ರಕ್ತವನ್ನು ನೋಡುತ್ತಾ ಕಡೆದನು.

೨೪-೨೫. ರಕ್ತವನ್ನು ಬೆರಳಿನಿಂದ ಕಡೆಯುತ್ತಿರಲು ಹೆಪ್ಪು ಗಟ್ಟಿಗಳೂ ಬಂದವು. ಕ್ರಮವಾಗಿ ಅನಂತರ ಕಿರೀಟವನ್ನು ಹಾಕಿಕೊಂಡು ಬಿಲ್ಲನ್ನು ಧರಿಸಿ ಬತ್ತಳಿಕೆಯನ್ನು ಕಟ್ಟಿಕೊಂಡು ದಪ್ಪವಾದ ಕತ್ತುಳ್ಳವನಾಗಿ ಕೈಚೀಲಗಳನ್ನು ಹಾಕಿಕೊಂಡು ಅಗ್ನಿಗೆ ಸಮವಾದ ತೇಜಸ್ಸುಳ್ಳ ಒಬ್ಬ ಪುರುಷನು ಆ ಕಪಾಲದಲ್ಲಿ ಕಾಣಿಸಿಕೊಂಡನು. ಭಗವಂತನಾದ ವಿಷ್ಣುವು ಅವನನ್ನು ನೋಡಿ ಇಂತೆಂದನು.

॥ ವಿಷ್ಣುರುವಾಚ ॥

ಕಪಾಲೇ ಭಗವನ್ಯೋಽಯಂ ಪ್ರಾದುರ್ಭೂತೋಽಭವನ್ನರಃ ।
ಉಕ್ತಂ ಶ್ರುತ್ವಾ ಸ ದೇವೇಶಸ್ತಮುವಾಚ ವಿಭೋ ಶೃಣು ॥ ೨೬ ॥

ನರೋ ನಾಮ್ನೈಷ ಪುರುಷಃ ಪರಮಾಸ್ತ್ರವಿದಾಂ ವರಃ ।
ಭವತೋಕ್ತೋ ನರ ಇತಿ ನರಸ್ತಸ್ಮಾದ್ಭವಿಷ್ಯತಿ ॥ ೨೭ ॥

ನರನಾರಾಯಣೌ ಚೋಭೌ ಯುಗೇ ಖ್ಯಾತೌ ಭವಿಷ್ಯತಃ ।
ಸಂಗ್ರಾಮದೇವಕಾರ್ಯೇಷು ಲೋಕಾನಾಂ ಪರಿಪಾಲನೇ ॥ ೨೮ ॥

ಏಷ ನಾರಾಯಣ ಸಖಾ ನರಸ್ತವ ಭವಿಷ್ಯತಿ ।
ಅಥಾಸುರವಧೇ ಸಹ್ಯಂ ತವ ಕರ್ತಾ ಮಹಾಮತಿಃ ॥ ೨೯ ॥

ಮುನಿಜ್ಞಾನಪರೀಕ್ಷಾಯಾಂ ಜೇತಾ ಲೋಕೇ ಭವಿಷ್ಯತಿ ।
ತೇಜೋಽಧಿಕಮಿದಂ ದಿವ್ಯಂ ಬ್ರಹ್ಮಣಃ ಪಂಚಮಂ ಶಿರಃ ॥ ೩೦ ॥

---

೨೬. ವಿಷ್ಣುವು ಹೇಳಿದನು:—ಎಲೈ ಶಿವನೇ, ಈ ಕಪಾಲದಲ್ಲಿ ಹುಟ್ಟಿದ ನರನಾರು? ಎನ್ನಲು, ವಿಷ್ಣುವಿನ ಮಾತನ್ನು ಕೇಳಿ ಆ ಹರನು ವಿಭುವೇ ಕೇಳೆಂದು ಹೇಳಿದನು.

೨೭. ಎಲೈ ವಿಷ್ಣುವೇ, ಇವನ ಹೆಸರು ನರನು, ಉತ್ತಮವಾದ ಅಸ್ತ್ರಗಳನ್ನು ತಿಳಿದವರಲ್ಲಿ ಈತನು ಶ್ರೇಷ್ಠನು, ನೀನು ಈ ನರನಾರು ಎಂದು ಕೇಳಿದುದರಿಂದ ಇವನ ಹೆಸರು ನರನೆಂದೇ ಆಗಿರುವುದು.

೨೮. ನರನಾರಾಯಣರೆಂಬ ಈ ಇಬ್ಬರೂ ಯುದ್ಧ, ದೇವಕಾರ್ಯ, ಲೋಕರಕ್ಷಣೆಗಳಲ್ಲಿ ಯುಗ ಯುಗಗಳಲ್ಲಿಯೂ ಪ್ರಸಿದ್ಧರಾಗುತ್ತಾರೆ.

೨೯. ಎಲೈ ನಾರಾಯಣನೇ, ನಿನಗೆ ಈತನು ಸ್ನೇಹಿತನಾಗುತ್ತಾನೆ. ರಾಕ್ಷಸರ ವಧೆಯಲ್ಲಿ ಈತನು ನಿನಗೆ ಸಹಾಯಕನಾಗುತ್ತಾನೆ.

೩೦. ಜ್ಞಾನಪರೀಕ್ಷೆಯಲ್ಲಿ ಮುನಿಯಾಗಿ ಎಲ್ಲರನ್ನೂ ಜಯಿಸುತ್ತಾನೆ ಈ ಬ್ರಹ್ಮನ ಶಿರಸ್ಸು ಒಳ್ಳೆಯ ತೇಜಸ್ಸುಳ್ಳದು.

**ತೇಜಸೋ ಬ್ರಹ್ಮಣೋ ದೀಪ್ತಾದ್ಭುಜಸ್ಯ ತವ ಶೋಣಿತಾತ್ ।**
**ಮಮ ದೃಷ್ಟಿನಿಪಾತಾತ್ತು ತ್ರೀಣಿ ತೇಜಾಂಸಿ ಯಾನಿ ತು ॥ ೩೧ ॥**

**ತತ್ಸಂಯೋಗಾತ್ಸಮುತ್ಪನ್ನಃ ಶತ್ರೂಂ ಯುದ್ಧೇ ವಿಜೇಷ್ಯತೇ ।**
**ಅವಧ್ಯಾ ಯೇ ಭವಿಷ್ಯಂತಿ ದುರ್ಜಯಾಸ್ತ್ವಪ ಚಾಪರೇ ॥ ೩೨ ॥**

**ಶಕ್ರಸ್ಯ ಚಾಮರಾಣಾಂ ಚ ತೇಷಾಮೇಷ ಭಯಂಕರಃ ।**
**ಏವಮುಕ್ತ್ವಾ ತತಃ ಶಂಭುರ್ವಿಸ್ಮಿತಸ್ಯ ಹರೇರಪಿ ॥ ೩೩ ॥**

**ಕಪಾಲಸ್ಥಃ ಸ ತತ್ರೈವ ತುಷ್ಟಾವ ಹರಕೇಶವೌ ।**
**ಶಿರಸ್ಯಂಜಲಿಮಾಧಾಯ ತದಾ ವೀರ ಉದಾರಧೀಃ ॥ ೩೪ ॥**

**ಕಿಂ ಕರೋಮೀತಿ ತೌ ಪ್ರಾಹ ಇತ್ಯುಕ್ತ್ವಾ ಪ್ರಣತಃ ಸ್ಥಿತಃ ॥ ೩೫ ॥**

**ತಮುವಾಚ ಹರಃ ಶ್ರೀಮಾನ್ಬ್ರಹ್ಮಣಾ ಸ್ವೇನ ತೇಜಸಾ ।**
**ಸೃಷ್ಟೋಽಸುರೋ ಧನುಷ್ಪಾಣಿಸ್ತಮೇನಂ ತ್ವಂ ನಿಷೂದಯ ॥ ೩೬ ॥**

---

೩೧. ಬ್ರಹ್ಮ-ಕಪಾಲದ ತೇಜಸ್ಸು, ನಿನ್ನ ಭುಜದಿಂದ ಬಂದ ರಕ್ತದ ತೇಜಸ್ಸು, ನನ್ನ ದೃಷ್ಟಿಬಿದ್ದ ತೇಜಸ್ಸು, ಇವು ಅಮೋಘವಾದವುಗಳು. ಇವುಗಳ ಸಂಯೋಗದಿಂದ ಹುಟ್ಟಿದ ಈತನು ಯುದ್ಧದಲ್ಲಿ ಶತ್ರುಗಳನ್ನು ಜಯಿಸುತ್ತಾನೆ.

೩೨. ಇಂದ್ರಾದಿ ದೇವತೆಗಳಿಗೆ ಕೊಲ್ಲಲಸಾಧ್ಯರಾಗಿ ಯಾರಿರುವರೋ, ನಿನಗೂ ಜಯಿಸಲಸಾಧ್ಯರಾಗಿ ಯಾರಿರುವರೋ, ಅವರೆಲ್ಲರಿಗೂ, ಈತನು ಭಯವನ್ನುಂಟು ಮಾಡತಕ್ಕವನು.

೩೩. ಶಂಭುವಿನ್ನುಗಳ ಈ ಮಾತಿನಿಂದ ಆಶ್ಚರ್ಯಗೊಂಡ ಆ ನರನು ಕಪಾಲದಲ್ಲಿದ್ದಂತೆಯೇ ಆ ಹರಕೇಶವರನ್ನು ಸ್ತುತಿಸಿದನು.

೩೪-೩೫. ಆಗ ಉದಾರಮನಸ್ಸುಳ್ಳ ಆ ವೀರನು ತಲೆಯ ಮೇಲೆ ಬೊಗಸೆಯನ್ನಿಟ್ಟುಕೊಂಡು ಏನು ಮಾಡಲಿ ಎಂದು ಕೇಳುತ್ತ ನಮಸ್ಕರಿಸಿ ನಿಂತುಕೊಂಡನು.

೩೬. ಅವನನ್ನು ಕುರಿತು ಹರನು, ಬ್ರಹ್ಮನು ತನ್ನ ತೇಜಸ್ಸಿಂದ ಧನುಷ್ಪಾಣಿಯಾದ ಒಬ್ಬ ರಾಕ್ಷಸನನ್ನು ಸೃಷ್ಟಿಮಾಡಿದ್ದಾನೆ, ಅವನನ್ನು ನೀನು ಸಂಹರಿಸು ಎಂದನು.

ಇತ್ಯುಕ್ತ್ವಾಂಜಲಿಪುಟಕಂ ಸ್ತುವಂತಂ ಶಂಕರೋ ನರಂ ।
ತಥೈವಾಂಜಲಿಸಂಬದ್ಧಂ ಗೃಹೀತ್ವಾ ತು ಕರದ್ವಯಂ ॥ ೩೭ ॥

ಉದ್ಧೃತ್ಯಾಥ ಕಪಾಲಾತ್ತಂ ಪುನರ್ವಚಸಮಬ್ರವೀತ್ ।
ಸ ಏಷ ಪುರುಷೋ ರೌದ್ರೋ ಯೋ ಮಯಾವೇದಿತಸ್ತವ । ೩೮ ॥

ವಿಷ್ಣುಹುಂಕಾರಸಂಬದ್ಧೋ ಮೋಹನಿದ್ರಾಮುಪಾಗತಃ ।
ವಿಬೋಧಯೈನಂ ತ್ವರಿತಮಿತ್ಯುಕ್ತ್ವಾಂತರ್ದಧೇ ಹರಃ ॥ ೩೯ ॥

ನಾರಾಯಣಸ್ಯ ಪ್ರತ್ಯಕ್ಷಂ ಮೋಹಂ ಪ್ರಾಪ್ತಂ ಪದಾಽಹನತ್ ।
ವಾಮಪಾದಾಹತಃ ಸೋಽಪಿ ಸಮುತ್ತಸ್ಥೌ ಮಹಾಬಲಃ ॥ ೪೦ ॥

ತತೋ ಯುದ್ಧಂ ಸಮಭವತ್ಸ್ವೇದರಕ್ತಜಯೋರ್ಮಹತ್ ।
ವಿಸ್ಫಾರಿತಧನುಃಶಬ್ದಂ ನಾದಿತಾಶೇಷಭೂತಲಂ ॥ ೪೧ ॥

---

೩೭. ಹೀಗೆಂದು ಹೇಳಿ ತಲೆಯ ಮೇಲೆ ಬೊಗಸೆಯನ್ನಿಟ್ಟುಕೊಂಡು ಸ್ತೋತ್ರ ಮಾಡುತ್ತಿರುವ ನರನನ್ನು ಹಾಗೆಯೇ ಆ ಕೈಗಳನ್ನು ಹಿಡಿದುಕೊಂಡು ಅವನನ್ನು ಕಪಾಲದಿಂದ ಹೊರಗಿಟ್ಟು ಮತ್ತೆ ಹರನು ಇಂತೆಂದನು:

೩೮-೩೯. ನಾನು ಮೊದಲು ನಿನಗೆ ಹೇಳಿದ ಕ್ರೂರನಾದ ಮನುಷ್ಯನು ಇವನೇನೇ. ವಿಷ್ಣುವಿನ ಹುಂಕಾರದಿಂದ ಮೋಹನಿದ್ರೆಯನ್ನು ಹೊಂದಿದ್ದಾನೆ. ಇವನನ್ನು ಬೇಗ ಎಬ್ಬಿಸು ಎಂದು ಹೇಳಿ ಅದೃಶ್ಯನಾದನು.

೪೦. ಮೋಹನಿದ್ರೆಯನ್ನು ಹೊಂದಿರುವ ಆತನನ್ನು ನಾರಾಯಣನ ಎದುರಿಗೇನೇ ಎಡಗಾಲಿನಿಂದ ಒದ್ದನು. ಎಡಗಾಲಿನ ಏಟನಿಂದ ಆ ಮಹಾಬಲನೂ ಎಚ್ಚೆತ್ತನು.

೪೧. ಬೆವರಿನಿಂದ ಹುಟ್ಟಿದ ರಾಕ್ಷಸನಿಗೂ, ರಕ್ತದಿಂದ ಹುಟ್ಟಿದ ನರನಿಗೂ ಧನುಷ್ಟಂಕಾರದಿಂದಲೂ, ಸಿಂಹನಾದನಿಂದಲೂ, ಭೂಮಿಯು ನಡುಗುವಂತೆ ಭಯಂಕರ ಯುದ್ಧವು ನಡೆಯಿತು.

ಕವಚಂ ಸ್ವೇದಜಸ್ಯೈಕಂ ರಕ್ತಜಸ್ಯ ತಥಾ ಭುಜಃ ।
ಏವಂ ಸಮೇತಯೋರ್ಯುದ್ಧೇ ದಿವ್ಯವರ್ಷದ್ವಯಂ ಗತಂ ॥ ೪೨ ॥

ತ್ರಿವರ್ಷೇಣಾಪಿ ರುದ್ರಾಣಾಂ ಶತಾನಿ ದಶ ಸುದ್ವಿಜಾಃ ।
ಯುಧ್ಯತೋಃ ಸಮತೀತಾನಿ ಸ್ವೇದರಕ್ತಜಯೋರ್ನೃಪ ॥ ೪೩ ॥

ರಕ್ತಜಂ ದ್ವಿಭುಜಂ ದೃಷ್ಟ್ವಾ ಸ್ವೇದಜಂ ಚೈಕಕಂಚುಕಂ ।
ವಿಚಿಂತ್ಯ ವಾಸುದೇವೋಽಗಾದ್ಬ್ರಹ್ಮಣಃ ಸದನಂ ಪರಂ ॥ ೪೪ ॥

ಸಸಂಭ್ರಮಮುವಾಚೇದಂ ಬ್ರಹ್ಮಾಣಂ ಮಧುಸೂದನಃ ।
ರಕ್ತಜೇನಾದ್ಯ ಭೋ ಬ್ರಹ್ಮಂಸ್ತ್ವದೀಯೋ ವಿನಿಪಾತಿತಃ ॥ ೪೫ ॥

ಶ್ರುತ್ವೈತದಾಕುಲೋ ಬ್ರಹ್ಮಾ ಬಭಾಷೇ ಮಧುಸೂದನಂ ।
ಹರೇಽನ್ಯಜನ್ಮನಿ ನರೋ ಮದೀಯಂ ತು ವಿಜೇಷ್ಯತೇ ॥ ೪೬ ॥

ತಥಾ ತುಷ್ಟೇನ ಸಾಧೂಕ್ತಂ ವಿಷ್ಣುನೈವಂ ಭವಿಷ್ಯತಿ ।
ಗತ್ವಾ ತತೋ ರಣಮಪಿ ನಿವಾರ್ಯಾಹ ಚ ತಾವುಭೌ ॥ ೪೭ ॥

---

೪೨. ಹೀಗೆ ಯುದ್ಧಮಾಡುತ್ತಿರಲು, ಇವರಿಗೆ ದೇವತೆಗಳ ಇನ್ನೂರು ವರ್ಷಗಳು ಕಳೆದುವು. ಹೀಗೇ ಯುದ್ಧಮಾಡುತ್ತಿರುವಾಗ ಸ್ವೇದಜನಿಗೆ ಒಂದು ಕವಚವೂ ರಕ್ತಜನಿಗೆ ಎರಡು ಕೈಗಳೂ ಉಳಿದುವು.

೪೩. ಅಥವಾ ರುದ್ರರ ನೂರಹದಿಮೂರು ವರ್ಷಗಳು ಕಳೆದುವು.

೪೪. ಆಗ ವಾಸುದೇವನು ರಕ್ತಜನಿಗೆ ಎರಡು ಕೈಗಳು ಸ್ವೇದಜನಿಗೆ ಒಂದು ಕವಚವೂ ಇರುವುದನ್ನು ನೋಡಿ ಬ್ರಹ್ಮನ ಮನೆಗೆ ಹೋದನು.

೪೫. ಬ್ರಹ್ಮನನ್ನು ಕುರಿತು ರಕ್ತಜನಿಂದ ನಿನ್ನವನು ಕೊಲ್ಲಲ್ಪಟ್ಟನು ಎಂದು ಅವಸರದಿಂದ ಹೇಳಿದನು.

೪೬. ಈ ಮಾತನ್ನು ಕೇಳಿ ಬ್ರಹ್ಮನು ದುಃಖಪಟ್ಟು ಮಧುಸೂದನನಿಗೆ ಎಲೈ ಹರಿಯೇ, ನಿನ್ನವನು ನನ್ನವನನ್ನು ಬೇರೆ ಜನ್ಮದಲ್ಲಿ ಜಯಿಸುತ್ತಾನೆ.

೪೭. ಅದಕ್ಕೆ ವಿಷ್ಣುವು ಒಪ್ಪಿಕೊಂಡು ಸರಿ, ಹಾಗೇ ಆಗಲಿ ಎಂದನು. ಅನಂತರ ಅವರಿಬ್ಬರೂ ಯುದ್ಧಭೂಮಿಗೆ ಹೋಗಿ ಅವರಿಬ್ಬರನ್ನು ಯುದ್ಧದಿಂದ ಹಿಂತಿರುಗಿಸಿದರು.

ಅನ್ಯಜನ್ಮನಿ ಭವಿತಾ ಕಲಿದ್ವಾಪರಯೋರ್ಮಿಥಃ ।
ಸಂಧೌ ಮಹಾರಣೋ ಜಾತೇ ತತ್ರಾಹಂ ಯೋಜಯಾಮಿ ವಾಂ ॥ ೪೮ ॥

ವಿಷ್ಣುನಾ ತು ಸಮಾಹೂಯ ಗ್ರಹೇಶ್ವರಸುರೇಶ್ವರೌ ।
ಉಕ್ತವಿನೌ ನರೌ ಭದ್ರೌ ಪಾಲನೀಯೌ ಮಮಾಜ್ಞಯಾ ॥ ೪೯ ॥

ಸಹಸ್ರಾಂಶೋ ಸ್ವೇದಜೋಽಯಂ ಸ್ವಕೀಯೋಽಸೌ ರಸಾತಲೇ ।
ದ್ವಾಪರಾಂತೇಽವತಾರ್ಯೋಽಯಂ ದೇವಾನಾಂ ಕಾರ್ಯಸಿದ್ಧಯೇ ॥ ೫೦ ॥

ಯದೂನಾಂ ತು ಕುಲೇ ಭಾವೀ ಶೂರೋ ನಾಮ ಮಹಾಬಲಃ ।
ತಸ್ಯ ಕನ್ಯಾ ಪೃಥಾ ನಾಮ ರೂಪೇಣಾಪ್ರತಿಮಾ ಭುವಿ ॥ ೫೧ ॥

ಉತ್ಪತ್ಸ್ಯತೇ ಮಹಾಭಾಗಾ ದೇವಕಾರ್ಯಾರ್ಥಸಿದ್ಧಯೇ ।
ದೂರ್ವಾಸಾಸ್ತು ವರಂ ತಸ್ಯೈ ಮಂತ್ರಗ್ರಾಮಂ ಪ್ರದಾಸ್ಯತಿ ॥ ೫೨ ॥

ಮಂತ್ರೇಣ ತೇನ ಯಂ ದೇವಂ ರಾಜ್ಞೀ ಆವಾಹಯಿಷ್ಯತಿ ।
ದೇವಸ್ಯ ತಸ್ಯ ಪ್ರಸಾದಾತ್ತವ ಪುತ್ರೋ ಭವಿಷ್ಯತಿ ॥ ೫೩ ॥

---

೪೮. ನಿಮ್ಮಿಬ್ಬರಿಗೆ ಬೇರೆಯ ಜನ್ಮದಲ್ಲಿ ಯುದ್ಧವು ನಡೆಯಲಿ. ಕಲಿದ್ವಾಪರ ಯುಗಗಳ ಸಂಧಿಯಲ್ಲಿ ಆಗುವ ಯುದ್ಧದಲ್ಲಿ ನಿಮ್ಮಿಬ್ಬರನ್ನೂ ನಾನು ಸೇರಿಸುತ್ತೇನೆ.

೪೯. ಆಗ ವಿಷ್ಣುವು ಸೂರ್ಯನನ್ನೂ, ಇಂದ್ರನನ್ನೂ, ಕರೆದು ನೀವಿಬ್ಬರೂ, ನನ್ನ ಅಪ್ಪಣೆಯಂತೆ ಇವರಿಬ್ಬರನ್ನೂ ಕಾಪಾಡಬೇಕೆಂದನು.

೫೦. ಎಲೈ ಸೂರ್ಯನೇ, ನೀನು ಈ ಸ್ವೇದಜನನ್ನು ಇಟ್ಟುಕೊಂಡಿದ್ದು, ದೇವತೆಗಳ ಕಾರ್ಯಸಿದ್ಧಿಗೆ ದ್ವಾಪರದ ಕೊನೆಯಲ್ಲಿ ಭೂಮಿಯಲ್ಲಿ ಅವತರಿಸುವಂತೆ ಮಾಡು.

೫೧-೫೨. ಯದುವಿನ ಕುಲದಲ್ಲಿ ಮಹಾಬಲಿಷ್ಠನಾದ ಶೂರನೆಂಬುವನು ಹುಟ್ಟುವನು, ಅವನಿಗೆ ಸುಂದರಿಯಾದ ಪೃಥೆಯೆಂಬ ಮಗಳು ಹುಟ್ಟುವಳು. ಅವಳು ದೇವಕಾರ್ಯಕ್ಕಾಗಿಯೇ ಅವತರಿಸುವಳು. ದೂರ್ವಾಸಮುಷಿಯು ಅವಳಿಗೆ ಮಂತ್ರಗಳನ್ನು ಕೊಡುವನು.

೫೩. ಯಾವ ಮಂತ್ರದಿಂದ ಯಾವ ದೇವನನ್ನು ಆವಾಹಿಸುವಳೋ ಅವಳಲ್ಲಿ ಮಗನು ಹುಟ್ಟುವನು.

ಸಾ ಚ ತ್ವಾಮುದಯೇ ದೃಷ್ಟ್ವಾ ಸಾಭಿಲಾಷಾ ರಜಸ್ವಲಾ ।
ಚಿಂತಾಭಿಪನ್ನಾ ತಿಷ್ಠಂತೀ ಭಜಿತವ್ಯಾ ವಿಭಾವಸೋ ॥ ೫೪ ॥

ತಸ್ಯಾ ಗರ್ಭೇ ತ್ವಯಂ ಭಾವೀ ಕಾನೀನಃ ಕುಂತಿನಂದನಃ ।
ಭವಿಷ್ಯತಿ ಸುತೋ ದೇವ ವಸುಷೇಣೇತಿ ನಾಮತಃ ॥ ೫೫ ॥

ತಥೇತಿ ಚೋಕ್ತ್ವಾ ಪ್ರೋವಾಚ ತೇಜೋರಾಶಿರ್ದಿವಾಕರಃ ।
ಪುತ್ರಮುತ್ಪಾದಯಿಷ್ಯಾಮಿ ಕಾನೀನಂ ಬಲಗರ್ವಿತಂ ॥ ೫೬ ॥

ಯಸ್ಯ ಕರ್ಣೇತಿ ವೈ ನಾಮ ಲೋಕಃ ಸರ್ವೋ ವದಿಷ್ಯತಿ ।
ಮತ್ಪ್ರಸಾದಾದಸ್ಯ ವಿಷ್ಣೋ ವಿಪ್ರಾಣಾಂ ಭಾವಿತಾತ್ಮನಾಂ ॥ ೫೭ ॥

ಅದೇಯಂ ನಾಸ್ತಿ ವೈ ಯಸ್ಯ ವಸು ಕಿಂಚಿಚ್ಚ ಕೇಶವ ।
ಏವಂ ಪ್ರಭಾವಂ ಚೈವೈನಂ ಜನಿಷ್ಯೇ ವಚನಾತ್ತವ ॥ ೫೮ ॥

ಏವಮುಕ್ತ್ವಾ ಸಹಸ್ರಾಂಶುರ್ದೇವದಾನವಘಾತಿನಂ ।
ನಾರಾಯಣಂ ಮಹಾತ್ಮಾನಂ ತತ್ರೈವಾಂತರ್ದಧೇ ರವಿಃ ॥ ೫೯ ॥

---

೫೪-೫೫. ರಜಸ್ವಲೆಯಾದ ಆಕೆಯು ಉದಯಿಸುವಾಗ ನಿನ್ನನ್ನು ನೋಡಿ ಚಿಂತಿಸುತ್ತಾ ಧ್ಯಾನಿಸುವಳು. ಎಲೈ ಸೂರ್ಯನೇ, ಅವಳ ಗರ್ಭದಲ್ಲಿ ಕನ್ಯಕಾವಸ್ಥೆಯಲ್ಲಿ ಕುಂತಿನಂದನನಾಗಿ ಹುಟ್ಟುವನು, ಅವನು ವಸುಷೇಣನೆಂಬ ಹೆಸರಿನಿಂದ ಪ್ರಸಿದ್ಧನಾಗುವನು.

೫೬. ಆಗ ಆ ತೇಜಃಪುಂಜನಾದ ದಿವಾಕರನು ನೀನು ಹೇಳಿದಂತೆ ಬಲಿಷ್ಠನಾದ, ಕನ್ಯೆಯ ಮಗನಾಗಿರುವ ಮಗನನ್ನು ಉತ್ಪಾದನೆಮಾಡುತ್ತೇನೆ ಎಂದನು.

೫೭. ಆತನನ್ನು ಲೋಕದಲ್ಲಿ ಎಲ್ಲರೂ ಕರ್ಣನೆಂದು ಕರೆಯುತ್ತಾರೆ. ಎಲೈ ವಿಷ್ಣುವೇ, ನನ್ನ ಅನುಗ್ರಹದಿಂದ ಆತನು ಯೋಗ್ಯರಾದ ಬ್ರಾಹ್ಮಣರಿಗೆ ದಾನಮಾಡತಕ್ಕ ಪದಾರ್ಥವೇ ಇಲ್ಲದವನಾಗುತ್ತಾನೆ.

೫೮-೫೯. ಈರೀತಿಯಾದ ಪ್ರಭಾವವುಳ್ಳ ಮಗನನ್ನು ನಿನ್ನ ಮಾತಿನಂತೆ ಸೃಷ್ಟಿಸುತ್ತೇನೆ ಎಂದು ದೇವದಾನವರ ಶಿಕ್ಷಕನಾದ ವಿಷ್ಣುವಿಗೆ ಹೇಳಿ ಒಡನೆಯೇ ಸೂರ್ಯನು ಹೊರಟುಹೋದನು.

ಅದರ್ಶನಂ ಗತೇ ದೇವೇ ಭಾಸ್ಕರೇ ವಾರಿತಸ್ಕರೇ ।
ವೃದ್ಧಶ್ರವಸಮುಸ್ಯೇವಮುವಾಚ ಪ್ರೀತಮಾನಸಃ ॥ ೬೦ ॥

ಸಹಸ್ರನೇತ್ರ ರಕ್ಷ್ಯೋತ್ಥೋ ನರೋಽಸೌ ಮದನುಗ್ರಹಾತ್ ।
ಸ್ವಾಂಶಭೂತೋ ದ್ವಾಪರಾಂತೇ ಯೋಕ್ತವ್ಯೋ ಭೂತಲೇ ತ್ವಯಾ ॥

ಯದಾ ಪಾಂಡುರ್ಮಹಾಭಾಗಃ ಪೃಥಾಂ ಭಾರ್ಯಾಮುವಾಪ್ಸ್ಯತಿ ।
ಮಾದ್ರೀಂ ಚಾಪಿ ಮಹಾಭಾಗಾಂ ತದಾಽರಣ್ಯಂ ಗಮಿಷ್ಯತಿ ॥ ೬೨ ॥

ತಸ್ಯಾಪ್ಯರಣ್ಯಸಂಸ್ಥಸ್ಯ ಮೃಗಃ ಶಾಪಂ ಪ್ರದಾಸ್ಯತಿ ।
ತೇನ ಚೋತ್ಪನ್ನವೈರಾಗ್ಯಃ ಶತಶೃಂಗಂ ಗಮಿಷ್ಯತಿ ॥ ೬೩ ॥

ಅಭೀಪ್ಸನ್ ಕ್ಷೇತ್ರಜಾನ್ಪುತ್ರಾನ್ ಭಾರ್ಯಾಂ ಸ ಪ್ರವದಿಷ್ಯತಿ ।
ಅನೀಪ್ಸಂತೀ ತದಾ ಕುಂತೀ ಭರ್ತಾರಂ ಸಾ ವದಿಷ್ಯತಿ ॥ ೬೪ ॥

---

೬೦. ಸೂರ್ಯನು ಹೊರಟುಹೋಗುತ್ತಲು, ವಿಷ್ಣುವು ಇಂದ್ರನನ್ನು ಕುರಿತು ಸಂತೋಷದಿಂದ ಇಂತೆಂದನು.

೬೧. ಎಲೈ ಸಹಸ್ರಾಕ್ಷನೇ, ರಕ್ತಜನಾದ ಈತನನ್ನು ನನ್ನ ಅನುಗ್ರಹದಿಂದ ನೀನಿಟ್ಟುಕೊಂಡಿದ್ದು ದ್ವಾಪರಾಂತದಲ್ಲಿ ಭೂಲೋಕದಲ್ಲಿ ನಿನ್ನ ಅಂಶದಿಂದ ಸೃಷ್ಟಿಸು.

೬೨. ಪಾಂಡುವೆಂಬ ಮಹಾನುಭಾವನು ಪೃಥೆಯನ್ನು ಮದುವೆಯಾಗಿ ಮಾದ್ರಿಯನ್ನು ಮದುವೆಯಾದಾಗ ಕಾಡಿಗೆ ಹೋಗುತ್ತಾನೆ.

೬೩. ಅವನು ಕಾಡಿನಲ್ಲಿರುವಾಗ ಮೃಗವು ಶಾಪವನ್ನು ಕೊಡುತ್ತದೆ. ಅದರಿಂದ ವೈರಾಗ್ಯವು ಹುಟ್ಟಿ ಶತಶೃಂಗ ಪರ್ವತಕ್ಕೆ ಹೋಗುತ್ತಾನೆ.

೬೪. ಆಗ ಆತನು ಕ್ಷೇತ್ರದಲ್ಲಿಯಾದರೂ ಮಕ್ಕಳಾಗಲೆಂದು ಯೋಚಿಸಿ, ಹೆಂಡತಿಗೆ ಅಂತೆಯೇ ಹೇಳುತ್ತಾನೆ. ಕುಂತಿಯು ಅದನ್ನು ಒಪ್ಪದೇ ಗಂಡನಿಗೆ ಇಂತೆನ್ನುತ್ತಾಳೆ.

ನಾಹಂ ಮರ್ತ್ಯಸ್ಯ ವೈ ರಾಜನ್ಪುತ್ರಾನಿಚ್ಛೇ ಕಥಂಚನ ।
ದೈವತೇಭ್ಯಃ ಪ್ರಸಾದಾಚ್ಚ ಪುತ್ರಾನಿಚ್ಛೇ ನರಾಧಿಪ ॥ ೬೫ ॥

ಪ್ರಾರ್ಥಯಂತ್ಯೈ ತ್ವಯಾ ಶಕ್ರ ಕುಂತ್ಯೈ ದೇಯೋ ನರಸ್ತತಃ ।
ವಚಸಾ ತು ಮದೀಯೇನ ಏವಂ ಕುರು ಶಚೀಪತೇ ॥ ೬೬ ॥

ಅಥಾಬ್ರವೀತ್ತದಾ ವಿಷ್ಣುಂ ಸುರೇಶೋ ದುಃಖಿತಸ್ತತಃ ।
ಅಸ್ಮಿನ್ಮನ್ವಂತರೇಽತೀತೇ ಸಪ್ತವಿಂಶತಿಕೇ ಗತೇ ॥ ೬೭ ॥

ಅವತೀರ್ಯ ರಘುಕುಲೇ ಗೃಹೇ ದಶರಥಸ್ಯ ಚ ।
ರಾವಣಸ್ಯ ವಿನಾಶಾರ್ಥಂ ಶಾಂತ್ಯರ್ಥಂ ಚ ದಿವೌಕಸಾಂ ॥ ೬೮ ॥

ರಾಮರೂಪೇಣ ಭವತಾ ಸೀತಾರ್ಥಮಟತಾ ವನೇ ।
ಮತ್ಪುತ್ರೋ ಹಿಂಸಿತೋ ದೇವ ಸೂರ್ಯಪುತ್ರಹಿತಾರ್ಥಿನಾ ॥ ೬೯ ॥

ವಾಲಿನಾಮಾ ವಾನರೇಂದ್ರಃ ಸುಗ್ರೀವಾರ್ಥೇ ತ್ವಯಾ ಹತಃ ।
ದುಃಖೇನ ತೇನ ತಪ್ತೋಽಹಂ ಗೃಹ್ಣಾಮಿ ನ ಸುತಂ ನರಂ ॥ ೭೦ ॥

---

೬೫. ಎಲೈ ದೊರೆಯೇ ನಾನು ಮನುಷ್ಯರಿಂದ ಮಕ್ಕಳನ್ನು ಪಡೆಯುವುದಕ್ಕೆ ಇಷ್ಟಪಡುವುದಿಲ್ಲ, ದೇವತೆಗಳ ಅನುಗ್ರಹದಿಂದ ಮಕ್ಕಳನ್ನು ಪಡೆಯುತ್ತೇನೆ ಎಂದಳು.

೬೬. ಎಲೈ ಶಚೀಪತಿಯೇ, ನಿನ್ನನ್ನು ಕುಂತಿಯು ಪ್ರಾರ್ಥಿಸಿದಾಗ ನನ್ನ ಮಾತಿನಂತೆ ಆ ಕುಂತಿಗೆ ಈ ನರನನ್ನು ಕೊಡು.

೬೭-೭೦. ಆಗ ದೇವೇಂದ್ರನು ದುಃಖಪಡುತ್ತಾ, ವಿಷ್ಣುವನ್ನು ಕುರಿತು ಇಂತೆಂದನು, ಎಲೈ ವಿಷ್ಣುವೇ ಇಪ್ಪತ್ತೇಳು ಮನ್ವಂತರಗಳ ಹಿಂದೆ ಇದೇ ಮನ್ವಂತರದಲ್ಲಿ ರಘುಕುಲದಲ್ಲಿ ದಶರಥನ ಮನೆಯಲ್ಲಿ ರಾಮ ರೂಪಿನಿಂದ ನೀನು ಅವತರಿಸಿದ್ದೆ. ಆಗ ಸೀತೆಗೋಸ್ಕರ ಕಾಡಿನಲ್ಲಿ ಸಂಚರಿಸುತ್ತಿದ್ದಾಗ ಸೂರ್ಯ ಪುತ್ರನಾದ ಸುಗ್ರೀವನ ಹಿತಕ್ಕೋಸ್ಕರ ನನ್ನ ಮಗನಾದ ವಾಲಿಯೆಂಬವನನ್ನು ಕೊಂದುಹಾಕಿದ್ದೀಯೆ. ಆ ದುಃಖವೇ ನನಗೆ ಬಹುವಾಗಿದೆ, ಈ ಮಗನನ್ನು ನಾನು ತೆಗೆದುಕೊಳ್ಳುವುದಿಲ್ಲ ಎಂದನು.

ಅಗೃಹ್ಣಮಾನಂ ದೇವೇಂದ್ರಂ ಕಾರಣಾಂತರವಾಚಿನಂ ।
ಹರಿಃ ಪ್ರಾಹ ಶುನಾಸೀರಂ ಭುವೋ ಭಾರಾವತಾರಣೇ ॥ ೭೦ ॥

ಅವತಾರಂ ಗಮಿಷ್ಯಾಮಿ ಮರ್ತ್ಯಲೋಕೇ ತ್ವಹಂ ಪ್ರಭೋ ।
ಸೂರ್ಯಪುತ್ರಸ್ಯ ನಾಶಾರ್ಥಂ ಜಯಾರ್ಥಮಾತ್ಮಜಸ್ಯ ತೇ ॥೭೨ ॥

ಸಾರಥ್ಯಂ ಚ ಕರಿಷ್ಯಾಮಿ ನಾಶಂ ಕುರುಕುಲಸ್ಯ ಚ ।
ತತೋ ಹೃಷ್ಟೋಽಭವಚ್ಛಕ್ರೋ ವಿಷ್ಣುವಾಕ್ಯೇನ ತೇನ ಹ ॥ ೭೩ ॥

ಪ್ರತಿಗೃಹ್ಯ ನರಂ ಹೃಷ್ಟಃ ಸತ್ಯಂ ಚಾಸ್ತು ವಚಸ್ತವ ।
ಏವಮುಕ್ತ್ವಾ ವರಂ ದೇವಃ ಪ್ರೇಷಯಿತ್ವಾಽಚ್ಯುತಃ ಸ್ವಯಂ ॥ ೭೪ ॥

ಗತ್ವಾ ಚ ಪುಂಡರೀಕಾಕ್ಷೋ ಬ್ರಹ್ಮಾಣಂ ಬ್ರಹ್ಮವೇಶ್ಮನಿ ।
ತ್ವಯಾ ಸೃಷ್ಟಮಿದಂ ಸರ್ವಂ ತ್ರೈಲೋಕ್ಯಂ ಸಚರಾಚರಂ ॥ ೭೫ ॥

ಆವಾಂ ಕಾರ್ಯಸ್ಯ ಕರಣೇ ಸಹಾಯೌ ಚ ತವ ಪ್ರಭೋ ।
ಸ್ವಯಂ ಕೃತ್ವಾ ಪುನರ್ನಾಶಂ ಕರ್ತುಂ ದೇವ ನ ಬುಧ್ಯಸೇ ॥ ೭೬ ॥

---

೭೧. ದೇವೇಂದ್ರನು ಆ ನರನನ್ನು ತೆಗೆದುಕೊಳ್ಳದೇ ಬೇರೇ ಸಬೂಬನ್ನು ಹೇಳುತ್ತಿರಲು, ಹರಿಯು ಇಂದ್ರನ್ನು ಕುರಿತು ಭೂಮಿಯ ಭಾರವನ್ನು ಇಳಿಸುವ ವಿಷಯದಲ್ಲಿ ಹೀಗೆಂದನು.

೭೨. ಎಲೈ ಇಂದ್ರನೇ, ಸೂರ್ಯ ಪುತ್ರನ ನಾಶಕ್ಕೂ ನಿನ್ನ ಮಗನ ಜಯಕ್ಕೂ, ನಾನು ಭೂಲೋಕದಲ್ಲಿ ಅವತರಿಸಿರುವೆನು.

೭೩. ಕುರುಕುಲದ ನಾಶಕ್ಕೋಸ್ಕರ ಅವತರಿಸಿ ನಿನ್ನ ಮಗನ ಸಾರಥ್ಯವನು ಮಾಡುತ್ತೇನೆ ಎಂದನು. ಅನಂತರ ಈ ಮಾತಿನಿಂದ ಶಕ್ರನು ಸಂತೋಷಗೊಂಡನು.

೭೪-೭೫. ಆಗ ಇಂದ್ರನು ಆ ನರನನ್ನು ತೆಗೆದುಕೊಂಡು ಎಲೈ ವಿಷ್ಣುವೇ, ನಿನ್ನ ಮಾತು ಸತ್ಯವಾಗಲಿ ಎಂದನು. ಈರೀತಿ ವಿಷ್ಣುವು ವರವನ್ನು ಕೊಟ್ಟು ಇಂದ್ರನನ್ನು ಕಳುಹಿಸಿ ತಾನು ಬ್ರಹ್ಮನ ಮನೆಗೆ ಹೋಗಿ ಬ್ರಹ್ಮನನ್ನು ಕುರಿತು, ಎಲೈ ಬ್ರಹ್ಮನೇ, ಈ ಚರಾಚರಾತ್ಮಕವಾದ ಮೂರು ಲೋಕಗಳನ್ನು ನೀನು ಸೃಷ್ಟಿಸಿದೆ.

೭೬. ನಾವಿಬ್ಬರೂ ನಿನ್ನ ಕಾರ್ಯದ ವಿಷಯದಲ್ಲಿ ಸಹಾಯಕರಾಗಿದ್ದೇವೆ. ನೀನು ಸೃಷ್ಟಿಮಾಡಿ ಅದನ್ನು ನಾಶಮಾಡಲು ಸಿದ್ಧನಾಗಲಾರೆ.

ಕೃತಂ ಜುಗುಪ್ಸಿತಂ ಕರ್ಮ ಭೋಸ್ತ್ವಯಾ ವಿಜಿಘಾಂಸತಾ ।
ತ್ವಯಾ ಚ ದೇವದೇವಸ್ಯ ಸೃಷ್ಟಃ ಕೋಪೇನ ವೈ ಪುಮಾನ್ ॥ ೭೭ ॥

ಶುದ್ಧ್ಯರ್ಥಮಸ್ಯ ಪಾಪಸ್ಯ ಪ್ರಾಯಶ್ಚಿತ್ತಂ ಪರಂ ಕುರು ।
ಗೃಹ್ಣನ್ವಹ್ನಿತ್ರಯಂ ದೇವ ಅಗ್ನಿಹೋತ್ರಮುಪಾಹರ ॥ ೭೮ ॥

ಪುಣ್ಯತೀರ್ಥೇ ತಥಾ ದೇಶೇ ವನೇ ವಾಽಪಿ ಪಿತಾಮಹ ।
ಸ್ವಪತ್ನ್ಯಾ ಸಹಿತೋ ಯಜ್ಞಂ ಕುರುಷ್ವಾಸ್ಮದನುಗ್ರಹಾತ್ ॥ ೭೯ ॥

ಸರ್ವೇ ದೇವಾಸ್ತಥಾದಿತ್ಯಾ ರುದ್ರಾಶ್ಚಾಪಿ ಜಗತ್ಪತೇ ।
ಆದಿಷ್ಟಂ ತೇ ಕರಿಷ್ಯಂತಿ ಯತೋಽಸ್ಮಾಕಂ ಭವಾನ್ಪ್ರಭುಃ ॥ ೮೦ ॥

ಏಕಸ್ತು ಗಾರ್ಹಪತ್ಯೋಽಗ್ನಿರ್ದ್ವಿತೀಯೋ ದಕ್ಷಿಣಃ ಸ್ಮೃತಃ ।
ಆಹವನೀಯಸ್ತೃತೀಯಸ್ತು ತ್ರಿಕುಂಡೇಷು ಪ್ರಕಲ್ಪಯೇತ್ ॥ ೮೧ ॥

---

೭೭. ಎಲೈ ಬ್ರಹ್ಮನೇ, ದೇವದೇವನಾದ ಶಿವನನ್ನು ಕೊಲ್ಲಲು ನೀನು ಕೋಪದಿಂದ ಸೃಷ್ಟಿಸಿದ ಕೆಲಸವು ನಿಂದ್ಯವಾದುದು.

೭೮. ನೀನು ಮಾಡಿದ ಈ ಪಾಪ ಕೆಲಸಕ್ಕೆ ಪ್ರಾಯಶ್ಚಿತ್ತವನ್ನು ಮಾಡಿಕೋ, ಆದಕ್ಕೋಸ್ಕರ ಆಹವನೀಯ, ಗಾರ್ಹಪತ್ಯ ದಕ್ಷಿಣಾಗ್ನಿಗಳನ್ನು ಸ್ಥಾಪಿಸಿಕೊಂಡು ಅಗ್ನಿಹೋತ್ರವನ್ನು ಮಾಡು.

೭೯. ಎಲೈ ಬ್ರಹ್ಮನೇ, ಪುಣ್ಯತೀರ್ಥವಿರುವ ದೇಶದಲ್ಲಿ ನಿನ್ನ ಪಂಡತಿಯೊಡನೆ ನಮ್ಮ ಅನುಮತಿಯಿಂದ ಯಜ್ಞವನ್ನು ಮಾಡು.

೮೦. ಎಲ್ಲಾ ದೇವತೆಗಳೂ, ಆದಿತ್ಯರೂ, ರುದ್ರರುಗಳೂ, ನೀನು ಅಪ್ಪಣೆ ಮಾಡಿದಂತೆ ನಡೆಯುತ್ತಾರೆ, ಏಕೆಂದರೆ, ನೀನು ನಮ್ಮಗಳಿಗೆ ಯಜಮಾನನು.

೮೧-೮೨. ಗಾರ್ಹಪತ್ಯ, ದಕ್ಷಿಣಾಗ್ನಿ, ಆಹವನೀಯಾಗ್ನಿಗಳನ್ನು, ಮೂರು ಕುಂಡಗಳನ್ನು ಮಾಡಿ ಅವುಗಳಲ್ಲಿ ಸ್ಥಾಪಿಸಬೇಕು. ವರ್ತುಲವಾದ ಕುಂಡದಲ್ಲಿ ಬ್ರಹ್ಮನನ್ನೂ, ಧನುಸ್ಸಿನ ಆಕಾರದ ಕುಂಡದಲ್ಲಿ ವಿಷ್ಣುವನ್ನೂ, ಚತುಷ್ಕೋಣದಲ್ಲಿ ಹರನನ್ನೂ, ಋಗ್ಯಜುಃ ಸಾಮಾದ ಹೆಸರಿನಿಂದ ಸ್ಥಾಪಿಸು.

ವರ್ತುಲೇ ಅರ್ಪಯಾತ್ಮಾನಂ ಮಾಮಘೋ ಧನುಷಾ ಕೃತೇ ।
ಚತುಷ್ಕೋಣೇ ಹರಂ ದೇವಮೃಗ್ಯಜುಃಸಾಮನಾಮಭಿಃ ॥ ೮೨ ॥

ಅಗ್ನೀನುತ್ಪಾದ್ಯ ತಪಸಃ ಪರಾಮೃದ್ಧಿಮವಾಪ್ಯ ಚ ।
ದಿವ್ಯಂ ವರ್ಷಸಹಸ್ರಂ ತುಂ ಹುತ್ವಾಗ್ನೀನ್ಮಾಂ ಸಮೇಷ್ಯಸಿ ॥ ೮೩ ॥

ಅಗ್ನಿಹೋತ್ರಾತ್ಪರಂ ನಾನ್ಯತ್ಪವಿತ್ರಮಿಹ ಪಠ್ಯತೇ ।
ಜುಹ್ವತೇ ಯೇಽಗ್ನಿಹೋತ್ರೇಣ ಪರಾಂ ಯಾಂತಿ ಗತಿಂ ದ್ವಿಜಾಃ ॥ ೮೪ ॥

ಪಂಥಾನೋ ದೇವಲೋಕಸ್ಯ ದರ್ಶಯಂತ್ಯಗ್ರತಸ್ತ್ವಮೀ ।
ಏಕೋಽಗ್ನಿಃ ಸರ್ವದಾಽಚಾಯಾ ಹ್ಯಕ್ಷಯೋಽಗ್ನಿರ್ದ್ವಿಜನ್ಮನಾ ।
ವಿನಾಗ್ನಿನಾ ದ್ವಿಜೇನೇಹ ಗಾರ್ಹಸ್ಥ್ಯಂ ನ ತು ಲಭ್ಯತೇ ॥ ೮೫ ॥

॥ ಭೀಷ್ಮ ಉವಾಚ ॥

ಯೋಽಸೌ ಕಪಾಲಾದುತ್ಪನ್ನೋ ನರೋ ನಾಮ ಧನುರ್ಧರಃ ।
ಕಿಮೇಷ ಮಾಧವಾಜ್ಜಾತ ಉತಾಹೋ ಸ್ವೇನ ಕರ್ಮಣಾ ॥ ೮೬ ॥

---

೮೩. ತಪಸ್ಸಿನಿಂದ ಅಗ್ನಿಯನ್ನು ಉತ್ಪಾದನೆಮಾಡಿ, ಬಹುವಾಗಿ ಅದನ್ನು ವೃದ್ಧಿಪಡಿಸಿ, ನೀನೂ ವೃದ್ಧಿಯನ್ನು ಹೊಂದಿ, ದೇವತೆಗಳ ಸಾವಿರವರ್ಷಗಳವರೆಗೂ ಹೋಮಮಾಡಿ ನನ್ನನ್ನು ಹೊಂದುತ್ತೀಯೆ.

೮೪. ಅಗ್ನಿಹೋತ್ರಕ್ಕಿಂತಲೂ ಉತ್ತಮವಾದುದು ಈ ಲೋಕದಲ್ಲಿ ಇಲ್ಲವೇ ಇಲ್ಲ. ಯಾರು ಅಗ್ನಿಹೋತ್ರವನ್ನು ಮಾಡುತ್ತಾರೆಯೋ, ಅವರು ಉತ್ತಮ ಗತಿಯನ್ನು ಹೊಂದುತ್ತಾರೆ.

೮೫. ಈ ಅಗ್ನಿಗಳು ದೇವಲೋಕದ ದಾರಿಗಳನ್ನು ತೋರಿಸುತ್ತವೆ. ಅಗ್ನಿಯೊಂದನ್ನೇ ದ್ವಿಜನಾದವನು ಕ್ಷಯಿಸದಂತೆ ನೋಡಿಕೊಂಡು ಪೂಜಿಸುತ್ತಿರಬೇಕು. ಅಗ್ನಿಯಿಲ್ಲದಿದ್ದರೆ ದ್ವಿಜನಾದವನು, ಗೃಹಸ್ಥಾಶ್ರಮವನ್ನು ಹೊಂದಲಾರನು.

೮೬. ಭೀಷ್ಮನು ಹೇಳಿದನು:—ಕಪಾಲದಲ್ಲಿ ಧನುರ್ಧರನಾಗಿ ಹುಟ್ಟಿದ ನರನೆಂಬುವನು ಮಾಧವನಿಂದ ಹುಟ್ಟಿದವನೇ?

ಉತ ರುದ್ರೇಣ ಜನಿತಃ ಕಥಂ ವಾ ಬುದ್ಧಿಪೂರ್ವಕಂ ।
ವಿಷ್ಣುನಾ ವಾ ಭಗವತಾ ಬ್ರಹ್ಮಣಾ ವಾ ಭವೇದುತ ॥ ೮೭ ॥

ಕೇನ ಕಸ್ಮಾತ್ಸಮುತ್ಪನ್ನಃ ಶಂಕರಾದುತ ಬ್ರಹ್ಮಣಃ ।
ಬ್ರಹ್ಮಾ ಹಿರಣ್ಯಗರ್ಭೋಽಯಮಂಡಜಾತಶ್ಚತುರ್ಮುಖಃ ॥ ೮೮ ॥

ಅದ್ಭುತಂ ಪಂಚಮಂ ತಸ್ಯ ವಕ್ತ್ರಂ ತತ್ಕಥಮುತ್ಥಿತಂ ।
ಸತ್ತ್ವೇ ರಜೋ ನ ದೃಶ್ಯೇತ ನ ಸತ್ತ್ವಂ ರಜಸಿ ಕ್ವಚಿತ್ ॥ ೮೯ ॥

ಸತ್ತ್ವಸ್ಥೋ ಭಗವಾನ್ಬ್ರಹ್ಮಾ ಕಥಮುದ್ರೇಕಮಾದಧತ್ ।
ಮೂಢಾತ್ಮನಾ ನರೋ ಯೇನ ನಿಹಂತುಂ ಪ್ರಹಿತೋ ಹರಂ ॥ ೯೦ ॥

॥ ಪುಲಸ್ತ್ಯ ಉವಾಚ ॥

ಮಹೇಶ್ವರಹರೀ ಚೈತೌ ದ್ವಾವೇವ ಸತ್ಪಥಿ ಸ್ಥಿತೌ ।
ತಯೋರವಿದಿತಂ ನಾಸ್ತಿ ಸಿದ್ಧಾಸಿದ್ಧಂ ಮಹಾತ್ಮನೋಃ ॥ ೯೧ ॥

---

೮೭. ಇಲ್ಲದಿದ್ದರೆ ರುದ್ರನಿಂದ ಹುಟ್ಟಿದನೇ? ಅದಿಲ್ಲದಿದ್ದರೆ ಬ್ರಹ್ಮ ವಿಷ್ಣು ರುದ್ರರು ಸೇರಿ ಬುದ್ಧಿಪೂರ್ವಕವಾಗಿ ಹುಟ್ಟಿಸಿದರೇ? ಯಾರಿಂದ ಯಾತರ ದೆಸೆಯಿಂದ ಹುಟ್ಟಿದನು.

೮೮. ಹಿರಣ್ಯ ಗರ್ಭನೂ, ಅಂಡಜಾತನೂ, ಆದ ಬ್ರಹ್ಮನಿಗೆ ನಾಲ್ಕು ಮುಖ ಗಳಿವೆಯಷ್ಟೇ?

೮೯-೯೦. ಅಂತಹ ಚತುರ್ಮುಖ ಬ್ರಹ್ಮನಿಗೆ ಐದನೆಯ ಮುಖವು ಹೇಗೆ ಹುಟ್ಟಿತು? ಇದು ಆಶ್ಚರ್ಯವು, ಸತ್ವಗುಣದಲ್ಲಿ ರಜೋಗುಣವು ಕಾಣುವುದಿಲ್ಲ. ರಜೋಗುಣದಲ್ಲಿ ಸತ್ವವೂ ತೋರುವುದಿಲ್ಲ, ಸತ್ವಗುಣ ಪರಿಪೂರ್ಣನಾದ ಬ್ರಹ್ಮನು ರಜೋಗುಣವನ್ನು ಹೊಂದಿದುದು ಹೇಗೆ? ಮೂಢನಾದ ಆ ಬ್ರಹ್ಮನು ಹರನನ್ನು ಕೊಲ್ಲಲು ನರನನ್ನು ಕಳುಹಿಸಲು ಕಾರಣವೇನು?

೯೧. ಪುಲಸ್ತ್ಯನು ಹೇಳಿದನು:—ಮಹೇಶ್ವರ, ಹರಿ, ಇವರಿಬ್ಬರೇನೇ ಸರಿಯಾದ ದಾರಿಯಲ್ಲಿ ನಡೆಯತಕ್ಕವರು. ಈ ಮಹಾತ್ಮರಿಬ್ಬರಿಗೂ ತಿಳಿಯದುದೂ, ಸಿದ್ಧವಲ್ಲದುದೂ ಸಿದ್ಧಿಯಾಗದುದೂ, ಇಲ್ಲವೇ ಇಲ್ಲ.

ಬ್ರಹ್ಮಣಃ ಪಂಚಮಂ ವಕ್ತ್ರಮೂರ್ಧ್ವಮಾಸೀನ್ಮಹಾತ್ಮನಃ ।
ತತೋ ಬ್ರಹ್ಮಾಭವನ್ಮೂಢೋ ರಜಸಾ ಚೋಪಬೃಂಹಿತಃ ॥ ೯೨ ॥

ತತೋಽಯಂ ತೇಜಸಾ ಸೃಷ್ಟಿಮಮನ್ಯತ ಮಯಾ ಕೃತಾಂ ।
ಮತ್ತುಲೋ ನಾಸ್ತಿ ವೈ ದೇವೋ ಯೇನ ಸೃಷ್ಟಿಃ ಪ್ರವರ್ತಿತಾ ॥ ೯೩ ॥

ಸಹದೇವಾಃ ಸಗಂಧರ್ವಾಃ ಪಶುಪಕ್ಷಿಮೃಗಾಃ ಕೃತಾಃ ।
ಏವಂ ಮೂಢಃ ಸ ಪಂಚಾಸ್ಯೋ ವಿರಿಂಚೋಽಭವದಚ್ಯುತಃ ॥ ೯೪ ॥

ಪ್ರಾಗ್ವಕ್ತ್ರಂ ಮುಖ್ಯಮೇತಸ್ಯ ಋಗ್ವೇದಸ್ಯ ಪ್ರವರ್ತಕಂ ।
ದ್ವಿತೀಯಂ ವದನಂ ಚೈವ ಯಜುರ್ವೇದಪ್ರವರ್ತಕಂ ॥ ೯೫ ॥

ತೃತೀಯಂ ಸಾಮವೇದಸ್ಯ ಅಥರ್ವಾರ್ಥಂ ಚತುರ್ಥಕಂ ।
ಸಾಂಗೋಪಾಂಗೇತಿಹಾಸಾಂಶ್ಚ ಸರಹಸ್ಯಾನ್ಸಸಂಗ್ರಹಾನ್ ॥ ೯೬ ॥

---

೯೨. ಬ್ರಹ್ಮನಿಗೆ ಐದನೆಯ ಮುಖವು ಮೇಲುಗಡೆಗಿದ್ದಿತು. ಆದ್ದರಿಂದ ಬ್ರಹ್ಮನು ಮೂಢನಾಗಿ ರಜೋಗುಣದಿಂದ ವೃದ್ಧಿ ಹೊಂದಿದನು.

೯೩. ಆದ್ದರಿಂದ ಆತನು ಇದನ್ನು ನಾನು ಮಾಡಿದೆನೆಂದು, ಶಕ್ತಿಯಿಂದ ತಿಳಿಯುತ್ತ ನಾನು ಸೃಷ್ಟಿಯನ್ನು ಮಾಡಿದೆನಾದ್ದರಿಂದ ಶಕ್ತಿಯಲ್ಲಿ ನನಗೆ ಹೆಚ್ಚಿನವನಿಲ್ಲವೆಂದು ತಿಳಿದಿದ್ದನು.

೯೪. ದೇವತೆಗಳನ್ನೂ ಗಂಧರ್ವರನ್ನೂ, ಪಶು, ಪಕ್ಷಿ, ಮೃಗಗಳನ್ನೂ ಸೃಷ್ಟಿಸಿದೆನು. ಎಂದು ಮೂಢನಾಗಿ, ಆ ಐದು ಮುಖವುಳ್ಳ ಬ್ರಹ್ಮನು ನಾಶರಹಿತನಾದನು.

೯೫. ಈ ಬ್ರಹ್ಮನ ಮೊದಲನೆಯ ಮುಖವು ಋಗ್ವೇದಕ್ಕೆ ಪ್ರವರ್ತಕವಾದುದರಿಂದ ಮುಖ್ಯವಾದದು, ಎರಡನೆಯ ಮುಖವು ಯಜುರ್ವೇದಕ್ಕೆ ಪ್ರವರ್ತಕವಾದುದು, ಮೂರನೆಯ ಮುಖವು ಸಾಮವೇದಕ್ಕೂ, ನಾಲ್ಕನೆಯ ಮುಖವು ಅಥರ್ವವೇದಕ್ಕೂ ಪ್ರವರ್ತಕವಾದುವು.

೯೬. ಅಂಗ, ಉಪಾಂಗ, ಇತಿಹಾಸ, ರಹಸ್ಯಗಳನ್ನು ಸೇರಿಸಿಕೊಂಡು ಐದನೆಯದಾದ ಕಣ್ಣುಗಳನ್ನು ಮೇಲಕ್ಕೆ ಮಾಡಿಕೊಂಡಿರುವ ಮೇಲಿನ ಮುಖದಿಂದ ವೇದಗಳನ್ನೆಲ್ಲವನ್ನೂ ಅಧ್ಯಯನಮಾಡುತ್ತಾನೆ.

ವೇದಾನಧೀತೇ ವಕ್ತ್ರೇಣ ಪಂಚಮೇನೋರ್ಧ್ವಚಕ್ಷುಷಾ ।
ಸುರಾಸುರಾಸ್ತಸ್ಯ ಸರ್ವೇ ವಕ್ತ್ರಸ್ಯಾದ್ಭುತತೇಜಸಾ　　॥ ೯೭ ॥

ಸರ್ವಶೋ ನ ಪ್ರಕಾಶಂತೇ ದೀಪಾಃ ಸೂರ್ಯೋದಯೇ ಯಥಾ ।
ಸ್ವಪುರೇ ಹ್ಯಪಿ ಸೋದ್ವೇಗಾ ಹ್ಯವರ್ತಂತ ವಿಚೇತಸಃ　　॥ ೯೮ ॥

ನ ಕಿಂಚಿದ್ಗಣಯೇಚ್ಛಾನ್ಯಂ ತೇಜಸಾ ಕ್ಷಿಪತೇ ಪರಾನ್ ।
ನಾಭಿಗಂತುಂ ನ ಚ ದ್ರಷ್ಟುಂ ಪುರಸ್ತಾನ್ನೋಪಸರ್ಪಿತುಂ　　॥ ೯೯ ॥

ಶೇಕುಸ್ತ್ರಸ್ತಾಃ ಸುರಾಃ ಸರ್ವೇ ಪದ್ಮಯೋನಿಂ ಮಹಾಪ್ರಭುಂ ।
ಅಭಿಭೂತಮಿವಾತ್ಮಾನಂ ಮನ್ಯಮಾನಾ ಹತತ್ವಿಷಃ　　॥ ೧೦೦ ॥

ಸರ್ವೇ ತೇ ಮಂತ್ರಯಾಮಾಸುರ್ದೇವತಾ ಹಿತಮಾತ್ಮನಃ ।
ಗಚ್ಛಾಮಃ ಶರಣಂ ಶಂಭುಂ ನಿಸ್ತೇಜಸೋಽಸ್ಯ ತೇಜಸಾ　　॥ ೧೦೧ ॥

---

೯೭. ಸುರಾಸುರರೆಲ್ಲರೂ ಈ ಐದನೆಯ ಮುಖದ ಅದ್ಭುತವಾದ ತೇಜಸ್ಸಿನಿಂದ ಸೂರ್ಯೋದಯವಾದ ನಂತರ ದೀಪಗಳು ಪ್ರಕಾಶಿಸದಿರುವಂತೆ ಪ್ರಕಾಶಿಸುವುದಿಲ್ಲ.

೯೮-೧೦೦. ಸುರಾಸುರರು ತಮ್ಮ ತಮ್ಮ ಊರುಗಳಲ್ಲಿಯೂ ಕೂಡ ಹೆದರಿಕೊಂಡೇ ಇರುತ್ತಿದ್ದರು. ಆ ಬ್ರಹ್ಮನು ಬೇರೆಯವರನ್ನಾರನ್ನೂ ಲಕ್ಷಿಸದೆ ಅವರನ್ನು ತಿರಸ್ಕರಿಸುತ್ತಿದ್ದನು. ಅದರಿಂದ ಆ ಸುರಾಸುರರೆಲ್ಲರೂ ಆ ಬ್ರಹ್ಮನ ಬಳಿಗೆ ಹೋಗುವುದಕ್ಕೂ, ಆತನನ್ನು ನೋಡುವುದಕ್ಕೂ, ಅವನ ಮುಂದೆ ಹೋಗುವುದಕ್ಕೂ ಸಮರ್ಥರಾಗುತ್ತಿರಲಿಲ್ಲ. ಅವರೆಲ್ಲರೂ ಕಾಂತಿಹೀನರಾಗಿ ಅವಮಾನ ಪಡೆದವರಂತೆ ಇರುತ್ತಿದ್ದರು.

೧೦೧. ಆಗ ದೇವತೆಗಳೆಲ್ಲರೂ ಸೇರಿ ತಮಗೆ ಹಿತವನ್ನು ಯೋಚಿಸಿಕೊಂಡು, ಇವನ ತೇಜಸ್ಸಿನಿಂದ ನಾವು ತೇಜೋಹೀನರಾಗಿದ್ದೇವೆ. ಅದ್ದರಿಂದ ಶಂಭುವನ್ನು ಶರಣುಹೊಂದೋಣ ಎಂದುಕೊಂಡುಹೋದರು.

॥ ದೇವಾ ಊಚುಃ ॥

ನಮಸ್ತೇ ಸರ್ವದೇವೇಶ ಮಹೇಶ್ವರ ನಮೋ ನಮಃ ।
ಯಜ್ಞಯೋನೇ ಪರಂ ಬ್ರಹ್ಮ ಭೂತಾತ್ಮಂಸ್ತ್ವಂ ಸನಾತನ ॥ ೧೦೨ ॥

ಪ್ರತಿಷ್ಠಾ ಸರ್ವಜಗತಾಂ ತ್ವಂ ಹೇತುರ್ವಿಷ್ಣುನಾ ಸಹ ।
ಏವಂ ಸಂಸ್ತೂಯಮಾನೋಽಸೌ ದೇವರ್ಷಿಪಿತೃದಾನವೈಃ ॥ ೧೦೩ ॥

ಅಂತರ್ಹಿತ ಉವಾಚೇದಂ ದೇವಾಃ ಪ್ರಾರ್ಥಯೇತೇಪ್ಸಿತಂ ।
ಪ್ರತ್ಯಕ್ಷದರ್ಶನಂ ದತ್ವಾ ದೇಹಿ ದೇವ ಯಥೇಪ್ಸಿತಂ ॥ ೧೦೪ ॥

ಕೃತ್ವಾ ಕಾರುಣ್ಯಮಸ್ಮಾಕಂ ವರಶ್ಚಾಪಿ ಪ್ರದೀಯತಾಂ ।
ಯದಸ್ಮಾಕಂ ಮಹಾವೀರ್ಯಂ ತೇಜೋ ಯಚ್ಚ ಪರಾಕ್ರಮಃ ೧೦೫ ॥

ತತ್ಸರ್ವಂ ಬ್ರಹ್ಮಣಾ ಗ್ರಸ್ತಂ ಪಂಚಮಾಸ್ಯಸ್ಯ ತೇಜಸಾ ।
ವಿನೇಶುಃ ಸರ್ವತೇಜಾಂಸಿ ತ್ವತ್ಪ್ರಸಾದಾತ್ಪುನಃ ಪ್ರಭೋ ॥ ೧೦೬ ॥

---

೧೦೨. ದೇವತೆಗಳು ಹೇಳಿದರು:—ಸರ್ವ ದೇವತೆಗಳಿಗೂ ಒಡೆಯನಾದ ವನೇ, ನಿನಗೆ ನಮಸ್ಕಾರವು, ಮಹೇಶ್ವರನೇ ನಿನಗೆ ನಮೋನಮಃ ಯಜ್ಞಯೋನಿಯೇ ಪರಬ್ರಹ್ಮನೇ, ಭೂತಾತ್ಮನೇ, ಸನಾತನನೇ, ನಿನಗೆ ನಮಸ್ಕಾರವು. ನೀನೇ ಸರ್ವ ಜಗತ್ತಿಗೂ, ಸ್ಥಿತಿಕಾರಣನು. ಆ ಪ್ರಾಣಿಗಳಿಗೆ ವಿಷ್ಣುವಿನೊಡನೆ ನೀನೇ ಕಾರಣ ನಾಗಿದ್ದೀಯೆ.

೧೦೩. ಹೀಗೆ ದೇವತೆಗಳು ಪಿತೃಗಳು ದಾನವರುಗಳಿಂದ ಸ್ತುತಿಸಲ್ಪಟ್ಟ ಈ ಶಿವನು ಅದೃಶ್ಯನಾಗಿಯೇ, ದೇವತೆಗಳೇ, ನಿಮಗೆ ಬೇಕಾದುದನ್ನು ಕೇಳಿಕೊಳ್ಳಿರಿ ಎಂದನು.

೧೦೪. ಎಲೈ ಸ್ವಾಮಿಯೇ, ನೀನು ಪ್ರತ್ಯಕ್ಷ ದರ್ಶನವನ್ನು ಕೊಟ್ಟು ನಮ್ಮಲ್ಲಿ ಕರುಣೆಯನ್ನು ತೋರಿಸಿ ಇಷ್ಟವಾದ ವರವನ್ನು ಕೊಡು.

೧೦೫-೧೦೬. ನಮ್ಮ ಮಹಾವೀರ್ಯವೂ, ತೇಜಸ್ಸೂ, ಪರಾಕ್ರಮವೂ ಅವೆಲ್ಲವೂ ಕೂಡ ಬ್ರಹ್ಮನ ಐದನೆಯ ಮುಖದಿಂದ ನಾಶವಾಯಿತು. ನಿನ್ನ ಅನುಗ್ರಹದಿಂದ ಮತ್ತೆ ಮೊದಲಿನಂತೆ ಉಂಟಾಗುವ ಹಾಗೆ ಎಲೈ ಮಹೇಶ್ವರನೇ, ನೀನು ಮಾಡು.

ಜಾಯಂತೇ ತದ್ಯಥಾ ಪೂರ್ವಂ ತಥಾ ಕುರು ಮಹೇಶ್ವರ ।
ತತಃ ಪ್ರಸನ್ನವದನೋ ದೇವೈಶ್ಚಾಪಿ ನಮಸ್ಕೃತಃ ॥ ೧೦೭ ॥

ಜಗಾಮ ಯತ್ರ ಬ್ರಹ್ಮಾಽಸೌ ರಜೋಽಹಂಕಾರಮೂಢಧೀಃ ।
ದೇವಾಃ ಸ್ತುವಂತೋ ದೇವೇಶಂ ಪರಿವಾರ್ಯ ಉಪಾವಿಶ್ಯ ॥ ೧೦೮ ॥

ಬ್ರಹ್ಮಾ ತಮಾಗತಂ ರುದ್ರಂ ನ ಜಜ್ಞೇ ರಜಸಾ ವೃತಃ
ಸೂರ್ಯಕೋಟಿಸಹಸ್ರಾಣಾಂ ತೇಜಸಾ ರಂಜಯನ್ ಜಗತ್ ॥ ೧೦೯ ॥

ತದಾಽಪ್ಯಶ್ಯತ ವಿಶ್ವಾತ್ಮಾ ವಿಶ್ವಸೃಗ್ವಿಶ್ವಭಾವನಃ ।
ಸ ಪಿತಾಮಹಮಾಸೀನಂ ಸಕಲಂ ದೇವಮಂಡಲಂ ॥ ೧೧೦ ॥

ಅಭಿಗಮ್ಯ ತತೋ ರುದ್ರೋ ಬ್ರಹ್ಮಾಣಂ ಪರಮೇಶ್ವರಂ ।
ಅಹೋಽತಿತೇಜಸಾ ವಕ್ತ್ರಮಧಿಕಂ ದೇವ ರಾಜತೇ ॥ ೧೧೧ ॥

---

೧೦೭-೧೦೮. ಅನಂತರ ಪ್ರಸನ್ನನಾಗಲು ದೇವತೆಗಳು ನಮಸ್ಕರಿಸಿದರು. ಆಮೇಲೆ ರಜೋಽಹಂಕಾರದಿಂದ ಮೂಢನಾದ ಬ್ರಹ್ಮನ ಬಳಿಗೆ ಹೋದನು. ಆಗ ದೇವತೆಗಳು ಆ ಶಿವನನ್ನು ಸ್ತುತಿಸುತ್ತಾ ಸುತ್ತಲೂ ಕುಳಿತರು.

೧೦೯. ಬ್ರಹ್ಮನು ರಜೋಗುಣದಿಂದ ಕೂಡಿಕೊಂಡು ಅಲ್ಲಿಗೆ ಬಂದ ರುದ್ರನನ್ನು ತಿಳಿದುಕೊಳ್ಳಲಿಲ್ಲ, ಆಗ ಆ ರುದ್ರನು ಕೋಟಿ ಜನ ಸೂರ್ಯರ ತೇಜಸ್ಸಿನಿಂದ ಪ್ರಪಂಚವನ್ನು ರಂಜಿಸುತ್ತ, ವಿಶ್ವಾತ್ಮನೂ, ವಿಶ್ವಸೃಷ್ಟನೂ, ವಿಶ್ವಭಾವನೂ ಆದ ಸ್ವಾಮಿಯಾಗಿ ಕಂಡುಬಂದನು.

೧೧೦. ಆಗ ಆ ರುದ್ರನು ಅಲ್ಲಿ ಕುಳಿತಿರುವ ಪಿತಾಮಹನನ್ನೂ ದೇವತೆಗಳ ಗುಂಪನ್ನೂ, ಉದ್ದೇಶಿಸಿ ಪರಮೇಶ್ವರನಾದ ಬ್ರಹ್ಮನಿಗೆಂತೆಂದನು.

೧೧೧. ಎಲೈ ಬ್ರಹ್ಮನೇ, ನಿನ್ನ ಮುಖವು ಬಹುವಾದ ತೇಜಸ್ಸಿನಿಂದ ಪ್ರಕಾಶಿಸುತ್ತದೆ ಎಂದು ಹೇಳಿ, ಆ ಶಿವನು ದೊಡ್ಡದಾಗಿ ನಕ್ಕನು.

ಏವಮುಕ್ತ್ವಾಽಟ್ಟಹಾಸಂ ತು ಮುಮೋಚ ಶಶಿಶೇಖರಃ ।
ವಾಮಾಂಗುಷ್ಠನಖಾಗ್ರೇಣ ಬ್ರಹ್ಮಣಃ ಪಂಚಮಂ ಶಿರಃ ॥ ೧೧೨ ॥

ಚಕರ್ತ ಕದಲೀಗರ್ಭಂ ನರಃ ಕರರುಹೈರಿವ ।
ಛಿನ್ನಂ ತು ತಚ್ಛಿರಃ ಪಶ್ಚಾದ್ರುದ್ರಹಸ್ತೇ ಸ್ಥಿತಂ ತದಾ ॥ ೧೧೩ ॥

ಗ್ರಹಮಂಡಲಮಧ್ಯಸ್ಥೋ ದ್ವಿತೀಯ ಇವ ಚಂದ್ರಮಾಃ ।
ಉತ್ಕ್ಷಿಪ್ತಕರಕಪಾಲೋ ನನರ್ತ ತ್ರಿದಶೇಶ್ವರಃ ॥ ೧೧೪ ॥

ಶಿಖರಸ್ಥೇನ ಸೂರ್ಯೇಣ ಕೈಲಾಸ ಇವ ಪರ್ವತಃ ।
ಛಿನ್ನೇ ವಕ್ತ್ರೇ ತತೋ ದೇವಾ ಹೃಷ್ಟಾಸ್ತಂ ವೃಷಭಧ್ವಜಂ ।
ತುಷ್ಟುವುರ್ವಿವಿಧೈಃ ಸ್ತೋತ್ರೈಸ್ತತ್ರ ದೇವಂ ಕಪರ್ದಿನಂ ॥ ೧೧೫ ॥

॥ ದೇವಾ ಊಚುಃ ॥

ನಮಃ ಕಪಾಲಿನೇ ನಿತ್ಯಂ ಮಹಾಕಾಲಾಯ ಶಂಖಿನೇ ।
ಐಶ್ವರ್ಯಜ್ಞಾನಯುಕ್ತಾಯ ಸರ್ವಭೋಗಪ್ರದಾಯಿನೇ ॥ ೧೧೬ ॥

---

೧೧೨-೧೧೩. ಆಗ ಆ ಶಿವನು ಎಡಗೈಯುಂಗುಷ್ಠದ ಉಗುರಿನಿಂದ ಆ ಬ್ರಹ್ಮನ ಐದನೆಯ ತಲೆಯನ್ನು, ಮನುಷ್ಯನು ಬಾಳೆಯ ಎಲೆಯನ್ನು ಉಗುರಿನಿಂದ ಕತ್ತರಿಸುವಂತೆ ಕತ್ತರಿಸಿದನು. ಕತ್ತರಿಸಿದ ಆ ತಲೆಯು ಅನಂತರ ಆ ರುದ್ರನ ಕೈಗೆ ಅಂಟಿಕೊಂಡಿತು. ಗ್ರಹಗಳ ಮಂಡಲದ ಮಧ್ಯದಲ್ಲಿದ್ದ ಎರಡನೆಯ ಚಂದ್ರನೋ ಎಂಬಂತೆ ಕೈಗೆ ಅಂಟಿಕೊಂಡಿತು.

೧೧೪. ಆ ಶಿವನು ಆ ಕೈಯ್ಯಲ್ಲಿದ್ದ ಕಪಾಲವನ್ನು ಮೇಲಕ್ಕೆತ್ತಿಕೊಂಡು, ಕೈಲಾಸಪರ್ವತವು ತಲೆಯಮೇಲೆ ಸೂರ್ಯನನ್ನು ಹೊತ್ತುಕೊಂಡು ಕುಣಿದಂತೆ ಕುಣಿದನು.

೧೧೫. ಆ ಬ್ರಹ್ಮನ ಮುಖವನ್ನು ಕತ್ತರಿಸಲು ದೇವತೆಗಳು ಸಂತೋಷಗೊಂಡು ಆ ವೃಷಭಧ್ವಜನನ್ನು ಅನೇಕವಾದ ಸ್ತೋತ್ರಗಳಿಂದ ಸ್ತುತಿಸಿದರು.

೧೧೬. ದೇವತೆಗಳು ಹೇಳಿದರು :—ಕಪಾಲಿಯೂ, ಕಲನೂ, ಶಂಖಿಯೂ ಆದ ನಿನಗೆ ನಮಸ್ಕಾರವು. ಐಶ್ವರ್ಯ ಜ್ಞಾನಗಳಿಂದ ಕೂಡಿರುವ, ಸರ್ವ ಭೋಗಗಳನ್ನೂ ಕೊಡುವ ಸ್ವಾಮಿಗೆ ನಮಸ್ಕಾರವು.

ನಮೋ ಹರ್ಷವಿಲಾಸಾಯ ಸರ್ವದೇವಮಯಾಯ ಚ ।
ಕಾಲಸಂಹಾರಕರ್ತಾ ತ್ವಂ ಮಹಾಕಾಲಃ ಸ್ಮೃತೋ ಹ್ಯಸಿ ॥ ೧೧೭ ॥

ಭಕ್ತಾನಾಂ ದುಃಖಶಮನೋ ದುಃಖಾಂತಸ್ತೇನ ಚೋಚ್ಯಸೆ ।
ಶಂಕರೋಽಥಾಶು ಭಕ್ತಾನಾಂ ತೇನ ತ್ವಂ ಶಂಕರಃ ಸ್ಮೃತಃ ॥ ೧೧೮ ॥

ಛಿತ್ವಾ ಬ್ರಹ್ಮಶಿರೋ ಯಸ್ಮಾತ್ತ್ವಂ ಕಪಾಲಂ ಬಿಭರ್ಷಿ ಚ ।
ತೇನ ದೇವ ಕಪಾಲೀ ತ್ವಂ ಸ್ತುತೋ ಹ್ಯದ್ಯ ಪ್ರಸೀದ ನಃ ॥ ೧೧೯ ॥

ಏವಂ ಸ್ತುತಃ ಪ್ರಸನ್ನಾತ್ಮಾ ದೇವಾನ್ಪ್ರಸ್ಥಾಪ್ಯ ಶಂಕರಃ ।
ಸ್ವಾನಿ ಧಿಷ್ಣ್ಯಾನಿ ಭಗವಾಂಸ್ತತ್ರೈವಾಸೀನ್ಮುದಾನ್ವಿತಃ ॥ ೧೨೦ ॥

ವಿಜ್ಞಾಯ ಬ್ರಹ್ಮಣೋ ಭಾವಂ ತತೋ ವೀರಸ್ಯ ಜನ್ಮ ಚ ।
ತಂ ಪ್ರವೀರಸ್ಯ ವಾಕ್ಯಾತ್ತು ಲೋಕಾನಾಂ ಲೋಪಶಾಂತಯೇ ॥ ೧೨೧ ॥

---

೧೧೭. ಹರ್ಷವಿಲಾಸಗಳಿಂದ ಕೂಡಿದ ನಿನಗೆ ನಮಸ್ಕಾರವು. ಸರ್ವದೇವ ಸ್ವರೂಪನಾದ ನಿನಗೆ ನಮಸ್ಕಾರವು. ನೀನೇ ಕಾಲವನ್ನು ಸಂಹರಿಸುವವನು. ಮಹಾ ಕಾಲನೂ ನೀನೇ ಆಗಿರುವೆ.

೧೧೮. ಭಕ್ತರಿಗೆ ಉಂಟಾಗುವ ದುಃಖವನ್ನು ನೀನು ನಾಶಮಾಡುವುದರಿಂದ ನಿನಗೆ ದುಃಖಾಂತನೆಂದು ಹೆಸರು. ಭಕ್ತರಿಗೆ ಸುಖವನ್ನೂ ಉಂಟುಮಾಡುವುದರಿಂದ ನಿನ್ನನ್ನು ಶಂಕರನೆನ್ನುತ್ತಾರೆ

೧೧೯. ನೀನು ಬ್ರಹ್ಮನ ಶಿರಸ್ಸನ್ನು ಕತ್ತರಿಸಿ, ಕಪಾಲವನ್ನು ಧರಿಸಿರುವುದರಿಂದ, ನಿನ್ನನ್ನು, ಕಪಾಲಿ ಎಂದೆನ್ನುತ್ತಾರೆ. ನೀನು ನಮಗೆ ಪ್ರಸನ್ನನಾಗು.

೧೨೦. ಈರೀತಿ ಸ್ತುತಿಸಲ್ಪಟ್ಟ ಶಂಕರನು ದೇವತೆಗಳನ್ನು ಅವರ ಮನೆಗಳಿಗೆ ಕಳುಹಿಸಿ ತಾನು ಸಂತೋಷದಿಂದ ಅಲ್ಲಿಯೇ ಇದ್ದನು.

೧೨೧. ಬ್ರಹ್ಮನ ಆ ಅಭಿಪ್ರಾಯವನ್ನೂ ಆ ವೀರನ ಜನ್ಮವನ್ನೂ ತಿಳಿದು. ಆ ವೀರನ ಮಾತಿನಂತೆ ಲೋಕದ ರೀತಿಯನ್ನು ಮೀರದೆ ತಲೆಯ ಮೇಲೆ ಕೈಯ ನ್ನಿಟ್ಟುಕೊಂಡು ಆ ಬ್ರಹ್ಮನಿಗೆ ನಮಸ್ಕರಿಸಿ ಸ್ತುತಿಸಿದನು.

ಶಿರಸ್ಯಂಜಲಿಮಾಧಾಯ ಸಂತುಷ್ಟಾವ ಪ್ರಣಮ್ಯ ತಂ ।
ತೇಜೋನಿಧಿಂ ಪರಂ ಬ್ರಹ್ಮ ಜ್ಞಾತುಮಿಚ್ಛನ್ಪ್ರಜಾಪತಿಂ ॥ ೧೨೨ ॥

ನಿರುಕ್ತಸೂಕ್ತರಹಸ್ಯೈರ್ಋಗ್ಯಜುಃಸಾಮಭಾಷಿತೈಃ ॥ ೧೨೩ ॥

॥ ರುದ್ರ ಉವಾಚ ॥

ಅಪ್ರಮೇಯ ನಮಸ್ತೇಽಸ್ತು ಪರಸ್ಯ ಪರಮಾತ್ಮನೇ ।
ಅದ್ಭುತಾನಾಂ ಪ್ರಸೂತಿಸ್ತ್ವಂ ತೇಜಸಾಂ ನಿಧಿರಕ್ಷಯಃ ॥ ೧೨೪ ॥

ವಿಜಯೋದ್ವಿಶ್ವಭಾವಸ್ತ್ವಂ ಸೃಷ್ಟಿಕರ್ತಾ ಪ್ರಜಾಪತೇ ।
ಊರ್ಧ್ವವಕ್ತ್ರ ನಮಸ್ತೇಽಸ್ತು ಸತ್ತ್ವಾತ್ಮಕ ವರಾತ್ಮಕ ॥ ೧೨೫॥

ಜಲಸ್ಥಾಯಿನ್ ಜಲೋತ್ಪನ್ನ ಜಲಾಲಯ ನಮೋಽಸ್ತು ತೇ ।
ಜಲಜೋತ್ಫುಲ್ಲಪತ್ರಾಕ್ಷ ಜಯದೇವ ಪಿತಾಮಹ ॥ ೧೨೬ ॥

ತ್ವಯಾ ಚೋತ್ಪಾದಿತಂ ಸರ್ವಂ ಸೃಷ್ಟ್ಯರ್ಥಂ ಪರಮೇಶ್ವರ ।
ಯಜ್ಞಾಹುತಿಸದಾಹಾರ ಯಜ್ಞಾಂಗೇಶ ನಮೋಽಸ್ತು ತೇ ॥ ೧೨೭ ॥

---

೧೨೨-೧೨೩. ತೇಜೋನಿಧಿಯಾದ, ಪ್ರಜಾಪತಿಯಾದ ಆ ಪರಬ್ರಹ್ಮನನ್ನು ತಿಳಿಯಲಿಚ್ಛಿಸಿ ಋಗ್ಯಜುಃಸಾಮವೇದಗಳಲ್ಲಿ ಉಕ್ತವಾಗಿರುವ ರೀತಿಯಿಂದ ಸ್ತುತಿಸಿದನು.

೧೨೪. ರುದ್ರನು ಹೇಳಿದನು :—ನೀನು ಅಳತೆಗೆ ಬಾರದವನು, ಪರಾಪರಕ್ಕೂ ಪರಮಾತ್ಮನ ಸ್ವರೂಪನು, ಇಂತಹ ನಿನಗೆ ನಮಸ್ಕಾರವು. ನೀನು ಆಶ್ಚರ್ಯಗಳಿಗೆಲ್ಲಾ ಉತ್ಪತ್ತಿಸ್ಥಾನನು, ತೇಜೋನಿಧಿಯು, ನಾಶರಹಿತನು.

೧೨೫. ನೀನು ಜಯಶೀಲನು, ಪ್ರಪಂಚದ ರೀತಿಯವನು, ಸೃಷ್ಟಿಸುವವನು. ಎಲೈ ಮೇಲು ಮುಖಕ್ಕಿರುವ ಮುಖವುಳ್ಳ, ಸತ್ವಸ್ವರೂಪನಾದ ಬ್ರಹನೇ, ನಿನಗೆ ನಮಸ್ಕಾರವು.

೧೨೬. ಜಲದಲ್ಲಿರುವವನೇ, ಜಲದಲ್ಲಿ ಹುಟ್ಟಿದವನೇ, ಜಲವೇ ಮನೆಯಾಗಿರುವವನೇ, ಕಮಲದಂತೆ ಕಣ್ಣುಳ್ಳ ಬ್ರಹ್ಮನೇ, ನಿನಗೆ ಜಯವಾಗಲಿ.

೧೨೭. ನೀನೇ ಎಲ್ಲವನ್ನು ಸೃಷ್ಟಿಸಿದೆ, ನೀನು ಯಜ್ಞದಲ್ಲಿ ಹೋಮಮಾಡಿದುದನ್ನು ತಿನ್ನತಕ್ಕವನು. ಯಜ್ಞಾಂಗಕ್ಕೆಲ್ಲವೂ ನೀನೇ ಒಡೆಯ. ನಿನಗೆ ನಮಸ್ಕಾರವು.

ಸ್ವರ್ಣಗರ್ಭ ಪದ್ಮಗರ್ಭ ದೇವಗರ್ಭ ಪ್ರಜಾಪತೇ ।
ತ್ವಂ ಯಜ್ಞಸ್ತ್ವಂ ವಷಟ್ಕಾರಃ ಸ್ವಧಾ ತ್ವಂ ಪದ್ಮಸಂಭವ　　॥ ೧೨೮ ॥

ವಚನೇನ ತು ದೇವಾನಾಂ ಶಿರಶ್ಛಿನ್ನಂ ಮಯಾ ಪ್ರಭೋ ।
ಬ್ರಹ್ಮಹತ್ಯಾಭಿಭೂತೋಽಸ್ಮಿ ಮಾಂ ತ್ರಾಹಿ ತ್ವಂ ಜಗತ್ಪತೇ ।
ಇತ್ಯುಕ್ತೋ ದೇವದೇವೇನ ಬ್ರಹ್ಮಾ ವಚನಮಬ್ರವೀತ್　　॥ ೧೨೯ ॥

॥ ಬ್ರಹ್ಮೋವಾಚ ॥

ಸಖಾ ನಾರಾಯಣೋ ದೇವಃ ಸ ತ್ವಾಂ ಪೂತಂ ಕರಿಷ್ಯತಿ ।
ಕೀರ್ತನೀಯಸ್ತ್ವಯಾ ಮಾನ್ಯಃ ಸ ಮೇ ಪೂಜ್ಯೋ ವಿಭುಃ ಸ್ವಯಂ ॥

ಅನುಧ್ಯಾತೋಽಸಿ ವೈ ನೂನಂ ತೇನ ದೇವೇನ ವಿಷ್ಣುನಾ ।
ಯೇನ ತೇ ಮತಿರುತ್ಪನ್ನಾ ಸ್ತೋತುಂ ಮಾಂ ಭಕ್ತಿರುತ್ಥಿತಾ　　॥ ೧೩೧ ॥

ಶಿರಶ್ಛೇದಾತ್ಕಪಾಲೀ ತ್ವಂ ಸೋಮಸಿದ್ಧಾಂತಕಾರಕಃ ।
ಉದ್ಧರ್ತಾ ತ್ವಂ ಹಿ ಜಂತೂನಾಂ ಭೂರಿಶಾಸನಕಾರಕಃ　　॥ ೧೩೨ ॥

---

೧೨೮. ಚಿನ್ನವನ್ನೂ, ಪದ್ಮವನ್ನೂ, ದೇವತೆಗಳನ್ನೂ, ಹೊಟ್ಟೆಯಲ್ಲಿ ಉಳ್ಳವನು. ನೀನೇ ಯಜ್ಞವೂ, ವಷಟ್ಕಾರವೂ, ಸ್ವಧೆಯೂ ಆಗಿದ್ದೀಯೆ.

೧೨೯. ದೇವತೆಗಳ ಮಾತಿನಂತೆ ನಿನ್ನ ತಲೆಯನ್ನು ಕತ್ತರಿಸಿದನು. ಆದರಿಂದ ಬ್ರಹ್ಮಹತ್ಯೆಯು ಪ್ರಾಪ್ತವಾಗಿದೆ. ಎಲೈ ಜಗತ್ಪತಿಯೇ, ನನ್ನನ್ನು ಕಾಪಾಡು. ದೇವದೇವನು ಹೀಗೆ ಹೇಳಲು, ಬ್ರಹ್ಮನು ಇಂತೆಂದನು.

೧೩೦. ಬ್ರಹ್ಮನು ಹೇಳಿದನು:—ನಾರಾಯಣಸ್ವಾಮಿಯೇ ನಿನ್ನ ಸ್ನೇಹಿತನು, ಆತನನ್ನು ಹೊಗಳು, ಪೂಜಿಸು. ಅವನು ನಿನ್ನನ್ನು ಪವಿತ್ರನನ್ನಾಗಿ ಮಾಡುತ್ತಾನೆ.

೧೩೧. ಆ ವಿಷ್ಣುವನ್ನು ನೀನು ಧ್ಯಾನಿಸಿದ್ದೀಯೆ. ಆದ್ದರಿಂದಲೇ ನನ್ನನ್ನು ನೀನು ಸ್ತುತಿಸುವುದಕ್ಕೆ ಬುದ್ಧಿಯು ಹುಟ್ಟಿತು.

೧೩೨. ಶಿರಸ್ಸನ್ನು ಕತ್ತರಿಸಿದುದರಿಂದ ನೀನು ಕಪಾಲಿಯಾಗಿ ಸೋಮಸಿದ್ಧಾಂತವನ್ನು ಸ್ಥಾಪಿಸುತ್ತೀಯೆ. ನೀನು ಪ್ರಾಣಿಗಳನ್ನೂ. ಉದ್ಧರಿಸುತ್ತೀಯೆ. ಅನೇಕ ಶಾಸನಗಳನ್ನೂ ಬರೆಯುತ್ತೀಯೆ.

ಕೋಟ್ಯಾಃ ಶತಂ ತು ವಿಪ್ರಾಣಾಮುದ್ಧರ್ತಾಽಸಿ ಮಹಾದ್ಯುತೇ ।
ವ್ರತಂ ತ್ವಂ ಬ್ರಹ್ಮಹತ್ಯಾಯಾ ನಾಽನ್ಯತ್ಕಿಂಚನ ವಿದ್ಯತೇ ॥ ೧೩೩ ॥

ಅಭಾಷ್ಯಾಃ ಪಾಪಿನಃ ಕ್ರೂರಾ ಬ್ರಹ್ಮಘ್ನಾಃ ಪಾಪಕಾರಿಣಃ ।
ಬೈಡಾಲಿಕಾ ವಿಕರ್ಮಸ್ಥಾ ನ ತೇ ಪ್ರೋಜ್ಯಾಃ ಕಥಂಚನ ॥ ೧೩೪ ॥

ತೈಶ್ಚ ದೃಷ್ಟೈಃ ಸದಾ ಕಾರ್ಯಂ ಭಾಸ್ಕರಸ್ಯಾವಲೋಕನಂ ।
ಅಂಗಸ್ಪರ್ಶೇ ಕೃತೇ ರುದ್ರ ಸಚೈಲೋ ಜಲಮಾವಿಶೇತ್ ॥ ೧೩೫ ॥

ಏವಂ ಶುದ್ಧಿಮವಾಪ್ನೋತಿ ಪೂರ್ವಂ ದೃಷ್ಟಂ ಮನೀಷಿಭಿಃ ।
ಸ ಭವಾನ್ಬ್ರಹ್ಮಹಂತಾಽಸಿ ಶುದ್ಧ್ಯರ್ಥಂ ವ್ರತಮಾಚರ ॥ ೧೩೬ ॥

ಚೀರ್ಣೇ ವ್ರತೇ ಪುನರ್ಭೂಯಃ ಪ್ರಾಪ್ಸ್ಯಸೇ ತ್ವಂ ವರಾನ್ಬಹೂನ್ ।
ಏವಮುಕ್ತ್ವಾ ಗತೋ ಬ್ರಹ್ಮಾ ರುದ್ರಸ್ತಂ ನಾಭಿಜಜ್ಞಿವಾನ್ ॥ ೧೩೭ ॥

---

೧೩೩. ಎಲೈ ಮಹಾತ್ಮನೇ, ನೂರು ಕೋಟಿ ಬ್ರಾಹ್ಮಣರನ್ನೂ, ನೀನು ಉದ್ಧಾರಮಾಡುತ್ತೀಯೆ, ಬ್ರಹ್ಮಹತ್ಯೆಗೋಸ್ಕರ ಬೇರೆಯಾದ ವ್ರತವಾವುದೂ, ಇಲ್ಲ.

೧೩೪. ಬ್ರಹ್ಮಹತ್ಯೆಮಾಡಿದ ಪಾಪಿಗಳೂ, ಕ್ರೂರರೂ ಆದವರು ಸಂಭಾಷಣೆಗೆ ಯೋಗ್ಯರಲ್ಲ. ಅವರು ಕೆಟ್ಟ ಕರ್ಮದಲ್ಲಿಯೇ ನಿರತರು. ಅವರು ಬೈಡಾಲಿಕರೆಂದು ಹೆಸರು ಪಡೆದಿದ್ದಾರೆ.

೧೩೫. ಅಂತಹ ಪಾಪಿಗಳನ್ನು ನೋಡಿದರೇನೇ ಸೂರ್ಯನನ್ನು ನೋಡಬೇಕು. ಅವರ ಅವಯವಗಳು ಸೋಕಿದರೆ ಹೊದ್ದ ಉಟ್ಟ ಬಟ್ಟೆಗಳೊಡನೆ ಸ್ನಾನ ಮಾಡಬೇಕು.

೧೩೬. ಈರೀತಿ ಮಾಡಿದರೆ ಶುದ್ಧನಾಗುತ್ತಾನೆಂದು ಹಿಂದಿನ ವಿದ್ವಾಂಸರು ಹೇಳಿದ್ದಾರೆ. ಅಂತಹ ನೀನು ಬ್ರಹ್ಮಹತ್ಯೆ ಮಾಡಿದ್ದೀಯೆ. ಶುದ್ಧಿಗೋಸ್ಕರ ವ್ರತವನ್ನು ಮಾಡು.

೧೩೭. ವ್ರತವನ್ನು ಮಾಡಿದಮೇಲೆ ಮತ್ತೆ ಬೇಕಾದಷ್ಟು ವರವನ್ನು ಹೊಂದುತ್ತೀಯೆ. ಹೀಗೆಂದು ಹೇಳಿ ಬ್ರಹ್ಮನು ಹೊರಟುಹೋದನು, ಅದನ್ನು ರುದ್ರನು ತಿಳಿಯಲಿಲ್ಲ.

ಅಚಿಂತಯತ್ತದಾ ವಿಷ್ಣುಂ ಧ್ಯಾನಗತ್ಯಾ ಗತಃ ಸ್ವಯಂ ।
ಲಕ್ಷ್ಮೀಸಹಾಯಂ ವರದಂ ದೇವದೇವಂ ಸನಾತನಂ ॥ ೧೩೮ ॥

ಅಷ್ಟಾಂಗಪ್ರಣಿಪಾತೇನ ನತ್ವಾ ದೇವಂ ತ್ರಿಲೋಚನಃ ।
ತುಷ್ಟಾವ ಪ್ರಣತೋ ಭೂತ್ವಾ ಶಂಖಚಕ್ರಗದಾಧರಂ ॥ ೧೩೯ ॥

॥ ರುದ್ರ ಉವಾಚ ॥

ಪರಂ ಪರಾಣಾಂ ಪರಮಂ ಪುರಾಣಂ
ಪರಾತ್ಪರಂ ವಿಷ್ಣುಮನಂತವೀರ್ಯಂ ।
ಸ್ಮರಾಮಿ ನಿತ್ಯಂ ಪುರುಷಂ ವರೇಣ್ಯಂ
ನಾರಾಯಣಂ ತ್ರಿಪ್ರಥಮಂ ಪುರಾಣಂ ॥ ೧೪೦ ॥

ಪರಾಪರಂ ಪೂರ್ವಜಮುಗ್ರವೇಗಂ
ಗಂಭೀರಗಂಭೀರಧಿಯಾಂ ಪ್ರಧಾನಂ ।
ನತೋಽಸ್ಮಿ ದೇವಂ ಹರಿಮೀಶಿತಾರಂ
ಪರಂ ಪರಂ ಧಾಮಪರಂ ಚ ಧಾಮ ॥ ೧೪೧ ॥

---

೧೩೮. ಬ್ರಹ್ಮನು ಹೊರಟುಹೋಗುತ್ತಲೂ ಲಕ್ಷ್ಮೀಸಹಾಯನಾದ ವಿಷ್ಣು ವನ್ನು ಧ್ಯಾನಮಾಡಿದನು.

೧೩೯. ಅಷ್ಟಾಂಗಗಳನ್ನೂ ನೆಲಕ್ಕೆ ಮುಟ್ಟಿಸಿ ನಮಸ್ಕರಿಸಿ, ಆ ತ್ರಿಲೋಚನನು ಆ ಶಂಖ, ಚಕ್ರ, ಗದಾಧರನಾದ ವಿಷ್ಣುವನ್ನು ಸ್ತೋತ್ರಮಾಡಿದನು.

೧೪೦. ಪುರಾಣವಸ್ತುಗಳಿಗೆಲ್ಲಾ ಪುರಾತನನು. ಉತ್ತಮೋತ್ತಮನು. ಅಗಾಧ ಪರಾಕ್ರಮಿಯು. ನಿತ್ಯನು. ಶ್ರೇಷ್ಠನು. ಬ್ರಹ್ಮ, ರುದ್ರ, ವಿಷ್ಣುಗಳಲ್ಲಿ ಮೊದಲನೆಯವನು. ಇಂತಹವನಾದ ನಿನ್ನನ್ನು ನಮಸ್ಕರಿಸುತ್ತೇನೆ.

೧೪೧. ನೀನು ಪರಮಾತ್ಮನು. ಎಲ್ಲರಿಗಿಂತಲೂ ಮೊದಲನೆಯವನು. ಬಹು ವೇಗವುಳ್ಳವನು, ಗಂಭೀರನು, ಗಂಭೀರಬುದ್ಧಿಯುಳ್ಳವರಲ್ಲಿ ಮುಖ್ಯನು. ಹರಿ ಯು... ಕೇಳಿದುದನ್ನು ಕೊಡುವವನು. ಉತ್ತಮಸ್ಥಾನನು. ಇಂತಹ ನಿನ್ನನ್ನು ನಮ ಸ್ಕರಿಸುತ್ತೇನೆ.

ಪರಾಪರಂ ಶುದ್ಧಪರಂ ವಿಶಾಲಂ
ಪರಾಪರೇಶಂ ಪುರುಷಂ ವಿಶಾಲಂ ।
ನಾರಾಯಣಂ ಸ್ತೌಮಿ ವಿಶುದ್ಧಭಾವಂ
ಪರಾಪರಂ ಸೂಕ್ಷ್ಮಮಿದಂ ಸಸರ್ಜ ॥ ೧೪೨ ॥

ಸದಾಸ್ಥಿತತ್ವಾತ್ಪುರುಷಃ ಪ್ರಧಾನೋ
ಜ್ಞಾನಂ ಪ್ರಧಾನಂ ಶರಣಂ ಮಮಾಸ್ತು ।
ನಾರಾಯಣಂ ವೀತಮಲಂ ಪುರಾಣಂ
ಪರಾಪರಂ ವಿಷ್ಣುಮಪಾರಪಾರಂ ॥ ೧೪೩ ॥

ಪುರಾತನಂ ನೀತಿಮತಾಂ ಪ್ರಧಾನಂ
ಧೃತಿಜ್ಞಮಾಶಾಂತಿಪರಂ ಕ್ಷಿತೀಶಂ ।
ಶುಭಂ ಸದಾ ಸ್ತೌಮಿ ಮಹಾನುಭಾವಂ
ಸಹಸ್ರಮೂರ್ಧಾನಮನೇಕಪಾದಂ ॥ ೧೪೪ ॥

ಅನಂತಬಾಹುಂ ಶಶಿಸೂರ್ಯನೇತ್ರಂ
ಕ್ಷರಾಕ್ಷರಂ ಕ್ಷೀರಸಮುದ್ರನಿದ್ರಂ ।

---

೧೪೨. ಪರಾಪರನಾದ, ಶುದ್ಧನಾದ, ವಿಶಾಲನಾದ, ಎಲ್ಲರಿಗೂ ಒಡೆಯನಾದ, ವಿಶಾಲನಾದ, ಶುದ್ಧಭಾವವುಳ್ಳ ಈ ಸ್ವಾಮಿಯಾದ ನಾರಾಯಣನು ಎಲ್ಲವನ್ನೂ ಸೃಷ್ಟಿಸಿದನು.

೧೪೩. ನೀನು ಯಾವಾಗಲೂ ಇರುವುದರಿಂದ ಪ್ರಧಾನವಾದ ಪುರುಷನು. ಮುಖ್ಯವಾದ ಜ್ಞಾನವು ನನಗೆ ಉಂಟಾಗಲಿ. ಅಜ್ಞಾನ ರಹಿತನಾದ, ಪುರಾಣನಾದ, ಪರಾಪರನಾದ ವಿಷ್ಣುವು ನನಗೆ ರಕ್ಷಕನಾಗಿರಲಿ.

೧೪೪. ಪುರಾತನ ನೀತಿಜ್ಞರಲ್ಲಿ ಶ್ರೇಷ್ಠ, ಧೈರ್ಯಶಾಲಿ, ಶಾಂತಿಪರ, ರಾಜ. ಇಂತಹ ಸ್ವಾಮಿಯನ್ನು ಶರಣು ಹೊಂದುತ್ತೇನೆ. ಸಾವಿರ ತಲೆಗಳೂ, ಅನೇಕ ಪಾದಗಳೂ ಉಳ್ಳ, ಮಹಾನುಭಾವನಾದ ವಿಷ್ಣುವಿಗೆ ಶುಭವನ್ನು ಆಶಿಸಿ ಸ್ತೋತ್ರ ಮಾಡುತ್ತೇನೆ.

೧೪೫. ಅನಂತ ತೋಳುಗಳುಳ್ಳ, ಸೂರ್ಯಚಂದ್ರರೇ ಕಣ್ಣಾಗಿರುವ, ನಾಶರಹಿತ

ನಾರಾಯಣಂ ಸ್ತೌಮಿ ಪರಂ ಪರೇಶಂ
ಪರಾತ್ಪರಂ ಯತ್ತ್ರಿದಶೈರಗಮ್ಯಂ ॥ ೧೪೫ ॥

ತ್ರಿಸರ್ಗಸಂಸ್ಥಂ ತ್ರಿಹುತಾಶನೇತ್ರಂ
ತ್ರಿತತ್ತ್ವಲಕ್ಷ್ಯಂ ತ್ರಿಲಯಂ ತ್ರಿನೇತ್ರಂ ।
ನಮಾಮಿ ನಾರಾಯಣಮಪ್ರಮೇಯಂ
ಕೃತೇ ಸಿತಂ ರಕ್ತತನುಂ ನರೇಶಂ ॥ ೧೪೬ ॥

ತ್ರೇತಾಯುಗೇ ಪೀತತನುಂ ನರೇಶಂ
ತಥಾ ಹರಿಂ ದ್ವಾಪರತಃ ಕಲೌ ಚ ।
ನಮಾಮಿ ನಾರಾಯಣಮಪ್ರಮೇಯಂ
ಕೃಷ್ಣಂ ಕೃತಾತ್ಮಾನಮಥೋ ನಮಾಮಿ ॥ ೧೪೭ ॥

ಸಸರ್ಜ ಯೋ ವಕ್ತ್ರತ ಏವ ವಿಪ್ರಂ
ಭುಜಾಂತರೇ ಕ್ಷತ್ರಮಥೋರುಯುಗ್ಮೇ ।
ವೈಶ್ಯಂ ಪದಾಗ್ರೇಷು ತಥೈವ ಶೂದ್ರಾ-
ನ್ನಮಾಮಿ ತಂ ವಿಶ್ವತನುಂ ಪುರಾಣಂ ೧೪೮ ॥

---

ನಾದ ಕ್ಷೀರಸಮುದ್ರಶಾಯಿಯಾದ, ದೇವತೆಗಳಿಗೂ ತಿಳಿಯದ, ಪರಸ್ವರೂಪನಾದ ನಾರಾಯಣನನ್ನು ಸ್ತೋತ್ರಮಾಡುತ್ತೇನೆ.

೧೪೬. ಸೃಷ್ಟಿ, ಸ್ಥಿತಿಲಯಕಾರಕನಾದ, ದಕ್ಷಿಣಾಗ್ನಿ ಗಾರ್ಹಪತ್ಯ ಆಹವನೀಯ ಗಳೆಂಬ ಅಗ್ನಿಗಳೇ ಕಣ್ಣಾಗಿರುವ, ಭೂತ ಭವಿಷ್ಯದ್ವರ್ತಮಾನಗಳಿಗೆ ಗುರಿಯಾದ ತ್ರಿನೇತ್ರಗಳುಳ್ಳ, ಅಪ್ರಮೇಯನಾದ, ಕೃತಯುಗದಲ್ಲಿ ಬೆಳ್ಳಗೂ, ಕೆಂಪಗೂ ಇರುವ ದೇಹವುಳ್ಳ ನಾರಾಯಣನನ್ನು ನಮಸ್ಕರಿಸುತ್ತೇನೆ.

೧೪೭. ತ್ರೇತಾಯುಗದಲ್ಲಿ ಹಳದಿಯ ಬಣ್ಣದ ದೇಹವುಳ್ಳ, ರಾಜನಾದ, ದ್ವಾಪರದಲ್ಲಿಯೂ, ಕಲಿಯುಗದಲ್ಲಿಯೂ, ಹರಿಯಾದ ಯೋಗ್ಯನಾದ ನಾರಾಯಣ ನನ್ನು ನಮಸ್ಕರಿಸುತ್ತೇನೆ.

೧೪೮. ಯಾವ ಸ್ವಾಮಿಯು ಮುಖದಿಂದ ಬ್ರಾಹ್ಮಣರನ್ನೂ, ಭುಜದಿಂದ ಕ್ಷತ್ರಿಯರನ್ನೂ, ತೊಡೆಗಳಿಂದ ವೈಶ್ಯರನ್ನೂ, ಪಾದಗಳಿಂದ ಶೂದ್ರರನ್ನೂ, ಸೃಷ್ಟಿಸಿದನೋ, ಅಂತಹ ಪ್ರಪಂಚವೇ ಶರೀರವಾಗಿಯುಳ್ಳ ವಿಷ್ಣುವನ್ನು ನಮಸ್ಕರಿಸುತ್ತೇನೆ.

ಪರಾತ್ಪರಂ ಪಾರಗಮಪ್ರಮೇಯಂ
ಸುಧಾಯುತಿಂ ಕಾರ್ಯತ ಏವ ಕೃಷ್ಣಂ ।
ಗದಾಸಿಚಕ್ರಾನುಸ್ಮೃತೋಗ್ರಪಾಣಿಂ
ನಮಾಮಿ ನಾರಾಯಣಮಪ್ರಮೇಯಂ ॥ ೧೪೯ ॥

ವಿಶ್ವಮೂರ್ತಿಂ ಮಹಾಮೂರ್ತಿಂ ನಾರಾಯಣಂ ತ್ರಿಮೂರ್ತಿಕಂ ।
ಕವಚಂ ಸರ್ವದೇವಾನಾಂ ನಮಸ್ಯೇ ವಾರಿಜೇಕ್ಷಣಂ ॥ ೧೫೦ ॥

ಸಹಸ್ರಶೀರ್ಷಂ ದೇವೇಶಂ ಸಹಸ್ರಾಕ್ಷಂ ಮಹಾಭುಜಂ ।
ಜಗತ್ಸಂವ್ಯಾಪ್ಯ ತಿಷ್ಠಂತಂ ನಮಸ್ಯೇ ಪರಮೇಶ್ವರಂ ॥ ೧೫೧ ॥

ಶರಣ್ಯಂ ಶರಣಂ ದೇವಂ ವಿಷ್ಣುಂ ಜಿಷ್ಣುಂ ಸನಾತನಂ ।
ನೀಲಮೇಘಪ್ರತೀಕಾಶಂ ನಮಸ್ಯೇ ಶಾರ್ಙ್ಗಪಾಣಿನಂ ॥ ೧೫೨ ॥

ಶುದ್ಧಂ ಸರ್ವಗತಂ ನಿತ್ಯಂ ವ್ಯೋಮರೂಪಂ ಸನಾತನಂ ।
ಭಾವಾಭಾವವಿನಿರ್ಮುಕ್ತಂ ನಮಸ್ಯೇ ಸರ್ವಗಂ ಹರಿಂ ॥ ೧೫೩ ॥

---

೧೪೯. ಪರಕ್ಕೂ ಪರನಾದ, ಅಳತೆಗೆ ಸಿಕ್ಕದ, ಅಮೃತಕ್ಕೆ ಒಡೆಯನಾದ, ಕೆಲಸ ದಿಂದ ಮಾತ್ರ ಕಪ್ಪಾದ, ಗದೆ, ಚಕ್ರಗಳನ್ನು ಧರಿಸಿ ಉಗ್ರನಾದ ನಾರಾಯಣನನ್ನು ನಮಸ್ಕರಿಸುತ್ತೇನೆ.

೧೫೦. ಪ್ರಪಂಚವೇ ಮೂರ್ತಿಯಾದ, ತ್ರಿಮೂರ್ತಿಯೂ ಆದ, ಎಲ್ಲ ದೇವತೆ ಗಳಿಗೆ ಕವಚದಂತೆ ರಕ್ಷಕನಾದ, ಕಮಲಾಕ್ಷನಾದ ವಿಷ್ಣುವನ್ನು ನಮಸ್ಕರಿಸುತ್ತೇನೆ.

೧೫೧. ಸಾವಿರ ತಲೆಗಳುಳ್ಳ, ದೇವೇಶನಾದ, ಸಾವಿರ ಕಣ್ಣುಗಳುಳ್ಳ, ದೊಡ್ಡ ಭುಜಗಳುಳ್ಳ, ಜಗತ್ತನ್ನೂ ವ್ಯಾಪಿಸಿಕೊಂಡಿರುವ ಪರಮೇಶ್ವರನಾದ ವಿಷ್ಣುವನ್ನು ನಮಸ್ಕರಿಸುತ್ತೇನೆ.

೧೫೨. ರಕ್ಷಕನಾದ ವ್ಯಾಪ್ತನೂ, ಜಯಶೀಲನೂ ಆದ, ಸನಾತನನಾದ, ನೀಲ ಮೇಘದಂತಿರುವ, ಶಾರ್ಙ್ಗವೆಂಬ ಧನುಸ್ಸೇ ಕೈಯಲ್ಲಿ ಉಳ್ಳಸ್ವಾಮಿಯನ್ನುನಮಸ್ಕರಿಸು ತ್ತೇನೆ.

೧೫೩. ಶುದ್ಧನೂ, ಎಲ್ಲ ಕಡೆಯಲ್ಲಿಯೂ ಇರುವವನೂ, ನಿತ್ಯನೂ, ಆಕಾಶ ರೂಪಿಯೂ, ಸನಾತನನೂ, ಭಾವ-ಅಭಾವಗಳಿಂದ ಬಿಡಲ್ಪಟ್ಟವನೂ, ಆದ ಹರಿಯನ್ನು ನಮಸ್ಕರಿಸುತ್ತೇನೆ.

ನ ಚಾತ್ರ ಕಿಂಚಿತ್ಪಶ್ಯಾಮಿ ವ್ಯತಿರಿಕ್ತಂ ತವಾಚ್ಯುತ ।
ತ್ವನ್ಮಯಂ ಚ ಪ್ರಪಶ್ಯಾಮಿ ಸರ್ವಮೇತಚ್ಚರಾಚರಂ ॥ ೧೫೪ ॥

ಏವಂ ತು ವದತಸ್ತಸ್ಯ ರುದ್ರಸ್ಯ ಪರಮೇಷ್ಠಿನಃ ॥ ೧೫೫ ॥

ಇತೀರಿತೇ ತಸ್ಯ ಸನಾತನಃ ಸ್ವಯಂ
ಯುಗಾವಬೋಧಾದ್ಭುತರೂಪದರ್ಶನಃ ।
ರಥಾಂಗಪಾಣಿರ್ಗರುಡಾಸನೋ ಗಿರ-
ಮುದೀರಯನ್ಭಾಸ್ಕರವತ್ಸಮುತ್ಥಿತಃ ॥ ೧೫೬ ॥

ವರಂ ವೃಣೀಷ್ವೇತಿ ಸನಾತನೋಽಬ್ರವೀ-
ದ್ವರಸ್ತವಾಹಂ ವರದಸ್ತವಾಗತಃ ।
ಇತೀರಿತೇ ಶಂಭುರಿದಂ ಜಗಾದ
ಕಥಂ ನು ಶುದ್ಧಿರ್ಭವಿತಾ ಸುರೇಶ
ನ ಚಾಸ್ಯ ಪಾಪಸ್ಯ ಹರಂ ಹಿ ಚಾನ್ಯ-
ತ್ಸಂದೃಶ್ಯತೇಽಗ್ರ್ಯಂ ಚ ಋತೇ ಭವಂತಂ ॥ ೧೫೭ ॥

---

೧೫೪-೧೫೫. ಎಲೈ ಅಚ್ಯುತನೇ, ನಿನಗಿಂತ ಬೇರೆಯದು ನನಗೆ ಯಾವುದೂ ಕಾಣುವುದೇ ಇಲ್ಲ. ಈ ಚರಾಚರಗಳೆಲ್ಲವನ್ನೂ ನಿನ್ನ ರೂಪವಾಗಿಯೇ ಕಾಣುತ್ತಿದ್ದೇನೆ. ಈರೀತಿ ಸ್ತೋತ್ರಮಾಡುತ್ತಿರುವ ರುದ್ರನಿಗೆ ಸ್ವಾಮಿಯು ಪ್ರತ್ಯಕ್ಷನಾದನು.

೧೫೬. ಶಂಕರನು ಹೀಗೆ ಸ್ತುತಿಸಲು, ಯುಗಾಂತದಲ್ಲಿ ಹೊಂದುವ ಅದ್ಭುತವಾದ ರೂಪವುಳ್ಳ ಸ್ವಾಮಿಯಾದ ವಿಷ್ಣುವು ಚಕ್ರವನ್ನು ಹಿಡಿದು ಗರುಡನ ಮೇಲೆ ಕುಳಿತು ಮಾತನಾಡುತ್ತಾ ಸೂರ್ಯನಂತೆ ಕಂಡುಬಂದನು.

೧೫೭. ಆಗ ಆ ಸನಾತನನಾದ ವಿಷ್ಣುವು ಎಲೈ ರುದ್ರನೇ, ವರವನ್ನು ಕೇಳಿಕೋ. ನಿನಗೆ ನಾನೇ ವರಸ್ವರೂಪನು. ಈ ವರವನ್ನು ನಿನಗೆ ಕೊಡುತ್ತೇನೆ, ಎನ್ನಲು, ಶಂಭುವು ಎಲೈ ಸುರೇಶನೆ, ನನಗೆ ಶುದ್ಧಿಯು ಹೇಗೆ ಆದೀತು ? ಈ ಪಾಪಕ್ಕೆ ಬೇರೆ ಪ್ರಾಯಶ್ಚಿತ್ತವನ್ನೇ ಕಾಣೆ. ಉತ್ತಮನಾದ ನಿನ್ನನ್ನು ಹೊರತು ಬೇರೆ ದಾರಿಯೇ ಇಲ್ಲ.

ಬ್ರಹ್ಮಹತ್ಯಾಭಿಭೂತಸ್ಯ ಕೃಷ್ಣಾ ಮೇಽಭೂತ್ತನೂರಿಯಂ ।
ಶಾವಗಂಧಶ್ಚ ಮೇ ಗಾತ್ರೇ ಲೋಪಸ್ಯಾಭರಣಾನಿ ಮೇ ॥ ೧೫೮ ॥

ಕಥಂ ಮೇ ನ ಭವೇದೇವಮೇತದ್ರೂಪಂ ಜನಾರ್ದನ ।
ಕಿಂ ಕರೋಮಿ ಮಹಾದೇವ ಯೇನ ಮೇ ಪೂರ್ವಿಕಾ ತನೂಃ ॥ ೧೫೯ ॥

ತ್ವತ್ಪ್ರಸಾದೇನ ಭವಿತಾ ತನ್ಮೇ ಕಥಯ ಚಾಚ್ಯುತ ॥ ೧೬೦ ॥

॥ ವಿಷ್ಣುರುವಾಚ ॥

ಬ್ರಹ್ಮವಧ್ಯಾ ಪರಾ ಚೋಗ್ರಾ ಸರ್ವಕಷ್ಟಪ್ರದಾ ಪರಾ ।
ಮನಸಾಽಪಿ ನ ಕುರ್ವೀತ ಪಾಪಸ್ಯಾಸ್ಯ ತು ಭಾವನಾಂ ॥ ೧೬೧ ॥

ಭವತಾ ದೇವವಾಕ್ಯೇನ ನಿಷ್ಠಾ ಚೈಷಾ ನಿವೇದಿತಾ ।
ಇದಾನೀಂ ತ್ವಂ ಮಹಾಬಾಹೋ ಬ್ರಹ್ಮಣೋಕ್ತಂ ಸಮಾಚರ ॥ ೧೬೨ ॥

ಭೂಯಃ ಸರ್ವಾಣಿ ಚಾಂಗಾನಿ ತ್ರಿಕಾಲಂ ಘರ್ಷಯೇಸ್ತನುಂ ।
ಶಿಖಾಯಾಂ ಕರ್ಣಯೋಶ್ಚೈವ ಕರೇ ಚಾಸ್ಥೀನಿ ಧಾರಯ ॥ ೧೬೩ ॥

---

೧೫೮. ಬ್ರಹ್ಮಹತ್ಯೆಯು ನನ್ನನ್ನು ಆವರಿಸಲು ನನ್ನ ಶರೀರವು, ಕಪ್ಪಗೂ, ಹೆಣದ ವಾಸನೆಯುಳ್ಳದ್ದಾಗಿಯೂ, ಆಯಿತು. ನಾನು ಹಾಕಿಕೊಂಡಿದ್ದ ಒಡವೆಗಳು ಕಬ್ಬಿಣದವುಗಳಾಗಿ ಮಾರ್ಪಟ್ಟುವು.

೧೫೯-೧೬೦. ಎಲೈ ಜನಾರ್ದನನೇ, ನನಗೆ ಹೀಗಾಗದೆ ಮೊದಲನೆಯ ರೂಪವು ಬರಬೇಕು. ಅದಕ್ಕೋಸ್ಕರ ನಾನೇನು ಮಾಡಲಿ ? ನಿನ್ನ ಅನುಗ್ರಹದಿಂದ ಹಾಗಾಗಬೇಕಾದರೆ ನಾನೇನುಮಾಡಬೇಕು ಹೇಳು.

೧೬೧. ವಿಷ್ಣುವು ಹೇಳಿದನು :—ಬ್ರಹ್ಮಹತ್ಯೆಯು ಬಹು ಉಗ್ರವಾದುದು, ಎಲ್ಲಾ ಕಷ್ಟಗಳನ್ನೂ ಕೊಡುತ್ತದೆ. ಈ ಪಾಪದ ಯೋಚನೆಯನ್ನು ಮನಸ್ಸಿನಿಂದಲೂ, ಯೋಚಿಸಬಾರದು.

೧೬೨. ನೀನು ದೇವತೆಗಳ ಮಾತಿನಂತೆ ಮಾಡಿದ್ದೇನೆಂದು ಹೇಳುತ್ತೀಯೆ. ಎಲೈ ಮಹಾಬಾಹುವೇ, ಈಗ ನೀನು ಬ್ರಹ್ಮನು ಹೇಳಿದಂತೆ ಮಾಡು.

೧೬೩. ಮತ್ತೆ ಮೂರು ಕಾಲಗಳಲ್ಲಿಯೂ ದೇಹದ ಎಲ್ಲಾ ಭಾಗಗಳನ್ನು ಉಜ್ಜು. ತಲೆ, ಕಿವಿ, ಕೈಗಳಲ್ಲಿ ಮೂಳೆಗಳನ್ನು ಹಿಡಿದುಕೊ.

ಏವಂ ತೇ ಕುರ್ವತೋ ರುದ್ರ ಕಷ್ಟಂ ನೈವ ಭವಿಷ್ಯತಿ ।
ಸಂದಿಶ್ಯೈವಂ ಸ ಭಗವಾನ್ಗತೋಽಂತರ್ಧಾನಮೀಶ್ವರಃ ॥ ೧೬೪ ॥

ಲಕ್ಷ್ಮೀಸಹಾಯೋ ಗತವಾನ್ರುದ್ರಸ್ತಂ ನಾಭಿಜಜ್ಞಿವಾನ್ ।
ಕಪಾಲಪಾಣಿರ್ದೇವೇಶಃ ಪರ್ಯಟನ್ವಸುಧಾಮಿಮಾಂ ॥ ೧೬೫ ॥

ಹಿಮವಂತಂ ಸಮೈನಾಕಂ ಮೇರುಣಾ ಚ ಸಹೈವ ತು ।
ಕೈಲಾಸಂ ಸಕಲಂ ವಿಂಧ್ಯಂ ನೀಲಂ ಚೈವ ಮಹಾಗಿರಿಂ ॥ ೧೬೬ ॥

ಕಾಂಚೀಂ ಕಾಶೀಂ ತಾಮ್ರಲಿಪ್ತಾಂ ಮಗಧಾನ್ಮಾಲವಾಂಸ್ತಥಾ ।
ವತ್ಸಗುಲ್ಮಂ ಚ ಗೋಕರ್ಣಂ ತಥಾ ಚೈವೋತ್ತರಾನ್ಕುರೂನ್ ॥ ೧೬೭ ॥

ಭದ್ರಾಶ್ವಂ ಕೇತುಮಾಲಂ ಚ ವರ್ಷಂ ಹೈರಣ್ಯಕಂ ತಥಾ ।
ಕಾಮರೂಪಂ ಪ್ರಭಾಸಂ ಚ ಮಹೇಂದ್ರಂ ಚೈವ ಪರ್ವತಂ ॥ ೧೬೮ ॥

ಬ್ರಹ್ಮಹತ್ಯಾಭಿಭೂತೋಽಸೌ ಭ್ರಮಂಸ್ತ್ರಾಣಂ ನ ವಿಂದತೇ ।
ತ್ರಪಾನ್ವಿತಃ ಕಪಾಲೇನ ಕರಸ್ಥೇನ ಚ ಶಂಕರಃ ॥ ೧೬೯ ॥

---

೧೬೪. ಎಲೈ ರುದ್ರನೇ, ನೀನು ಹೀಗೆ ಮಾಡುತ್ತಿದ್ದರೆ ಕಷ್ಟ ಉಂಟಾಗುವುದಿಲ್ಲ. ಹೀಗೆಂದು ಹೇಳಿ ಆ ಭಗವಂತನು ಅಂತರ್ಧಾನವನ್ನು ಹೊಂದಿದನು.

೧೬೫. ಆ ವಿಷ್ಣುವು ಲಕ್ಷ್ಮಿಯೊಡನೆ ಹೊರಟುಹೋದನು. ರುದ್ರನಿಗೆ ಅದು ಗೊತ್ತಾಗಲಿಲ್ಲ. ಅನಂತರ ಕಪಾಲವನ್ನು ಕೈಯಲ್ಲಿ ಹಿಡಿದು ಆ ರುದ್ರನು ಭೂಮಿಯಲ್ಲಿ ತಿರುಗುತ್ತಿದ್ದನು.

೧೬೬-೧೬೯. ಹಿಮವಂತ, ಮೈನಾಕ, ಮೇರು, ಕೈಲಾಸ, ವಿಂಧ್ಯ, ನೀಲ, ಕಾಶಿ, ಕಾಂಚಿ, ತಾಮ್ರಲಿಪ್ತ, ಮಗಧ, ಮಾಳವ, ವತ್ಸಗುಲ್ಮ, ಗೋಕರ್ಣ, ಉತ್ತರ ಕುರು, ಭದ್ರಾಶ್ವ, ಕೇತುಮಾಲ, ಹೈರಣ್ಯವರ್ಷ, ಕಾಮರೂಪ, ಪ್ರಭಾಸ, ಮಹೇಂದ್ರ. ಈ ಸ್ಥಳಗಳಲ್ಲಿ ಬ್ರಹ್ಮಹತ್ಯೆಯಿಂದ ಕೂಡಿದ ಶಿವನು ಕೈಯಲ್ಲಿ ಕಪಾಲವನ್ನು ಹಿಡಿದು ನಾಚಿಕೆಯಿಂದ ಸುತ್ತುತ್ತಿದ್ದನು.

ಕರೋ ವಿಧುನ್ವನ್ಸ್ವಪಂಶೋ ಚಿಕ್ಷಿಪಂಶ್ಚ ಮುಹುರ್ಮುಹುಃ ।
ಯದ್ವಾಸ್ಯ ಧುನ್ವತೋ ಹಸ್ತೌ ಕಪಾಲಂ ಪತತೇ ನ ತು ॥ ೧೭೦ ॥

ತದಾಸ್ಯ ಬುದ್ಧಿರುತ್ಪನ್ನಾ ವ್ರತಂ ಚೈತತ್ಕರೋಮ್ಯಹಂ ।
ಮದೀಯೇನೈವ ಮಾರ್ಗೇಣ ದ್ವಿಜಾ ಯಾಸ್ಯಂತಿ ಸರ್ವಶಃ ॥ ೧೭೧ ॥

ಧ್ಯಾತ್ವೈವಂ ಸುಚಿರಂ ದೇವೋ ವಸುಧಾಂ ವಿಚಚಾರ ಹ ।
ಪುಷ್ಕರಂ ತು ಸಮಾಸಾದ್ಯ ಪ್ರವಿಷ್ಟೋಽರಣ್ಯಮುತ್ತಮಂ ॥ ೧೭೨ ॥

ನಾನಾದ್ರುಮಲತಾಕೀರ್ಣಂ ನಾನಾಪುಷ್ಪೋಪಶೋಭಿತಂ ।
ನಾನಾಪಕ್ಷಿಸಮಾಕೀರ್ಣಂ ನಾನಾಮೃಗಗಣಾಕುಲಂ ॥ ೧೭೩ ॥

ಮೃದುಪುಷ್ಪಭರಾಮೋದವಾಸಿತಂ ಯತ್ನವಾಯುನಾ ।
ಬುದ್ಧಿಪೂರ್ವಮಿವ ನ್ಯಸ್ತೈಃ ಪುಷ್ಪೈರ್ಭೂಷಿತಭೂತಲಂ ॥ ೧೭೪ ॥

ನಾನಾಗಂಧರಸೈರನ್ಯೈಃ ಪಕ್ವಾಪಕ್ವೈಃ ಫಲೈಸ್ತಥಾ ।
ವಿವೇಶ ತರುಮಧ್ಯೇನ ಪುಷ್ಪಾಮೋದಾಭಿನಂದಿತಃ ॥ ೧೭೫ ॥

---

೧೭೦-೧೭೧. ಕೈಗಳನ್ನು ಬಾರಿಬಾರಿಗೂ ಕೊಡುಹುತ್ತ, ಎಸೆಯುತ್ತ ಸುತ್ತಿದನು; ಹೀಗೆ ಕೈಗಳನ್ನು ಕೊಡುಹುತ್ತಿದ್ದರೂ, ಆ ಕಪಾಲವು ಬಿದ್ದುಹೋಗದಿರಲು ಈತನಿಗೆ ಒಂದು ವ್ರತವನ್ನು ಮಾಡಬೇಕೆಂಬ ಬುದ್ಧಿಯು ಹುಟ್ಟಿತು. ಮತ್ತು ನಾನು ಮಾಡಿದ ರೀತಿಯಲ್ಲಿಯೇ ಬ್ರಾಹ್ಮಣರೂ ನಡೆಯುತ್ತಾರೆ ಎಂದುಕೊಂಡನು.

೧೭೨-೧೭೫. ಆ ಈಶ್ವರನು ಬಹುಕಾಲ ಹೀಗೆ ಯೋಚಿಸಿ ಭೂಮಿಯನ್ನು ಸುತ್ತಿದನು. ಹೀಗೇ ಸುತ್ತುತ್ತಿರುವಾಗ್ಗೆ ಪುಷ್ಕರಕ್ಕೆ ಹೋಗಿ ಅಲ್ಲಿರುವ ಅರಣ್ಯವನ್ನು ಹೊಕ್ಕನು. ಆ ಅರಣ್ಯವು ಅನೇಕ ಬಗೆಯ ಮರಗಳಿಂದಲೂ, ಬಳ್ಳಿಗಳಿಂದಲೂ ಕೂಡಿದ್ದಿತು. ಬಗೆಬಗೆಯ ಹೂಗಳಿಂದ ಶೋಭಿಸುತ್ತಿತ್ತು. ಅನೇಕ ಬಗೆಯ ಪಕ್ಷಿಗಳಿಂದಲೂ ಕೂಡಿದ್ದಿತು. ಅನೇಕ ಬಗೆಯ ಮೃಗಗಳಿಂದಲೂ ಕೂಡಿದ್ದಿತು. ಮರಗಳ ಹೂಗಳಿಂದ ವಾಸನೆಯನ್ನು ಹೊಂದಿದ್ದಿತು. ಯಾರೋ ಬೇಕೆಂದೇ ಇಲ್ಲಿ ಹೂಗಳನ್ನು ಹರಡಿರುವರು ಎನ್ನುವಂತೆ ಹೂಗಳು ಬಿದ್ದಿದ್ದುವು. ಬಗೆಬಗೆಯಾದ ರಸಗಳಿಂದಲೂ, ಹಣ್ಣಾದ ಹಣ್ಣಾಗದ ಫಲಗಳಿಂದಲೂ, ಕೂಡಿದ್ದಿತು. ಆ ಹೂಗಳ ವಾಸನೆಯಿಂದ ಸಂತೋಷಗೊಂಡು ಮರಗಳ ಮಧ್ಯದಿಂದ ಅಲ್ಲಿ ಒಳಹೊಕ್ಕನು.

**ಅತ್ರಾರಾಧಯತೋ ಭಕ್ತ್ಯಾ ಬ್ರಹ್ಮಾ ದಾಸ್ಯತಿ ವೈ ವರಂ ।**
**ಬ್ರಹ್ಮಪ್ರಸಾದಾತ್ಸಂಪ್ರಾಪ್ತಂ ಪೌಷ್ಕರಂ ಜ್ಞಾನಮೀಪ್ಸಿತಂ ॥ ೧೨೬ ॥**

**ಪಾಪಘ್ನಂ ದುಷ್ಟಶಮನಂ ಪುಷ್ಟಿಶ್ರೀಬಲವರ್ಧನಂ ।**
**ತಸ್ಮಾತ್ಸರ್ವಪ್ರಯತ್ನೇನ ಯೇ ಪ್ರಪನ್ನಾ ಮಹೇಶ್ವರಂ ॥ ೧೨೭ ॥**

**ಅಪವರ್ಗೋ ಭವತ್ಯೇಷಾಂ ಸ್ವರ್ಗೋ ವಾ ಪ್ರೀತಿದಃ ಸ್ಮೃತಃ ।**
**ಏವಂ ವೈ ಧ್ಯಾಯತಸ್ತಸ್ಯ ರುದ್ರಸ್ಯಾಮಿತತೇಜಸಃ ॥ ೧೨೮ ॥**

**ಆಜಗಾಮ ತತೋ ಬ್ರಹ್ಮಾ ಭಕ್ತಿಪ್ರೀತೋಽಥ ಪದ್ಮಜಃ ।**
**ಉವಾಚ ಪ್ರಣತಂ ರುದ್ರಮುತ್ಥಾಪ್ಯ ಚ ಪುನರ್ಗುರುಃ ॥ ೧೨೯ ॥**

**ದಿವ್ಯವ್ರತೋಪಚಾರೇಣ ಸೋಽಹಮಾರಾಧಿತಸ್ತ್ವಯಾ ।**
**ಭವತಾ ಶ್ರದ್ಧಯಾತ್ಯರ್ಥಂ ಮಮ ದರ್ಶನಕಾಂಕ್ಷಯಾ ॥ ೧೩೦ ॥**

**ವ್ರತಸ್ಥಾ ಮಾಂ ಹಿ ಪಶ್ಯಂತಿ ಮಾನುಷಾ ದೇವತಾಸ್ತಥಾ ।**
**ತದಿಚ್ಛಯಾ ಪ್ರಯಚ್ಛಾಮಿ ವರಂ ಯತ್ಪ್ರವರಂ ವರಂ ॥ ೧೩೧ ॥**

---

೧೨೬. ಇಲ್ಲಿ ಬ್ರಹ್ಮನನ್ನು ಪೂಜಿಸಿದರೆ, ಆತನು ವರಕೊಡುತ್ತಾನೆ. ಆ ಬ್ರಹ್ಮನ ಪ್ರಸಾದದಿಂದಲೇ ಜ್ಞಾನಪ್ರದವಾದ ಪುಷ್ಕರವನ್ನು ಹೊಂದಿದ್ದೇನೆ.

೧೨೭. ಈ ಪುಷ್ಕರವು ಪಾಪನಾಶಕವು, ದುಷ್ಟರನ್ನು ನಾಶಮಾಡತಕ್ಕದ್ದು, ಪುಷ್ಟಿಯನ್ನೂ, ಸಂಪತ್ತನ್ನೂ, ಕೊಡತಕ್ಕದ್ದು. ಆದ್ದರಿಂದ ಇಲ್ಲಿ ಯಾರು ಸರ್ವ ಪ್ರಯತ್ನದಿಂದಲೂ ಮಹೇಶ್ವರನನ್ನು ಪೂಜಿಸುವರೋ, ಅವರಿಗೆ ಮೋಕ್ಷವಾಗಲೀ, ಸ್ವರ್ಗವಾಗಲೀ ಇಷ್ಟವಾದುದು ಸಿಕ್ಕುತ್ತದೆ.

೧೨೮-೧೨೯. ಈರೀತಿ ಧ್ಯಾನಮಾಡುತ್ತಿರುವ ಅಧಿಕ ತೇಜಸ್ವಿಯಾದ ರುದ್ರನ ಬಳಿಗೆ ಭಕ್ತಿಯಿಂದ ಪ್ರೀತನಾದ ಬ್ರಹ್ಮನು ಬಂದನು. ಆಗ ರುದ್ರನು ನಮಸ್ಕರಿಸಲು ಅವನನ್ನು ಮೇಲಕ್ಕೆತ್ತಿ ಇಂತೆಂದನು.

೧೩೦. ಎಲೈ ರುದ್ರನೇ, ನೀನು ಉತ್ತಮವಾದ ವ್ರತದ ಉಪಚಾರದಿಂದಲೂ, ಶ್ರದ್ಧೆಯಿಂದಲೂ ನನ್ನ ದರ್ಶನವನ್ನು ಅಪೇಕ್ಷಿಸಿ ಬಹುವಾಗಿ ಪೂಜಿಸಿದ್ದೀಯೆ.

೧೩೧. ಮನುಷ್ಯರಾಗಲಿ, ದೇವತೆಗಳಾಗಲಿ, ವ್ರತಮಾಡುತ್ತಿದ್ದರೆ, ನಾನು ಪ್ರತ್ಯಕ್ಷನಾಗುತ್ತೇನೆ. ಆಗ ಅವರು ಇಚ್ಛೆಪಟ್ಟ ವರಗಳನ್ನು ನಾನು ಕೊಡುತ್ತೇನೆ.

ಸರ್ವಕಾಮಸಮೃದ್ಧ್ಯರ್ಥಂ ವ್ರತಂ ಯಸ್ತ್ವನ್ನಿಷೇವಿತಂ ।
ಮನೋವಾಕ್ಕಾಯಭಾವೈಶ್ಚ ಸಂತುಷ್ಟೇನಾಂತರಾತ್ಮನಾ ।
ಕಂಚಿದ್ವದ್ಧಿ ಚ ತ್ವೈ ಕಾಮಂ ವದ ಭೋ ಮೇ ಯಥೇಪ್ಸಿತಂ ॥ ೧೮೨ ॥

॥ ರುದ್ರ ಉವಾಚ ॥

ಏಷ ಏವಾದ್ಯ ಭಗವಾನ್ಸುಪರ್ಯಾಪ್ತೋ ಮಯಾ ವರಃ ।
ಯದ್ದೃಷ್ಟೋಽಸಿ ಜಗದ್ವಂದ್ಯ ಜಗತ್ಕರ್ತರ್ನಮೋಽಸ್ತು ತೇ ॥ ೧೮೩ ॥

ಮಹತಾ ಯಜ್ಞಸಾಧ್ಯೇನ ಬಹುಕಾಲಾರ್ಜಿತೇನ ಚ ।
ಪ್ರಾಣವ್ಯಯಕರೇಣ ತ್ವಂ ತಪಸಾ ದೇವ ದೃಶ್ಯಸೇ ॥ ೧೮೪ ॥

ಇದಂ ಕಪಾಲಂ ದೇವೇಶ ನ ಕರಾತ್ಪತತೇ ವಿಭೋ ।
ತ್ರಪಾಕರಾ ಋಷೀಣಾಂ ಚ ಚರ್ಯೈಷಾ ಕುತ್ಸಿತಾ ವಿಭೋ ॥ ೧೮೫ ॥

ತ್ವತ್ಪ್ರಸಾದಾದ್ವ್ರತಂ ಚೇದಂ ಕೃತಂ ಕಾಪಾಲಿಕಂ ಚ ಯತ್ ।
ಸಿದ್ಧಮೇತತ್ಪ್ರಪನ್ನಸ್ಯ ಮಹಾವ್ರತಮಿಹೋಚ್ಯತಾಂ ॥ ೧೮೬ ॥

---

೧೮೨. ಮನೋವಾಕ್ಕಾಯಗಳಿಂದ ಏಕರೀತಿಯಾಗಿ ಸಂತೋಷಗೊಂಡು ಇಷ್ಟಾರ್ಥಗಳನ್ನೆಲ್ಲಾ ಪಡೆಯಬೇಕೆಂದು ನೀನು ವ್ರತವನ್ನಾಚರಿಸಿದ್ದೀಯೆ. ನಿನ್ನ ಇಷ್ಟದಂತೆ ನೀನು ಅಪೇಕ್ಷಿಸಿದ ವರಗಳನ್ನು ಕೊಡುತ್ತೇನೆ.

೧೮೩. ರುದ್ರನು ಹೇಳಿದನು :—ಎಲೈ ಸ್ವಾಮಿಯೇ, ಜಗದ್ವಂದ್ಯನಾದ ನೀನು ನನ್ನ ಕಣ್ಣಿಗೆ ಕಾಣಿಸಿಕೊಂಡೆಯಲ್ಲ, ಇದೇ ನನಗೆ ಬಹುವಾದ ವರವಾಗಿದೆ. ಎಲೈ ಜಗತ್ಕರ್ತನೇ, ನಿನಗೆ ನಮಸ್ಕಾರವು.

೧೮೪. ಬಹುವಾದ ಯಜ್ಞಗಳಿಂದ ಸಿಕ್ಕುವ, ಬಹು ಕಾಲದಿಂದ ಸಂಪಾದಿಸುವ ಪ್ರಾಣವನ್ನು ಕಳೆದುಕೊಳ್ಳತಕ್ಕ ತಪಸ್ಸಿನಿಂದ ನಿನ್ನನ್ನು ನೋಡಬಹುದು.

೧೮೫. ಎಲೈ ದೇವೇಶನೇ, ಈ ಕಪಾಲವು ಕೈಯಿಂದ ಕೆಳಗೆ ಬೀಳುವುದೇ ಇಲ್ಲ, ಈರೀತಿ ಇರುವುದು, ಋಷಿಗಳಿಗೂ ಕೂಡ ನಾಚಿಕೆಯಾದುದು ಮತ್ತು ಅಯೋಗ್ಯವಾದುದು.

೧೮೬. ಈ ಕಾಪಾಲಿಕವ್ರತವನ್ನು ನಿನ್ನ ಅನುಗ್ರಹಕ್ಕೋಸ್ಕರ ಮಾಡಿದ್ದೇನೆ. ನಿನ್ನ ಮರೆ ಹೊಕ್ಕಿರುವ ನನಗೆ ಸಿದ್ಧಿಯಾಯಿತು, ಇದನ್ನು ಮಹಾವ್ರತವೆಂಬವಾಗಿ ಹೇಳು.

ಪುಣ್ಯಪ್ರದೇಶೇ ಯಸ್ಮಿಂಶ್ಚ ಕ್ಷಿಪಾಮ್ಯೇತದ್ವದಸ್ವ ಮೇ ।
ಪೂತೋ ಭವಾಮಿ ಯೇನಾಹಂ ಮುನೀನಾಂ ಭಾವಿತಾತ್ಮನಾಂ ॥ ೧೮೭ ॥

ಲಭಾಮಿ ದೇವಶಬ್ದತ್ವಂ ಪ್ರಣಮಂತಿ ವ್ರತಾರ್ಥಿನಃ ॥ ೧೮೮ ॥

॥ ಬ್ರಹ್ಮೋವಾಚ ॥

ಅವಿಮುಕ್ತಂ ಭಗವತಃ ಸ್ಥಾನಂ ಚಾಸ್ತಿ ಪುರಾತನಂ ।
ಕಪಾಲಮೋಚನಂ ತೀರ್ಥಂ ತವ ತತ್ರ ಭವಿಷ್ಯತಿ ॥ ೧೮೯ ॥

ಅಹಂ ಚ ತ್ವಂ ಸ್ಥಿತಸ್ತತ್ರ ವಿಷ್ಣುಶ್ಚಾಪಿ ಭವಿಷ್ಯತಿ ।
ದರ್ಶನೇ ಭವತಸ್ತತ್ರ ಮಹಾಪಾತಕಿನೋಽಪಿ ಯೇ ॥ ೧೯೦ ॥

ತೇಽಪಿ ಭೋಗಾನ್ಸಮಶ್ನಂತಿ ವಿಶುದ್ಧಾ ಭವನೇ ಮಮ ।
ವರುಣಾ ಚ ಅಸೀ ಚಾಪೀ ದ್ವೇ ನದ್ಯೌ ಸುರವಲ್ಲಭೇ ॥ ೧೯೧ ॥

ಅಂತರಾಲಂ ತಯೋಃ ಕ್ಷೇತ್ರೇ ಮಧ್ಯೇ ನ ವಿಶತೇ ಕ್ವಚಿತ್ ।
ತೀರ್ಥಾನಾಂ ಪ್ರವರಂ ತೀರ್ಥಂ ಕ್ಷೇತ್ರಾಣಾಂ ಪ್ರವರಂ ತವ ॥ ೧೯೨ ॥

---

೧೮೭-೧೮೮. ಈ ಕಪಾಲವನ್ನು ಯಾವ ಪುಣ್ಯಕ್ಷೇತ್ರದಲ್ಲಿ ಬಿಡಲಿ ಹೇಳು. ಆದರಿಂದ ಯೋಗ್ಯರಾದ ಮುನಿಗಳಿಗೂ ನಾನು ಪರಿಶುದ್ಧನಾಗಬೇಕು, ಮತ್ತು ನನ್ನನ್ನು ವ್ರತಿಗಳು ನಮಸ್ಕರಿಸಬೇಕು.

೧೮೯. ಬ್ರಹ್ಮನು ಹೇಳಿದನು :—ಸ್ವಾಮಿಗೆ ಯೋಗ್ಯವಾದ ಅವಿಮುಕ್ತವೆಂಬ ಪುರಾತನವಾದ ಸ್ಥಾನವೊಂದಿರುವುದು. ಅಲ್ಲಿ ಕಪಾಲಮೋಚನವೆಂಬ ತೀರ್ಥವಿರುವುದು, ಅಲ್ಲಿ ನೀನು ಹಾಕಲು ಸಾಧ್ಯ.

೧೯೦. ನಾನೂ, ನೀನೂ, ವಿಷ್ಣುವೂ. ಅಲ್ಲಿ ದರ್ಶನಕೊಡುತ್ತೇನೆ, ಯಾರು ಮಹಾ ಪಾತಕಿಗಳಾಗಿರುವರೋ ಅವರೂ ಕೂಡ ಅಲ್ಲಿಗೆ ಹೋದಮೇಲೆ ಶುದ್ಧರಾಗಿ ಬಹು ಭೋಗಗಳನ್ನು ನನ್ನ ಸ್ಥಾನದಲ್ಲಿ ಅನುಭವಿಸುತ್ತಾರೆ.

೧೯೧-೧೯೨. ವರುಣಾ ಅಸಿ ಎಂಬೆರಡು ನದಿಗಳು ದೇವತೆಗಳಿಗೆ ಪ್ರಿಯವಾದುವುಗಳಿವೆ. ಅವುಗಳ ಮಧ್ಯವೇ ಕ್ಷೇತ್ರವು. ಅಲ್ಲಿ ಯಾರೂ ಪ್ರವೇಶಿಸುವುದಿಲ್ಲ. ಅದು ತೀರ್ಥಗಳಲ್ಲಿ ಉತ್ತಮ ತೀರ್ಥವು, ಕ್ಷೇತ್ರಗಳಲ್ಲಿ ಉತ್ತಮ ಕ್ಷೇತ್ರವು.

ಆ ದೇಹಪತನಾನ್ಯೇ ತು ಕ್ಷೇತ್ರಂ ಸೇವಂತಿ ಮಾನವಾಃ ।
ತೇ ಮೃತಾ ಹಂಸಯಾನೇನ ಸ್ವರ್ಗಂ ಯಾಂತ್ಯಕುತೋಭಯಾಃ ॥ ೧೯೩ ॥

ಪಂಚಕ್ರೋಶಪ್ರಮಾಣೇನ ಕ್ಷೇತ್ರಂ ದತ್ತಂ ಮಯಾ ತವ ।
ಕ್ಷೇತ್ರಮಧ್ಯಾದ್ಗತಾ ಗಂಗಾ ಗಮಿಷ್ಯತಿ ಸರಿದ್ವರಾ ॥ ೧೯೪ ॥

ತೇನ ಸಾ ಮಹತೀ ಪುಣ್ಯಾ ಪುರೀ ರುದ್ರ ಭವಿಷ್ಯತಿ ।
ಪುಣ್ಯಾ ಚೋದಙ್ಮುಖೀ ಗಂಗಾ ಯತ್ರ ಪ್ರಾಚೀ ಸರಸ್ವತೀ ॥ ೧೯೫ ॥

ಉದಙ್ಮುಖೀ ಯೋಜನೇ ದ್ವೇ ಗಚ್ಛಂತೀ ಜಾಹ್ನವೀ ನದೀ ।
ತತ್ರ ತೇ ವಿಬುಧಾಃ ಸರ್ವೇ ಮಯಾ ಸಹ ಸವಾಸವಾಃ ॥ ೧೯೬ ॥

ತತ್ರ ತೇ ವಾಸಮೇಷ್ಯಂತಿ ಕಪಾಲಂ ತತ್ರ ಮೋಚಯ ।
ತಸ್ಮಿಂಸ್ತೀರ್ಥೇ ತು ವೈ ಗತ್ವಾ ಪಿಂಡದಾನೇನ ಯೇ ಪಿತೄನ್ ॥ ೧೯೭ ॥

ಶ್ರಾದ್ಧೈಸ್ತು ಪ್ರೀಣಯಿಷ್ಯಂತಿ ತೇಷಾಂ ಲೋಕೋಽಕ್ಷಯೋ ದಿವಿ ।
ವಾರಾಣಸ್ಯಾಂ ಮಹಾತೀರ್ಥೇ ನರಃ ಸ್ನಾತೋ ವಿಮುಚ್ಯತೇ ॥ ೧೯೮ ॥

---

೧೯೩. ಯಾವ ಮನುಷ್ಯರು ದೇಹವು ನಾಶವಾಗುವವರೆಗೂ ಆ ಕ್ಷೇತ್ರವನ್ನು ಸೇವಿಸುತ್ತಾರೆಯೋ ಅವರು ಸತ್ತನಂತರ ಹಂಸಯಾನದಿಂದ ಭಯವಿಲ್ಲದೇ ಸ್ವರ್ಗವನ್ನು ಹೊಂದುತ್ತಾರೆ.

೧೯೪. ನಾನು ಐದು ಕ್ರೋಶ ವಿಶಾಲದಷ್ಟು ಕ್ಷೇತ್ರವನ್ನು ನಿನಗೆ ಕೊಟ್ಟಿದ್ದೇನೆ. ಆ ಕ್ಷೇತ್ರ ಮಧ್ಯದಲ್ಲಿ ಉತ್ತಮವಾದ ಗಂಗೆಯು ಹರಿದಾಗ, ಎಲೈ ರುದ್ರನೇ ಆಗ ಅದು ಮಹಾ ಪುಣ್ಯವಾದ ಕ್ಷೇತ್ರವಾಗುತ್ತದೆ.

೧೯೫-೧೯೬. ಉತ್ತರಕ್ಕೆ ಹರಿಯುವ ಗಂಗೆಯು ಪುಣ್ಯವಾದುದು. ಪೂರ್ವಕ್ಕೆ ಹರಿಯುವ ಸರಸ್ವತಿಯು ಪವಿತ್ರವಾದುದು. ಈ ಕ್ಷೇತ್ರದಲ್ಲಿ ಉತ್ತರಮುಖವಾಗಿ ಗಂಗೆಯು ಎರಡು ಯೋಜನಗಳವರೆಗೂ ಹರಿಯುತ್ತದೆ. ದೇವತೆಗಳೆಲ್ಲರೂ ನನ್ನೊಡನೆ ಅಲ್ಲಿ ವಾಸಮಾಡುತ್ತಾರೆ.

೧೯೭-೧೯೮. ಅಲ್ಲಿ ಕಪಾಲವನ್ನು ಬಿಟ್ಟುಬಿಡು. ಆ ತೀರ್ಥಕ್ಕೆ ಯಾರು ಹೋಗಿ ಪಿಂಡವನ್ನು ಕೊಡೋಣದಿಂದ ಪಿತೃಗಳಿಗೆ ಶ್ರಾದ್ಧಮಾಡಿದರೆ ಅವರಿಗೆ ಅಕ್ಷಯವಾದ ಲೋಕಗಳು ಸಿಕ್ಕುತ್ತವೆ. ವಾರಾಣಸಿಯ ತೀರ್ಥದಲ್ಲಿ ಸ್ನಾನಮಾಡಿದ ಮನುಷ್ಯನು ಮುಕ್ತಿಯನ್ನು ಹೊಂದುತ್ತಾನೆ.

ಸಪ್ತಜನ್ಮಕೃತಾತ್ಪಾಪಾದ್ದರ್ಶನಾದೇವ ಮುಚ್ಯತೇ ।
ತತ್ತೀರ್ಥಂ ಸರ್ವತೀರ್ಥಾನಾಮುತ್ತಮಂ ಪರಿಕೀರ್ತಿತಂ　　॥ ೧೯೯ ॥

ತ್ಯಜಂತಿ ತತ್ರ ಯೇ ಪ್ರಾಣಾನ್ಪ್ರಾಣಿನಃ ಪ್ರಣತಾಸ್ತ್ವವ ।
ರುದ್ರತ್ವಂ ತೇ ಸಮಾಸಾದ್ಯ ಮೋದಂತೇ ಭವತಾ ಸಹ　　॥ ೨೦೦ ॥

ತತ್ರ ತ್ವಪಿ ಹಿ ಯದ್ದಾನಂ ಭಕ್ತ್ಯಾ ರುದ್ರಾಯ ಕಲ್ಪತೇ ।
ಸರ್ವಪಾಪವಿನಿರ್ಮುಕ್ತಸ್ತ್ವವ ಲೋಕೇ ವಸಿಷ್ಯಸಿ　　॥ ೨೦೧ ॥

ಖಂಡಸ್ಫುಟಿತಸಂಸ್ಕಾರಂ ತತ್ರ ಕುರ್ವಂತಿ ಯೇ ನರಾಃ ।
ತೇ ರುದ್ರಲೋಕಮಾಸಾದ್ಯ ಮೋದಂತೇ ಸುಖಿನಃ ಸದಾ　　॥ ೨೦೨ ॥

ತತ್ರ ಪೂಜಾ ಜಪೋ ಹೋಮಃ ಕೃತೋ ಭವತಿ ದೇಹಿನಾಂ ।
ಅನಂತಫಲದಂ ಸರ್ವಂ ರುದ್ರಭಕ್ತಿರತಾತ್ಮನಾಂ　　॥ ೨೦೩ ॥

ತತ್ರ ದೀಪಪ್ರದಾನೇನ ಜ್ಞಾನಚಕ್ಷುರತೀಂದ್ರಿಯಃ ।
ಅಶ್ವೇತಂ ತರುಣಂ ಸೌಮ್ಯಂ ರೂಪವಂತಂ ತು ಗೋಸುತಂ　　॥ ೨೦೪ ॥

ಯೋಂಕಯಿತ್ವಾ ಮೋಚಯತಿ ಸ ಯಾತಿ ಪರಮಂ ಪದಂ ।

---

೧೯೯. ಆ ನದಿಯನ್ನು ದರ್ಶನಮಾಡುವುದರಿಂದಲೇ ಏಳು ಜನ್ಮದ ಪಾಪದಿಂದ ಮುಕ್ತನಾಗುತ್ತಾನೆ. ಆ ತೀರ್ಥವು ತೀರ್ಥಗಳೊಳಗೆ ಉತ್ತಮವೆಂದು ಹೇಳಲ್ಪಟ್ಟಿದೆ.

೨೦೦. ಅಲ್ಲಿ ಮೃತರಾದ ಪ್ರಾಣಿಗಳು ರುದ್ರತ್ವವನ್ನು ಹೊಂದಿ ನಿನ್ನೊಡನೆ ಸಂತೋಷದಿಂದಿರುತ್ತಾರೆ.

೨೦೧. ಅಲ್ಲಿ ಭಕ್ತಿಯಿಂದ ಯಾವ ದಾನವನ್ನು ಮಾಡಿದರೂ ಅದು ರುದ್ರನಿಗೆ ಸೇರುತ್ತದೆ. ಅವನು ಪಾಪಗಳಿಂದ ಬಿಡಲ್ಪಟ್ಟು ರುದ್ರಲೋಕದಲ್ಲಿಯೇ ವಾಸಮಾಡುತ್ತಾನೆ.

೨೦೨. ಅಲ್ಲಿ ಸ್ಫುಟಿತ ಸಂಸ್ಕಾರವನ್ನು ಮಾಡಿದ ಮನುಷ್ಯರು ರುದ್ರಲೋಕವನ್ನು ಹೊಂದಿ ಸದಾ ಸುಖವಾಗಿರುತ್ತಾರೆ.

೨೦೩. ಅಲ್ಲಿ ಮನುಷ್ಯರು ಪೂಜೆ, ಹೋಮ, ಜಪಗಳನ್ನು ಮಾಡುತ್ತಾ ರುದ್ರಭಕ್ತಿರತರಾದವರಿಗೆ ಹೆಚ್ಚಿನ ಫಲವು ಬರುತ್ತದೆ.

೨೦೪-೨೦೫. ಅಲ್ಲಿ ದೀಪಗಳನ್ನು ದಾನಮಾಡುವುದರಿಂದ ಅತೀಂದ್ರಿಯನಾಗಿ ಜ್ಞಾನ ಚಕ್ಷುಸ್ಸನ್ನುಳ್ಳವನಾಗುತ್ತಾನೆ. ಬೆಳ್ಳಗಿಲ್ಲದ ಸೌಮ್ಯರೂಪುಳ್ಳದೂ, ಕರುವೂ

ಪಿತೃಭಿಃ ಸಹಿತೋ ಮೋಕ್ಷಂ ಗಚ್ಛತೇ ನಾತ್ರ ಸಂಶಯಃ ॥ ೨೦೫ ॥

ಅಥ ಕಿಂ ಬಹುನೋಕ್ತೇನ ತತ್ರ ಯತ್ಕ್ರಿಯತೆ ನರೈಃ ।
ಕರ್ಮ ಧರ್ಮಾರ್ಥಮುದ್ದಿಶ್ಯ ತದನಂತಫಲಂ ಭವೇತ್ ॥ ೨೦೬ ॥

ಸ್ವರ್ಗಾಪವರ್ಗದಂ ಕ್ಷೇತ್ರಂ ತದ್ಧಿ ತೀರ್ಥಂ ಮತಂ ಭುವಿ ।
ಸ್ನಾನಾಜ್ಜಪಾತ್ತಥಾ ಹೋಮಾದನಂತಫಲಸಾಧನಂ ॥ ೨೦೭ ॥

ಗತ್ವಾ ವಾರಾಣಸೀತೀರ್ಥಂ ವ್ರತಂ ಚಾಂದ್ರಾಯಣಂ ತಥಾ ।
ಯೇ ತತ್ರ ಪಂಚತಾಂ ಯಾಂತಿ ಮೋಕ್ಷಂ ಯಾಂತಿ ನ ಸಂಶಯಃ ॥

ವಸವಃ ಪಿತರೋ ಜ್ಞೇಯಾ ರುದ್ರಾಶ್ಚೈವ ಪಿತಾಮಹಾಃ ।
ಪ್ರಪಿತಾಮಹಾಸ್ತಥಾದಿತ್ಯಾ ಇತ್ಯೇಷಾ ವೈದಿಕೀ ಶ್ರುತಿಃ ॥ ೨೦೯ ॥

ತ್ರಿವಿಧಃ ಪಿಂಡದಾನಾಯ ವಿಧಿರುಕ್ತೋ ಮಯಾನಘ ।
ಮಾನುಷೈಃ ಪಿಂಡದಾನಾರ್ಥಂ ಕಾರ್ಯಮಾತ್ರಾಗತೈಃ ಸದಾ ॥ ೨೧೦ ॥

---

ಆಗಿರುವ ಹೋರಿಯನ್ನು ಮುದ್ರೆ ಹಾಕಿ ಬಸವನನ್ನು ಬಿಟ್ಟರೆ ಅವನು ಉತ್ತಮಪದ ವನ್ನು ಹೊಂದುತ್ತಾನೆ, ಮತ್ತು ಪಿತೃಗಳೊಡನೆ ಮೋಕ್ಷವನ್ನು ಹೊಂದುತ್ತಾನೆ ಸಂಶಯವಿಲ್ಲ.

೨೦೬. ಬಹಳ ಮಾತಿನಿಂದೇನು? ಅಲ್ಲಿ ಮನುಷ್ಯರು ಮಾಡುವ ಧರ್ಮಾರ್ಥ ವಾದ ಕೆಲಸವು ಅನಂತ ಫಲವನ್ನು ಕೊಡುತ್ತದೆ.

೨೦೭. ಆ ತೀರ್ಥವು ಸ್ವರ್ಗ ಮೋಕ್ಷಗಳನ್ನು ಕೊಡುವ ಕ್ಷೇತ್ರವು ಅಲ್ಲಿ ಸ್ನಾನ, ಜಪ, ಹೋಮಗಳಿಂದ ಅನಂತ ಫಲವುಂಟಾಗುತ್ತದೆ.

೨೦೮. ವಾರಾಣಸೀ ತೀರ್ಥವನ್ನು ಹೊಂದಿ, ಚಾಂದ್ರಾಯಣ ವ್ರತವನ್ನು ಮಾಡಿ ಮೃತರಾದರೆ ಅವರು ಮೋಕ್ಷವನ್ನು ಹೊಂದುತ್ತಾರೆ. ಸಂಶಯವಿಲ್ಲ.

೨೦೯. ವಸುಗಳೇ ಪಿತೃಗಳು, ರುದ್ರರೇ ಪಿತಾಮಹರು. ಪ್ರಪಿತಾಮಹರೇ ಆದಿತ್ಯರು ಎಂಬದಾಗಿ ವೇದದಲ್ಲಿ ಹೇಳಿದೆ.

೨೧೦. ಪಿಂಡವನ್ನು ಪಿತೃಗಳಿಗೆ ಕೊಡಲು ಈರೀತಿಯಾಗಿ ಮೂರು ಬಗೆ ಯನ್ನು ಹೇಳಿದ್ದೇನೆ. ಇಲ್ಲಿಗೆ ಬಂದ ಮನುಷ್ಯರು ಈ ವಿಧಿಯನ್ನು ಆಚರಿಸಬೇಕು.

ಪಿಂಡದಾನಂ ಚ ತತ್ರೈವ ಸುಪುತ್ರೈಃ ಕಾರ್ಯಮಾದರಾತ್ ।
ಸುಪುತ್ರಾಸ್ತೇ ಪಿತೄಣಾಂ ವೈ ಭವಂತಿ ಸುಖದಾಃ ಸದಾ　　॥ ೨೧೧ ॥

ಪ್ರೋಕ್ತಂ ತೀರ್ಥಂ ಮಯಾ ತುಭ್ಯಂ ದರ್ಶನಾದಪಿ ಮುಕ್ತಿದಂ ।
ಸ್ನಾತ್ವಾ ತು ಸಲಿಲೇ ತತ್ರ ಮುಚ್ಯತೇ ಜನ್ಮಬಂಧನಾತ್　　॥ ೨೧೨ ॥

ವಿಮುಕ್ತೋ ಬ್ರಹ್ಮಹತ್ಯಾಯಾಸ್ತತ್ರ ರುದ್ರ ಯಥಾಸುಖಂ ।
ಅವಿಮುಕ್ತೇ ಮಯಾ ದತ್ತೇ ತಿಷ್ಠ ತ್ವಂ ಭಾರ್ಯಯಾ ಸಹ　　॥ ೨೧೩ ॥

॥ ರುದ್ರ ಉವಾಚ ॥

ಪೃಥಿವ್ಯಾಂ ಯಾನಿ ತೀರ್ಥಾನಿ ತೇಷ್ವಹಂ ವಿಷ್ಣುನಾ ಸಹ ।
ತಿಷ್ಠಾಮಿ ತವ ಚೋಕ್ತೇನ ವರ ಏಷ ವೃತೋ ಮಯಾ　　॥ ೨೧೪ ॥

ಅಹಂ ದೇವೋ ಮಹಾದೇವ ಆರಾಧ್ಯೋ ಭವತಾ ಸದಾ ।
ವರಾನ್ದಾಸ್ಯಾಮಿ ತೇ ಚಾಹಂ ಸಂತುಷ್ಟೇನಾಂತರಾತ್ಮನಾ　　॥ ೨೧೫ ॥

---

೨೧೧. ಸುಪುತ್ರರಾಗಿರುವವರು ಅಲ್ಲಿಗೆ ಈ ರೀತಿಯಾಗಿ ಭಕ್ತಿಯಿಂದ ಪಿತೃಗಳಿಗೆ ಪಿಂಡವನ್ನು ಹಾಕಬೇಕು. ಅಂತಹ ಸುಪುತ್ರರು ಪಿತೃಗಳಿಗೆ ಯಾವಾಗಲೂ ಸುಖವನ್ನು ಕೊಡುತ್ತಾರೆ.

೨೧೨. ದರ್ಶನಮಾಡುವುದರಿಂದಲೇ ಮುಕ್ತಿಯನ್ನು ಕೊಡುವ ತೀರ್ಥವನ್ನು ಹೇಳಿದ್ದೇನೆ. ಅಲ್ಲಿ ಸ್ನಾನಮಾಡಿದರೆ ಜನ್ಮವೆತ್ತುವುದು ಹೋಗುತ್ತದೆ.

೨೧೩. ನಾನು ಅವಿಮುಕ್ತ ಕ್ಷೇತ್ರವನ್ನು ಕೊಟ್ಟಿದ್ದೇನೆ. ಎಲೈ ರುದ್ರನೇ, ಬ್ರಹ್ಮಹತ್ಯೆಯಿಂದ ಮುಕ್ತನಾಗಿ ಹೆಂಡತಿಯೊಡನೆ ನೀನು ಅಲ್ಲಿರು.

೨೧೪. ರುದ್ರನು ಹೇಳಿದನು :—ಭೂಮಿಯಲ್ಲಿರುವ ತೀರ್ಥಗಳಲ್ಲೆಲ್ಲಾ ನಾನು ವಿಷ್ಣುವಿನ ಸಂಗಡ ನಿನ್ನ ಮಾತಿನಂತೆ ಇರುತ್ತೇನೆ, ಈ ವರವನ್ನು ಕೇಳಿಕೊಂಡಿದ್ದೇನೆ.

೨೧೫. ನಾನು ಮಹಾದೇವನು. ನೀನು ನನ್ನನ್ನು ಪೂಜಿಸಬೇಕು, ಆಗ ಸಂತೋಷದಿಂದ ನಿನಗೆ ನಾನು ವರವನ್ನು ಕೊಡುತ್ತೇನೆ.

ವಿಷ್ಣೋಶ್ಚಾಪಿ ಪ್ರದಾಸ್ಯಾಮಿ ವರಾಂಶ್ಚ ಮನಸೇಪ್ಸಿತಾನ್ ।
ಸುರಾಣಾಂ ಚೈವ ಸರ್ವೇಷಾಂ ಮುನೀನಾಂ ಭಾವಿತಾತ್ಮನಾಂ ।
ಅಹಂ ದಾತಾ ಅಹಂ ಯಾಚ್ಯೋ ನಾನ್ಯೋ ಭವ್ಯಃ ಕದಾಚನ ॥ ೨೧೬ ॥

॥ ಬ್ರಹ್ಮೋವಾಚ ॥

ಏವಂ ಕರಿಷ್ಯೇಽಹಂ ರುದ್ರ ಯತ್ತ್ವಯೋಕ್ತಂ ವಚಃ ಶುಭಂ ।
ನಾರಾಯಣಶ್ಚಾಪಿ ತವ ವಾಕ್ಯಕರ್ತಾ ನ ಸಂಶಯಃ ॥ ೨೧೭ ॥

ವಿಸೃಜ್ಯೈವಂ ತದಾ ರುದ್ರಂ ಬ್ರಹ್ಮಾ ಚಾಂತರಧೀಯತ ।
ವಾರಾಣಸ್ಯಾಂ ಮಹಾದೇವೋ ಗತ್ವಾ ತೀರ್ಥಂ ವಿವೇಶ ಚ ॥ ೨೧೮ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ
ಬ್ರಹ್ಮರುದ್ರಾಧ್ಯಾನಾಧ್ಯಾಯ-
ಶ್ಚತುರ್ದಶೋಽಧ್ಯಾಯಃ.

---

೨೧೬. ವಿಷ್ಣುವಿಗೂ ಕೂಡ ಬೇಕಾದ ವರಗಳನ್ನು ಕೊಡುತ್ತೇನೆ. ದೇವತೆಗಳಿಗೂ ಋಷಿಗಳಿಗೂ, ಕೂಡ ನಾನೇ ವರವನ್ನು ಕೊಡುತ್ತೇನೆ. ಅವರಿಗೆಲ್ಲಾ ನಾನೇ ವರವನ್ನು ಕೊಡಬೇಕು. ಅವರು ನನ್ನನ್ನೇ ಕೇಳಬೇಕು, ಮತ್ತೊಬ್ಬರನ್ನೂ ಕೇಳಕೂಡದು.

೨೧೭. ಬ್ರಹ್ಮನು ಹೇಳಿದನು :—ಎಲೈ ರುದ್ರನೇ, ನೀನು ಹೇಳಿದಂತೆಯೇ ನಾನು ಮಾಡುತ್ತೇನೆ. ನಾರಾಯಣನೂ ಕೂಡ ನೀನು ಹೇಳಿದಂತೆ ಮಾಡುತ್ತಾನೆ.

೨೧೮. ಹೀಗೆಂದು ಹೇಳಿ ರುದ್ರನನ್ನು ಅಲ್ಲಿ ಬಿಟ್ಟು ಬ್ರಹ್ಮನು ಅಂತರ್ಧಾನನಾದನು. ಬಳಿಕ ಮಹಾದೇವನು ಹೊರಟು ವಾರಾಣಸಿಯಲ್ಲಿರುವ ತೀರ್ಥದಲ್ಲಿ ಸೇರಿಕೊಂಡನು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ಬ್ರಹ್ಮನನ್ನು ರುದ್ರನು ಧ್ಯಾನಿಸಿದನೆಂಬ ಹದಿನಾಲ್ಕನೆಯ ಅಧ್ಯಾಯವು ಮುಗಿದುದು.

---

॥ ಶ್ರೀಃ ॥

# ಅಥ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಪಂಚದಶೋಽಧ್ಯಾಯಃ

---

॥ ಭೀಷ್ಮ ಉವಾಚ ॥

ಕಿಂ ಕೃತಂ ಬ್ರಹ್ಮಣಾ ಬ್ರಹ್ಮನ್ಪ್ರಾಪ್ಯ ವಾರಾಣಸೀಂ ಪುರೀಂ ।
ಜನಾರ್ದನೇನ ವಾ ಕರ್ಮ ಶಂಕರೇಣ ಚ ಯನ್ಮುನೇ ॥ ೧ ॥

ಕಥಂ ಯಜ್ಞಃ ಕೃತಸ್ತೇನ ಕಸ್ಮಿಂಸ್ತೀರ್ಥೇ ವದಸ್ವ ಮೇ ।
ಕೇ ಸದಸ್ಯಾ ಋತ್ವಿಜಶ್ಚ ಸರ್ವಾಂಸ್ತಾನ್ಪ್ರಬ್ರವೀಹಿ ಮೇ ।
ಕೇ ದೇವಾಸ್ತರ್ಪಿತಾಸ್ತೇನ ಏತನ್ಮೇ ಕೌತುಕಂ ಮಹತ್ ॥ ೨ ॥

॥ ಪುಲಸ್ತ್ಯ ಉವಾಚ ॥

ಶ್ರೀನಿಧಾನಂ ಪುರಾ ಮೇರೋಃ ಶಿಖರಂ ರತ್ನಚರ್ಚಿತಂ ।
ಅನೇಕಾಶ್ಚರ್ಯನಿಲಯಂ ಬಹುಪಾದಪಸಂಕುಲಂ ॥ ೩ ॥

---

## ಹದಿನೈದನೆಯ ಅಧ್ಯಾಯವು.

೧. ಭೀಷ್ಮನು ಕೇಳಿದನು :—ಬ್ರಹ್ಮನು ವಾರಾಣಸಿಗೆ ಹೋಗಿ ಏನು ಮಾಡಿದನು ? ವಿಷ್ಣುವಾಗಲಿ, ಶಂಕರನಾಗಲಿ ಏನು ಮಾಡಿದರು ?

೨. ಆ ಬ್ರಹ್ಮನು ಯಜ್ಞವನ್ನು ಹೇಗೆ ಮಾಡಿದನು ? ಯಾವ ತೀರ್ಥದಲ್ಲಿ ಮಾಡಿದನು ? ಯಾರು ಸದಸ್ಯರಾಗಿದ್ದರು ? ಯಾವ ದೇವತೆಗಳನ್ನು ತೃಪ್ತಿಪಡಿಸಿದನು ? ಇದನ್ನು ಕೇಳಬೇಕೆಂದು ಆಸೆಯಿದೆ. ಇದೆಲ್ಲವನ್ನೂ ನನಗೆ ಹೇಳು.

೩. ಪುಲಸ್ತ್ಯನು ಹೇಳಿದನು :—ಸಂಪತ್ತಿನಿಂದ ಕೂಡಿದ, ರತ್ನಗಳಿಂದ ವಿಚಿತ್ರವಾದ ಮೇರುವಿನ ಶಿಖರವೊಂದಿರುವುದು. ಅದು ಅನೇಕವಾದ ಆಶ್ಚರ್ಯಗಳುಳ್ಳದಾಗಿಯೂ ಅನೇಕ ಮರಗಳುಳ್ಳದಾಗಿಯೂ ಇರುವುದು.

ವಿಚಿತ್ರಧಾತುಭಿಶ್ಚಿತ್ರಂ ಸ್ವಚ್ಛಸ್ಫಟಿಕನಿರ್ಮಲಂ ।
ಲತಾವಿತಾನಶೋಭಾಢ್ಯಂ ಶಿಖಿಶಬ್ದನಿನಾದಿತಂ ॥ ೪ ॥

ಮೃಗೇಂದ್ರರವವಿತ್ರಸ್ತಗಜಯೂಥಸಮಾಕುಲಂ ।
ನಿರ್ಝರಾಂಬುಪ್ರಪಾಶೋತ್ಥಶೀಕರಾಸಾರಶೀತಲಂ ॥ ೫ ॥

ವಾತಾಹತತರುವ್ರಾತಪ್ರಸನ್ನಾಯತಚಿತ್ರಿತಂ ।
ಮೃಗನಾಭಿಚರಾಮೋದವಾಸಿತಾಶೇಷಕಾನನಂ ॥ ೬ ॥

ಲತಾಗೃಹರತಿಶ್ರಾಂತಸುಪ್ತವಿದ್ಯಾಧರಾನುಗಂ ।
ಪ್ರಗೀತಕಿನ್ನರವ್ರಾತಮಧುರಧ್ವನಿನಾದಿತಂ ॥ ೭ ॥

ತಸ್ಮಿನ್ನನೇಕವಿನ್ಯಾಸಶೋಭಿತಾಶೇಷಭೂಮಿಕಂ ।
ವೈರಾಜಂ ನಾಮ ಭವನಂ ಬ್ರಹ್ಮಣಃ ಪರಮೇಷ್ಠಿನಃ ॥ ೮ ॥

---

೪. ಆ ಶಿಖರವು ಬಗೆಬಗೆಯ ಧಾತುಗಳಿಂದ ಚಿತ್ರಿತವಾಗಿದೆ. ಚೆನ್ನಾಗಿರುವ ಸ್ಫಟಿಕದ ಕಲ್ಲುಗಳಿಂದ ಕೂಡಿದೆ. ಅನೇಕ ಬಳ್ಳಿಗಳ ಗುಂಪಿನಿಂದ ಕೂಡಿದೆ. ನವಿಲಿನ ಕೂಗಿನಿಂದ ಆವರಿಸಲ್ಪಟ್ಟಿವೆ.

೫. ಸಿಂಹದ ಗರ್ಜನೆಯಿಂದ ಹೆದರುತ್ತಿರುವ ಮೃಗಗಳಿಂದ ಕೂಡಿದೆ. ಗಿರಿನದಿಗಳ ನೀರು ಬೀಳುವುದರಿಂದುಂಟಾದ ತುಂತುರುಗಳಿಂದ ತಣ್ಣಗಿದೆ.

೬. ಮರಗಳ ಮೇಲೆ ಗಾಳಿಯು ಬೀಸುವುದರಿಂದ ಮನೋಹರವಾಗಿರುವುದು. ಕಸ್ತೂರಿಮೃಗಗಳು ಓಡಿಯಾಡುವುದರಿಂದ ಆ ವನವೆಲ್ಲವೂ ಸುವಾಸನೆಯುಳ್ಳದ್ದಾಗಿರುವುದು.

೭. ಲತೆಗಳ ಪೊದರಿನಲ್ಲಿ ರತಿಸುಖಕ್ಕೋಸ್ಕರ ಮಲಗಿರುವ ವಿದ್ಯಾಧರರನ್ನುಳ್ಳುದಾಗಿದೆ. ಕಿನ್ನರರು ಹಾಡುತ್ತಿರುವುದರಿಂದ ಒಳ್ಳೆಯ ನಾದದಿಂದ ಕೂಡಿದೆ.

೮. ಆ ಮೇರುಪರ್ವತದ ಶಿಖರದಲ್ಲಿ ಕಾಂತಿಯುಳ್ಳ ಅನೇಕ ಬಗೆಯ ಕಲ್ಲುಗಳಿಂದ ಅಲಂಕರಿಸಿರುವ ಬ್ರಹ್ಮನ ವೈರಾಜವೆಂಬ ಮನೆ ಇರುವುದು.

ತತ್ರ ದಿವ್ಯಾಂಗನೋದ್ಗೀತಮಧುರಧ್ವನಿಶಬ್ದಿತಾ ।
ಪಾರಿಜಾತತರೂತ್ಪನ್ನಮಂಜರೀದಾಮಮಾಲಿನೀ ॥ ೯ ॥

ರತ್ನರಶ್ಮಿಸಮೂಹೋತ್ಥಬಹುವರ್ಣವಿಚಿತ್ರಿತಾ ।
ವಿನ್ಯಸ್ತಸ್ತಂಭಕೋಟಿಸ್ಥನಿರ್ಮಲಾದರ್ಶಶೋಭಿತಾ ॥ ೧೦ ॥

ಅಪ್ಸರೋನೃತ್ಯವಿನ್ಯಾಸವಿಲಾಸೋಲ್ಲಾಸಲಾಸಿತಾ ।
ಬಹ್ವಾತೋದ್ಯಸಮುತ್ಪನ್ನಸಮೂಹಸ್ವನನಾದಿತಾ ॥ ೧೧ ॥

ಲಯತಾಲಯುತಾನೇಕಗೀತವಾದಿತ್ರಶೋಭಿತಾ ।
ಸಭಾ ಕಾಂತಿಮತೀ ನಾಮ ದೇವಾನಾಂ ಶರ್ಮದಾಯಿಕಾ ॥ ೧೨ ॥

ಋಷಿಸಂಘಸಮಾಯುಕ್ತಾ ಮುನಿವೃಂದನಿಷೇವಿತಾ ।
ದ್ವಿಜಾತಿಸಾಮಶಬ್ದೇನ ನಾದಿತಾನಂದದಾಯಿನೀ ॥ ೧೩ ॥

---

೯. ಆ ಮನೆಯೊಳಗೆ ಒಂದು ಸಭೆಯಿದೆ. ಅದು ದೇವತಾಸ್ತ್ರೀಯರು ಗಾನ ಮಾಡುವ ಸಂಗೀತಧ್ವನಿಯುಳ್ಳದು. ಪಾರಿಜಾತದ ಹೂವಿನ ಮಾಲೆಯನ್ನು ಅಲ್ಲಿ ಹಾಕಿರುವರು.

೧೦. ರತ್ನಗಳ ಕಾಂತಿಗಳ ಸಮೂಹದಿಂದ ನಾನಾಬಣ್ಣಗಳಾಗಿ ವಿಚಿತ್ರ ವಾಗಿದೆ. ಕಂಬಗಳ ತುದಿಯಲ್ಲಿ ಇಟ್ಟಿರುವ ಚೆನ್ನಾಗಿರುವ ಕನ್ನಡಿಗಳಿಂದ ಸೊಗ ಸಾಗಿರುವುದು.

೧೧. ಅಪ್ಸರಸ್ತ್ರೀಯರ ಕುಣಿತದಿಂದ ಪ್ರಕಾಶಿತವಾಗಿದೆ. ಅನೇಕವಾದ ವಾದ್ಯಗಳಿಂದುಂಟಾದ ಧ್ವನಿಯಿಂದ ಕೂಡಿದೆ.

೧೨. ಲಯತಾಳಗಳಿಂದ ಕೂಡಿರುವ ಸಂಗೀತದಿಂದ ಶೋಭಿತವಾಗಿದೆ. ಇಂತಹ ಸಭೆಯ ಹೆಸರು ಕಾಂತಿಮತಿಯೆಂದು. ಇದು ದೇವತೆಗಳಿಗೆ ಸೌಖ್ಯವನ್ನು ಕೊಡುವಂತಹುದು.

೧೩. ಋಷಿಗಳು ಅಲ್ಲಿ ಗುಂಪುಗುಂಪಾಗಿರುವರು. ಮುನಿಗುಂಪಿನಿಂದ ಸೇವಿಸ ಲ್ಪಟ್ಟಿದೆ. ಬ್ರಾಹ್ಮಣರ ಸಾಮವೇದದ ಧ್ವನಿಯಿಂದ ಆನಂದವುಳ್ಳದ್ದಾಗಿರುತ್ತದೆ.

ತಸ್ಯಾಂ ನಿವಿಷ್ಟಂ ದೇವೇಶಂ ಧ್ಯಾನಾಸಕ್ತಂ ಪಿತಾಮಹಂ ।
ಧ್ಯಾಯಮಾನಂ ಪರಂ ದೇವಂ ಯೇನೇದಂ ನಿರ್ಮಿತಂ ಜಗತ್ ॥ ೧೪ ॥

ಧ್ಯಾಯತೋ ಬುದ್ಧಿರುತ್ಪನ್ನಾ ಕಥಂ ಯಜ್ಞಂ ಕರೋಮ್ಯಹಂ ।
ಕಸ್ಮಿನ್ ಸ್ಥಾನೇ ಮಯಾ ಯಜ್ಞಃ ಕಾರ್ಯಃ ಕುತ್ರ ಧರಾತಲೇ ॥ ೧೫ ॥

ಕಾಶೀ ಪ್ರಯಾಗಸ್ತುಂಗಾ ಚ ನೈಮಿಷಂ ಪುಷ್ಕರಂ ತಥಾ ।
ಕಾಂಚೀ ಭದ್ರಾ ದೇವಿಕಾ ತು ಕುರುಕ್ಷೇತ್ರಂ ಸರಸ್ವತೀ ॥ ೧೬ ॥

ಪ್ರಭಾಸಾದೀನಿ ತೀರ್ಥಾನಿ ಪೃಥಿವ್ಯಾಮಿಹ ಮಧ್ಯತಃ ।
ಕ್ಷೇತ್ರಾಣಿ ಪುಣ್ಯತೀರ್ಥಾನಿ ಸಂತಿ ಯಾನೀಹ ಸರ್ವತಃ ॥ ೧೭ ॥

ಮಮಾದೇಶಾತ್ತು ರುದ್ರೇಣ ಕೃತಾನ್ಯನ್ಯಾನಿ ಭೂತಲೇ ।
ಯಥಾಹಂ ಸರ್ವದೇವೇಷು ಅದಿದೇವೋ ವ್ಯವಸ್ಥಿತಃ ॥ ೧೮ ॥

ತಥೇದಂ ಪರಮಂ ತೀರ್ಥಮಾದಿಭೂತಂ ಕರೋಮಿ ವೈ ।
ಅಹಂ ಪದ್ಮೇ ಸಮುತ್ಪನ್ನಃ ಪದ್ಮಂ ತದ್ವಿಷ್ಣುನಾಭಿಜಂ ॥ ೧೯ ॥

---

೧೪. ಅದರಲ್ಲಿ ಸ್ವಾಮಿಯೂ ದೇವೇಶನೂ ಆದ ಪಿತಾಮಹನು ಕುಳಿತು ಕೊಂಡು ಜಗತ್ತನ್ನು ನಿರ್ಮಿಸಿದ ದೇವದೇವನನ್ನು ಧ್ಯಾನಮಾಡುತ್ತಿರುವನು.

೧೫. ಧ್ಯಾನಮಾಡುತ್ತಿರುವ ಆ ಸ್ವಾಮಿಗೆ ಭೂಮಿಯಲ್ಲಿ ಯಾವ ಜಾಗದಲ್ಲಿ ಯಜ್ಞವನ್ನು ಮಾಡಲಿ? ಹೇಗೆ ಮಾಡಲಿ ? ಎಂದು ಬುದ್ಧಿಯು ಹುಟ್ಟಿತು.

೧೬-೧೭. ಕಾಶಿ, ಪ್ರಯಾಗ, ತುಂಗೆ, ನೈಮಿಷ, ಪುಷ್ಕರ, ಕಾಂಚಿ, ಭದ್ರೆ, ದೇವಿಕೆ, ಕುರುಕ್ಷೇತ್ರ, ಸರಸ್ವತಿ, ಪ್ರಭಾಸ, ಮುಂತಾದ ತೀರ್ಥಗಳೂ ಪುಣ್ಯಕ್ಷೇತ್ರಗಳೂ ಇವೆ. ನನ್ನ ಅಪ್ಪಣೆಯಿಂದ ರುದ್ರನು ಎಲ್ಲ ಕಡೆಯಲ್ಲೂ ಭೂಮಿಯಲ್ಲಿ ತೀರ್ಥಗಳನ್ನು ಮಾಡಿದ್ದಾನೆ.

೧೮. ನಾನು ದೇವತೆಗಳಲ್ಲಿ ಆದಿದೇವನಾಗಿ ಹೇಗೆ ಇದ್ದೇನೆಯೋ ಹಾಗೆ ಈ ತೀರ್ಥವನ್ನು ಭೂಮಿಯಲ್ಲಿ ಮೊದಲನೆಯದನ್ನಾಗಿಮಾಡುತ್ತೇನೆ.

೧೯. ನಾನು ಪದ್ಮದಲ್ಲಿ ಹುಟ್ಟಿದೆನು. ಆ ಪದ್ಮವು ವಿಷ್ಣುವಿನ ಹೊಕ್ಕಳಲ್ಲಿ ಹುಟ್ಟಿತು ಆದ್ದರಿಂದ ಪುಷ್ಕರವೆಂಬ ತೀರ್ಥವು ಉತ್ತಮವೆಂದು ವೇದಬಲ್ಲವರು ಹೇಳುತ್ತಾರೆ.

ಪುಷ್ಕರಂ ಪ್ರೋಚ್ಯತೇ ತೀರ್ಥಮೃಷಿಭಿರ್ವೇದಪಾಠಕೈಃ ।
ತಸ್ಯೈವಂ ಚಿಂತಯಾನಸ್ಯ ಬ್ರಹ್ಮಣೋ ವೈ ಪ್ರಜಾಪತೇಃ　　॥ ೨೦ ॥

ಮತಿರೇಷಾ ಸಮುತ್ಪನ್ನಾ ವ್ರಜಾಮ್ಯೇಷ ಧರಾತಲೇ ।
ಪ್ರಾಕ್ಸ್ಥಲಂ ತು ಸಮಾಸಾದ್ಯ ಪ್ರವಿಷ್ಟಸ್ತದ್ವನೋತ್ತಮಂ　　॥ ೨೧ ॥

ನಾನಾದ್ರುಮಲತಾಕೀರ್ಣಂ ನಾನಾಪುಷ್ಪೋಪಶೋಭಿತಂ ।
ನಾನಾಪಕ್ಷಿರವಾಕೀರ್ಣಂ ನಾನಾಮೃಗಗಣಾಕುಲಂ　　॥ ೨೨ ॥

ದ್ರುಮಪುಷ್ಪರಸಾಮೋದೈರ್ವಾಸಿತಂ ಯತ್ಸಮಂತತಃ ।
ಬುದ್ಧಿಪೂರ್ವಮಿವ ನ್ಯಸ್ತೈಃ ಪುಷ್ಪೈರ್ಭೂಷಿತಭೂತಲಂ　　೨೩ ॥

ನಾನಾಗಂಧರಸೈರನ್ಯೈಃ ಪಕ್ವಾಪಕ್ವೈಃ ಷಡತುರ್ಕೈಃ ।
ಫಲೈಃ ಸುವರ್ಣರೂಪಾಢ್ಯೈರ್ಘ್ರಾಣದೃಷ್ಟಿಮನೋಹರೈಃ　　॥ ೨೪ ॥

---

೨೦. ಈರೀತಿ ಯೋಚಿಸುತ್ತಿರುವ ಬ್ರಹ್ಮನಿಗೆ ಈಗ ನಾನು ಭೂತಳಕ್ಕೆ ಹೋಗಬೇಕೆಂಬ ಬುದ್ಧಿಯು ಹುಟ್ಟಿತು.

೨೧-೨೨. ಪೂರ್ವದೇಶಕ್ಕೆ ಹೋಗಿ ಅಲ್ಲಿರುವ ವನವನ್ನು ಹೊಕ್ಕನು. ಆ ಆ ವನವು ಅನೇಕ ಮರಬಳ್ಳಿಗಳಿಂದ ಕೂಡಿದ್ದಿತು. ಹೂಗಳಿಂದ ಶೋಭಿಸುತ್ತಿತ್ತು. ಅನೇಕ ಪಕ್ಷಿಗಳ ಧ್ವನಿಯಿಂದ ಕೂಡಿ ಅನೇಕ ಮೃಗಗಳ ಗುಂಪಿನಿಂದಲೂ ಕೂಡಿದ್ದಿತು.

೨೩. ಮರಗಳ ಹೂಗಳಿಂದಲೂ ರಸಗಳಿಂದಲೂ ಎಲ್ಲಾ ಕಡೆಯಲ್ಲಿಯೂ ವಾಸನೆಯುಳ್ಳದ್ದಾಗಿದೆ. ಬುದ್ಧಿವಂತಿಕೆಯಿಂದ ಬೇಕೆಂದು ಅಲಂಕರಿಸಿರುವಂತೆ ಆ ಪ್ರದೇಶವು ಹೂಗಳಿಂದ ಅಲಂಕೃತವಾಗಿದೆ.

೨೪. ಬಗೆಬಗೆಯ ರಸಗಳ ಗಂಧಗಳಿಂದಲೂ, ಆರುಋತುಗಳ ಸಂಬಂಧವಾದ ಕಳಿತ, ಕಾಯಾದ ಹಣ್ಣುಗಳಿಂದಲೂ ಚಿನ್ನದ ಬಣ್ಣಕ್ಕಿರುವ ಮೂಗಿಗೆ ವಾಸನೆಯನ್ನು ಕೊಡುತ್ತ, ಕಣ್ಣಿಗೆ ಚೆನ್ನಾಗಿರುವ ಹಣ್ಣುಗಳಿಂದಲೂ, ಕೂಡಿವೆ.

ಜೀರ್ಣಪತ್ರಂ ತೃಣಂ ಯತ್ರ ಶುಷ್ಕಕಾಷ್ಠಫಲಾನಿ ಚ ।
ಬಹಿಃ ಕ್ಷಿಪತಿ ಜಾತಾನಿ ಮಾರುತೋऽನುಗ್ರಹಾದಿವ ॥ ೨೫ ॥

ನಾನಾಪುಷ್ಪಸಮೂಹಾನಾಂ ಗಂಧಮಾದಾಯ ಮಾರುತಃ ।
ಶೀತಲೋ ವಾತಿ ಖಂ ಭೂಮಿಂ ದಿಶೋ ಯತ್ರಾಭಿವಾಸಯನ್ ॥ ೨೬ ॥

ಹರಿತಸ್ನಿಗ್ಧನಿಶ್ಛಿದ್ರೈರಕೀಟವನಕೋಟರೈಃ ।
ವೃಕ್ಷೈರನೇಕಸಂಜ್ಞೈರ್ಯದ್ಭೂಷಿತಂಶಿ ಖರಾನ್ವಿತೈಃ ॥ ೨೭ ॥

ಅರೋಗೈರ್ದರ್ಶನೀಯೈಶ್ಚ ಸುವೃತ್ತೈಃ ಕೈಶ್ಚಿದುಜ್ಜ್ವಲೈಃ ।
ಕುಟುಂಬಮಿವ ವಿಪ್ರಾಣಾಮೃತ್ವಿಜೈರ್ಭಾತಿ ಸರ್ವಶಃ ॥ ೨೮ ॥

ಶೋಭಂತೇ ಧಾತುಸಂಕಾಶೈರಂಕುರೈಃ ಪ್ರಸೃತಾ ದ್ರುಮಾಃ ।
ಕುಲೀನೈರಿವ ನಿಶ್ಛಿದ್ರೈಃ ಸ್ವಗುಣೈಃ ಪ್ರಸೃತಾ ನರಾಃ ॥ ೨೯ ॥

---

೨೫. ಒಣಗಿದ ಎಲೆಗಳನ್ನೂ, ಹುಲ್ಲುಗಳನ್ನೂ, ಹಣ್ಣೆಲೆಗಳನ್ನೂ ಒಟ್ಟಿನಲ್ಲಿ ಉಪಯೋಗವಿಲ್ಲದವುಗಳನ್ನು ಗಾಳಿಯು ಆ ಬ್ರಹ್ಮನ ಅನುಗ್ರಹಕ್ಕೋಸ್ಕರವೋ ಎಂಬಂತೆ ಹೊರಗೆ ಎಸೆಯುತ್ತಿದೆ.

೨೬. ಅನೇಕ ಬಗೆಯ ಹೂಗಳ ವಾಸನೆಯನ್ನು ಹೊತ್ತುಕೊಂಡು ಗಾಳಿಯು ದಿಕ್ಕುಗಳನ್ನು ವಾಸನೆಯನ್ನಾಗಿಮಾಡುತ್ತ ತಣ್ಣಗೆ ಆಕಾಶಭೂಮಿಗಳಲ್ಲಿ ಬೀಸುತ್ತದೆ.

೨೭. ಹಸುರಾಗಿ, ಮನೋಹರವಾಗಿ, ಪೂಟರೆಗಳಿಲ್ಲದೆ, ಹುಳುಗಳೂ, ತೂತುಗಳೂ ಇಲ್ಲದೆ ಇರುವ ಅನೇಕ ಹೆಸರುಳ್ಳ ಮರಗಳಿಂದ ಅಲಂಕೃತವಾಗಿದೆ.

೨೮. ರೋಗವಿಲ್ಲದ, ಸುಂದರವಾದ, ಒಳ್ಳೆಯ ವೃತ್ತಿಯುಳ್ಳ, ಪ್ರಕಾಶಮಾನರಾದ, ಋತ್ವಿಕ್ಕುಗಳಾದ ಬ್ರಾಹ್ಮಣರ ಕುಟುಂಬವುಳ್ಳದೋ ಎಂಬಂತೆ ಎಲ್ಲಾ ಕಡೆಯಲ್ಲಿಯೂ ಪ್ರಕಾಶಿಸುತ್ತದೆ.

೨೯. ಗೈರಿಕಾದಿ ಧಾತುಗಳ ಗುಂಪಿನಿಂದ ಕೂಡಿದೆಯೋ ಎಂಬಂತಿರುವ ಚಿಗುರುಗಳಿಂದ ಮರಗಳು ಶೋಭಿಸುತ್ತವೆ. ಯೋಗ್ಯವಾದ ಕುಲದಲ್ಲಿ ಹುಟ್ಟಿದವರಂತೆ ಒಡಕುಗಳಿಲ್ಲದೆ ತಮ್ಮ ಗುಣಗಳಿಂದ ಹರಡಿಕೊಂಡಿರುವಂತಿವೆ.

**ಪವನಾವಿದ್ಧಶಿಖರೈಃ ಸ್ಪೃಶಂತೀವ ಪರಸ್ಪರಂ ।**
**ಆಜಿಘ್ರಂತೀವ ಚಾನ್ಯೋನ್ಯಂ ಪುಷ್ಪಶಾಖಾವತಂಸಕಾಃ ॥ ೩೦ ॥**

**ನಾಗವೃಕ್ಷಾಃ ಕ್ವಚಿತ್ಪುಷ್ಪೈರ್ದ್ರುಮವಾನೀರಕೇಶರೈಃ ।**
**ನಯನೈರಿವ ಶೋಭಂತೇ ಧವಲೈಃ ಕೃಷ್ಣತಾರಕೈಃ ॥ ೩೧ ॥**

**ಪುಷ್ಪಸಂಪನ್ನಶಿಖರಾಃ ಕರ್ಣಿಕಾರದ್ರುಮಾಃ ಕ್ವಚಿತ್ ।**
**ಯುಗ್ಮೈರ್ಯುಗ್ಮೈರ್ದ್ವಿಧಾ ಚೇಹ ಶೋಭಂತೇ ಸಾಧುದಂಪತೀ ॥ ೩೨ ॥**

**ಸುಪುಷ್ಪಪ್ರಭವಾಟೋಪೈಃ ಸಿಂಧುವಾರದ್ರುಪಂಕ್ತಯಃ ।**
**ಮೂರ್ತಿಮತ್ಯ ಇವಾಭಾಂತಿ ಪೂಜಿತಾ ವನದೇವತಾಃ ॥ ೩೩ ॥**

**ಕ್ವಚಿತ್ಕ್ವಚಿತ್ಕುಂದಲತಾಃ ಸ್ವಪುಷ್ಪಾಭರಣೋಜ್ಜ್ವಲಾಃ ।**
**ದಿಕ್ಷು ವೃಕ್ಷೇಷು ಶೋಭಂತೇ ಬಾಲಚಂದ್ರಾ ಇವೋದಿತಾಃ ॥ ೩೪ ॥**

---

೩೦. ಗಾಳಿಯಿಂದ ಅಲ್ಲಾಡುತ್ತಿರುವ ಕೊಂಬೆಗಳಿಂದ ಮರಗಳು ಒಂದೊಂದಕ್ಕೆ ಮುಟ್ಟಿಕೊಳ್ಳುತ್ತ ಇರುವುದನ್ನು ನೋಡಿದರೆ ಪುಷ್ಪದ ಕೊನೆಗಳನ್ನು ಒಂದೊಂದು ಮೂಸಿನೋಡಿಕೊಳ್ಳುತ್ತಿವೆಯೋ ಎಂಬಂತಿರುವುದು.

೩೧. ನಾನಾಬಗೆಯೊದ ಮರಗಳು ಹೂಗಳಿಂದಲೂ ನೀರಂಜಿಯ ಗಿಡಗಳ ಹೂಗಳಿಂದಲೂ ಕಪ್ಪಗೂ ಬೆಳ್ಳಗೂ ಇರುವುದನ್ನು ನೋಡಿದರೆ ಕಣ್ಣುಗಳಿಂದ ಕೂಡಿ ನೆಯೋ ಎಂಬಂತೆ ಕಾಣುತ್ತವೆ.

೩೨. ಹೂಗಳಿಂದ ಕೂಡಿರುವ ಕೊಂಬೆಗಳುಳ್ಳ ಕರ್ಣಿಕಾರಮರಗಳು ಎರಡೆರ ಡಾಗಿರುತ್ತಾ ಸತ್ಪುರುಷರ ದಂಪತಿಗಳಂತೆ ಕಾಣುತ್ತವೆ.

೩೩. ಒಳ್ಳೆಯ ಹೂಗಳಿಂದ ಇಕ್ಕಟ್ಟಾಗಿ ಕೂಡಿಕೊಂಡಿರುವ ಲಕ್ಕಿಯ ಮರದ ಸಾಲುಗಳು ಪೂಜೆಯನ್ನು ಹೊಂದಿರುವ ಪ್ರತ್ಯಕ್ಷವಾದ ದೇವತೆಗಳಂತೆ ಕಾಣುತ್ತವೆ.

೩೪. ಅಲ್ಲಲ್ಲೇ ಕಾಡುಮಲ್ಲಿಗೆಯು ತನ್ನ ಪುಷ್ಪಗಳಿಂದ ಕೂಡಿಕೊಂಡು ದಿಕ್ಕು ದಿಕ್ಕುಗಳಲ್ಲಿರುವ ಮರಗಳಲ್ಲಿರುತ್ತಾ ಅವು ಬಾಲಚಂದ್ರನಂತೆ ಕಾಣುತ್ತವೆ.

ಅತಿಕ್ರಮ್ಯ ದ್ರುಮಾಗ್ರಾಣಿ ಭಾಸಂತೇ ಯೂಥಿಕಾಲತಾಃ ।
ಪುಷ್ಪಿತಾಃ ಪುಷ್ಪನಿಕರೈರ್ವೀಜಯಂತ್ಯ ಇವೋತ್ಥಿತಾಃ ॥ ೩೫ ॥

ಸರ್ಜಾರ್ಜುನಾಃ ಕ್ವಚಿದ್ಭಾಂತಿ ವನಾದ್ದೇಶೇಷು ಪುಷ್ಪಿತಾಃ ।
ಧೌತಕೌಶೇಯವಾಸೋಭಿಃ ಪ್ರಾವೃತಾಃ ಪುರುಷಾ ಇವ ॥ ೩೬ ॥

ಅತಿಮುಕ್ತಕವಲ್ಲೀಭಿಃ ಪುಷ್ಪಿತಾಭಿಸ್ತಥಾ ದ್ರುಮಾಃ ।
ಉಪಗೂಢಾ ವಿರಾಜಂತೇ ನಾರೀಭಿರಿವ ಸುಪ್ರಿಯಾಃ ॥ ೩೭ ॥

ಚೂತಾಶ್ಚತಿಲಕಾಶ್ಚೈವ ಮಂಜರೀಭಿಃ ಕರೈರಿವ ।
ವಾಯುಘಾತಾದಿ ಚಾನ್ಯೋನ್ಯಂ ಧೌಕಂತೀವಾಥ ಸಜ್ಜನಾಃ ॥ ೩೮ ॥

ಅಪರಸ್ಪರಸಂಸಕ್ತೈಃ ಶಾಲಾಶೋಕಾಶ್ಚ ಪಲ್ಲವೈಃ ।
ಹಸ್ತೈರ್ಹರ್ಸಾರ್ತ್ ಸ್ಪೃಶಂತೀವ ಸುಹೃದಶ್ಚಿರಸಂಗತಾಃ ॥ ೩೯ ॥

---

೩೫. ಯೂಥಿಕಾಬಳ್ಳಿಗಳು, ಮರಗಳ ತುದಿಯಲ್ಲಿರುತ್ತ ಹೂಬಿಟ್ಟು ಅವುಗಳ ಗುಂಪಿನಿಂದ ಬೀಸುತ್ತಿರುವಂತೆ ಮೇಲಕ್ಕೆ ಎದ್ದಿವೆ.

೩೬. ಮತ್ತಿಯ ಮರಗಳು ಕಾಡುಗಳಲ್ಲಿ ಹೂಬಿಟ್ಟು ಮಡಿಮಾಡಿದ ರೇಷ್ಮೆಯ ಬಟ್ಟೆಯನ್ನುಟ್ಟಂತೆ ಕಾಣುತ್ತವೆ.

೩೭. ಜಾಜಿಯ ಬಳ್ಳಿಯು ಮರಗಳಲ್ಲಿ ಹಬ್ಬಿ ಹೂಬಿಟ್ಟಿರುವುದನ್ನ ನೋಡಿದರೆ ಪ್ರಿಯರನ್ನು ಆಲಂಗಿಸಿಕೊಂಡು ಇರುವ ಹೆಂಗಸರಂತೆ ಕಾಣುತ್ತದೆ.

೩೮. ಮಾವಿನಮರಗಳೂ, ತಿಲಕಮರಗಳೂ ಹೂಗಳನ್ನು ಬಿಟ್ಟು ಗೊಂಚಲುಗಳೆಂಬ ಕೈಗಳಿಂದ ಗಾಳಿ ಬಡಿತದಿಂದ ಒಲೆದಾಡುತ್ತಿರುವುದನ್ನು ನೋಡಿದರೆ ಸಜ್ಜನರನ್ನು ಅಣಕಿಸುತ್ತಿರುವಂತಿವೆ.

೩೯. ಒಂದಕ್ಕೊಂದಕ್ಕೆ ಸೇರದಿರುವ ಸಾಲ, ಅಶೋಕಮರಗಳು ತಮ್ಮ ಚಿಗರುಗಳುಳ್ಳ ಕೊನೆಗಳಿಂದ ಮುಟ್ಟುತ್ತಿರುವುದನ್ನು ನೋಡಿದರೆ ಬಹುಕಾಲದ ಮೇಲೆ ಬಂದು ಸೇರಿದ ಸ್ನೇಹಿತರು ಕೈಕೈಗಳನ್ನು ಹಿಡಿದುಕೊಂಡು ಕುಲುಕುತ್ತಿರುವಂತಿವೆ.

ಫಲಪುಷ್ಪಭರಾನಮ್ರಾಃ ಪನಸಾಃ ಸರಲಾರ್ಜುನಾಃ ।
ಅನ್ಯೋನ್ಯಮರ್ಚಯಂತೀವ ಪುಷ್ಪೈಶ್ಚೈವ ಫಲೈಸ್ತಥಾ ॥ ೪೦ ॥

ವಾಯುನಾ ವೇಗಸಂಶ್ಲಿಷ್ಟೈಃ ಪಾದಪಾಃ ಶಾಲಬಾಹುಭಿಃ ।
ಅಭ್ಯಾಶಮಾಗತೇ ಲೋಕೇ ಪ್ರೀತಿಭಾವೈರಿವೋತ್ಥಿತಾಃ ॥ ೪೧ ॥

ಪುಷ್ಪಾಣಾಮವರೋಧೇನ ಸ್ವಶೋಭಾರ್ಥಂ ವ್ರಜಂತಿ ವೈ ।
ವಸಂತಮಹಮಾಸಾದ್ಯ ಪುರುಷಾಃ ಸ್ಪರ್ಧಯೇವ ಹಿ ॥ ೪೨ ॥

ಪುಷ್ಪಶೋಭಾಭರನತೈಃ ಶಿಖರೈರ್ವಾಯುಕಂಪಿತೈಃ ।
ನೃತ್ಯಂತೀವ ನರಾಃ ಪ್ರೀತಾಃ ಸ್ರಗಲಂಕೃತಶೇಖರಾಃ ॥ ೪೩ ॥

ಭೃಂಗಾಃ ಪರ್ಯಂತವಿಕ್ಷಿಪ್ತಾಃ ಪುಷ್ಪಾವಲಿಲತಾಧೃತಾಃ ।
ಸವಲ್ಲೀಕಾಃ ಪ್ರನೃತ್ಯಂತಿ ಮಾನವಾ ಇವ ಸಂಗತಾಃ ॥ ೪೪ ॥

೪೦. ಹಣ್ಣು ಹೂಗಳ ಭಾರದಿಂದ ಬಗ್ಗಿರುವ ಹಲಸು, ಸರಳ, ಮತ್ತಿಮರ ಗಳು ಒಂದಕ್ಕೊಂದು ಹಣ್ಣುಹೂಗಳಿಂದ ಪೂಜಿಸುತ್ತಿರುವಂತೆ ಕಾಣುತ್ತವೆ.

೪೧. ವಾಯುವಿನ ವೇಗದಿಂದ ಸೇರಿಕೊಂಡಿರುವ ಮರಗಳು ಶಾಲಗಳೆಂಬ ತೋಳುಗಳಿಂದ, ಜನರು ಹತ್ತಿರಕ್ಕೆ ಬರುತ್ತಿದ್ದರೆ ಪ್ರೀತಿಯಿಂದ ಮೇಲಕ್ಕೆದ್ದಿವೆಯೋ ಎಂಬಂತಿವೆ.

೪೨. ಪುರುಷರು ವಸಂತೋತ್ಸವವನ್ನು ಹೊಂದಿ ಒಬ್ಬರಿಗೊಬ್ಬರು ಸ್ಪರ್ಧೆ ಯಿಂದಲೋ ಎಂಬಂತೆ ಹೂಗಳನ್ನು ಕುಯಿದುಕೊಂಡು ತಮ್ಮ ಅಲಂಕಾರಕ್ಕೋಸ್ಕರ ಹೋಗುತ್ತಾರೆ.

೪೩. ಹೂಗಳ ಭಾರದಿಂದ ಬಗ್ಗಿರುವ, ಗಾಳಿಯಿಂದ ಅಲ್ಲಾಡುತ್ತಿರುವ ವೃಕ್ಷ ಗಳು ಸಂತೋಷಗೊಂಡ ಮನುಷ್ಯನು ಪ್ರೀತಿಯಿಂದ ತಲೆಯಲ್ಲಾಡಿಸುತ್ತಾ ಕುಣಿಯು ತ್ತಿರುವಂತಿದೆ.

೪೪. ಪುಷ್ಪಗಳ ಲತೆಗಳ ತುದಿಯಲ್ಲಿ ಓಡಾಡುವ ದುಂಬಿಗಳನ್ನು ನೋಡಿದರೆ ವಲ್ಲಿಗಳಿಂದ ಕೂಡಿದ ಮನುಷ್ಯರು ಸೇರಿಕೊಂಡು ಕುಣಿಯುತ್ತಿರುವಂತಿದೆ.

ಸ್ವಪುಷ್ಪೋನ್ನತವಲ್ಲೀಭಿಃ ಪಾದಪಾಃ ಕ್ವಚಿದಾವೃತಾಃ ।
ಭಾಂತಿ ತಾರಾಗಣೈಶ್ಚಿತ್ರಂ ಶರದೀವ ನಭಸ್ತಲಂ ॥ ೪೫ ॥

ದ್ರುಮಾಣಾಮಥ ವಾಗ್ರೇಷು ಪುಷ್ಪಿತಾ ಮಾಲತೀಲತಾಃ ।
ಶೇಖರಾ ಇವ ಶೋಭಂತೇ ರಚಿತಾ ಬುದ್ಧಿಪೂರ್ವಕಂ ॥ ೪೬ ॥

ಹರಿತಾಃ ಕಾಂಚನಚ್ಛಾಯಾಃ ಫಲಿತಾಃ ಪುಷ್ಪಿತಾ ದ್ರುಮಾಃ ।
ಸೌಹೃದಂ ದರ್ಶಯಂತೀವ ನರಾಃ ಸಾಧುಸಮಾಗಮೇ ॥ ೪೭ ॥

ಪುಷ್ಪಕಿಂಜಲ್ಕಕಪಿಲಾ ಗತಾಃ ಸರ್ವಲತಾಸು ಚ ।
ಕದಂಬಪುಷ್ಪಸಂಕಾಶಾ ಘೋಷಯಂತೀವ ಷಟ್ಪದಾಃ ॥ ೪೮ ॥

ಕ್ವಚಿತ್ಪುಷ್ಪಾಸವಕ್ಷೀಬಾಃ ಸಂಪತಂತಿ ಯತಸ್ತತಃ ।
ಪುಂಸ್ಕೋಕಿಲಗಣಾ ವೃಕ್ಷಗಹನೇಷ್ವಿವ ಸುಪ್ರಿಯಾಃ ॥ ೪೯ ॥

ಶಿರೀಷಪುಷ್ಪಸಂಕಾಶಾಃ ಶುಕಾ ಮಿಥುನಕುಂಚಿತಾಃ ।
ಕೀರ್ತಯಂತಿ ಗಿರಶ್ಚಿತ್ರಾಃ ಪೂಜಿತಾ ಬ್ರಾಹ್ಮಣಾ ಯಥಾ ॥ ೫೦ ॥

---

೪೫. ತಮ್ಮ ಹೂಗಳಿಂದ ಮೇಲಕ್ಕೆ ಕಾಣುತ್ತಿರುವ ಕೊಂಬೆಗಳಿಂದ ಮರಗಳು ಕೆಲವು ಜಾಗದಲ್ಲಿ, ಶರತ್ಕಾಲದಲ್ಲಿ ಆಕಾಶವನ್ನು ಅಲಂಕರಿಸುತ್ತಿರುವ ನಕ್ಷತ್ರಗಳಂತೆ ಕಾಣುತ್ತವೆ.

೪೬. ಮರಗಳ ಮೇಲೆ ಹೂಬಿಟ್ಟಿರುವ ಜಾಜಿಬಳ್ಳಿಗಳು ಬುದ್ಧಿಯಿಂದಲೇ ಮಾಡಿರುವ ಶಿಖರಗಳಂತೆ ಪ್ರಕಾಶಿಸುತ್ತವೆ.

೪೭. ಹಸುರಾಗಿಯೂ ಹೊಂಬಣ್ಣವಾಗಿಯೂ ಇರುವ, ಹಣ್ಣುಬಿಟ್ಟು ಹೂಬಿಟ್ಟು ಇರುವ ಮರಗಳು, ಸಾಧುಗಳು ಬರುವಾಗ ತಮ್ಮ ಒಳ್ಳೆಯ ತನವನ್ನು ತೋರಿಸುವಂತಿದ್ದವು.

೪೮. ಹೂಗಳ ರೇಣುಗಳಿಂದ ಕಪ್ಪಗಾದ, ಎಲ್ಲಾ ಬಳ್ಳಿಗಳಿಗೂ ಹೋಗುತ್ತಿರುವ ದುಂಬಿಗಳು ಕದಂಬಪುಷ್ಪಗಳಂತಿದ್ದು ಕೂಗುತ್ತಿರುವಂತಿವೆ.

೪೯. ಕೆಲವು ಜಾಗದಲ್ಲಿ ಗಂಡುಕೋಗಿಲೆಗಳು ಹೂವಿನ ಬಂಡನ್ನು ಕುಡಿದು ಕೊಬ್ಬಿ, ಮರಗಳಿರುವ ಕಾಡುಗಳಲ್ಲಿ ಹಾರಾಡುತ್ತವೆ.

೫೦. ಬಾಗೆಯ ಹೂಗಳಂತೆ ಮೃದುವಾದ ಗಿಳಿಗಳು ಹೆಂಡಿರಲ್ಲಾಸಕ್ತವಾಗಿ ಗೌರವಹೊಂದಿದ ಬ್ರಾಹ್ಮಣರಂತೆ ನಾನಾಬಗೆಯಾಗಿ ಮಾತನಾಡುತ್ತವೆ.

**ಸಹಚಾರಿಸುಸಂಯುಕ್ತಾ ಮಯೂರಾಶ್ಚಿತ್ರಬರ್ಹಿಣಃ ।**
**ವನಾಂತೇಷ್ವಪಿ ನೃತ್ಯಂತಿ ಶೋಭಂತ ಇವ ನರ್ತಕಾಃ** ॥ ೫೧ ॥

**ಕೂಜಂತಃ ಪಕ್ಷಿಸಂಘಾತಾ ನಾನಾದ್ರುಮವಿಚಾರಿಣಃ ।**
**ಕುರ್ವಂತಿ ರಮಣೀಯಂ ವೈ ರಮಣೀಯತರಂ ವನಂ** ॥ ೫೨ ॥

**ನಾನಾಮೃಗಗಣಾಕೀರ್ಣಂ ನಿತ್ಯಂ ಪ್ರಮುದಿತಾಂಡಜಂ ।**
**ತದ್ವನಂ ನಂದನಸಮಂ ಮನೋದೃಷ್ಟಿವಿವರ್ಧನಂ** ॥ ೫೩ ॥

**ಪದ್ಮಪಾಣಿಸ್ತು ಭಗವಾಂಸ್ತಥಾರೂಪಂ ವನೋತ್ತಮಂ ।**
**ದದರ್ಶಾದರ್ಶವದ್ದೃಷ್ಟ್ಯಾ ಸೌಮ್ಯಯಾ ಪಾಯಯನ್ನಿವ** ॥ ೫೪ ॥

**ತಾ ವೃಕ್ಷಪಂಕ್ತಯಃ ಸರ್ವಾ ದೃಷ್ಟ್ವಾ ದೇವಂ ತಥಾಗತಂ ।**
**ನಿವೇದ್ಯ ಬ್ರಹ್ಮಣೇ ಭಕ್ತ್ಯಾ ಮುಮುಚುಃ ಪುಷ್ಪಸಂಪದಃ** ॥ ೫೫ ॥

**ಪುಷ್ಪಪ್ರತಿಗ್ರಹಂ ಕೃತ್ವಾ ಪಾದಪಾನಾಂ ಪಿತಾಮಹಃ ।**
**ವರಂ ವೃಣೀಧ್ವಂ ಭದ್ರಂ ವಃ ಪಾದಪಾನಿತ್ಯುವಾಚ ಸಃ** ॥ ೫೬ ॥

---

೫೧. ಹೆಂಡಿರೊಡನೆ ಕೂಡಿದ ಗಂಡು ನವಿಲುಗಳು ಕಾಡಿನ ಮಧ್ಯಭಾಗದಲ್ಲಿ ನರ್ತಕರಂತೆ ಕುಣಿಯುತ್ತ ಪ್ರಕಾಶಿಸುತ್ತವೆ.

೫೨. ಬಗೆಬಗೆಯ ಮರಗಳಲ್ಲಿ ಓಡಾಡುವ ಹಕ್ಕಿಗಳ ಗುಂಪು, ಕೂಗುತ್ತ ರಮಣೀಯವಾದ ಕಾಡನ್ನು ಇನ್ನೂ ರಮಣೀಯವಾಗಿ ಮಾಡುತ್ತದೆ.

೫೩. ಬಗೆಬಗೆಯ ಮೃಗಗಳಿಂದಲೂ, ಸಂತೋಷದಿಂದ ಕೂಡಿರುವ ಪಕ್ಷಿಗಳಿಂದಲೂ ಯಾವಾಗಲೂ ಕೂಡಿರುವ ಆ ವನವು ನಂದನವನಕ್ಕೆ ಸಮವಾಗಿ ಮನಸ್ಸಿಗೂ ಕಣ್ಣಿಗೂ ಸಂತೋಷವನ್ನುಂಟುಮಾಡುತ್ತದೆ.

೫೪. ಆ ಬ್ರಹ್ಮನು ಆ ರೀತಿ ಉತ್ತಮವಾದ ವನವನ್ನು ಸೌಮ್ಯವಾದ ದೃಷ್ಟಿಯಿಂದ ಕುಡಿಯುವವನಂತೆ, ಕನ್ನಡಿಯಂತೆ ಎಲ್ಲವನ್ನೂ ನೋಡಿದನು.

೫೫. ಆ ಮರಗಳ ಪಂಕ್ತಿಗಳು ಹಾಗೆ ಬಂದ ಸ್ವಾಮಿಯಾದ ಬ್ರಹ್ಮನನ್ನು ನೋಡಿ ಭಕ್ತಿಯಿಂದ ಉಪಚಾರವನ್ನು ಹೇಳಿ ಪುಷ್ಪಗಳನ್ನು ಚೆಲ್ಲಿದವು.

೫೬. ಆ ಬ್ರಹ್ಮನು ಮರಗಳು ಕೊಟ್ಟ ಹೂಗಳನ್ನು ತೆಗೆದುಕೊಂಡನು. ಮತ್ತು ಮರಗಳನ್ನು ಕುರಿತು ನಿಮಗೆ ಒಳ್ಳೆಯದಾಗಲಿ, ಬೇಕಾದ ವರವನ್ನು ಕೇಳಿಕೊಳ್ಳಿರಿ ಎಂದನು.

ಏವಮುಕ್ತಾ ಭಗವತಾ ತರವೋ ನಿರವಗ್ರಹಾಃ ।
ಊಚುಃ ಪ್ರಾಂಜಲಯಃ ಸರ್ವೇ ಸಮಸ್ಕೃತ್ವಾ ವಿರಿಂಚಿನಂ ॥ ೫೭ ॥

॥ ವೃಕ್ಷಾ ಊಚುಃ ॥

ವರಂ ದದಾಸಿ ಚೇದ್ದೇವ ಪ್ರಪನ್ನಜನವತ್ಸಲ ।
ಇಹೈವ ಭಗವನ್ನಿತ್ಯಂ ವನೇ ಸಂನ್ನಿಹಿತೋ ಭವ ॥ ೫೮ ॥

ಏಷ ನಃ ಪರಮಃ ಕಾಮಃ ಪಿತಾಮಹ ನಮೋಽಸ್ತು ತೇ ।
ತ್ವಂ ಚೇದ್ವಸಸಿ ದೇವೇಶ ವನೇಽಸ್ಮಿನ್ವಿಶ್ವಭಾವನ ॥ ೫೯ ॥

ಸರ್ವಾತ್ಮನಾ ಪ್ರಪನ್ನಾನಾಂ ವಾಂಛತಾಮುತ್ತಮಂ ವರಂ ।
ವರಕೋಟಿಭಿರನ್ಯಾಭಿರೇಷ ನೋ ದೀಯತಾಂ ವರಃ ।
ಭವತಃ ಸಂನಿಧಾನೇನ ತೀರ್ಥೇಭ್ಯಃ ಪ್ರವರಂ ಮಹತ್ ॥ ೬೦ ॥

॥ ಬ್ರಹ್ಮೋವಾಚ ॥

ಉತ್ತಮಂ ಸರ್ವಕ್ಷೇತ್ರಾಣಾಂ ಪುಣ್ಯಮೇತದ್ಭವಿಷ್ಯತಿ ।
ನಿತ್ಯಂ ಪುಷ್ಪಫಲೋಪೇತಾ ನಿತ್ಯಂ ಸುಸ್ಥಿರಯೌವನಾಃ ॥ ೬೧ ॥

---

೫೭. ಹೀಗೆ ಹೇಳಲು ಮರಗಳು ಸಂತೋಷಪಟ್ಟು ಕೈಮುಗಿದುಕೊಂಡು ಬ್ರಹ್ಮನನ್ನು ಕುರಿತು ಇಂತೆಂದವು.

೫೮. ಮರಗಳು ಹೇಳಿದವು—ಮರೆಹೊಕ್ಕವರಲ್ಲಿ ಪ್ರೀತಿಯುಳ್ಳ ಎಲೈ ಸ್ವಾಮಿಯೇ, ನೀನು ನಮಗೆ ವರವನ್ನು ಕೊಡುವ ಪಕ್ಷದಲ್ಲಿ ಈ ವನದಲ್ಲಿಯೇ ಯಾವಾಗಲೂ ಇದ್ದುಕೊಂಡಿರು.

೫೯. ಎಲೈ ಪ್ರಪಂಚಕ್ಕೆ ಒಡೆಯನಾದ ಸ್ವಾಮಿಯೇ, ನೀನು ಈ ವನದಲ್ಲಿ ವಾಸಮಾಡಿದರೆ ಅದೇ ನಮಗೆ ಬಹು ಇಷ್ಟವಾದುದು. ಎಲೈ ಪಿತಾಮಹನೇ, ನಿನಗೆ ನಮಸ್ಕಾರವು.

೬೦. ಎಲೈ ಬ್ರಹ್ಮನೇ ಎಲ್ಲ ಬಗೆಯಿಂದಲೂ ನಿನ್ನನ್ನೇ ಮರೆಹೊಕ್ಕಿರುವ ಮತ್ತು ಉತ್ತಮ ವರವನ್ನು ಅಪೇಕ್ಷಿಸುವ ನಮಗೆ ಇನ್ನೂ ಅನೇಕವಾದ ಕೋಟ್ಯಂತರ ವರಗಳನ್ನು ಕೊಡು. ನಿನ್ನ ಸನ್ನಿಧಾನವು ಇಲ್ಲಿರುವುದರಿಂದ ಇದು ತೀರ್ಥಗಳೊಳಗೆಲ್ಲಾ ಉತ್ತಮವಾಗಲಿ.

೬೧. ಬ್ರಹ್ಮನು ಹೇಳಿದನು :—ಇದು ಕ್ಷೇತ್ರಗಳಲ್ಲೆಲ್ಲಾ ಉತ್ತಮ ಕ್ಷೇತ್ರ

ಕಾಮಗಾಃ ಕಾಮರೂಪಾಶ್ಚ ಕಾಮರೂಪಫಲಪ್ರದಾಃ ।
ಕಾಮಸಂದರ್ಶನಾಃ ಪುಂಸಾಂ ತಪಸ್ಯಂತಿ ಫಲಪ್ರದಾಃ ।
ಶ್ರಿಯಾ ಪರಮಯಾ ಯುಕ್ತಾ ಮತ್ಪ್ರಸಾದಾದ್ಭವಿಷ್ಯಥ ॥ ೬೨ ॥

॥ ಪುಲಸ್ತ್ಯ ಉವಾಚ ॥

ಏವಂ ಸ ವರದೋ ಬ್ರಹ್ಮಾ ಅನುಜಗ್ರಾಹ ಪಾದಪಾನ್ ।
ಸ್ಥಿತ್ವಾ ವರ್ಷಸಹಸ್ರಂ ತು ಪುಷ್ಕರಂ ಪ್ರಾಕ್ಷಿಪದ್ಭುವಿ ॥ ೬೩ ॥

ಕ್ಷಿತಿಂ ನಿಪತತಾ ತೇನ ವ್ಯಕಂಪತ ರಸಾತಲಂ ।
ವಿವಶಾಸ್ತತ್ಯಜುರ್ವೇಲಾಂ ಸಾಗರಾಃ ಕ್ಷುಭಿತೋರ್ಮಯಃ ॥ ೬೪ ॥

ಶಕ್ರಾಶನಿಹತಾನೀವ ವ್ಯಾಘ್ರವ್ಯಾಲಾವಲೀನಿ ಚ ।
ಶಿಖರಾಣ್ಯತ್ಯಶೀರ್ಯಂತ ಪರ್ವತಾನಾಂ ಸಹಸ್ರಶಃ ॥ ೬೫ ॥

ದೇವಸಿದ್ಧವಿಮಾನಾನಿ ಗಂಧರ್ವನಗರಾಣಿ ಚ ।
ಪ್ರಚೇಲುರ್ಬಭ್ರಮುಃ ಪೇತುರ್ವಿವಿಶುಶ್ಚ ಧರಾತಲಂ ॥ ೬೬ ॥

---

ವಾಗುತ್ತದೆ. ನೀವೆಲ್ಲರೂ ಯಾವಾಗಲೂ ಹೂಹಣ್ಣುಗಳಿಂದ ಕೂಡಿಕೊಂಡಿರಿ. ಯಾವಾಗಲೂ ಸ್ಥಿರವಾದ ಯೌವನವನ್ನು ಹೊಂದಿರಿ.

೬೨. ಇಷ್ಟಬಂದಂತೆ ಸಂಚರಿಸುತ್ತಾ ಮನೋಹರವಾದ ರೂಪವುಳ್ಳವರಾಗಿ ಇಷ್ಟವಾದ ಫಲಗಳನ್ನು ಕೊಡುತ್ತ, ಚೆನ್ನಾಗಿ ಕಾಣುತ್ತ, ತಪಸ್ಸುಮಾಡುವವರಿಗೆ ಫಲವನ್ನು ಕೊಡುತ್ತ, ಉತ್ತಮವಾದ ಸಂಪತ್ತಿನಿಂದ ಕೂಡಿಕೊಂಡು ಇರುವವರಾಗಿ ನನ್ನ ಅನುಗ್ರಹದಿಂದ ಇರಿ.

೬೩. ಪುಲಸ್ತ್ಯನು ಹೇಳಿದನು:—ಈ ರೀತಿ ಬ್ರಹ್ಮನು ಅನುಗ್ರಹಿಸಿ ಒಂದು ಸಾವಿರ ವರ್ಷಗಳವರೆಗೂ ಇದ್ದು ಪುಷ್ಕರವನ್ನು ಭೂಮಿಗೆ ಎಸೆದನು.

೬೪. ಆ ಪುಷ್ಕರವು ಭೂಮಿಗೆ ಬೀಳುತ್ತಿರಲು ರಸಾತಲವು ನಡುಗಿತು. ಸಮುದ್ರಗಳು ಅಲ್ಲೋಲಕಲ್ಲೋಲವಾಗುತ್ತ ತಮ್ಮ ದಡವನ್ನು ಮೀರಿ ಹರಿದವು.

೬೫. ಬೆಟ್ಟಗಳೆಲ್ಲವೂ ಇಂದ್ರನ ವಜ್ರಾಯುಧದಿಂದ ಶೀಳಿದಂತೆ ಹುಲಿ, ಆನೆ ಹಾವುಗಳನ್ನೂ, ಶಿಖರಗಳನ್ನೂ ಪರ್ವತಗಳು ನಾಶಮಾಡಿಕೊಂಡವು.

೬೬. ದೇವತೆಗಳು, ಸಿದ್ಧರು ಇವರ ಮನೆಗಳೂ, ಗಂಧರ್ವರ ನಗರಗಳೂ ಅಲ್ಲಾಡಿ ಕತ್ತರಿಸಿ ತಿರುಗಿಬಿದ್ದು ಭೂಮಿಯನ್ನು ಹೊಕ್ಕವು.

ಕಪೋತಮೋಘಾಃ ಖಾನ್ಪೇತುಃ ಪುಟಸಂಘಾತದರ್ಶಿನಃ ।
ಜ್ಯೋತಿರ್ಗಣಾಂಶ್ಛಾದಯಂತೋ ಬಭೂವುಸ್ತೀವ್ರಭಾಸ್ಕರಾಃ ॥ ೬೭ ॥

ಮಹತಾ ತಸ್ಯ ಶಬ್ದೇನ ಮೂಕಾಂಧಬಧಿರೀಕೃತಂ ।
ಬಭೂವ ವ್ಯಾಕುಲಂ ಸರ್ವಂ ತ್ರೈಲೋಕ್ಯಂ ಸಚರಾಚರಂ ॥ ೬೮ ॥

ಸುರಾಸುರಾಣಾಂ ಸರ್ವೇಷಾಂ ಶರೀರಾಣಿ ಮನಾಂಸಿ ಚ ।
ಅವಸೇದುಶ್ಚ ಮುಮ್ಲುಶ್ಚ ಕಿಮೇತನ್ನೈವ ಜಜ್ಞಿರೇ ॥ ೬೯ ॥

ಧೈರ್ಯಮಾಲಂಬ್ಯ ಸರ್ವೇಽಥ ಬ್ರಹ್ಮಾಣಂ ಚಾಪ್ಯಲೋಕಯನ್ ।
ನ ಚ ತೇ ತಮಪಶ್ಯಂತ ಕ್ವ ನು ಬ್ರಹ್ಮಾ ಗತೋ ಹ್ಯಭೂತ್ ॥ ೭೦ ॥

ಕಿಮರ್ಥಂ ಕಂಪಿತಾ ಭೂಮಿರ್ನಿಮಿತ್ತೋತ್ಪಾತದರ್ಶನಂ ।
ತಾವದ್ವಿಷ್ಣುರ್ಗತಸ್ತತ್ರ ಯತ್ರ ದೇವಾ ವ್ಯವಸ್ಥಿತಾಃ ।
ಪ್ರಣಿಪತ್ಯ ಇದಂ ವಾಕ್ಯಮುಕ್ತವಂತೋ ದಿವೌಕಸಃ ॥ ೭೧ ॥

॥ ದೇವಾ ಊಚುಃ ॥

ಕಿಮೇತದ್ಭಗವನ್ಬ್ರೂಹಿ ನಿಮಿತ್ತೋತ್ಪಾತದರ್ಶನಂ ।
ತ್ರೈಲೋಕ್ಯಂ ಕಂಪಿತಂ ಯೇನ ಸಂಯುಕ್ತಂ ಕಾಲಧರ್ಮಣಾ ॥ ೭೨ ॥

---

೬೭. ಕಪೋತಗಳೂ, ಮೇಘಗಳೂ, ರೆಕ್ಕೆಗಳನ್ನೂ ತಮ್ಮ ಗುಂಪನ್ನೂ ತೋರಿಸುತ್ತಾ ಅಂತರಿಕ್ಷದಿಂದ ಬಿದ್ದವು. ಉಜ್ವಲಿಸುತ್ತಿರುವ ಸೂರ್ಯರು ನಕ್ಷತ್ರಗಳ ಗುಂಪನ್ನು ಮರೆಮಾಡಿದವು.

೬೮. ಮೂರು ಲೋಕದಲ್ಲಿರುವ ಚರಾಚರಪ್ರಾಣಿಗಳೂ ಆ ಪುಷ್ಕರದ ಶಬ್ದ ದಿಂದ ಕಿವುಡಾಗಿಯೂ ಮೂಗಾಗಿಯೂ ಆದವು. ಈರೀತಿ ಎಲ್ಲವೂ ತೊಂದರೆಪಟ್ಟವು.

೬೯. ಸುರಾಸುರರೆಲ್ಲರ ಶರೀರವೂ ಮತ್ತು ಮನಸ್ಸೂ ಬತ್ತಿಹೋದವು, ಮತ್ತು ಬಾಡಿಹೋದವು. ಇದೇನೆಂಬುದಾಗಿ ಯಾರಿಗೂ ಗೊತ್ತಾಗಲಿಲ್ಲ.

೭೦. ಆಗ ಎಲ್ಲರೂ ಧೈರ್ಯವನ್ನು ತಂದುಕೊಂಡು ಅಲ್ಲಿಗೆ ಬಂದಿದ್ದ ಬ್ರಹ್ಮ ನನ್ನು ನೋಡಿದರು. ಆದರೆ ಅವನು ಕಾಣಲಿಲ್ಲ. ಎಲ್ಲಿಗೋ ಹೊರಟು ಹೋಗಿದ್ದನು.

೭೧. ದೇವತೆಗಳೆಲ್ಲರೂ ಭೂಮಿಯು ಏತಕ್ಕೆ ನಡುಗಿತು? ಈ ಉತ್ಪಾತ ಗಳೇತಕ್ಕೆ ಉಂಟಾದುವು? ಎಂದು ನೋಡುತ್ತಿರುವಾಗ ಆ ದೇವತೆಗಳಿರುವಲ್ಲಿಗೆ ಅಷ್ಟರಲ್ಲಿಯೇ ವಿಷ್ಣುವು ಬಂದನು. ಆಗ ದೇವತೆಗಳು ನಮಸ್ಕರಿಸಿ ಇಂತೆಂದರು.

೭೨. ಎಲೈ ಸ್ವಾಮಿಯೇ, ಈ ನಿಮಿತ್ತಗಳೂ, ಈ ಉತ್ಪಾತವೂ ಕಾಣಲು

ಜಾತಂ ಕಲ್ಪಾವಸಾನಾಂ ತು ಭಿನ್ನಮರ್ಯಾದಸಾಗರಂ ।
ಚತ್ವಾರೋ ದಿಗ್ಗಜಾಃ ಕಿಂ ತು ಬಭೂವುರಚಲಾಶ್ಚಲಾಃ ॥ ೭೩ ॥

ಧರಾ ಸಮಾವೃತಾ ಕಸ್ಮಾತ್ಸಪ್ತಸಾಗರವಾರಿಣಾ ।
ಉತ್ಪತ್ತಿರ್ನಾಸ್ತಿ ಶಬ್ದಸ್ಯ ಭಗವನ್ನಿಷ್ಪ್ರಯೋಜನಾ ॥ ೭೪ ॥

ಯಾದೃಶೋಽಯಂ ಸ್ಮೃತಃ ಶಬ್ದೋ ನ ಭೂತೋ ನಾಪಿ ಸಂಶ್ರುತಃ ।
ತ್ರೈಲೋಕ್ಯಮಾಕುಲಂ ಯೇನ ಚಕ್ರೇ ರೌದ್ರೇಣ ತೇಜಸಾ ॥ ೭೫ ॥

ಶುಭಾಶುಭೋಽಯಂ ವಾ ಶಬ್ದಸ್ತ್ರೈಲೋಕ್ಯಸ್ಯ ದಿವೌಕಸಾಂ ।
ಭಗವನ್ಯದಿ ಜಾನಾಸಿ ಕಿಮೇತತ್ಕಥಯಸ್ವ ನಃ ।
ಏವಮುಕ್ತೋಽಬ್ರವೀದ್ವಿಷ್ಣುಃ ಪರಮೇಣಾನುಭಾವಿತಃ ॥ ೭೬ ॥

॥ ವಿಷ್ಣುರುವಾಚ ॥

ಮಾ ಭೈಷ್ಟ ಮರುತಃ ಸರ್ವೇ ಶೃಣುಧ್ವಂ ಚಾತ್ರ ಕಾರಣಂ ।
ನಿಶ್ಚಯೇನಾನುವಿಜ್ಞಾಯ ವದಾಮ್ಯೇಷ ಯಥಾವಿಧಂ ॥ ೭೭ ॥

---

ಕಾರಣವೇನು ? ಮೂರು ಲೋಕವೂ ಅಲ್ಲಾಡಲು ಕಾರಣವೇನು ? ಯಾವ ಕಾಲಧರ್ಮವು ಒದಗಿದೆ ? ಹೇಳು.

೭೩. ಕಲ್ಪವೇನಾದರೂ ಮುಗಿಯಿತೇ ? ಸಮುದ್ರವು ಎಲ್ಲೆ ಮೀರಿರುವುದಲ್ಲ ಅಲ್ಲದೆ ಅಲ್ಲಾಡದಿದ್ದ ದಿಗ್ಗಜಗಳೂ ಕೂಡ ಅಲ್ಲಾಡಿವೆಯಲ್ಲ.

೭೪. ಏಳು ಸಮುದ್ರದ ನೀರು ಭೂಮಿಯಮೇಲೆ ಹರಿಯಲು ಕಾರಣವೇನು ? ಪ್ರಯೋಜನವಿಲ್ಲದೆ ಶಬ್ದವು ಹುಟ್ಟುವುದಿಲ್ಲವಷ್ಟೆ ?

೭೫. ಈಗ ಕೇಳಿದ ಶಬ್ದವನ್ನು ಹಿಂದೆ ಕೇಳಿಯೂಇಲ್ಲ. ಹಿಂದುಂಟಾಗಿಯೂ ಇಲ್ಲ. ಈ ರೌದ್ರವಾದ ಶಬ್ದದಿಂದಲೂ ತೇಜಸ್ಸಿನಿಂದಲೂ ಮೂರು ಲೋಕವೂ ತಲ್ಲಣಿಸಿ ಹೋಗಿದೆ.

೭೬. ಈ ಶಬ್ದವು ಮೂರು ಲೋಕಕ್ಕೂ ದೇವತೆಗಳಿಗೂ ಶುಭವನ್ನುಂಟು ಮಾಡುತ್ತದೆಯೋ ? ಅಥವಾ ಅಶುಭಕರವೇ ? ಎಲೈ ಸ್ವಾಮಿಯೇ, ನೀನು ತಿಳಿದಿದ್ದರೆ ನಮಗೆ ಇದೆಲ್ಲವನ್ನೂ ಹೇಳು. ಎಂದು ದೇವತೆಗಳು ಕೇಳಲು ಮಹಾನುಭಾವಿಯಾದ ವಿಷ್ಣುವು ಇಂತೆಂದನು.

೭೭. ವಿಷ್ಣುವು ಹೇಳಿದನು :—ಎಲೈ ದೇವತೆಗಳಿರಾ ಕೇಳಿರಿ, ನೀವಾರೂ

ಪದ್ಮಹಸ್ತೋ ಹಿ ಭಗವಾನ್ಬ್ರಹ್ಮಾ ಲೋಕಪಿತಾಮಹಃ ।
ಭೂಪ್ರದೇಶೇ ಪುಣ್ಯರಾಶೌ ಯಜ್ಞಂ ಕರ್ತುಂ ವ್ಯವಸ್ಥಿತಃ ॥ ೭೮ ॥

ಅವರೋಹೇ ಪರ್ವತಾನಾಂ ವನೇ ಚಾತೀವ ಶೋಭನೇ ।
ಕಮಲಂ ತಸ್ಯ ಹಸ್ತಾತ್ತು ಪತಿತಂ ಧರಣೀತಲೇ ॥ ೭೯ ॥

ತಸ್ಯ ಶಬ್ದೋ ಮಹಾನೇಷ ಯೇನ ಯೂಯಂ ಪ್ರಕಂಪಿತಾಃ ।
ತತ್ರಾಸೌ ತರುವೃಂದೇನ ಪುಷ್ಪಾಮೋದಾಭಿನಂದಿತಃ ॥ ೮೦ ॥

ಅನುಗೃಹ್ಯಾಥ ಭಗವಾನ್ವನಂ ತತ್ಸುಮೃಗಾಂಡಜಂ ।
ಜಗತೋऽನುಗ್ರಹಾರ್ಥಾಯ ತತ್ರ ವಾಸಮರೋಚಯತ್ ॥ ೮೧ ॥

ಪುಷ್ಕರಂ ನಾಮ ತತ್ತೀರ್ಥಂ ಕ್ಷೇತ್ರಮೂಷರಮೇವ ಚ ।
ಜನಿತಂ ತದ್ಭಗವತಾ ಲೋಕಾನಾಂ ಹಿತಕಾರಿಣಾ ॥ ೮೨ ॥

---

ಹೆದರಬೇಕಾದುದಿಲ್ಲ. ಈ ವಿಷಯದಲ್ಲಿ ಕಾರಣವನ್ನು ಸರಿಯಾಗಿ ತಿಳಿದ ಅನಂತರ ಮಾಡತಕ್ಕದ್ದನ್ನು ಹೇಳುತ್ತೇನೆ.

೭೮. ಪದ್ಮಯೋನಿಯೂ, ಲೋಕಪಿತಾಮಹನೂ ಆದ ಬ್ರಹ್ಮನು ಪುಣ್ಯ ಭೂಮಿಯುಳ್ಳ ಭೂಮಿಯಲ್ಲಿ ಯಜ್ಞವನ್ನು ಮಾಡಲು ನಿಶ್ಚಯಿಸಿದ್ದಾನೆ.

೭೯. ಆ ಬ್ರಹ್ಮನ ಕೈಯಲ್ಲಿದ್ದ ಕಮಲವು ಪರ್ವತಗಳ ತಪ್ಪಲು ಪ್ರದೇಶವಾಗಿ ಚೆನ್ನಾಗಿರುವ ಭೂಪ್ರದೇಶದಲ್ಲಿ ಬಿದ್ದಿತು.

೮೦. ಈ ದೊಡ್ಡ ಶಬ್ದವೇ ಅದರದು. ಅದರಿಂದಲೇ ನೀವು ನಡುಗುತ್ತಿದ್ದೀರಿ. ಅದು ಬಿದ್ದ ಸ್ಥಾನದಲ್ಲಿದ್ದ ಮರಗಳು ತಮ್ಮ ಹೂಗಳ ವಾಸನೆಯಿಂದ ಅದನ್ನು ಸ್ವಾಗತಿಸಿವೆ.

೮೧. ಒಳ್ಳೆಯ ಮೃಗಗಳೂ ಪಕ್ಷಿಗಳೂ ಉಳ್ಳ ಆ ವನದಲ್ಲಿ ಅವನಿಗೆ ಕೃಪೆ ಹುಟ್ಟಿ ಅದಕ್ಕೋಸ್ಕರಲೂ, ಜಗತ್ತಿನ ಅನುಗ್ರಹಕ್ಕೋಸ್ಕರಲೂ ಅಲ್ಲಿ ವಾಸಮಾಡ ಬೇಕೆಂದಿದ್ದಾನೆ.

೮೨. ಅದು ಪುಷ್ಕರವೆಂಬ ಹೆಸರಿನಿಂದ ತೀರ್ಥವಾಗಿ ಊಷರಕ್ಷೇತ್ರವೆಂದು ಹೆಸರು ಪಡೆಯಿತು. ಬ್ರಹ್ಮನು ಲೋಕದ ಹಿತಕ್ಕೋಸ್ಕರ ಅದನ್ನು ಆ ರೀತಿ ಮಾಡಿದನು.

ಬ್ರಹ್ಮಾಣಂ ತತ್ರ ವೈ ಗತ್ವಾ ತೋಷಯಧ್ವಂ ಮಯಾ ಸಹ ।
ಆರಾಧ್ಯಮಾನೋ ಭಗವಾನ್ಪ್ರದಾಸ್ಯತಿ ವರಾನ್ವರಾನ್ ॥ ೮೩ ॥

ಇತ್ಯುಕ್ತ್ವಾ ಭಗವಾನ್ವಿಷ್ಣುಃ ಸಹ ತೈರ್ದೇವದಾನವೈಃ ।
ಜಗಾಮ ತದ್ವನೋದ್ದೇಶಂ ಯತ್ರಾಸ್ತೇ ಸ ತು ಕಂಜಜಃ ॥ ೮೪ ॥

ಪ್ರಹೃಷ್ಟಾಸ್ತುಷ್ಟಮನಸಃ ಕೋಕಿಲಾಲಾಪಲಾಪಿತಾಃ ।
ಪುಷ್ಪೋಚ್ಚಯೋಜ್ಜ್ವಲಂ ಶಸ್ತಂ ವಿವಿಶುರ್ಬ್ರಹ್ಮಣೋ ವನಂ ॥ ೮೫ ॥

ಸಂಪ್ರಾಪ್ತಂ ಸರ್ವದೇವೈಸ್ತು ವನಂ ನಂದನಸಂಮಿತಂ ।
ಪದ್ಮಿನೀಮೃಗಪುಷ್ಪಾಢ್ಯಂ ಸುದೃಢಂ ಶುಶುಭೇ ತದಾ ॥ ೮೬ ॥

ಪ್ರವಿಶ್ಯಾಥ ವನಂ ದೇವಾಃ ಸರ್ವಪುಷ್ಪೋಪಶೋಭಿತಂ ।
ಇಹ ದೇವೋಽತ್ರ ದೇವಾ ವೈ ಬಭ್ರಮುಸ್ತದ್ದಿದೃಕ್ಷವಃ ॥ ೮೭ ॥

---

೮೩. ಆ ಬ್ರಹ್ಮನ ಬಳಿಗೆ ನಾನು ಬರುತ್ತೇನೆ: ನೀವೂ ಬನ್ನಿರಿ. ಅವನನ್ನು ಸಂತೋಷಪಡಿಸಿರಿ. ಅವನನ್ನು ಪೂಜಿಸಿದರೆ ಆತನು ಉತ್ತಮವಾದ ವರಗಳನ್ನು ಕೊಡುವನು.

೮೪. ವಿಷ್ಣುವು ಹೀಗೆಂದು ಹೇಳಿ ಆ ದೇವದಾನವರೊಡನೆ ಆ ಬ್ರಹ್ಮನಿದ್ದ ಸ್ಥಳಕ್ಕೆ ಹೋದನು.

೮೫. ಆ ದೇವತೆಗಳು ಸಂತೋಷಗೊಂಡ ಮನಸ್ಸುಳ್ಳವರಾಗಿ ಕೋಗಿಲೆಯು ಶಬ್ದಮಾಡುತ್ತಲೂ, ಹೂಗಳ ಗೊಂಚಲುಗಳಿಂದಲೂ ಚೆನ್ನಾಗಿರುವ ಆ ಬ್ರಹ್ಮನ ವನವನ್ನು ಹೊಂದಿದರು.

೮೬. ನಂದನವನಕ್ಕೆ ಸಮವಾಗಿರುವ ಆ ವನಕ್ಕೆ ದೇವದಾನವರೆಲ್ಲರೂ ಹೋದರು. ಕಮಲ, ಮೃಗಗಳು, ಹೂಗಳಿಂದ ಕೂಡಿದ ಆ ವನವು ಚೆನ್ನಾಗಿ ಪ್ರಕಾಶಿಸಿತು.

೮೭. ಎಲ್ಲಾ ಬಗೆಯ ಹೂಗಳಿಂದಲೂ ಕೂಡಿರುವ ಆ ವನವನ್ನು ದೇವತೆಗಳು ಪ್ರವೇಶಿಸಿ, ಬ್ರಹ್ಮನು ಇಲ್ಲಿರುವನು, ಅಲ್ಲಿರುವನು ಎಂದು ಅವನನ್ನು ನೋಡಬೇಕೆಂಬಿಚ್ಛೆಯಿಂದ ಆ ಕಾಡಿನಲ್ಲೆಲ್ಲಾ ಹುಡುಕಿದರು.

ಮೃಗಯಂತಸ್ತತಸ್ತೇ ತು ಸರ್ವೇ ದೇವಾಃ ಸವಾಸವಾಃ ।
ಅದ್ಭುತಸ್ಯ ವನಸ್ಯಾಂತಂ ನ ತೇ ದದೃಶುರಾಶುಗಾಃ ॥ ೮೮ ॥

ವಿಚಿನ್ವದ್ಭಿಸ್ತದಾ ದೇವಂ ದೇವೈರ್ವಾಯುರ್ವಿಲೋಕಿತಃ ।
ಸ ತಾನುವಾಚ ಬ್ರಹ್ಮಾಣಂ ನ ದ್ರಕ್ಷ್ಯಥ್ವೇ ತಪೋ ವಿನಾ ॥ ೮೯ ॥

ತದಾ ಖಿನ್ನಾ ವಿಚಿನ್ವಂತಸ್ತಸ್ಮಿನ್ಪರ್ವತರೋಧಸಿ ।
ದಕ್ಷಿಣೇ ಚೋತ್ತರೇ ಚೈವ ಅಂತರಾಲೇ ಪುನಃ ಪುನಃ ॥ ೯೦ ॥

ವಾಯೂಕ್ತಂ ಹೃದಯೇ ಕೃತ್ವಾ ವಾಯುಸ್ತಾನಬ್ರವೀದ್ವಚಃ ॥ ೯೧ ॥

॥ ವಾಯುರುವಾಚ ॥

ತ್ರಿವಿಧೋ ದರ್ಶನೋಪಾಯೋ ವಿರಿಂಚೇರಸ್ಯ ಸರ್ವದಾ ।
ಶ್ರದ್ಧಾಜ್ಞಾನೇನ ತಪಸಾ ಯೋಗೇನ ಚ ನಿಗದ್ಯತೇ ॥ ೯೨ ॥

ಸಕಲಂ ನಿಷ್ಕಲಂ ಚೈವ ಯಂ ಪಶ್ಯಂತಿ ಚ ಯೋಗಿನಃ ।
ತಪಸ್ವಿನಸ್ತು ಸಕಲಂ ಜ್ಞಾನಿನೋ ನಿಷ್ಕಲಂ ಪರಂ ॥ ೯೩ ॥

---

೮೮. ಇಂದ್ರನೇ ಮುಂತಾದ ದೇವತೆಗಳು ಅಲ್ಲಿ ಹುಡುಕುತ್ತಾ ಆ ಸೊಗಸಾದ ಕಾಡಿನ ಮಧ್ಯಭಾಗವನ್ನು ಮಾತ್ರ ಅವರು ನೋಡಲೇ ಇಲ್ಲ.

೮೯. ಆ ಬ್ರಹ್ಮನನ್ನು ಹುಡುಕುತ್ತಿರುವ ದೇವತೆಗಳು ಅಲ್ಲಿ ವಾಯುವನ್ನು ನೋಡಿದರು. ಆ ವಾಯುವು ದೇವತೆಗಳನ್ನು ಕುರಿತು ತಪಸ್ಸನ್ನು ಮಾಡದೆ ಆ ಬ್ರಹ್ಮನನ್ನು ನೋಡಲಾರಿರಿ ಎಂದನು.

೯೦-೯೧. ಆ ಪರ್ವತದ ಉತ್ತರ ದಕ್ಷಿಣಗಳಲ್ಲಿಯೂ, ಮಧ್ಯದಲ್ಲಿಯೂ ಹುಡುಕುತ್ತಾ, ವಾಯುವು ಹೇಳಿದುದನ್ನು ಮನಸ್ಸಿನಲ್ಲಿಟ್ಟುಕೊಂಡು ಖಿನ್ನರಾಗಿದ್ದರು. ಆಗ ವಾಯುವು ಅವರನ್ನು ಕುರಿತು ಇಂತೆಂದನು.

೯೨. ವಾಯುವು ಹೇಳಿದನು :—ಬ್ರಹ್ಮನನ್ನು ನೋಡಲು ಶ್ರದ್ಧಾಜ್ಞಾನವೂ, ತಪಸ್ಸೂ, ಯೋಗವೂ ಎಂಬದಾಗಿ ಮೂರು ಬಗೆಯ ಮಾರ್ಗಗಳಿವೆ.

೯೩. ಬ್ರಹ್ಮನನ್ನು ನೋಡಲು ಕಲಸಹಿತವೆಂದೂ, ಕಲರಹಿತವೆಂದೂ ಎರಡು ಬಗೆಯ ತಪಸ್ಸುಂಟು. ತಪಸ್ವಿಗಳು ಆ ಬ್ರಹ್ಮನನ್ನು ಕಲಸಹಿತಜ್ಞಾನದಿಂದಲೂ, ಯೋಗಿಗಳು ನಿಷ್ಕಲಜ್ಞಾನದಿಂದಲೂ ನೋಡುತ್ತಾರೆ.

ಸಮುತ್ಪನ್ನೇ ತು ವಿಜ್ಞಾನೇ ಮಂದಶ್ರದ್ಧೋ ನ ಪಶ್ಯತಿ ।
ಭಕ್ತ್ಯಾ ಪರಮಯಾ ಕ್ಷಿಪ್ರಂ ಬ್ರಹ್ಮ ಪಶ್ಯಂತಿ ಯೋಗಿನಃ ॥ ೯೪ ॥

ದ್ರಷ್ಟವ್ಯೋ ನಿರ್ವಿಕಾರೋಽಸೌ ಪ್ರಧಾನಪುರುಷೇಶ್ವರಃ ।
ಕರ್ಮಣಾ ಮನಸಾ ವಾಚಾ ನಿತ್ಯಯುಕ್ತಾಃ ಪಿತಾಮಹಂ ॥ ೯೫ ॥

ತಪಶ್ಚರಧ್ವಂ ಭದ್ರಂ ವೋ ಬ್ರಹ್ಮಾರಾಧನತತ್ಪರಾಃ ।
ಬ್ರಾಹ್ಮೀಂ ದೀಕ್ಷಾಂ ಪ್ರಪನ್ನಾನಾಂ ಭಕ್ತಾನಾಂ ಚ ದ್ವಿಜನ್ಮನಾಂ ॥ ೯೬ ॥
ಬ್ರಹ್ಮೇಚ್ಛಾವಿಷ್ಟಮನಸೋ ವಾಕ್ಪತಿಂ ಚ ತತೋಽಬ್ರುವನ್ ॥ ೯೭ ॥

॥ ದೇವಾ ಊಚುಃ ॥

ಪ್ರಜ್ಞಾನ ವಿಬುಧಾಸ್ಮಾಕಂ ಬ್ರಾಹ್ಮೀಂ ದೀಕ್ಷಾಂ ವದಸ್ವ ನಃ ॥ ೯೮ ॥

॥ ಪುಲಸ್ತ್ಯ ಉವಾಚ ॥

ಸಂದಿದೀಕ್ಷಯಿಷುಃ ಕ್ಷಿಪ್ರಮಮರಾನ್ಬ್ರಹ್ಮದೀಕ್ಷಯಾ ।
ವೇದೋಕ್ತೇನ ವಿಧಾನೇನ ದೀಕ್ಷಯಾಮಾಸ ತಾನ್ಗುರುಃ ॥ ೯೯ ॥

---

೯೪. ತಪಸ್ವಿಗಳಿಗೆ ವಿಜ್ಞಾನವು ಹುಟ್ಟಿದ ಮೇಲೆ ಶ್ರದ್ಧೆಯು ಕಡಿಮೆಯಾಗು ವುದರಿಂದ ಆ ಬ್ರಹ್ಮನನ್ನು ನೋಡಲಾರರು. ಉತ್ತಮವಾದ ಭಕ್ತಿಯು ಇದ್ದರೆ ಜಾಗ್ರತೆಯಾಗಿ ನೋಡುವರು.

೯೫. ನಿರ್ವಿಕಾರನೂ, ಪ್ರಧಾನಪುರುಷನೂ ಈಶ್ವರನೂ ಆದ ಬ್ರಹ್ಮನನ್ನು ಮನೋವಾಕ್ಕಾಯಗಳಿಂದ ನಿರತರಾದವರು ನೋಡಬಹುದು.

೯೬. ನೀವು ಬ್ರಹ್ಮನ ಪೂಜೆಯಲ್ಲಿ ನಿರತರಾಗಿ ತಪಸ್ಸನ್ನು ಮಾಡಿರಿ. ಬ್ರಹ್ಮ ನಲ್ಲಿ ಭಕ್ತಿಯನ್ನು ಹೊಂದಿರಿ. ಬ್ರಹ್ಮನ ವಿಷಯವಾದ ದೀಕ್ಷೆಯನ್ನು ಹೊಂದಿರಿ.

೯೭. ವಾಯುವಿನ ಈ ಮಾತನ್ನು ಕೇಳಿ ಅದು ಒಳ್ಳೆಯದೆಂದು ತಿಳಿದು ಬ್ರಹ್ಮನನ್ನು ನೋಡಬೇಕೆಂಬ ಮನಸ್ಸುಳ್ಳವರಾಗಿ ಗುರುವನ್ನು ಕುರಿತು ಇಂತೆಂದರು.

೯೮. ದೇವತೆಗಳು ಹೇಳಿದರು :—ಉತ್ತಮಜ್ಞಾನವನ್ನು ತಿಳಿದಿರುವುದರಲ್ಲಿ ಪಂಡಿತನಾದ ಗುರುವೇ, ನಮಗೆ ಬ್ರಹ್ಮನ ದೀಕ್ಷೆಯ ವಿಷಯವನ್ನು ಹೇಳು.

೯೯. ಪುಲಸ್ತ್ಯನು ಹೇಳಿದನು :—ಆ ಗುರುವು ದೇವತೆಗಳನ್ನು ಬ್ರಹ್ಮ ದೀಕ್ಷೆಯಿಂದ ದೀಕ್ಷೆಗೊಳಿಸಲು ಸಿದ್ಧನಾಗಿ ವೇದೋಕ್ತವಾದ ವಿಧಾನದಿಂದ ದೀಕ್ಷೆ ಯನ್ನು ಕೊಟ್ಟನು.

ವಿನೀತವೇಷಾಃ ಪ್ರಣತಾ ಅಂತೇವಾಸಿತ್ವಮನ್ವಯುಃ ।
ಬ್ರಹ್ಮಪ್ರಸಾದಂ ಸಂಪ್ರಾಪ್ತಾಃ ಪೌಷ್ಕರಂ ಜ್ಞಾನಮೀರಿತಂ ॥ ೧೦೦ ॥

ಯಜ್ಞಂ ಚಕಾರ ವಿಧಿನಾ ಧಿಷಣೋಽಧ್ವರ್ಯುರ್ಸತ್ತಮಃ ।
ಪದ್ಮಂ ಕೃತ್ವಾ ಮೃಣಾಲಾಢ್ಯಂ ಪದ್ಮದೀಕ್ಷಾಪ್ರಯೋಗತಃ ॥ ೧೦೧ ॥

ಅನುಜಗ್ರಾಹ ದೇವಾಂಸ್ತಾನ್ಪರೇಚ್ಛಾಪ್ರೇರಿತೋ ಮುನಿಃ ।
ತೇಭ್ಯೋ ದದೌ ವಿವೇಕಿಭ್ಯಃ ಸ ವೇದೋಕ್ತವಿಧಾನವಿತ್ ॥ ೧೦೨ ॥

ದೀಕ್ಷಾಂ ವೈ ವಿಸ್ಮಯಂ ತ್ಯಕ್ತ್ವಾ ಬೃಹಸ್ಪತಿರುದಾರಧೀಃ ।
ಏಕಮಗ್ನಿಂ ಚ ಹುತ್ವಾಪಿ ಹೋಮಾರ್ಥೇ ತ್ರಿದಿವೌಕಸಾಂ ॥ ೧೦೩ ॥

ಪ್ರಾದಾದಾಂಗಿರಸಸ್ತುಷ್ಟೋ ಜಾಪ್ಯಂ ವೇದೋದಿತಂ ಚ ಯತ್ ।
ತ್ರಿಸುಪರ್ಣಂ ತ್ರಿಮಧು ಚ ಪಾವಮಾನೀಂ ಚ ಪಾವನೀಂ ॥ ೧೦೪ ॥

---

೧೦೦. ಆ ದೇವತೆಗಳೆಲ್ಲರೂ ವಿನಯದಿಂದ ಆ ಗುರುವಿಗೆ ನಮಸ್ಕರಿಸಿ ಶಿಷ್ಯರಾದರು. ಬ್ರಹ್ಮನ ಅನುಗ್ರಹಕ್ಕೆ ಪಾತ್ರರಾಗಿ ಪೌಷ್ಕರಜ್ಞಾನವನ್ನು ತಿಳಿದುಕೊಂಡರು

೧೦೧. ಪದ್ಮದೀಕ್ಷೆಯ ವಿಧಿಯಿಂದ ಪದ್ಮವನ್ನೂ, ಅದಕ್ಕೆ ದಂಟನ್ನೂ ಮಾಡಿ ಆ ಹೋಮಮಾಡುವುದರಲ್ಲಿ ಶಕ್ತನಾದ ಗುರುವು ವಿಧಿಯ-ರೀತಿಯಿಂದ ಯಜ್ಞವನ್ನು ಮಾಡಿದನು.

೧೦೨. ಪರರ ಇಚ್ಛೆಯಂತೆ ಪ್ರೇರಿತನಾದ ಆ ಗುರುವು ಅವರಿಗೆ ಅನುಗ್ರಹ ಮಾಡಿದನು. ಮತ್ತು ವಿವೇಕಿಗಳಾದ ಅವರಿಗೆ ವೇದದಲ್ಲಿ ಹೇಳಿರುವ ರೀತಿಯಿಂದ ಆ ದೀಕ್ಷೆಯನ್ನು ಕೊಟ್ಟನು.

೧೦೩. ಅಗ್ನಿಪ್ರತಿಷ್ಠೆಯನ್ನು ಮಾಡಿ ದೇವತೆಗಳಿಗೋಸ್ಕರ ಅದರಲ್ಲಿ ಹೋಮ ಮಾಡಿ ಆ ಬೃಹಸ್ಪತಿಯು ಅವರಿಗೆ ದೀಕ್ಷೆಯನ್ನು ಕೊಟ್ಟನು.

೧೦೪. ಗುರುವು ಸಂತೋಷದಿಂದ ವೇದದಲ್ಲಿ ಹೇಳಿರುವ ರೀತಿಯಲ್ಲಿ ತ್ರಿಸುಪರ್ಣವನ್ನೂ, ತ್ರಿಮಧುವನ್ನೂ ಪಾವಮಾನಿಯನ್ನೂ ಪಾರಾಯಣ ಮಾಡಲು ಹೇಳಿ ಕೊಟ್ಟನು.

ಸ ಹಿ ಜಾಪ್ಯಾದಿಕಂ ಸರ್ವಮನುಶಿಕ್ಷಯದುದಾರಧೀಃ ।
ಅಪೋಹಿಷ್ಠೇತಿ ಯತ್ಸ್ನಾನಂ ಬ್ರಾಹ್ಮಂ ತತ್ಪರಿಪಠ್ಯತೇ ॥ ೧೦೫ ॥

ಪಾಪಘ್ನಂ ದುಸ್ಸ್ವಪ್ನಮನಂ ಪುಷ್ಟಿಶ್ರೀಬಲವರ್ಧನಂ ।
ಸಿದ್ಧಿದಂ ಕೀರ್ತಿದಂ ಚೈವ ಕಲಿಕಲ್ಮಷನಾಶನಂ ॥ ೧೦೬ ॥

ತಸ್ಮಾತ್ಸರ್ವಪ್ರಯತ್ನೇನ ಬ್ರಾಹ್ಮಂ ಸ್ನಾನಂ ಸಮಾಚರೇತ್ ।
ಕುರ್ವಂತೋ ಮೌನಿನೋ ದಾಂತಾ ದೀಕ್ಷಿತಾಃ ಕ್ಷಪಿತೇಂದ್ರಿಯಾಃ ॥

ಸರ್ವೇ ಕಮಂಡಲುಧರಾ ಮುಕ್ತಿಕಾಮಾಕ್ಷಮಾಲಿನಃ ।
ದಂಡಿನಶ್ಚೀರವಸ್ತ್ರಾಶ್ಚ ಜಟಾಭಿರಭಿಶೋಭಿತಾಃ ॥ ೧೦೮ ॥

ಸ್ಥಾನೇ ವೀರಾಸನರತಾಃ ಪ್ರಜ್ಞಾಧ್ಯಾನಾವಧಾರಿಣಃ ।
ಪರೇ ಬ್ರಹ್ಮಣಿ ಸಂತೋಽನ್ಯೇ ನಿಯತಾಹಾರಕಾಂಕ್ಷಿಣಃ ॥ ೧೦೯ ॥

---

೧೦೫. ಆ ಗುರುವು ಜಪಮಾಡುವ ಎಲ್ಲಾ ಮಂತ್ರಗಳನ್ನೂ ವಿಧಿಗಳನ್ನೂ ಅವರಿಗೆ ಹೇಳಿಕೊಟ್ಟನು. ಆಪೋಹಿಷ್ಠ ಎಂಬ ಮಂತ್ರದಿಂದ ಮಾಡಿಕೊಳ್ಳುವ ಸ್ನಾನಕ್ಕೆ ಬ್ರಾಹ್ಮಸ್ನಾನವೆಂದು ಹೆಸರು.

೧೦೬. ಆ ಬ್ರಾಹ್ಮಸ್ನಾನವು ಪಾಪವನ್ನು ನಾಶಮಾಡುತ್ತದೆ. ದುಸ್ವಪ್ನ ನಾಶಮಾಡುತ್ತವೆ, ಪುಷ್ಟಿಯನ್ನೂ ಸಂಪತ್ತನ್ನೂ ಬಲವನ್ನೂ ಹೆಚ್ಚಿಸುತ್ತದೆ. ಸಿದ್ಧಿಯನ್ನೂ ಕೀರ್ತಿಯನ್ನೂ ಉಂಟುಮಾಡುತ್ತದೆ ಮತ್ತು ಕಲಿಯ ಪಾಪವನ್ನೂ ನಾಶಮಾಡುತ್ತದೆ.

೧೦೭. ಆದ್ದರಿಂದ ಸರ್ವ ಪ್ರಯತ್ನದಿಂದಲೂ ಈ ಬ್ರಾಹ್ಮಸ್ನಾನವನ್ನು ಮಾಡಬೇಕು. ಹಾಗೆ ಸ್ನಾನಮಾಡಿ ಮೌನದಿಂದಲೂ ದಾಂತರಾಗಿಯೂ ಇದ್ದು ದೀಕ್ಷೆಯನ್ನು ಹೊಂದಿ ಇಂದ್ರಿಯ ನಿಗ್ರಹಗಳನ್ನು ಮಾಡಿದರು.

೧೦೮. ಕಮಂಡಲುಗಳನ್ನು ಧರಿಸಿ, ಅಕ್ಷಮಾಲೆಯನ್ನು ಹಿಡಿದು, ಮುಕ್ತಿಯನ್ನಪೇಕ್ಷಿಸುವವರಾಗಿ ದಂಡವನ್ನು ಹಿಡಿದು, ನಾರುಮುಡಿಯನ್ನುಟ್ಟು ಜಟೆಗಳನ್ನು ಧರಿಸಿದರು.

೧೦೯. ಒಂದೇ ಜಾಗದಲ್ಲಿ ವೀರಾಸನವನ್ನು ಹಾಕಿಕೊಂಡು ಜ್ಞಾನರೂಪ ಧ್ಯಾನವನ್ನು ಮಾಡುತ್ತ ಕ್ಲುಪ್ತವಾದ ಆಹಾರವುಳ್ಳವರಾಗಿ ಪರಬ್ರಹ್ಮನಲ್ಲಿ ಆಸಕ್ತರಾಗಿದ್ದರು.

ಅಧ್ಯಾತ್ಮನಿರತಾಃ ಶಾಂತಾಃ ಸಂಗಧ್ಯಾನವಿವರ್ಜಿತಾಃ ।
ಏವಂ ವ್ರತಧರಾಃ ಸರ್ವೇ ತ್ರಿಕಾಲಂ ಸ್ನಾನಮಾಚರನ್ ॥ ೧೧೦ ॥

ಭಕ್ತ್ಯಾ ಪರಮಯಾ ಯುಕ್ತಾ ವಿಧಿನಾ ಪರಮೇಣ ಚ ।
ಕಾಲೇನ ಮಹತಾ ಧ್ಯಾನಾದ್ದೇವಜ್ಞಾನಮನೋಗತಾಃ ॥ ೧೧೧ ॥

ಬ್ರಹ್ಮಧ್ಯಾನಾಗ್ನಿನಿರ್ದಗ್ಧಾ ಯದಾ ಶುದ್ಧೈಕಮಾನಸಾಃ ।
ಆವಿರ್ಬಭೂವ ಭಗವಾನ್ ಸರ್ವೇಷಾಂ ದೃಷ್ಟಿಗೋಚರಃ ॥ ೧೧೨ ॥

ತೇಜಸಾಪ್ಯಾಯಿತಾಸ್ತಸ್ಯ ಬಭೂವುರ್ಭ್ರಾಂತಚೇತಸಃ ।
ಅತೋಽವಲಂಬ್ಯ ತೇ ಧೈರ್ಯಮಿಷ್ಟದೇವಂ ಯಥಾವಿಧಿ ॥ ೧೧೩ ॥

ಷಡಂಗವೇದಯೋಗೇನ ಹೃಷ್ಟಚಿತ್ತಾಸ್ತು ತತ್ಪರಾಃ ।
ಶಿರೋಗತೈರಂಜಲಿಭಿಃ ಶಿರೋಭಿಶ್ಚ ಮಹೀಂ ಗತಾಃ ।
ತುಷ್ಟುವುಃ ಸೃಷ್ಟಿಕರ್ತಾರಂ ಸ್ಥಿತಿಕರ್ತಾರಮೀಶ್ವರಂ ॥ ೧೧೪ ॥

---

೧೧೦. ಅಧ್ಯಾತ್ಮನಲ್ಲಿ ಆಸಕ್ತರಾಗಿ ಶಾಂತರಾಗಿ ಸವಿಕಲ್ಪಕ ಧ್ಯಾನವನ್ನು ಬಿಟ್ಟು ಇದ್ದರು. ಇವರೆಲ್ಲರೂ ಈರೀತಿ ವ್ರತವನ್ನು ಧರಿಸಿ ಮೂರು ಕಾಲಗಳಲ್ಲಿಯೂ ಸ್ನಾನಮಾಡುತ್ತಿದ್ದರು.

೧೧೧. ಉತ್ತಮವಾದ ಭಕ್ತಿಯಿಂದಲೂ ಉತ್ತಮವಾದ ಧ್ಯಾನದಿಂದಲೂ ಕೂಡಿಕೊಂಡು ಬಹುಕಾಲದ ಮೇಲೆ ಬಹು ಧ್ಯಾನದಿಂದ ದೇವಜ್ಞಾನದಲ್ಲಿ ಮನಸ್ಸಿಟ್ಟರು.

೧೧೨. ಬ್ರಹ್ಮಧ್ಯಾನವೆಂಬ ಬೆಂಕಿಯಿಂದ ಪಾಪಗಳೆಲ್ಲವನ್ನೂ ಸುಟ್ಟುಕೊಂಡು ಶುದ್ಧವಾದ ಮನಸ್ಸುಳ್ಳವರಾಗುತ್ತಲೂ ಆ ದೇವತೆಗಳಿಗೆ ಬ್ರಹ್ಮನು ಕಣ್ಣಿಗೆ ಕಾಣಿಸಿಕೊಂಡನು.

೧೧೩-೧೧೪. ಆಗ ಆ ಬ್ರಹ್ಮನ ತೇಜಸ್ಸಿನಿಂದ ಸುಖಹೊಂದಿದವರಾಗಿ ಮೊದಲು ದಿಗ್ಭ್ರಮೆ ಹೊಂದಿದರು. ಅನಂತರ ಧೈರ್ಯವನ್ನು ತಂದುಕೊಂಡು ಸ್ವಾಮಿಯಾದ ಬ್ರಹ್ಮನನ್ನು ವಿಧಿವತ್ತಾಗಿ ಸ್ತುತಿಸಿದರು

॥ ದೇವಾ ಊಚುಃ ॥

ಬ್ರಹ್ಮಣೇ ಬ್ರಹ್ಮದೇಹಾಯ ಬ್ರಹ್ಮಣ್ಯಾಯಾಜಿತಾಯ ಚ ।
ನಮಸ್ಕುರ್ಮಃ ಸುನಿಯತಾಃ ಕ್ರತುವೇದಪ್ರದಾಯಿನೇ ॥ ೧೧೬ ॥

ಭಕ್ತಾನುಕಂಪಿನೇ ದೇವ ಸೃಷ್ಟಿರೂಪಾಯ ತೇ ನಮಃ ।
ಪಂಚಾಸ್ಯ ಶುಭಯಾ ಭಕ್ತ್ಯಾ ವೇದಜಾಪ್ಯಸ್ತುತಾಯ ಚ ॥ ೧೧೭ ॥

ಬಹುರೂಪಸ್ವರೂಪಾಯ ರೂಪಾಣಾಂ ಶತಧಾರಿಣೇ ।
ಸಾವಿತ್ರೀಪತಯೇ ದೇವ ಗಾಯತ್ರೀಪತಯೇ ನಮಃ ॥ ೧೧೮ ॥

ಪದ್ಮಾಸನಾಯ ಪದ್ಮಾಯ ಪದ್ಮವಕ್ತ್ರಾಯ ತೇ ನಮಃ ।
ವರದಾಯ ವರಾರ್ಹಾಯ ಕೂರ್ಮಾಯ ಚ ಮೃಗಾಯ ಚ ॥ ೧೧೯ ॥

---

೧೧೫. ಸಂತೋಷಗೊಂಡು ಆ ಬ್ರಹ್ಮನಲ್ಲಿಯೇ ಮನಸ್ಸುಳ್ಳ ಆ ದೇವತೆಗಳು ಆರು ಅಂಗಗಳಿಂದ ಕೂಡಿರುವ ವೇದಗಳಿಂದ ತಲೆಯಮೇಲೆ ಕೈಮುಗಿದುಕೊಂಡು ನೆಲದಲ್ಲಿ ನಮಸ್ಕರಿಸಿ ಸೃಷ್ಟಿಕರ್ತನಾದ ಆ ಬ್ರಹ್ಮನನ್ನು ಸ್ತೋತ್ರಮಾಡಿದರು.

೧೧೬. ದೇವತೆಗಳು ಹೇಳಿದರು :—ವೇದದ ದೇಹವನ್ನು ಹೊಂದಿ ಪರಮಾತ್ಮನ ಹಿತವಾದ ಜಯಶಾಲಿಯಾದ ಬ್ರಹ್ಮನಿಗೆ ನಮಸ್ಕಾರಮಾಡುತ್ತೇವೆ. ಯಾಗ ಮತ್ತು ವೇದಗಳನ್ನು ಕೊಟ್ಟ ಆ ಸ್ವಾಮಿಗೆ ನಮಸ್ಕಾರವು.

೧೧೭. ಭಕ್ತರಲ್ಲಿ ದಯೆಯುಳ್ಳ ಸೃಷ್ಟಿರೂಪನಾದ ನಿನಗೆ ನಮಸ್ಕಾರವು. ಎಲೈ ಐದು ಮುಖವುಳ್ಳ ಬ್ರಹ್ಮನೇ! ವೇದದ ಜಪದಿಂದ ಸ್ತೋತ್ರಮಾಡಲ್ಪಟ್ಟ ನಿನಗೆ ಭಕ್ತಿಯಿಂದ ನಮಸ್ಕರಿಸುವೆವು.

೧೧೮. ಬಹು ರೂಪಗಳನ್ನು ಹೊಂದುವ, ಅನೇಕ ರೂಪಗಳ ಆಕಾರನಾದ, ಸಾವಿತ್ರೀ ಗಾಯತ್ರಿಗಳಿಗೆ ಪತಿಯಾದ ನಿನಗೆ ನಮಸ್ಕಾರವು.

೧೧೯. ಪದ್ಮವೇ ಆಸನವಾಗಿಯುಳ್ಳ, ಪದ್ಮರೂಪನಾದ, ಪದ್ಮದಂತೆ ಮುಖವುಳ್ಳ, ವರಗಳನ್ನು ಕೊಡುವ, ವರಕ್ಕೆ ಯೋಗ್ಯನಾದ, ಆಮೆಯ ರೂಪಿಯೂ ಜಿಂಕೆಯ ರೂಪಿಯೂ ಆದ ನಿನಗೆ ನಮಸ್ಕಾರವು.

ಜಟಾಮುಕುಟಯುಕ್ತಾಯ ಶ್ರುವಶ್ರುಚನಿಧಾರಿಣೇ ।
ಮೃಗಾಂಕ ಮೃಗಧರ್ಮಾಯ ಧರ್ಮನೇತ್ರಾಯ ತೇ ನಮಃ ॥ ೧೨೦ ॥

ವಿಷ್ವಕ್ಸೇನಾಯ ವಿಶ್ವಾಯ ವಿಶ್ವೇಶಾಯ ನಮೋ ನಮಃ ।
ಧರ್ಮನೇತ್ರ ತ್ರಾಣಮಸ್ಮಾದಧಿಕಂ ಕರ್ತುಮರ್ಹಸಿ ॥ ೧೨೧ ॥

ವಾಙ್ಮನಃಕಾಯಭಾವೈಸ್ತ್ವಾಂ ಪ್ರಪನ್ನಾಃ ಸ್ಮ ಪಿತಾಮಹ ।
ಏವಂ ಸ್ತುತಸ್ತದಾ ದೇವೈರ್ಬ್ರಹ್ಮಾ ಬ್ರಹ್ಮವಿದಾಂ ವರಃ ॥ ೧೨೨ ॥

ಪ್ರದಾಸ್ಯಾಮಿ ಸ್ಮೃತೋ ಬಾಢಮಮೋಘಂ ದರ್ಶನಂ ಹಿ ವಃ ।
ಬ್ರುವಂತು ವಾಂಛಿತಂ ಪುತ್ರಾಃ ಪ್ರದಾಸ್ಯಾಮಿ ನ ಸಂಶಯಃ ।
ಏವಮುಕ್ತಾ ಭಗವತಾ ದೇವಾ ವಚನಮಬ್ರುವನ್ ॥ ೧೨೩ ॥

॥ ದೇವಾ ಊಚುಃ ॥

ಏಷ ಏವಾದ್ಯ ಭಗವನ್ಸುಪರ್ಯಾಪ್ತೋ ಮಹಾನ್ವರಃ ।
ಜನಿತೋ ನಃ ಸುಖಬೋಧೋಽಯಂ ಕಮಲಂ ಕ್ಷಿಪತಾ ತ್ವಯಾ ॥ ೧೨೪ ॥

---

೧೨೦. ಜಡೆ ಕಿರೀಟಗಳನ್ನು ಧರಿಸಿರುವ, ವೇದಗಳನ್ನು ಧರಿಸಿರುವ, ಜಿಂಕೆಯನ್ನು ಗುರುತಾಗಿ ಉಳ್ಳ, ಜಿಂಕೆಯ ಧರ್ಮವನ್ನು ಹೊಂದಿರುವ, ಧರ್ಮವೇ ಕಣ್ಣಾಗಿ ಉಳ್ಳ ನಿನಗೆ ನಮಸ್ಕಾರವು.

೧೨೧. ವಿಷ್ವಕ್ಸೇನನೂ, ವಿಶ್ವರೂಪನೂ, ವಿಶ್ವಕ್ಕೇ ಒಡೆಯನೂ ಆದ ನಿನಗೆ ನಮಸ್ಕಾರವು. ಎಲೈ ಧರ್ಮವೇ ದೃಷ್ಟಿಯಾಗಿ ಉಳ್ಳ ಸ್ವಾಮಿಯೆ, ನಮ್ಮನ್ನು ಬಹುವಾಗಿ ಕಾಪಾಡಲು ಯೋಗ್ಯನಾಗಿದ್ದೀ.

೧೨೨-೧೨೩. ಎಲೈ ಬ್ರಹ್ಮನೇ! ನಿನ್ನನ್ನು ಮನೋವಾಕ್ಕಾಯಗಳಿಂದ ಅನುಸರಿಸಿದವರಾಗಿದ್ದೇವೆ. ಈ ರೀತಿ ಆ ದೇವತೆಗಳು ಸ್ತೋತ್ರಮಾಡಲು, ಆ ಬ್ರಹ್ಮನು ನೀವು ಸ್ಮರಿಸಿದ ಮಾತ್ರದಿಂದಲೇ ನಿಮಗೆ ಬೇಕಾದ ವರವನ್ನು ಕೊಡುತ್ತೇನೆ. ನಿಮಗೆ ನನ್ನ ದರ್ಶನವು ಬಹು ಅಮೂಲ್ಯವಾದುದು. ಎಲೈ ಪುತ್ರರಿರಾ! ನಿಮಗೆ ಬೇಕಾದುದನ್ನು ಕೇಳಿ, ಕೊಡುತ್ತೇನೆ. ಸಂಶಯವಿಲ್ಲ, ಹೀಗೆ ಆ ಭಗವಂತನು ಹೇಳುತ್ತಲೂ ದೇವತೆಗಳೂ ಇಂತೆಂದರು

೧೨೪. ದೇವತೆಗಳು ಹೇಳಿದರು:—ಎಲೈ ಬ್ರಹ್ಮನೆ, ನೀನು ಕಮಲವನ್ನು

ಕಿಮರ್ಥಂ ಕಂಪಿತಾ ಭೂಮಿರ್ಲೋಕಾಶ್ಚಾಕುಲಿತಾಃ ಕೃತಾಃ ।
ನೈತನ್ನಿರರ್ಥಕಂ ದೇವ ಉಚ್ಯತಾಮತ್ರ ಕಾರಣಂ ॥ ೧೨೫ ॥

॥ ಬ್ರಹ್ಮೋವಾಚ ॥

ಯುಷ್ಮದ್ಧಿತಾರ್ಥಮೇತದ್ವೈ ಭಯಂ ವಿನಿಹಿತಂ ಕೃತಂ ।
ದೇವತಾನಾಂ ಚ ರಕ್ಷಾರ್ಥಂ ಶ್ರೂಯತಾಮತ್ರ ಕಾರಣಂ ॥ ೧೨೬ ॥

ಅಸುರೋ ವಜ್ರನಾಭೋಽಯಂ ಬಾಲಜೀವಾಪಹಾರಕಃ ।
ಅವಸ್ಥಿತಸ್ತ್ವವಷ್ಟಭ್ಯ ರಸಾತಲತಲಾಶ್ರಯಂ ॥ ೧೨೭ ॥

ಯುಷ್ಮಾದಾಗಮನಂ ಜ್ಞಾತ್ವಾ ಉಪಸ್ಥಾನ್ನಿಹಿತಾಯುಧಾ್ ।
ಹಂತುಕಾಮೋ ದುರಾಚಾರಃ ಸೇಂದ್ರಾನಪಿ ದಿವೌಕಸಃ ॥ ೧೨೮ ॥

ಘಾತಃ ಕಲಮುಪಾತೇನ ಮಯಾ ತಸ್ಯ ವಿನಿರ್ಮಿತಃ ।
ಸ ರಾಜ್ಯೈಶ್ವರ್ಯದರ್ಪಿಷ್ಠಸ್ತೇನಾಸೌ ನಿಹತೋ ಮಯಾ ॥ ೧೨೯ ॥

---

ಎಸೆದುದರಿಂದ ಶಬ್ದವನ್ನುಂಟುಮಾಡಿದೆಯಷ್ಟೆ! ಅದು ಒಂದೇ ನಮಗೆ ಬೇಕಾದ ದೊಡ್ಡ ವರವಾಯಿತು.

೧೨೫. ಭೂಮಿಯೆಲ್ಲವೂ ಏಕೆ ನಡುಗಿತು ? ಲೋಕಗಳೆಲ್ಲವೂ ಏಕೆ ದುಃಖಗೊಂಡವು ? ಇದು ವ್ಯರ್ಥವಾಗುವುದಿಲ್ಲವಷ್ಟೆ ಇದರ ಕಾರಣವನ್ನು ಹೇಳು.

೧೨೬. ಬ್ರಹ್ಮನು ಹೇಳಿದನು :—ನಿಮ್ಮಗಳ ಹಿತಕ್ಕೋಸ್ಕರವೇ ಈ ಭಯವನ್ನುಂಟುಮಾಡಿದೆನು. ದೇವತೆಗಳ ರಕ್ಷೆಗೇನೇ ಈ ಕೆಲಸವನ್ನು ಮಾಡಿದ್ದೇನೆ. ಇದಕ್ಕೆ ಕಾರಣವನ್ನು ಕೇಳಿ.

೧೨೭. ವಜ್ರನಾಭನೆಂಬ ಒಬ್ಬ ರಾಕ್ಷಸನು ಮಕ್ಕಳ ಜೀವಗಳನ್ನು ನಾಶಮಾಡುತ್ತ ರಸಾತಳವನ್ನು ಆಶ್ರಯಿಸಿಕೊಂಡಿದ್ದನು.

೧೨೮. ನೀವು ಬರುವಿರೆಂಬುದು ಆತನಿಗೆ ತಿಳಿಯಿತು. ಮತ್ತು ನೀವು ಆಯುಧಗಳನ್ನು ಬಿಟ್ಟು ಬಂದಿದ್ದೀರಿ. ಇಂತಹ ಇಂದ್ರನೇ ಮುಂತಾದ ದೇವತೆಗಳನ್ನು ಕೊಲ್ಲಲು ಆ ದುರಾಚಾರಿಯು ಸಿದ್ಧನಾದನು.

೧೨೯. ನಾನು ಕಮಲವನ್ನು ಹಾಕೋಣದರಿಂದ ಆತನಿಗೆ ಮೃತ್ಯುವನ್ನು ನಿರ್ಮಿಸಿದೆನು. ಮತ್ತು ರಾಜ್ಯದ ಐಶ್ವರ್ಯದಿಂದ ಕೊಬ್ಬಿದ ಆತನನ್ನು ಆ ಕಮಲದಿಂದಲೇ ಕೊಂದೆನು.

ಲೋಕೇಽಸ್ಮಿನ್ಸಮಯೇ ಭಕ್ತಾ ಬ್ರಾಹ್ಮಣಾ ವೇದಪಾರಗಾಃ ।
ನೈವ ತೇ ದುರ್ಗತಿಂ ಯಾಂತು ಲಭಂತಾಂ ಸುಗತಿಂ ಪುನಃ ॥ ೧೩೦ ॥

ದೇವಾನಾಂ ದಾನವಾನಾಂ ಚ ಮನುಷ್ಯೋರಗರಕ್ಷಸಾಂ ।
ಭೂತಗ್ರಾಮಸ್ಯ ಸರ್ವಸ್ಯ ಸಮೋಽಸ್ಮಿ ತ್ರಿದಿವೌಕಸಃ ॥ ೧೩೧ ॥

ಯುಷ್ಮದ್ಧಿತಾರ್ಥಂ ಪಾಪೋಽಸೌ ಮಯಾ ಮಂತ್ರೇಣ ಘಾತಿತಃ ।
ಪ್ರಾಪ್ತಃ ಪುಣ್ಯಕೃತಾಂ ಲೋಕಾನ್ಕಮಲಸ್ಯಾಸ್ಯ ದರ್ಶನಾತ್ ॥ ೧೩೨ ॥

ಯನ್ಮಯಾ ಪದ್ಮಮುಕ್ತಂ ತು ತೈನೇವಂ ಪುಷ್ಕರಂ ಭುವಿ ।
ಖ್ಯಾತಂ ಭವಿಷ್ಯತೇ ತೀರ್ಥಂ ಪಾವನಂ ಪುಣ್ಯದಂ ಮಹತ್ ॥ ೧೩೩ ॥

ಪೃಥಿವ್ಯಾಂ ಸರ್ವಜಂತೂನಾಂ ಪುಣ್ಯದಂ ಪರಿಪಠ್ಯತೇ ।
ಕೃತಶ್ಚಾನುಗ್ರಹೋ ದೇವಾ ಭಕ್ತಾನಾಂ ಭಕ್ತಿಮಿಚ್ಛತಾಂ ॥ ೧೩೪ ॥

---

೧೩೦. ಈ ಲೋಕದಲ್ಲಿ ಭಕ್ತರಾಗಿಯೂ ಬ್ರಾಹ್ಮಣರಾಗಿಯೂ ವೇದಪಾರಗರಾಗಿಯೂ ಇರುವವರು ಕೆಟ್ಟ ಗತಿಯನ್ನು ಹೊಂದದೆ ಒಳ್ಳೆಯ ಗತಿಯನ್ನು ಹೊಂದಬೇಕು.

೧೩೧. ಎಲೈ ದೇವತೆಗಳಿರಾ! ದೇವತೆಗಳು, ದಾನವರು, ಮನುಷ್ಯರು, ಉರಗರು, ರಾಕ್ಷಸರು, ಪ್ರಾಣಿಗಳ ಗುಂಪು; ಇವೆಲ್ಲಕ್ಕೂ ನಾನು ಒಂದೇ ಸಮಭಾವದಿಂದ್ದೇನೆ.

೧೩೨. ನಿಮ್ಮಗಳ ಹಿತಕ್ಕೋಸ್ಕರವೇ ಈ ಪಾಪಿಯನ್ನು ಮಂತ್ರದಿಂದ ಕೊಂದೆನು. ಅವನೂ ಕೂಡ ಈ ಕಮಲದ ದರ್ಶನದಿಂದ ಪುಣ್ಯವಂತರ ಲೋಕವನ್ನು ಹೊಂದಿದನು.

೧೩೩. ನಾನು ಪದ್ಮವನ್ನು ಹಾಕಿದುದರಿಂದ ಭೂಮಿಯಲ್ಲಿ ಈ ಜಾಗವು ಪುಷ್ಕರವೆಂದು ಪ್ರಸಿದ್ಧವಾಗಿ ಪವಿತ್ರವೂ ಪುಣ್ಯವೂ ಆದ ತೀರ್ಥವಾಗುತ್ತದೆ.

೧೩೪. ಭೂಮಿಯಲ್ಲಿ ಎಲ್ಲಾ ಪ್ರಾಣಿಗಳಿಗೂ ಪುಣ್ಯವನ್ನು ಕೊಡತಕ್ಕದ್ದೆಂದು ಹೇಳಲ್ಪಡುತ್ತದೆ. ಎಲೈ ದೇವತೆಗಳಿರಾ, ಭಕ್ತರಿಗೆ ಹಿತವನ್ನು ಕೊಡಬೇಕೆಂಬ ಮನಸ್ಸಿನಿಂದ ಅನುಗ್ರಹಿಸಿದ್ದೇನೆ.

ವನೇಽಸ್ಮಿನ್ನಿತ್ಯವಾಸೇನ ವೃಕ್ಷೈರಭ್ಯರ್ಥಿತೇನ ಚ ।
ಮಹಾಕಾಲೋ ವನೇ ತ್ವಾಗಾದಾಗತಸ್ಯ ಮಮಾನಘಾಃ ॥ ೧೩೫

ತಪಸ್ಯತಾಂ ಚ ಭವತಾಂ ಮಹಜ್ಜ್ಞಾನಂ ಪ್ರದರ್ಶಿತಂ ।
ಕುರುಧ್ವಂ ಹೃದಯೇ ದೇವಾ ಸ್ವಾರ್ಥಂ ಚೈವ ಪರಾರ್ಥಕಂ ॥ ೧೩೬ ॥

ಭವದ್ಭಿರ್ದರ್ಶನೀಯಂ ತು ನಾನಾರೂಪಧರೈರ್ಭುವಿ ।
ದ್ವಿಷನ್ವೈ ಜ್ಞಾನಿನಂ ವಿಪ್ರಂ ಪಾಪೇನಾಚ್ಛಾದಿತೋ ನರಃ ॥ ೧೩೭ ॥

ನ ವಿಮುಚ್ಯೇತ ಪಾಪೇನ ಜನ್ಮಕೋಟಿಶತೈರಪಿ ।
ವೇದಾಂಗಪಾರಗಂ ವಿಪ್ರಂ ನ ಹನ್ಯಾನ್ನ ಚ ದೂಷಯೇತ್ ॥ ೧೩೮ ॥

ಏಕಸ್ಮಿನ್ನಿಹತೇ ಯಸ್ಮಾತ್ಕೋಟಿರ್ಭವತಿ ಘಾತಿಕಾ ।
ಏಕಂ ವೇದಾನ್ತಗಂ ವಿಪ್ರಂ ಭೋಜಯೇಚ್ಛ್ರದ್ಧಯಾನ್ವಿತಃ ॥ ೧೩೯ ॥

---

೧೩೫. ಈ ವನದಲ್ಲಿ ವೃಕ್ಷಗಳು ಕೇಳಿಕೊಂಡುದುದರಿಂದ ಇಲ್ಲಿ ನಿತ್ಯವೂ ವಾಸಮಾಡುತ್ತಿದ್ದೆ. ಹೀಗಿರಲು ನನಗೆ ಬಹು ಕಾಲಗಳು ಕಳೆದುವು.

೧೩೬. ತಪಸ್ಸುಮಾಡುತ್ತಿದ್ದ ನಿಮಗೆ ಮಹಾಜ್ಞಾನವನ್ನು ತೋರಿಸಿದ್ದೇನೆ. ಇದರಿಂದ ಎಲೈ ದೇವತೆಗಳಾ! ನೀವು ಸ್ವಾರ್ಥವನ್ನೂ, ಪರಾರ್ಥವನ್ನೂ ಸಾಧಿಸಿ ಕೊಳ್ಳಿರಿ.

೧೩೭-೧೩೮. ನೀವು ಈ ಜ್ಞಾನವನ್ನು ಬಗೆ ಬಗೆಯ ರೂಪಗಳನ್ನು ಧರಿಸಿ ಭೂಮಿಯಲ್ಲಿ ತೋರಿಸಬೇಕು. ಲೋಕದಲ್ಲಿ ಮನುಷ್ಯನು ಜ್ಞಾನಿಯಾದವನನ್ನು ದ್ವೇಷಿಸುತ್ತ ಪಾಪಿಯಾಗುತ್ತಾನೆ. ಅಂತಹವನು ಕೋಟಿ ಜನ್ಮಗಳಾದರೂ ಪಾಪ ಗಳಿಂದ ಮುಕ್ತನಾಗುವುದಿಲ್ಲ. ವೇದವೇದಾಂಗಗಳನ್ನು ಬಲ್ಲ ಬ್ರಾಹ್ಮಣನನ್ನು ಕೊಲ್ಲ ಬಾರದು, ದೂಷಿಸಲೂ ಬಾರದು.

೧೩೯. ಅಂತಹ ಒಬ್ಬ ಬ್ರಾಹ್ಮಣನನ್ನು ಕೊಂದರೆ ಕೋಟಿ ಜನರನ್ನು ಕೊಂದಂತಾಗುತ್ತದೆ ವೇದಾಂತವನ್ನು ತಿಳಿದಿರುವ ಒಬ್ಬನನ್ನಾದರೂ ಶ್ರದ್ಧೆಯಿಂದ ಭೋಜನಮಾಡಿಸಬೇಕು.

ತಸ್ಯ ಭುಕ್ತ್ವಾ ಭವೇತ್ಕೋಟಿರ್ವಿಪ್ರಾಣಾಂ ನಾತ್ರ ಸಂಶಯಃ ।
ಯಃ ಪಾತ್ರಪೂರಣೀಂ ಭಿಕ್ಷಾಂ ಯತೀನಾಂ ತು ಪ್ರಯಚ್ಛತಿ ॥ ೧೪೦ ॥

ವಿಮುಕ್ತಃ ಸರ್ವಪಾಪೇಭ್ಯೋ ನಾಸೌ ದುರ್ಗತಿಮಾಪ್ನುಯಾತ್ ।
ಯಥಾಹಂ ಸರ್ವದೇವಾನಾಂ ಜ್ಯೇಷ್ಠಃ ಶ್ರೇಷ್ಠಃ ಪಿತಾಮಹಃ ॥ ೧೪೧ ॥

ತಥಾ ಜ್ಞಾನೀ ಸದಾ ಪೂಜ್ಯೋ ನಿರ್ಮಮೋ ನಿರಹಂಕೃತಃ ।
ಸಂಸಾರಬಂಧಮೋಕ್ಷಾರ್ಥಂ ಬ್ರಹ್ಮಗುಹ್ಯಮಿದಂ ವ್ರತಂ ॥ ೧೪೨ ॥

ಮಯಾ ಪ್ರಣೀತಂ ವಿಪ್ರಾಣಾಮಪುನರ್ಭವಕಾರಣಂ ।
ಅಗ್ನಿಹೋತ್ರಮುಪಾದಾಯ ಯಸ್ತ್ಯಜೇದಜಿತೇಂದ್ರಿಯಃ ॥ ೧೪೩ ॥

ನಿರಯಂ ಸ ಪ್ರಯಾತ್ಯಾಶು ಪ್ರಣೀತೋ ಯಮಕಿಂಕರೈಃ ।
ಲೋಕಯಾತ್ರಾವಿತಂಡಾಚ್ಚ ಕ್ಷುದ್ರಂ ಕರ್ಮ ಕರೋತಿ ಯಃ ॥ ೧೪೪ ॥

ಸರಾಗಚಿತ್ತಃ ಶೃಂಗಾರೀ ನಾರೀಜನಧನಪ್ರಿಯಃ ।
ಏಕಾಂತಭೋಜೀ ಮಿಷ್ಟಾಶೀ ಕೃಷಿವಾಣಿಜ್ಯಸೇವಕಃ ॥ ೧೪೫ ॥

---

೧೪೦. ಆ ಬ್ರಾಹ್ಮಣನು ಊಟಮಾಡಿದರೆ ಕೋಟಿ ಜನರು ಊಟಮಾಡಿದಂತಾಗುವುದು. ಯತಿಗಳಿಗೆ ಪಾತ್ರೆಯ ತುಂಬ ಭಿಕ್ಷೆಯನ್ನು ಹಾಕಿದರೆ ಆತನು ಪಾಪಗಳಿಂದ ಮುಕ್ತನಾಗಿ ಕೆಟ್ಟ ಗತಿಯನ್ನು ಹೊಂದುವುದೇ ಇಲ್ಲ.

೧೪೧. ನಾನು ದೇವತೆಗಳಿಗೆಲ್ಲಾ ಹೇಗೆ ದೊಡ್ಡವನೂ, ಶ್ರೇಷ್ಠನೂ ಆಗಿ ಪೂಜ್ಯನಾಗಿರುವೆನೋ ಹಾಗೆ ಜ್ಞಾನಿಯಾಗಿ ಮಮತೆ ಅಹಂಕಾರಗಳಿಲ್ಲದವನಾಗಿ ಪೂಜ್ಯನಾಗಿರುವೆನು.

೧೪೨. ಎಲೈ ಬ್ರಹ್ಮನೆ! ಸಂಸಾರದ ಬಂಧನವನ್ನು ತಪ್ಪಿಸಿಕೊಳ್ಳಲು ಈ ಗುಹ್ಯವಾದ ವ್ರತವನ್ನು ನಾನು ಸೃಷ್ಟಿಸಿದ್ದೇನೆ. ಇದು ಸಂಸಾರಬಂಧಹರವಾದುದು.

೧೪೩. ಅಗ್ನಿಹೋತ್ರವನ್ನು ಮೊದಲುಮಾಡಿ, ಮನಸ್ಸು ಸ್ಥಿಮಿತವಿಲ್ಲದೆ ಯಾವನು ಬಿಟ್ಟುಬಿಡುವನೋ ಅವನು ಯಮದೂತರಿಂದ ಒಯ್ಯಲ್ಪಟ್ಟು ನರಕವನ್ನು ಸೇರುತ್ತಾನೆ.

೧೪೪-೧೪೬. ಲೋಕವನ್ನು ಅನುಸರಿಸಿ ವಿತಂಡವಾದಮಾಡುವವನೂ ಕೆಟ್ಟ ಕೆಲಸವನ್ನು ಮಾಡುವವನೂ, ಆಶೆಯುಳ್ಳವನೂ, ಶೃಂಗಾರದಲ್ಲಿ ಆಸಕ್ತನೂ,

**ಅವೇದೋ ವೇದನಿಂದೀ ಚ ಪರಭಾರ್ಯಾಂ ಚ ಸೇವತೇ ।**
**ಇತ್ಯಾದಿದೋಷದುಷ್ಟೋ ಯಸ್ತಸ್ಯ ಸಂಭಾಷಣಾದಪಿ ॥ ೧೪೬ ॥**

**ನರೋ ನರಕಗಾಮೀ ಸ್ಯಾದ್ಯಶ್ಚ ಸದ್ವ್ರತದೂಷಕಃ ।**
**ಅಸಂತುಷ್ಟಂ ಭಿನ್ನವೃತ್ತಿಂ ದುರ್ಮತಿಂ ಪಾಪಕಾರಿಣಂ ॥ ೧೪೭ ॥**

**ನ ಸ್ಪೃಶೇದಂಗಸಂಗೇನ ಸ್ಪೃಷ್ಟ್ವಾ ಸ್ನಾನೇನ ಶುಧ್ಯತಿ ।**
**ಏವಮುಕ್ತ್ವಾ ಸ ಭಗವಾನ್ಬ್ರಹ್ಮಾ ತೈರಮರೈಃ ಸಹ ॥ ೧೪೮ ॥**

**ಕ್ಷೇತ್ರಂ ನಿವೇಶಯಾಮಾಸ ಯಥಾವತ್ಕಥಯಾಮಿ ತೇ ।**
**ಏತದ್ವೈ ಪುಷ್ಕರಂ ತೀರ್ಥಂ ಪ್ರಾಚೀ ಯಾವತ್ಸರಸ್ವತೀ ॥ ೧೪೯ ॥**

**ಪೂರ್ವಂ ತು ನಂದನಾತ್ಕೃತ್ಸ್ನಂ ಯಾವತ್ಕ್ರಮ್ಯಂ ಸಪುಷ್ಕರಂ ।**
**ವೇದೀ ಹ್ಯೇಷಾ ಕೃತಾ ಯಜ್ಞೇ ಬ್ರಹ್ಮಣಾ ಲೋಕಕಾರಿಣಾ ॥ ೧೫೦ ॥**

---

ಹೆಂಗಸು ಹಣಗಳಲ್ಲಿ ಪ್ರೀತಿಯುಳ್ಳವನೂ, ಒಬ್ಬನೇ ಗುಟ್ಟಾಗಿ ಊಟಮಾಡುವವನೂ. ಇನ್ನೊಬ್ಬರಿಗೆ ಕೊಡದೆ ರುಚಿಯಾದ ಪದಾರ್ಥವನ್ನು ತಿನ್ನುವವನೂ, ಕೃಷಿಯನ್ನೂ ವ್ಯಾಪಾರವನ್ನೂ ಮಾಡುವವನೂ, ವೇದ ಓದದವನೂ, ವೇದವನ್ನು ನಿಂದಿಸುವವನೂ. ಪರರ ಹೆಂಡಿರಲ್ಲಿ ಆಸಕ್ತನಾದವನೂ ಇವೇ ಮುಂತಾದ ಇನ್ನೂ ಅನೇಕ ದೋಷ ಗಳಿಂದ ಕೂಡಿರುವವನೂ ಆಗಿರತಕ್ಕವನನ್ನು ಮಾತನಾಡಿಸಲೇ ಬಾರದು. ಮಾತ ನಾಡಿಸಿದರೂ ಕೂಡ ಅಂತಹವನಿಗೆ ನರಕವು ಬರುವುದು. ಒಳ್ಳೆಯ ವ್ರತವನ್ನು ದೂಷಿಸುವವನೂ ನರಕಗಾಮಿಯು.

೧೪೭-೧೪೮. ಸಂತೋಷವಿಲ್ಲದವನನ್ನೂ, ಬೇರೆಯವರ ವ್ಯಾಪಾರವನ್ನು ಹಿಡಿದಿರುವವನನ್ನೂ ಕೈಯಿಂದಲೂ ಮುಟ್ಟಬಾರದು. ಹಾಗೆ ಮುಟ್ಟಿದರೆ ಸ್ನಾನ ಮಾಡಬೇಕು, ಆಗ ಶುದ್ಧನಾಗುತ್ತಾನೆ.

೧೪೯. ಬ್ರಹ್ಮನು ಈರೀತಿ ಹೇಳಿ ಆ ದೇವತೆಗಳೊಂದಿಗೆ ಅಲ್ಲಿ ಕ್ಷೇತ್ರ ವನ್ನುಂಟುಮಾಡಿದನು. ಅದನ್ನು ನಿಮಗೆ ಕ್ರಮವಾಗಿ ಹೇಳುತ್ತೇನೆ.

೧೫೦. ಈ ಪುಷ್ಕರತೀರ್ಥವು ಸರಸ್ವತಿ ನಂದನವನಗಳ ಮಧ್ಯದಲ್ಲಿದೆ. ಅದೇ ಕ್ಷೇತ್ರವು. ಲೋಕಕರ್ತೃವಾದ ಬ್ರಹ್ಮನು ಈ ಸ್ಥಳವನ್ನು ಯಜ್ಞದಲ್ಲಿ ವೇದಿಕೆ ಯನ್ನಾಗಿಮಾಡಿಕೊಂಡನು.

**ಜ್ಯೇಷ್ಠಂ ತು ಪ್ರಥಮಂ ಜ್ಞೇಯಂ ತೀರ್ಥಂ ತ್ರೈಲೋಕ್ಯಪಾವನಂ ।**
**ಖ್ಯಾತಂ ತದ್ಬ್ರಹ್ಮದೈವತ್ಯಂ ಮಧ್ಯಮಂ ವೈಷ್ಣವಂ ತಥಾ ॥ ೧೫೧ ॥**

**ಕನಿಷ್ಠಂ ರುದ್ರದೈವತ್ಯಂ ಬ್ರಹ್ಮಾ ಪೂರ್ವಮಕಾರಯತ್ ।**
**ಆದ್ಯಮೇತತ್ಪರಂ ಕ್ಷೇತ್ರಂ ಗುಹ್ಯಂ ವೇದೇ ಚ ಪಠ್ಯತೇ ॥ ೧೫೨ ॥**

**ಅರಣ್ಯಂ ಪುಷ್ಕರಾಖ್ಯಂ ತು ಬ್ರಹ್ಮಾ ಸಂನಿಹಿತಃ ಪ್ರಭುಃ ।**
**ಅನುಗ್ರಹೋ ಭೂಮಿಭಾಗೇ ಕೃತೋ ವೈ ಬ್ರಹ್ಮಣಾ ಸ್ವಯಂ ॥ ೧೫೩ ॥**

**ಅನುಗ್ರಹಾರ್ಥಂ ಸರ್ವೇಷಾಂ ಜಂತೂನಾಂ ಭೂಮಿಚಾರಿಣಾಂ**
**ಸುವರ್ಣವಜ್ರಪರ್ಯಂತಾ ವೇದಿಕಾಂಗಾ ಮಹೀ ಕೃತಾ ॥ ೧೫೪ ॥**

**ವಿಚಿತ್ರಕುಟ್ಟಿಮಾ ರತ್ನೈಃ ಕಾರಿತಾ ಸರ್ವಶೋಭನಾ ।**
**ರಮತೇ ತತ್ರ ಭಗವಾನ್ಬ್ರಹ್ಮಾ ಲೋಕಪಿತಾಮಹಃ ॥ ೧೫೫ ॥**

---

೧೫೧-೧೫೨. ಬ್ರಹ್ಮನೇ ದೇವತೆಯಾಗಿ ಉಳ್ಳ ತೀರ್ಥಗಳು ಮೊದಲನೆಯ ತೀರ್ಥಗಳು. ಅವು ಮೂರು ಲೋಕವನ್ನೂ, ಪಾವನಮಾಡುತ್ತವೆ. ವಿಷ್ಣುವೇ ದೇವತೆಯಾಗಿ ಉಳ್ಳ ತೀರ್ಥಗಳು ಮಧ್ಯಮ ತೀರ್ಥವಾಗಿರುವುವು. ರುದ್ರನೇ ದೇವತೆಯಾಗಿ ಉಳ್ಳ ತೀರ್ಥಗಳು ಕನಿಷ್ಠವಾದುವು. ಈ ರೀತಿಯಾಗಿ ಬ್ರಹ್ಮನು ಪೂರ್ವದಲ್ಲಿ ಮಾಡಿದನು. ಈ ಪುಷ್ಕರಕ್ಷೇತ್ರವು ಮೊದಲನೆಯದು. ವೇದದಲ್ಲಿಯೂ ಕೂಡ ಗುಟ್ಟಾದುದೆಂದು ಹೇಳಲ್ಪಟ್ಟಿದೆ.

೧೫೩. ಪುಷ್ಕರಕ್ಷೇತ್ರವೆಂಬುದು ಒಂದು ಅರಣ್ಯವು. ಅಲ್ಲಿ ಬ್ರಹ್ಮನು ಯಾವಾಗಲೂ ಇದ್ದಾನೆ. ಬ್ರಹ್ಮನು ಪೂರ್ವದಲ್ಲಿ ಭೂಮಿಯಲ್ಲಿ ತಾನಾಗಿಯೇ ಇದೊಂದು ಅನುಗ್ರಹವನ್ನು ಮಾಡಿರುವನು.

೧೫೪. ಭೂಮಿಯಲ್ಲಿರುವ ಎಲ್ಲಾ ಪ್ರಾಣಿಗಳಲ್ಲಿಯೂ ಅನುಗ್ರಹಕ್ಕೋಸ್ಕರ ಬ್ರಹ್ಮನು ಚಿನ್ನ ವಜ್ರಗಳುಳ್ಳ ವೇದಿಯುಳ್ಳದ್ದನ್ನಾಗಿ ಈ ಭೂಮಿಯನ್ನು ಇಲ್ಲಿ ಮಾಡಿರುವನು.

೧೫೫-೧೫೬. ನೆಲಗಳಿಗೆ ರತ್ನಗಳನ್ನು ಹೊದ್ದಿಸಿ, ನಾನಾಬಗೆಯಾಗಿ ಮಾಡಿದ್ದಾನೆ. ಅಲ್ಲಿ ಲೋಕಕರ್ತೃವಾದ ಬ್ರಹ್ಮನು ಯಾವಾಗಲೂ ರಮಿಸುತ್ತಾನೆ. ವಿಷ್ಣು, ರುದ್ರ, ವಸುಗಳು, ಅಶ್ವಿನಿದೇವತೆಗಳು, ಮಹೇಂದ್ರ ಇವರೆಲ್ಲರೂ ಅಲ್ಲಿ ರಮಿಸುತ್ತಾರೆ.

ವಿಷ್ಣುರುದ್ರೌ ತಥಾ ದೇವೌ ವಸವೋಽಪ್ಯಶ್ವಿನಾವಪಿ ।
ಮರುತಶ್ಚ ಮಹೇಂದ್ರೇಣ ರಮಂತೇ ತ್ರಿದಿವೌಕಸಃ ॥ ೧೫೬ ॥

ಏತತ್ತೇ ತಥ್ಯಮಾಖ್ಯಾತಂ ಲೋಕಾನುಗ್ರಹಕಾರಕಂ ।
ಸಂಹಿತಾನುಕ್ರಮೇಣಾತ್ರ ಮಂತ್ರೈಶ್ಚ ವಿಧಿಪೂರ್ವಕಂ ॥ ೧೫೭ ॥

ವೇದಾನ್ಪಠಂತಿ ಯೇ ವಿಪ್ರಾ ಅಗ್ನಿಶುಶ್ರೂಷಣೇ ರತಾಃ ।
ವಸಂತಿ ಬ್ರಹ್ಮಸಾಮೀಪ್ಯೇ ಸರ್ವೇ ತೇನಾನುಭಾವಿತಾಃ ॥ ೧೫೮ ॥

॥ ಭೀಷ್ಮ ಉವಾಚ ॥

ಭಗವನ್ಕೇನ ವಿಧಿನಾ ಅರಣ್ಯೇ ಪುಷ್ಕರೇ ನರೈಃ ।
ಬ್ರಹ್ಮಲೋಕಮಭೀಪ್ಸದ್ಭಿರ್ವಸ್ತವ್ಯಂ ತೀರ್ಥವಾಸಿಭಿಃ ॥ ೧೫೯ ॥

ಕಿಂ ಮನುಷ್ಯೈರುತ ಸ್ತ್ರೀಭಿರುತ ವರ್ಣಾಶ್ರಮಾನ್ವಿತೈಃ ।
ವಸದ್ಭಿಃ ಕಿಮನುಷ್ಠೇಯಮೇತತ್ಸರ್ವಂ ಬ್ರವೀಹಿ ಮೇ ॥ ೧೬೦ ॥

॥ ಪುಲಸ್ತ್ಯ ಉವಾಚ ॥

ನರೈಃ ಸ್ತ್ರೀಭಿಶ್ಚ ವಸ್ತವ್ಯಂ ವರ್ಣಾಶ್ರಮನಿವಾಸಿಭಿಃ ।
ಸ್ವಧರ್ಮಾಚಾರನಿರತೈರ್ದಂಭಮೋಹವಿವರ್ಜಿತೈಃ ॥ ೧೬೧ ॥

---

೧೫೭-೧೫೮. ಲೋಕಕ್ಕೆ ಅನುಗ್ರಹವನ್ನುಂಟುಮಾಡುವ ಈ ವಿಷಯವನ್ನು ನಿಮಗೆ ಹೇಳಿದ್ದೇನೆ: ಸಂಹಿತೆಯಲ್ಲಿ ಹೇಳಿರುವಂತೆ ಮಂತ್ರಗಳಿಂದ ವಿಧಿಪೂರ್ವಕವಾಗಿ ಯಾರು ವೇದಗಳನ್ನು ಹೇಳುತ್ತಾರೋ ಮತ್ತು ಅಗ್ನಿಹೋತ್ರಾದಿಗಳನ್ನು ಮಾಡುತ್ತಾರೋ, ಅವರೆಲ್ಲರೂ ಆ ಬ್ರಹ್ಮನ ಅನುಗ್ರಹಕ್ಕೆ ಪಾತ್ರರಾಗಿ ಬ್ರಹ್ಮನ ಸಮೀಪದಲ್ಲಿ ವಾಸಿಸುತ್ತಾರೆ.

೧೫೯. ಭೀಷ್ಮನು ಹೇಳಿದನು :—ಎಲೈ ಪೂಜ್ಯನೇ, ಬ್ರಹ್ಮಲೋಕವನ್ನು ಅಪೇಕ್ಷಿಸಿ ಆ ಪುಷ್ಕರ ತೀರ್ಥದಲ್ಲಿ ವಾಸಿಸುವ ಮನುಷ್ಯನು ಆ ತೀರ್ಥದಲ್ಲಿ ಯಾವ ವಿಧಿಯಿಂದ ನಡೆಯಬೇಕು ?

೧೬೦. ವರ್ಣ ಮತ್ತು ಆಶ್ರಮಗಳಿಗೆ ಒಳಪಟ್ಟು ಅಲ್ಲಿ ವಾಸಿಸುವ ಗಂಡಸರಾಗಲಿ ಹೆಂಗಸರಾಗಲಿ ಹೇಗೆ ಹೇಗೆ ಮಾಡಬೇಕೆಂಬುವನ್ನೂ ಎಲ್ಲವನ್ನೂ, ತಿಳಿಸು.

೧೬೧. ಪುಲಸ್ತ್ಯನು ಹೇಳಿದನು ;—ವರ್ಣ ಮತ್ತು ಆಶ್ರಮಗಳನ್ನು

ಕರ್ಮಣಾ ಮನಸಾ ವಾಚಾ ಬ್ರಹ್ಮಭಕ್ತೈರ್ಜಿತೇಂದ್ರಿಯೈಃ ।
ಅನಸೂಯುಭಿರಕ್ಷುದ್ರೈಃ ಸರ್ವಭೂತಹಿತೈರ್ನರೈಃ ॥ ೧೬೨ ॥

॥ ಭೀಷ್ಮ ಉವಾಚ ॥
ಕಿಂ ಕುರ್ವಾಣೋ ನರಃ ಕರ್ಮ ಬ್ರಹ್ಮಭಕ್ತಸ್ತ್ವಿಹೋಚ್ಯತೇ ।
ಕೀದೃಶಾ ಬ್ರಹ್ಮಭಕ್ತಾಶ್ಚ ಸ್ಮೃತಾ ನೄಣಾಂ ವದಸ್ವ ಮೇ ॥ ೧೬೩ ॥

॥ ಪುಲಸ್ತ್ಯ ಉವಾಚ ॥
ತ್ರಿವಿಧಾ ಭಕ್ತಿರುದ್ದಿಷ್ಟಾ ಮನೋವಾಕ್ಕರ್ಮಸಂಭವಾ ।
ಲೌಕಿಕೀ ವೈದಿಕೀ ಚಾಪಿ ಭವೇದಾಧ್ಯಾತ್ಮಿಕೀ ತಥಾ ॥ ೧೬೪ ॥

ಧ್ಯಾನಧಾರಣಯಾ ಬುದ್ಧ್ಯಾ ವೇದಾರ್ಥಸ್ಮರಣಂ ಹಿ ಯತ್ ।
ಬ್ರಹ್ಮಪ್ರೀತಿಕರೀ ಚೈಷಾ ಮಾನಸೀ ಭಕ್ತಿರುಚ್ಯತೇ ॥ ೧೬೫ ॥

ಮಂತ್ರವೇದನಮಸ್ಕಾರೈರಗ್ನಿಶ್ರಾದ್ಧಾದಿಚಿಂತನೈಃ ।
ಜಾಪ್ಯೈಶ್ಚಾರಣಕೈಶ್ಚೈವ ವಾಚಿಕೀ ಭಕ್ತಿರುಚ್ಯತೇ ॥ ೧೬೬ ॥

---

ಹೊಂದಿರುವ ಗಂಡಸರಾಗಲಿ ಹೆಂಗಸರಾಗಲಿ ದಂಭ, ಮೋಹಗಳನ್ನು ಬಿಟ್ಟು ತಮ್ಮ ತಮ್ಮ ಆಚಾರದಂತೆ ಅಲ್ಲಿ ನಡೆಯಬೇಕು.

೧೬೨. ಮನೋವಾಕ್ಕಾಯಗಳಿಂದಲೂ ಬ್ರಹ್ಮನಲ್ಲಿ ಭಕ್ತಿಯುಳ್ಳವರಾಗಿ ಜಿತೇಂದ್ರಿಯರಾಗಿರಬೇಕು. ಅಸೂಯೆಪಡಬಾರದು, ಚಾಡಿಕೋರತನವಿರಬಾರದು, ಎಲ್ಲಾ ಪ್ರಾಣಿಗಳಲ್ಲಿಯೂ ಹಿತವನ್ನು ಕೋರುವವರಾಗಿರಬೇಕು.

೧೬೩. ಭೀಷ್ಮನು ಕೇಳಿದನು:—ಮನುಷ್ಯನು ಏನು ಮಾಡಿದರೆ ಬ್ರಹ್ಮ ಭಕ್ತನೆನಿಸಿಕೊಳ್ಳುತ್ತಾನೆ? ಯಾವ ರೀತಿ ಇರತಕ್ಕವರನ್ನು ಬ್ರಹ್ಮಭಕ್ತರೆಂದು ಹೇಳ ಬಹುದು? ತಿಳಿಸು.

೧೬೪. ಪುಲಸ್ತ್ಯನು ಹೇಳಿದನು:—ಮನೋವಾಕ್ಕಾಯಗಳಿಂದ ಹುಟ್ಟಿದ ಭಕ್ತಿಯು ಮೂರು ಬಗೆ ಎಂದು ಹೇಳಲ್ಪಟ್ಟಿದೆ. ಲೌಕಿಕ, ವೈದಿಕ, ಆಧ್ಯಾತ್ಮಿಕವೆಂದು ಆ ಮೂರರ ಹೆಸರು.

೧೬೫. ಧ್ಯಾನ, ಧಾರಣ ಬುದ್ಧಿಯಿಂದ ವೇದದ ಅರ್ಥವನ್ನು ಸ್ಮರಿಸುವುದು ಬ್ರಹ್ಮನಿಗೆ ಪ್ರೀತಿಕರವಾದುದು, ಇದು ಮಾನಸೀಭಕ್ತಿ ಎನ್ನಿಸಿಕೊಳ್ಳುತ್ತದೆ.

೧೬೬. ಮಂತ್ರ, ವೇದಗಳನ್ನು ಉಚ್ಚರಿಸಿ ನಮಸ್ಕಾರಮಾಡುವುದು, ಅಗ್ನಿ

ವ್ರತೋಪವಾಸನಿಯಮೈಶ್ಚಿತ್ತೇಂದ್ರಿಯನಿರೋಧಿಭಿಃ ।
ಕೃಚ್ಛ್ರೈಃ ಸಾಂತಪನೈಶ್ಚಾನ್ಯೈಸ್ತಥಾ ಚಾಂದ್ರಾಯಣಾದಿಭಿಃ ॥ ೧೬೭ ॥

ಬ್ರಹ್ಮಕೃಚ್ಛ್ರೋಪವಾಸೈಶ್ಚ ತಥಾ ಚಾನ್ಯೈಃ ಶುಭವ್ರತೈಃ ।
ಕಾಯಿಕೀ ಭಕ್ತಿರಾಖ್ಯಾತಾ ತ್ರಿವಿಧಾ ತು ದ್ವಿಜನ್ಮನಾಂ ॥ ೧೬೮ ॥

ಗೋಘೃತಕ್ಷೀರದಧಿಭೀ ರತ್ನದೀಪಕುಶೋದಕೈಃ ।
ಗಂಧೈರ್ಮಾಲ್ಯೈಶ್ಚ ವಿವಿಧೈರ್ಧಾತುಭಿಶ್ಚೋಪಪಾದಿತೈಃ ॥ ೧೬೯ ॥

ಘೃತಗುಗ್ಗುಲಧೂಪೈಶ್ಚ ಕೃಷ್ಣಾಗರುಸುಗಂಧಿಭಿಃ ।
ಭೂಷಣೈರ್ಹೇಮರತ್ನಾಢ್ಯೈಶ್ಚಿತ್ರಾಭಿಃ ಸ್ರಗ್ಭಿರೇವ ಚ ॥ ೧೭೦ ॥

ನೃತ್ಯವಾದಿತ್ರಗೀತೈಶ್ಚ ಸರ್ವೈರ್ವನ್ಯೋಪಹಾರಕೈಃ ।
ಭಕ್ಷ್ಯಭೋಜ್ಯೋಪಹಾರೈಶ್ಚ ಯಾ ಪೂಜಾ ಕ್ರಿಯತೇ ನರೈಃ ॥ ೧೭೧ ॥

ಪಿತಾಮಹಂ ಸಮುದ್ದಿಶ್ಯ ಭಕ್ತಿಃ ಸಾ ಲೌಕಿಕೀ ಮತಾ ।
ಋಗ್ಯಜುಃಸಾಮಜಾಪ್ಯಾನಿ ಸಂಹಿತಾಧ್ಯಾಪನಾನಿ ಚ ॥ ೧೭೨ ॥

---

ಸ್ತೋತ್ರವನ್ನು ಮಾಡುವುದು, ಶ್ರಾದ್ಧಾದಿಗಳನ್ನು ಮಾಡುವುದು, ಆರಣಕೋಕ್ತವಾದ ಮಂತ್ರಗಳನ್ನು ಜಪಿಸುವುದು. ಇವು ವಾಚಿಕೀಭಕ್ತಿ ಎನಿಸಿಕೊಳ್ಳುತ್ತದೆ.

೧೬೭-೧೬೮. ವ್ರತ, ಉಪವಾಸ, ನಿಯಮ, ಮನಸ್ಸು, ಇಂದ್ರಿಯಗಳನ್ನು ನಿರೋಧಿಸುವುದು; ಕೃಚ್ಛ್ರಗಳು, ಸಾಂತಪನಗಳು, ಚಾಂದ್ರಾಯಣಗಳು, ಬ್ರಹ್ಮಕೃಚ್ಛ್ರಗಳು, ಮುಂತಾದ ಶುಭ್ರವಾದ ಉಪವಾಸವ್ರತಗಳಿಂದ ಬ್ರಾಹ್ಮಣರಿಗೆ ಕಾಯಶೋಷಣವು ಕಾಯಕೀ (ದೇಹದ) ಭಕ್ತಿ ಎನ್ನಿಸಿಕೊಳ್ಳುತ್ತದೆ.

೧೬೯-೧೭೨. ಹಸುವಿನ ಹಾಲು, ಮೊಸರು, ತುಪ್ಪ ಇವುಗಳಿಂದ ದೀಪ ಹಚ್ಚುವುದು, ಕುಶೋದಕದಿಂದ ಅಭಿಷೇಕಮಾಡುವುದು, ಗಂಧಮಾಲೆ, ನಾನಾಬಗೆಯಾದ ಬಣ್ಣಗಳು, ಗುಗ್ಗುಳದ ಧೂಪ, ಅಗುರುಗಂಧ, ಚಿನ್ನ, ರತ್ನ ಮುಂತಾದ, ಒಡವೆಗಳು ಕಾಡಿನಲ್ಲಿ ಸಿಕ್ಕುವ ಹಣ್ಣುಗಳ ಸಮರ್ಪಣೆ, ನೃತ್ಯ, ವಾದ್ಯ, ಗೀತ ಇವುಗಳಿಂದಲೂ ಬ್ರಹ್ಮನನ್ನು ಉದ್ದೇಶಿಸಿ ಪೂಜಿಸುವಿಕೆಯು ಲೌಕಿಕಕ್ರಿಯೆ ಎನ್ನಿಸಿಕೊಳ್ಳುತ್ತದೆ.

ಕ್ರಿಯತೇ ಬ್ರಹ್ಮ ಉದ್ದಿಶ್ಯ ಸಾ ಭಕ್ತಿರ್ವೈದಿಕೀ ಸ್ಮೃತಾ ।
ವೇದಮಂತ್ರಹವಿರ್ಯೋಗೈರ್ಯಾ ಕ್ರಿಯಾ ವೈದಿಕೀ ಸ್ಮೃತಾ ॥ ೧೭೩ ॥

ದರ್ಶೇ ವಾಪೌರ್ಣಮಾಸ್ಯಾಂ ವಾ ಕರ್ತವ್ಯಮಗ್ನಿಹೋತ್ರಕಂ ।
ಪ್ರಶಸ್ತಂ ದಕ್ಷಿಣಾದಾನಂ ಪುರೋಡಾಶಚರುಕ್ರಿಯಾ ॥ ೧೭೪ ॥

ಇಷ್ಟಿರ್ಧೃತಿಃ ಸೋಮಪಾನಂ ಯಜ್ಞೀಯಂ ಕರ್ಮ ಸರ್ವಶಃ ।
ಅಗ್ನಿಭೂಮ್ಯನಿಲಾಕಾಶಾನಿಶಾಂಬುಕರಭಾಸ್ಕರಂ ॥ ೧೭೫ ॥

ಸಮುದ್ದಿಶ್ಯ ಕೃತಂ ಕರ್ಮ ತತ್ಸರ್ವಂ ಬ್ರಹ್ಮದೈವತಂ ।
ಆಧ್ಯಾತ್ಮಿಕೀ ತು ದ್ವಿವಿಧಾ ಬ್ರಹ್ಮಭಕ್ತಿಃ ಸ್ಥಿತಾ ನೃಪ ॥ ೧೭೬ ॥

ಸಂಖ್ಯಾತಾ ಯೋಗಜಾ ಚಾನ್ಯಾ ವಿಭಾಗಂ ತತ್ರ ಮೇ ಶೃಣು ।
ಚತುರ್ವಿಂಶತಿತತ್ತ್ವಾನಿ ಪ್ರಧಾನಾದೀನಿ ಸಂಖ್ಯಯಾ ॥ ೧೭೭ ॥

ಅಚೇತನಾನಿ ಭೋಗ್ಯಾನಿ ಪುರುಷಃ ಪಂಚವಿಂಶಕಃ ।
ಚೇತನಃ ಪುರುಷೋ ಭೋಕ್ತಾ ನ ಕರ್ತಾ ತಸ್ಯ ಕರ್ಮಣಃ ॥ ೧೭೮ ॥

---

೧೭೨-೧೭೩. ಋಕ್, ಯಜುಸ್ಸು, ಸಾಮವೇದಗಳ ಸಂಹಿತೆಗಳನ್ನು ಬ್ರಹ್ಮನಿಗೋಸ್ಕರ ಪಾರಾಯಣಮಾಡುವುದು, ಮತ್ತು ವೇದಮಂತ್ರಗಳಿಂದಲೂ ಹವಿಸಿನಿಂದಲೂ ಪೂಜಿಸುವುದು ಇವು ವೈದಿಕಕ್ರಿಯೆಗಳು ಎನಿಸಿಕೊಳ್ಳುತ್ತವೆ.

೧೭೪-೧೭೫. ದರ್ಶನದಲ್ಲಿಯಾಗಲಿ, ಹುಣ್ಣಿಮೆಯಲ್ಲಾಗಲಿ ಅಗ್ನಿಹೋತ್ರವನ್ನು ಮಾಡುತ್ತಿರುವುದು ಪ್ರಶಸ್ತವಾದುದು. ದಕ್ಷಿಣೆ ತೆಗೆದುಕೊಳ್ಳುವುದು, ಕೊಡುವುದು, ಪುರೋಡಾಶಚರುಗಳನ್ನು ಮಾಡುವುದು, ಇಷ್ಟಿ, ಧೃತಿ, ಸೋಮಪಾನ ಇವುಗಳೆಲ್ಲವೂ ಯಜ್ಞದ ಕೆಲಸಗಳು.

೧೭೬. ಅಗ್ನಿ, ಭೂಮಿ, ಗಾಳಿ, ಆಕಾಶ, ರಾತ್ರಿ, ನೀರು, ಚಂದ್ರ, ಸೂರ್ಯ ಇವನ್ನು ಉದ್ದೇಶಿಸಿ ಮಾಡತಕ್ಕ ಕೆಲಸವೆಲ್ಲವೂ ಬ್ರಹ್ಮನಿಗೆ ಸೇರತಕ್ಕದ್ದು.

೧೭೭. ಆಧ್ಯಾತ್ಮಿಕವಾದ ಬ್ರಹ್ಮಭಕ್ತಿಯು ಎರಡು ಬಗೆಯಾಗಿದೆ. ಒಂದು ಸಾಂಖ್ಯವೆಂಬುದು ಎರಡನೆಯದು ಯೌಗಿಕವು, ಅದರ ವಿಭಾಗವನ್ನು ಕೇಳು.

೧೭೮. ತತ್ವಗಳು ಇಪ್ಪತ್ತನಾಲ್ಕು ಎಂದು ಮುಖ್ಯವಾಗಿ ಎಣಿಸಿದ್ದಾರೆ. ಅವೆಲ್ಲವೂ ಚೇತನವಿಲ್ಲದವು, ಅನುಭವಿಸುವುದಕ್ಕೆ ಯೋಗ್ಯವಾದವು. ಇಪ್ಪತ್ತೈದನೆಯವನು ಪುರುಷನು. ಅವನು ಚೇತನವುಳ್ಳವನು, ಪುರುಷನು, ಭೋಗಿಸುವವನು. ಅವನು ಕರ್ಮವನ್ನು ಮಾಡತಕ್ಕವನಲ್ಲ.

ಆತ್ಮಾ ನಿತ್ಯೋಽವ್ಯಯಶ್ಚೈವ ಅಧಿಷ್ಠಾತಾ ಪ್ರಯೋಜಕಃ ।
ಅವ್ಯಕ್ತಃ ಪುರುಷೋ ನಿತ್ಯಃ ಕಾರಣಂ ಚ ಪಿತಾಮಹಃ ॥ ೧೭೯ ॥

ತತ್ತ್ವಸರ್ಗೋ ಭಾವಸರ್ಗೋ ಭೂತಸರ್ಗಶ್ಚ ತತ್ತ್ವತಃ ।
ಸಂಖ್ಯಯಾ ಪರಿಸಂಖ್ಯಾಯ ಪ್ರಧಾನಂ ಚ ಗುಣಾತ್ಮಕಂ ॥ ೧೮೦ ॥

ಜ್ಞಾತ್ವಾ ಸಾಧರ್ಮ್ಯವೈಧರ್ಮ್ಯಂ ಸತತಂ ಚ ಪೃಥಕ್ಪೃಥಕ್ ।
ಪ್ರಧಾನಪುರುಷೇಶಾನಾಂ ಸಾಧರ್ಮ್ಯಮಿದಮುಚ್ಯತೇ ॥ ೧೮೧ ॥

ಅಜೋ ನಿತ್ಯಮಯೋನ್ಯಿತಂ ಚೈತನ್ಯಂ ವಾ ಗುಣಾತ್ಮಕಂ ।
ಸಾಧರ್ಮ್ಯಮಾನವೈಶ್ವರ್ಯಂ ಪ್ರಧಾನಂ ಚ ವಿಧರ್ಮಿ ಚ ॥ ೧೮೨ ॥

ಕಾರಣತ್ವಂ ಚ ಬ್ರಹ್ಮತ್ವಂ ಕಾಮಿತ್ವಮಿದಮುಚ್ಯತೇ ।
ಪ್ರಯೋಜ್ಯತ್ವಂ ಪ್ರಧಾನಸ್ಯ ವೈಧರ್ಮ್ಯಮಿದಮುಚ್ಯತೇ ॥ ೧೮೩ ॥

---

೧೭೯. ಆತ್ಮನು ನಿತ್ಯನು, ನಾಶರಹಿತನು, ಒಂದರಮೇಲಿರುವವನು. ಪ್ರೇರಿಸ ತಕ್ಕವನು, ವ್ಯಕ್ತವಾಗಿಲ್ಲದವನು, ನಿತ್ಯನು, ಕಾರಣರೂಪನಾದ ಬ್ರಹ್ಮನು.

೧೮೦. ತತ್ವಸರ್ಗ, ಭಾವಸರ್ಗ, ಭೂತಸರ್ಗವೆಂದು ಮೂರು ಬಗೆಯ ಸೃಷ್ಟಿ, ಇವನ್ನು ಲೆಕ್ಕಮಾಡಿದ್ದಾರೆ. ಇವುಗಳಲ್ಲಿ ಗುಣಸ್ವರೂಪವಾದುದೇ ಪ್ರಧಾನವು.

೧೮೧. ಅವುಗಳಿಗಿರುವ ಸಮಾನಧರ್ಮ, ವಿರುದ್ಧಧರ್ಮಗಳನ್ನು ಬೇರೆ ಬೇರೆಯಾಗಿ ತಿಳಿದು, ಆ ಪ್ರಧಾನಪುರುಷ ಮತ್ತು ಈಶ್ವರರ ಸಾಧರ್ಮ್ಯವನ್ನು ಹೇಳುತ್ತೇನೆ.

೧೮೨. ಹುಟ್ಟದಿರುವಿಕೆ, ನಿತ್ಯವಾಗಿರುವಿಕೆ, ಯೋನಿಯನ್ನು ಹೊಂದದಿರುವಿಕೆ, ಚೇತನವಿರುವಿಕೆ, ಗುಣವನ್ನು ಹೊಂದಿರುವಿಕೆ, ಇವು ಪುರುಷನಿಗೂ, ಈಶ್ವರನಾಗಿರುವಿಕೆ, ಪ್ರಧಾನನಾಗಿರುವಿಕೆ ಇವು ವೈಧರ್ಮ್ಯಗಳು.

೧೮೩. ಕಾರಣನಾಗಿರುವಿಕೆ, ಬ್ರಹ್ಮನಾಗಿರುವುದು, ಕಾಮಿಯಾಗಿರುವುದು, ಇವೂ ಈಶ್ವರನಲ್ಲಿರುವ ವೈಧರ್ಮ್ಯಗಳು. ಪ್ರಯೋಜ್ಯತ್ವವೂ ಕೂಡ ಪ್ರಧಾನವಾಗಿರುವ ವೈಧರ್ಮ್ಯವು.

ಸರ್ವತ್ರ ಕರ್ತೃಕಾ ಬ್ರಹ್ಮ ಪುರುಷಸ್ಯಾಪ್ಯಕರ್ತೃತಾ ।
ಚೇತನತ್ವಂ ಪ್ರಧಾನೇ ವಾ ಸಮತ್ವಮಿದಮುಚ್ಯತೇ ॥ ೧೮೪ ॥

ತತ್ತ್ವಾಂತರಂ ಚ ತತ್ತ್ವಾನಾಂ ಕಾರ್ಯಕಾರಣಮೇವ ಚ ।
ಪ್ರಯೋಜನಂ ಚ ವೈ ಯೋಜ್ಯಂ ಜ್ಞಾತ್ವಾ ತತ್ತ್ವಂ ಚ ಸಂಖ್ಯಯಾ ॥

ಸಂಖ್ಯಾಸ್ತೀತ್ಯುಚ್ಯತೇ ಪ್ರಾಜ್ಞೈರ್ವಿನಿಶ್ಚಿತ್ಯಾರ್ಥಚಿಂತಕೈಃ ।
ಇತಿ ತತ್ತ್ವಸ್ಯ ಸಂಭಾರಂ ತತ್ತ್ವಸಂಖ್ಯಾ ಚ ತತ್ತ್ವತಃ ॥ ೧೮೬ ॥

ಬ್ರಹ್ಮತತ್ತ್ವಾದಿಕಂ ಚಾಪಿ ಜ್ಞಾತ್ವಾ ತತ್ತ್ವಂ ವಿದುರ್ಬುಧಾಃ ।
ಸಂಖ್ಯಾಕೃತಾ ಭಕ್ತಿರೇಷಾ ಸದ್ಭಿರಾಧ್ಯಾತ್ಮಿಕೀ ಮತಾ ॥ ೧೮೭ ॥

ಯೋಗಜಾಮಪಿ ಮೇ ಭಕ್ತ್ಯಾ ಶೃಣು ಭಕ್ತಿಂ ಪಿತಾಮಹೇ ।
ಪ್ರಾಣಾಯಾಮಪರೋ ನಿತ್ಯಂ ಧ್ಯಾನವಾನ್ನಿಯತೇಂದ್ರಿಯಃ ॥ ೧೮೮ ॥

ಭೈಕ್ಷ್ಯಭಕ್ಷೀ ವ್ರತೀ ಚಾಪಿ ಸರ್ವಪ್ರತ್ಯಾಹೃತೇಂದ್ರಿಯಃ ।
ಧಾರಣಂ ಹೃದಯೇ ಕೃತ್ವಾ ಧ್ಯಾಯಮಾನಃ ಪ್ರಜೇಶ್ವರಂ ॥ ೧೮೯ ॥

---

೧೮೪. ಎಲ್ಲಾದಕ್ಕೂ ಕರ್ತೃವಾಗಿರುವುದು, ಬ್ರಹ್ಮನಾಗಿರುವುದು, ಕರ್ತೃವಾಗ ದಿರುವುದು. ಚೇತನವಿರುವುದು, ಇವು ಎರಡಕ್ಕೂ ಸಮವಾದುದು.

೧೮೫. ಬೇರೆಯ ತತ್ತ್ವಗಳಿಗೂ ತತ್ತ್ವವನ್ನುಂಟುಮಾಡುವುದು, ಮತ್ತು ತತ್ತ್ವ ಗಳಲ್ಲಿರುವ ಬೇರೆ ತತ್ತ್ವಗಳು, ಅವುಗಳಿಗೆ ಕಾರ್ಯಕಾರಣವಾಗಿರುವುದು, ಅವುಗಳ ಪ್ರಯೋಜನಗಳು ಇವುಗಳನ್ನೂ, ಅವುಗಳ ತತ್ತ್ವವನ್ನೂ ಅನುಸರಿಸಿ ಸಂಖ್ಯೆಗನುಸಾರ ವಾಗಿ ಅವನ್ನು ಸೇರಿಸಬೇಕು.

೧೮೬. ವಿಷಯಗಳನ್ನು ಬಲ್ಲ ಪ್ರಾಜ್ಞರು ಸಂಖ್ಯೆಯಿದೆ ಎಂದು ಹೇಳುವುದ ರಿಂದ ಆ ತತ್ತ್ವಗಳನ್ನು ಲೆಕ್ಕಿಸಿ ಕೂಡಿಸಿ ಹೇಳಿದ್ದಾರೆ.

೧೮೭. ಬ್ರಹ್ಮನಲ್ಲಿರುವ ತತ್ತ್ವಗಳನ್ನು ತಿಳಿದು ತತ್ತ್ವವನ್ನು ವಿದ್ವಾಂಸರು ಹೇಳುತ್ತಾರೆ. ಈ ಭಕ್ತಿಯನ್ನು ತಿಳಿದವರು ಸಂಖ್ಯೆಮಾಡಿ ಹೇಳುವ ಭಕ್ತಿಯಾಗಿದೆ. ಇವನ್ನು ಆಧ್ಯಾತ್ಮಿಕವೆಂದು ಹೇಳುತ್ತಾರೆ.

೧೮೮-೧೮೯. ಯೋಗದಿಂದ ಮಾಡುವ ಭಕ್ತಿಯನ್ನು ಹೇಳುತ್ತೇನೆ, ಕೇಳು. ದಿನವೂ ಪ್ರಾಣಾಯಾಮವನ್ನು ಮಾಡುತ್ತಾ, ಧ್ಯಾನಮಾಡುತ್ತಾ, ಇಂದ್ರಿಯವನ್ನು ಜಯಿಸಿ, ಭಿಕ್ಷಾನ್ನವನ್ನು ತಿನ್ನುತ್ತಾ, ವ್ರತಪರನಾಗಿ, ಒಂದರಲ್ಲೂ ಆಸೆಯಿಡದೆ, ಹೃದಯದಲ್ಲಿ ಸ್ವಾಮಿಯನ್ನು ಇಟ್ಟುಕೊಂಡು ಆತನನ್ನು ಧ್ಯಾನಮಾಡಬೇಕು.

ಹೃತ್ಪದ್ಮಕರ್ಣಿಕಾಸೀನಂ ರಕ್ತವಸ್ತ್ರಂ ಸುಲೋಚನಂ ।
ಪರಿತೋದ್ಯೋತಿತಮುಖಂ ಬ್ರಹ್ಮಸೂತ್ರಕಟೀತಟಂ ॥ ೧೯೦ ॥

ರಕ್ತವರ್ಣಂ ಚತುರ್ಬಾಹುಂ ವರದಾಭಯಹಸ್ತಕಂ ।
ಯೋಗಜಾ ಮಾನಸೀ ಸಿದ್ಧಿರ್ಬ್ರಹ್ಮಭಕ್ತಿಃ ಪರಾ ಸ್ಮೃತಾ ॥ ೧೯೧ ॥

ಯ ಏವಂ ಭಕ್ತಿಮಾನ್ದೇವೇ ಬ್ರಹ್ಮಭಕ್ತಃ ಸ ಉಚ್ಯತೇ ।
ವೃತ್ತಿಂ ಚ ಶೃಣು ಮೇ ರಾಜನ್ಯಾ ಸ್ಮೃತಾ ಕ್ಷೇತ್ರವಾಸಿನಾಂ ॥ ೧೯೨ ॥

ಸ್ವಯಂ ದೇವೇನ ಬ್ರಹ್ಮಣಾ ವಿಷ್ಣ್ವಾದೀನಾಂ ಸಮಾಗಮೇ ।
ಕಥಿತಾ ವಿಸ್ತರಾತ್ಪೂರ್ವಂ ಸರ್ವೇಷಾಂ ತತ್ರ ಸಂನಿಧೌ ॥ ೧೯೩ ॥

ನಿರ್ಮಮಾ ನಿರಹಂಕಾರಾ ನಿಃಸಂಗಾ ನಿಷ್ಪರಿಗ್ರಹಾಃ ।
ಬಂಧುವರ್ಗೇ ಚ ನಿಃಸ್ನೇಹಾಃ ಸಮಲೋಷ್ಟಾಶ್ಮಕಾಂಚನಾಃ ॥ ೧೯೪ ॥

---

೧೯೦-೧೯೧. ಹೃದಯವೆಂಬ ಪದ್ಮದ ಕರ್ಣಿಕೆಯಲ್ಲಿ ಕುಳಿತಿರುವ, ಕೆಂಪು ಬಟ್ಟೆಯನ್ನು ಹೊದ್ದಿರುವ, ಒಳ್ಳೆಯ ಕಣ್ಣುಗಳುಳ್ಳ, ಎಲ್ಲಾ ಕಡೆಯಲ್ಲೂ ಕಾಣುತ್ತಿರುವ ಮುಖವುಳ್ಳ, ಜನಿವಾರವನ್ನು ಸೊಂಟದವರೆಗೂ ಹಾಕಿಕೊಂಡಿರುವ, ಕೆಂಪು ಬಣ್ಣವುಳ್ಳ, ನಾಲ್ಕು ತೋಳುಗಳುಳ್ಳ, ವರದಹಸ್ತ ಅಭಯಹಸ್ತಗಳನ್ನು ಧರಿಸಿರುದ ಆಸ್ವಾಮಿಯನ್ನು ಧ್ಯಾನಿಸಬೇಕು. ಮನಸ್ಸಿನ ಸಿದ್ಧಿಯು ಯೋಗದಿಂದ ಉಂಟಾದುದು, ಅದೇ ಉತ್ತಮವಾದ ಬ್ರಹ್ಮಭಕ್ತಿಯು.

೧೯೨. ಹೀಗೆ ಮಾಡಿದವನು ಬ್ರಹ್ಮಭಕ್ತನೆನಿಸುತ್ತಾನೆ. ಕ್ಷೇತ್ರದಲ್ಲಿ ವಾಸ ಮಾಡುವವರು ಮಾಡತಕ್ಕ ಕೆಲಸವನ್ನೂ ಹೇಳುತ್ತೇನೆ, ಕೇಳು.

೧೯೩. ವಿಷ್ಣುವೇ ಮುಂತಾದ ದೇವತೆಗಳು ಸೇರಿದ್ದಾಗ ಬ್ರಹ್ಮನು ತಾನಾಗಿಯೇ ಅವರೆದುರಿಗೆ ಇದನ್ನು ವಿಸ್ತಾರವಾಗಿ ಹೇಳಿರುವನು.

೧೯೪-೧೯೭. ಮಮತೆ ಅಹಂಕಾರಗಳಿರಬಾರದು. ಸಂಗವನ್ನು ತ್ಯಜಿಸಬೇಕು. ದಾನ ತೆಗೆದುಕೊಳ್ಳಬಾರದು. ಬಂಧುಗಳಲ್ಲಿ ಸ್ನೇಹವಿಲ್ಲದಿರಬೇಕು. ಮಣ್ಣು, ಕಲ್ಲು

ಭೂತಾನಾಂ ಕರ್ಮಭಿರ್ನಿತ್ಯಂ ವಿವಿಧೈರಭಯಪ್ರದಾಃ ।
ಪ್ರಾಣಯಾಮಪರಾ ನಿತ್ಯಂ ಪರಧ್ಯಾನಪರಾಯಣಾಃ ॥ ೧೯೫ ॥

ಜಪೇನ ಶುಚಯೋ ನಿತ್ಯಂ ಯತಿಧರ್ಮಕ್ರಿಯಾಪರಾಃ ।
ಸಾಂಖ್ಯಯೋಗವಿಧಿಜ್ಞಾಶ್ಚ ಬ್ರಹ್ಮಜ್ಞಾಶ್ಛಿನ್ನ ಸಂಶಯಾಃ ॥ ೧೯೬ ॥

ಯಜಂತೇ ವಿಧಿನಾನೇನ ಯೇ ವಿಪ್ರಾಃ ಕ್ಷೇತ್ರವಾಸಿನಃ ।
ಅರಣ್ಯೇ ಪೌಷ್ಕರೇ ತೇಷಾಂ ಮೃತಾನಾಂ ಯತ್ಫಲಂ ಶೃಣು ॥ ೧೯೭ ॥

ವ್ರಜಂತಿ ತೇ ಸುದುಷ್ಪ್ರಾಪ್ಯಂ ಬ್ರಹ್ಮಸಾಯುಜ್ಯಮಕ್ಷಯಂ ।
ಯತ್ಪ್ರಾಪ್ಯ ನ ಪುನರ್ಜನ್ಮ ಲಭಂತೇ ಮೃತ್ಯುದಾಯಕಂ ॥ ೧೯೮ ॥

ಪುನರಾವರ್ತನಂ ಹಿತ್ವಾ ವಿದ್ಯಾಂ ಬ್ರಾಹ್ಮೀಂ ಪರಾಂ ಸ್ಥಿತಾಃ ।
ಪುನರಾವೃತ್ತಿರನ್ಯೇಷಾಂ ಪ್ರಪನ್ನಾಶ್ರಮವಾಸಿನಾಂ ॥ ೧೯೯ ॥

ಚಿನ್ನಗಳಲ್ಲಿ ಒಂದೇ ಬಗೆಯಾಗಿರಬೇಕು, ಪ್ರಾಣಿಗಳಿಗೆ ನಾನಾಬಗೆಯಿಂದಲೂ ಅಭಯ ವನ್ನು ಕೊಡುವವರಾಗಿರಬೇಕು. ಪ್ರಾಣಾಯಾಮವನ್ನು ಯಾವಾಗಲೂ ಮಾಡುತ್ತ ಪರಮಾತ್ಮನನ್ನು ಧ್ಯಾನಿಸುತ್ತಿರಬೇಕು. ಜಪಮಾಡುತ್ತ ಶುಚಿಗಳಾಗಿರಬೇಕು. ಯತಿ ಧರ್ಮದಲ್ಲಿ ಆಸಕ್ತಿಯನ್ನು ಹೊಂದಿರಬೇಕು. ಸಾಂಖ್ಯಯೋಗಗಳ ವಿಧಿಗಳನ್ನು ತಿಳಿ ದಿರಬೇಕು. ಪರಮಾತ್ಮನನ್ನು ತಿಳಿದಿರಬೇಕು. ಸಂಶಯವನ್ನು ಹೊಂದಿರಬಾರದು. ವಿಧಿಪೂರ್ವಕವಾಗಿ ಪೂಜಿಸುತ್ತಿರಬೇಕು. ಹೀಗೆ ಕ್ಷೇತ್ರದಲ್ಲಿ ವಾಸಿಸುತ್ತಿರಬೇಕು ಈ ರೀತಿಯಿದ್ದು ಪುಷ್ಕರಾರಣ್ಯದಲ್ಲಿ ಸತ್ತವರಿಗೆ ಬರುವ ಫಲವನ್ನು ಹೇಳುತ್ತೇನೆ, ಕೇಳು.

೧೯೮. ಅವರು ಹೊಂದಲಸಾಧ್ಯವಾದ, ನಾಶರಹಿತವಾದ ಬ್ರಹ್ಮಸಾಯುಜ್ಯ ವನ್ನು ಹೊಂದುತ್ತಾರೆ. ಆ ಜಾಗವನ್ನು ಹೊಂದಿದರೆ ಮೃತ್ಯುದಾಯಕವಾದ ಪುನರ್ಜನ್ಮವನ್ನು ಹೊಂದುವುದೇ ಇಲ್ಲ.

೧೯೯. ಉತ್ತಮವಾದ ಬ್ರಾಹ್ಮವಿದ್ಯೆಯನ್ನು ಹೊಂದಿದವನಿಗೆ ಪುನರಾ ವೃತ್ತಿಯೇ ಇಲ್ಲ. ಭಕ್ತರೂಪವಾದ ಆಶ್ರಮವನ್ನು ಹೊಂದಿರುವವರಿಗೆ ಪುನರಾ ವೃತ್ತಿಯುಂಟು.

ಗಾರ್ಹಸ್ಥ್ಯವಿಧಿಮಾಸಾದ್ಯ ಷಟ್ಕರ್ಮನಿರತಃ ಸದಾ ।
ಜುಹೋತಿ ವಿಧಿನಾ ಸಮ್ಯಙ್ಮಂತ್ರೈರ್ಯಜ್ಞೇ ನಿಯೋಜಿತಃ ॥ ೨೦೦ ॥

ಅಧಿಕಂ ಫಲಮಾಪ್ನೋತಿ ಸರ್ವದುಃಖವಿವರ್ಜಿತಃ ।
ಸರ್ವಲೋಕೇಷು ಚಾಪ್ಯಸ್ಯ ಗತಿರ್ನ ಪ್ರತಿಪದ್ಯತೇ ॥ ೨೦೧ ॥

ದಿವ್ಯೈಶ್ಚೈಶ್ವರ್ಯಯೋಗೇನ ಸ್ವಾರೂಢಃ ಸಪರಿಗ್ರಹಃ ।
ಬಾಲಸೂರ್ಯಪ್ರಕಾಶೇನ ವಿಮಾನೇನ ಸುವರ್ಚಸಾ ॥ ೨೦೨ ॥

ವೃತಃ ಸ್ತ್ರೀಣಾಂ ಸಹಸ್ರೈಶ್ಚ ಸ್ವಚ್ಛಂದಗಮನಾಲಸಃ ।
ವಿಚರತ್ಯನಿವಾರ್ಯೇಣ ಸರ್ವಲೋಕಾನ್ಯದೃಚ್ಛಯಾ ॥ ೨೦೩ ॥

ಸ್ಪೃಹಣೀಯತಮಃ ಪುಂಸಾಂ ಸರ್ವಧರ್ಮೋತ್ತಮೋ ಧನೀ ।
ಸ್ವರ್ಗಚ್ಯುತಃ ಪ್ರಜಾಯೇತ ಕುಲೇ ಮಹತಿ ವೀರ್ಯವಾನ್ ॥ ೨೦೪ ॥

ಧರ್ಮಜ್ಞೋ ಧರ್ಮಭಕ್ತಶ್ಚ ಸರ್ವವಿದ್ಯಾರ್ಥಪಾರಗಃ ।
ತಥೈವ ಬ್ರಹ್ಮಚರ್ಯೇಣ ಗುರುಶುಶ್ರೂಷಣೇನ ಚ ॥ ೨೦೫ ॥

---

೨೦೦-೨೦೧. ಗೃಹಸ್ಥಾಶ್ರಮವನ್ನು ಹೊಂದಿ ಆರು ಕರ್ಮಗಳಲ್ಲಿಯೂ ನಿರತನಾಗಿದ್ದು ಅಗ್ನಿಹೋತ್ರವನ್ನಿಟ್ಟುಕೊಂಡು ಯಾಗಾದಿಗಳನ್ನು ಮಾಡುತ್ತ ಇದ್ದರೆ ಹೆಚ್ಚು ಫಲವನ್ನು ಹೊಂದುತ್ತಾನೆ. ದುಃಖಗಳೊಂದೂ ಇರುವುದಿಲ್ಲ. ಯಾಗಕಾಲದಲ್ಲಿಯೂ ಇದರ ಸ್ಥಿತಿಯು ವ್ಯತ್ಯಾಸವಾಗುವುದಿಲ್ಲ.

೨೦೨-೨೦೩. ಉತ್ತಮವಾದ ಐಶ್ವರ್ಯವನ್ನು ಹೊಂದಿ, ತನ್ನವರೊಡನೆ ಬಾಲಸೂರ್ಯನಂತೆ ಹೊಳೆಯುವ ವಿಮಾನದಲ್ಲಿ ಕುಳಿತು, ಅನೇಕ ಸ್ತ್ರೀಯರಿಂದ ಸುತ್ತುವರಿಯಲ್ಪಟ್ಟು ಮನಸ್ಸಿಗೆ ಬಂದಂತೆ ಹೋಗುತ್ತಾ ತಡೆಯಿಲ್ಲದೆ ಎಲ್ಲಾ ಲೋಕಗಳನ್ನೂ ಸುತ್ತುತ್ತಾನೆ.

೨೦೪. ಸ್ವರ್ಗವನ್ನು ಅನುಭವಿಸಿದನಂತರ ಮನುಷ್ಯನಿಗೆ ಬೇಕಾದವನಾಗಿ ಎಲ್ಲಾ ಧರ್ಮಗಳಲ್ಲೂ ಉತ್ತಮನಾಗಿ, ಧನಿಕನಾಗಿ, ಒಳ್ಳೆಯ ಕುಲದಲ್ಲಿ ಪರಾಕ್ರಮಿಯಾಗಿ ಹುಟ್ಟುತ್ತಾನೆ.

೨೦೫-೨೦೬. ಧರ್ಮವನ್ನು ತಿಳಿದು, ಧರ್ಮಕ್ಕೆ ಭಕ್ತನಾಗಿ, ಎಲ್ಲಾ ವಿದ್ಯೆಗಳನ್ನೂ ತಿಳಿದು, ಬ್ರಹ್ಮಚಾರಿಯಾಗಿ ಗುರುಶುಶ್ರೂಷೆಮಾಡುತ್ತಾ ವೇದಾಧ್ಯಯನ

ವೇದಾಧ್ಯಯನಸಂಯುಕ್ತೋ ಭೈಕ್ಷವೃತ್ತಿರ್ಜಿತೇಂದ್ರಿಯಃ ।
ನಿತ್ಯಂ ಸತ್ಯವ್ರತೇಯುಕ್ತಃ ಸ್ವಧರ್ಮೇಷ್ವಪ್ರಮಾದವಾನ್ ॥ ೨೦೬ ॥

ಸ್ವಕರ್ಮತತ್ಸಮೃದ್ಧೇನ ಸರ್ವಭೋಗಾವಲಂಬಿನಾ ।
ಸೂರ್ಯೇಣೇವ ದ್ವಿತೀಯೇನ ವಿಮಾನೇನಾನಿವಾರಿತಃ ॥ ೨೦೭ ॥

ಗುಹ್ಯಕಾ ನಾಮ ಬ್ರಹ್ಮಾಖ್ಯಗಣಾಃ ಪರಮಸಂಮತಾಃ ।
ಅಪ್ರಮೇಯಬಲೈಶ್ವರ್ಯಾ ದೇವದಾನವಪೂಜಿತಾಃ ॥ ೨೦೮ ॥

ತೇಷಾಂ ಸ ಸಮತಾಂ ಯಾತಿ ಪುಣ್ಯೈಶ್ವರ್ಯಸಮನ್ವಿತಃ ।
ದೇವದಾನವಮರ್ತ್ಯೇಷು ಭವತ್ಯಧಿಕಪೂಜಿತಃ ॥ ೨೦೯ ॥

ವರ್ಷಕೋಟಿಸಹಸ್ರಾಣಿ ವರ್ಷಕೋಟಿಶತಾನಿ ಚ ।
ಏವಮೈಶ್ವರ್ಯಸಂಯುಕ್ತೋ ವಿಷ್ಣುಲೋಕೇ ಮಹೀಯತೇ ॥ ೨೧೦ ॥

ವಸಿತ್ವಾಸೌ ವಿಭೂತ್ಯೈವಂ ಯದಾ ಪ್ರಚ್ಯವತೇ ಪುನಃ ।
ವಿಷ್ಣುಲೋಕಾದ್ರುದ್ರಾದ್ಯೇಷು ಸ್ವರ್ಗಸ್ಥಾನೇಷು ಜಾಯತೇ ॥ ೨೧೧ ॥

---

ಮಾಡಿ, ಭಿಕ್ಷಾವೃತ್ತಿಯುಳ್ಳವನೂ ಜಿತೇಂದ್ರಿಯನೂ ಆಗಿ ಸತ್ಯವನ್ನಾಡುತ್ತಾ ತನ್ನ ಧರ್ಮದಲ್ಲಿ ವ್ಯತ್ಯಾಸವಾಗದೆ ಇರುವನು.

೨೦೭-೨೦೮. ತನ್ನ ಕರ್ಮದಿಂದ ವೃದ್ಧಿಹೊಂದಿದ ಎಲ್ಲಾ ಭೋಗಗಳನ್ನೂ ಆಶ್ರಯಿಸಿಕೊಂಡಿರುವ, ಸೂರ್ಯನಂತೆ ಪ್ರಕಾಶಮಾನವಾದ ವಿಮಾನದಿಂದ ಎಲ್ಲೂ ತಡೆಯಿಲ್ಲದೆ ಸಂಚರಿಸುವನು. ಅಲ್ಲದೆ ಗುಹ್ಯಕರೆಂಬ ಬ್ರಹ್ಮಗಣಗಳಿರುವರು. ಅವರು ಇವನಿಗೆ ಸ್ನೇಹಿತರು. ಅವರೊಡನೆ ಬಲ ಐಶ್ವರ್ಯಗಳಲ್ಲಿ ಸಮನಾಗಿ ದೇವತೆಗಳು ದಾನವರಿಂದ ಪೂಜಿಸಲ್ಪಡುತ್ತಾನೆ.

೨೦೯. ಪುಣ್ಯ ಐಶ್ವರ್ಯಗಳಿಂದ ಆ ಗುಹ್ಯಕರಿಗೆ ಸಮನಾಗಿ ದೇವತೆಗಳು, ದಾನವರು ಮನುಷ್ಯರಲ್ಲಿ ಬಹು ಪೂಜಿತನಾಗುತ್ತಾನೆ.

೨೧೦. ಸಾವಿರ ಕೋಟಿ ವರ್ಷಗಳು ಮತ್ತು ನೂರು ಕೋಟಿ ವರ್ಷಗಳ ವರೆಗೂ ಹೀಗೆ ಐಶ್ವರ್ಯದಿಂದ ಕೂಡಿದ್ದು ವಿಷ್ಣುಲೋಕದಲ್ಲಿ ಸುಖಿಸುತ್ತಾನೆ.

೨೧೧. ಈರೀತಿ ಐಶ್ವರ್ಯದಿಂದ ಅಲ್ಲಿ ವಾಸಮಾಡುತ್ತಿದ್ದು ಅಲ್ಲಿಂದ ಚ್ಯುತನಾಗಿ ರುದ್ರಾದಿಗಳ ಸ್ಥಾನವಾದ ಸ್ವರ್ಗದಲ್ಲಿ ಹುಟ್ಟುತ್ತಾನೆ.

ಪುಷ್ಕರಾರಣ್ಯಮಾಸಾದ್ಯ ಬ್ರಹ್ಮಚರ್ಯಾಶ್ರಮೇ ಸ್ಥಿತಃ ।
ಅಭ್ಯಾಸೇನ ತು ವೇದಾನಾಂ ವಸತೇ ಮ್ರಿಯತೇಽಥವಾ ॥ ೨೧೨ ॥

ಮೃತೋಽಸೌ ಯಾತಿ ದಿವ್ಯೇನ ವಿಮಾನೇನ ಸುತೇಜಸಾ ।
ಪೂರ್ಣಚಂದ್ರಪ್ರಕಾಶೇನ ಶಶಿವತ್ಪ್ರಿಯದರ್ಶನಃ ॥ ೨೧೩ ॥

ರುದ್ರಲೋಕಂ ಸಮಾಸಾದ್ಯ ಗುಹ್ಯಕೈಃ ಸಹ ಮೋದತೇ ।
ಐಶ್ವರ್ಯಂ ಮಹದಾಭುಂಕ್ತೇ ಸರ್ವಸ್ಯ ಜಗತಃ ಪ್ರಭುಃ ॥ ೨೧೪ ॥

ಭುಕ್ತ್ವಾ ಯುಗಸಹಸ್ರಾಣಿ ರುದ್ರಲೋಕೇ ಮಹೀಯತೇ ।
ಪ್ರಚ್ಯುತಶ್ಚ ತತಸ್ತಸ್ಮಾದ್ರುದ್ರಲೋಕಾತ್ಕ್ರಮೇಣ ತು ॥ ೨೧೫ ॥

ನಿತ್ಯಂ ಪ್ರಮುದಿತಸ್ತತ್ರ ಭುಕ್ತ್ವಾ ಸುಖಮನಾಮಯಂ ।
ದ್ವಿಜಾನಾಂ ಸಧನೇ ದಿವ್ಯೇ ಕುಲೇ ಮಹತಿ ಜಾಯತೇ ॥ ೨೧೬ ॥

ಮಾನುಷೇಷು ಸ ಧರ್ಮಾತ್ಮಾ ಸುರೂಪೋ ವಾಕ್ಪತಿರ್ಭವೇತ್ ।
ಸ್ಪೃಹಣೀಯಶ್ಚ ಸುಸ್ತ್ರೀಣಾಂ ಮಹಾಭೋಗಪತಿರ್ವಶೀ ॥ ೨೧೭ ॥

---

೨೧೨. ಅಲ್ಲಿಂದ ಚ್ಯುತನಾದ ಮೇಲೆ ಪುಷ್ಕರಾರಣ್ಯದಲ್ಲಿ ಹುಟ್ಟಿ, ಬ್ರಹ್ಮಚರ್ಯಾದಿ ಆಶ್ರಮಗಳನ್ನು ಹೊಂದಿ, ವೇದಶಾಸ್ತ್ರಗಳನ್ನು ಅಭ್ಯಾಸಮಾಡುತ್ತಾ ಇದ್ದು ಸಾಯುತ್ತಾನೆ.

೨೧೩-೨೧೪. ಆ ಪುಷ್ಕರಾರಣ್ಯದಲ್ಲಿದ್ದು ಸತ್ತು, ಒಳ್ಳೆಯ ತೇಜಸ್ಸಿನ ವಿಮಾನದಲ್ಲಿ ಕುಳಿತು ಪ್ರಕಾಶಿಸುತ್ತಾ ಚಂದ್ರನಂತೆ ಚೆನ್ನಾಗಿರುವನು. ಮತ್ತು ಅವರಿಂದ ರುದ್ರಲೋಕವನ್ನು ಹೊಂದಿ ಅಲ್ಲಿ ಗುಹ್ಯಕರೊಡನೆ ಸುಖಿಸುತ್ತಾನೆ. ಅಲ್ಲಿ ಎಲ್ಲರಿಗೂ ಪ್ರಭುವಾಗಿ ಬಹುವಾದ ಐಶ್ವರ್ಯವನ್ನು ಅನುಭವಿಸುತ್ತಾನೆ.

೨೧೫. ಆ ರುದ್ರಲೋಕದಲ್ಲಿ ಸಾವಿರ ಯುಗಗಳವರೆಗೂ ಸುಖವನ್ನು ಅನುಭವಿಸಿ ಆ ರುದ್ರಲೋಕದಿಂದ ಕಾಲಕ್ರಮದಿಂದ ಚ್ಯುತನಾಗುತ್ತಾನೆ.

೨೧೬. ಆ ರುದ್ರಲೋಕದಲ್ಲಿ ದುಃಖರಹಿತವಾದ ಸುಖವನ್ನು ಅನುಭವಿಸುತ್ತಿದ್ದು ಸತ್ತನಂತರ ಧನವುಳ್ಳ ದಿವ್ಯವಾದ ಉತ್ತಮವಾದ ಬ್ರಾಹ್ಮಣರ ವಂಶದಲ್ಲಿ ಹುಟ್ಟುತ್ತಾನೆ.

೨೧೭-೨೧೮. ಅವರ ವಂಶದಲ್ಲಿ ಹುಟ್ಟಿ ಧರ್ಮಾತ್ಮನಾಗಿ ಒಳ್ಳೆಯ ವಿದ್ವಾಂಸನಾಗುತ್ತಾನೆ. ಮತ್ತು ಸ್ತ್ರೀಯರಿಗೆ ಸುಂದರನಾಗಿ ಆಶಿಸುವಂತಾಗುತ್ತಾನೆ. ಮಹಾ

ವಾನಪ್ರಸ್ಥಸಮಾಚಾರೋ ಗ್ರಾಮ್ಯೋಪಾಧಿವಿವರ್ಜಿತಃ ।
ಸರ್ವಲೋಕೇಷು ಚಾಪ್ಯಸ್ಯ ಗತಿರ್ನ ಪ್ರತಿಹನ್ಯತೇ ॥ ೨೧೮ ॥

ಶೀರ್ಣಪತ್ರಫಲಾಹಾರಃ ಪುಷ್ಪಮೂಲಾಂಬುಭೋಜನಃ ।
ಕಪೋತೇನಾಶ್ಮಕುಟ್ಟೇನ ದಂತೋಲೂಖಲಿಕೇನ ಚ ॥ ೨೧೯ ॥

ವೃತ್ತ್ಯುಪಾಯೇನ ಜೀವೇತ ಶೀರ್ಣವಲ್ಕಲವಾಸಸಾ ।
ಜಟೀ ತ್ರಿಷವಣಸ್ನಾಯೀ ತ್ಯಕ್ತದೋಷಸ್ತು ದಂಡವಾನ್ ॥ ೨೨೦ ॥

ಕೃಚ್ಛ್ರವ್ರತಪರೋ ಯಸ್ತು ಶ್ವಪಚೋ ಯದಿ ವಾ ಪರಃ ।
ಜಲಶಾಯೀ ಪಂಚತಪಾ ವರ್ಷಾಸ್ವಭ್ರಾವಗಾಹಕಃ ॥ ೨೨೧ ॥

ಕೀಟಕಂಟಕಪಾಷಾಣಭೂಮ್ಯಾಂ ಚ ಸ್ವಪನಂ ತಥಾ ।
ಸ್ಥಾನವೀರಾಸನರತಃ ಸಂವಿಭಾಗೀ ದೃಢವ್ರತಃ ॥ ೨೨೨ ॥

---

ಭೋಗಗಳಿಗೆ ಒಡೆಯನಾಗುತ್ತಾನೆ. ಅನಂತರ ವಾನಪ್ರಸ್ಥಾಶ್ರಮವನ್ನು ಹೊಂದಿ ಅಯೋಗ್ಯವಾದ ವಿಷಯಗಳನ್ನು ವರ್ಜಿಸುತ್ತಾನೆ. ಇವನಿಗೆ ಯಾವ ಲೋಕದಲ್ಲಿಯೂ ಗಮನಕ್ಕೆ ಅಡ್ಡಿಯೇ ಇರುವುದಿಲ್ಲ.

೨೧೯-೨೨೦. ಬಿದ್ದುಹೋಗಿರುವ ಎಲೆಗಳನ್ನು ತಿನ್ನುತ್ತಾನೆ. ಮತ್ತು ಹೂ, ಗೆಡ್ಡೆಗೆಣಸು, ನೀರಿನ ಆಹಾರವನ್ನೇ ಅನುಸರಿಸುತ್ತಾನೆ. ಕಪೋತವೃತ್ತಿ (ಆಯ್ಕೆ), ಅಶ್ಮಕುಟ್ಟ (ಕಲ್ಲಿನಲ್ಲಿ ಕುಟ್ಟಿ ತಿನ್ನುವುದು), ಹಲ್ಲು, ಒರಳು ಮುಂತಾದುವುಗಳ ಜೀವನೋಪಾಯದಿಂದ ಜೀವಿಸುತ್ತಾನೆ. ಮತ್ತು ನಾರುಮಡಿಯನ್ನುಡುತ್ತಾನೆ. ಜಟೆಯನ್ನು ಧರಿಸುತ್ತಾನೆ. ಮೂರು ಹೊತ್ತು ಸ್ನಾನಮಾಡುತ್ತಾನೆ. ದಂಡವನ್ನು ಹಿಡಿದಿರುತ್ತಾನೆ. ದೋಷಭಾಗಿಯಾಗಿರುವುದಿಲ್ಲ.

೨೨೧. ಕೃಚ್ಛ್ರವ್ರತವನ್ನು ಮಾಡುತ್ತ, ನೀರಿನಲ್ಲಿ ಮಲಗುತ್ತ, ಪಂಚಾಗ್ನಿಯಲ್ಲಿ ತಪಸ್ಸುಮಾಡುತ್ತ, ಮಳೆಗಾಲದಲ್ಲಿ ಮಳೆನೀರಿನಲ್ಲಿ ಸ್ನಾನಮಾಡುತ್ತಿರಬೇಕು. ಅಲ್ಲಿ ನೀಚಜಾತಿಯವನೂ ಹೀಗೆ ಮಾಡುತ್ತಿರಬೇಕು.

೨೨೨. ಹುಳು, ಮುಳ್ಳು, ಕಲ್ಲುಗಳಿರುವ ಭೂಮಿಯಲ್ಲಿ ಮಲಗುತ್ತಿರಬೇಕು. ವೀರಾಸನದಲ್ಲಿ ಕುಳಿತುಕೊಳ್ಳುತ್ತಿರಬೇಕು. ದೃಢವಾದ ವ್ರತವನ್ನು ಮಾಡುತ್ತಿರಬೇಕು.

ಅರಣ್ಯೌಷಧಿಭೋಕ್ತಾ ಚ ಸರ್ವಭೂತಾಭಯಪ್ರದಃ ।
ನಿತ್ಯಂ ಧರ್ಮಾರ್ಜನರತೋ ಜಿತಕ್ರೋಧೋ ಜಿತೇಂದ್ರಿಯಃ ॥ ೨೨೩ ॥

ಬ್ರಹ್ಮಭಕ್ತಃ ಕ್ಷೇತ್ರವಾಸೀ ಪುಷ್ಕರೇ ವಸತೇ ಮುನಿಃ ।
ಸರ್ವಸಂಗಪರಿತ್ಯಾಗೀ ಸ್ವಾರಾಮೋ ವಿಗತಸ್ಪೃಹಃ ॥ ೨೨೪ ॥

ಯಶ್ಚಾತ್ರ ವಸತೇ ಭೀಷ್ಮ ಶೃಣು ತಸ್ಯಾಪಿ ಯಾ ಗತಿಃ ।
ತರುಣಾರ್ಕಪ್ರಕಾಶೇನ ವೇದಿಕಾಸ್ತಂಭಶೋಭಿನಾ ॥ ೨೨೫ ॥

ಬ್ರಹ್ಮಭಕ್ತೋ ವಿಮಾನೇನ ಯಾತಿ ಕಾಮಪ್ರಚಾರಿಣಾ ।
ವಿರಾಜಮಾನೋ ನಭಸಿ ದ್ವಿತೀಯ ಇವ ಚಂದ್ರಮಾಃ ॥ ೨೨೬ ॥

ಗೀತವಾದಿತ್ರನೃತ್ಯಜ್ಞೈರ್ಗಂಧರ್ವಾಪ್ಸರಸಾಂ ಗಣೈಃ ।
ಅಪ್ಸರೋಭಿಃ ಸಮಾಯುಕ್ತೋ ವರ್ಷಕೋಟಿಶತಾನ್ಯಸೌ ॥ ೨೨೭ ॥

ಯಸ್ಯ ಕಸ್ಯಾಪಿ ದೇವಸ್ಯ ಲೋಕಂ ಯಾತ್ಯನಿವಾರಿತಃ ।
ಬ್ರಹ್ಮಣೋಽನುಗ್ರಹೇಣೈವ ತತ್ರ ತತ್ರ ವಿರಾಜತೇ ॥ ೨೨೮ ॥

---

೨೨೩-೨೨೪. ಕಾಡಿನಲ್ಲಿರುವ ಪದಾರ್ಥಗಳನ್ನು ತಿನ್ನಬೇಕು. ಸಕಲ ಪ್ರಾಣಿಗಳಿಗೂ ಅಭಯವನ್ನು ಕೊಡುತ್ತಿರಬೇಕು. ಯಾವಾಗಲೂ ಧರ್ಮದಲ್ಲಿಯೇ ಆಸಕ್ತನಾಗಿರಬೇಕು. ಕಾಮಕ್ರೋಧಗಳನ್ನು ಬಿಟ್ಟಿರಬೇಕು. ಜಿತೇಂದ್ರಿಯನಾಗಿರಬೇಕು. ಬ್ರಹ್ಮನಲ್ಲಿ ಭಕ್ತಿಯುಳ್ಳವನಾಗಿರಬೇಕು ಕ್ಷೇತ್ರದಲ್ಲಿಯೇ ವಾಸಮಾಡುತ್ತಿರಬೇಕು ಸರ್ವ ಸಂಗವನ್ನು ಬಿಟ್ಟಿರಬೇಕು. ಆತ್ಮನಲ್ಲಿ ಸುಖಿಸುತ್ತಿರಬೇಕು. ಆಸೆಯನ್ನು ಬಿಟ್ಟಿರಬೇಕು.

೨೨೫-೨೨೬. ಈ ಪುಷ್ಕರದಲ್ಲಿ ವಾಸಮಾಡುವವನ ಗತಿಯನ್ನು ಹೇಳುತ್ತೇನೆ, ಕೇಳು. ಬಾಲಸೂರ್ಯನಂತೆ ಪ್ರಕಾಶಿಸುವ ವೇದಿಕೆಗಳುಳ್ಳ ವಿಮಾನವಲ್ಲಿಚಂದ್ರನಂತೆ ಪ್ರಕಾಶಿಸುತ್ತಾನೆ.

೨೨೭. ಗಾನ, ವಾದ್ಯ, ನೃತ್ಯಗಳನ್ನು ಬಲ್ಲ ಗಂಧರ್ವರು, ಅಪ್ಸರರುಗಳ ಗುಂಪಿನಿಂದ ಕೂಡಿಕೊಂಡು ನೂರು ಕೋಟಿ ವರ್ಷಗಳವರೆಗೆ ಹೀಗೆ ಸಂಚರಿಸುತ್ತಾ ಸುಖವಾಗಿರುತ್ತಾನೆ.

೨೨೮. ಯಾವ ದೇವನ ಲೋಕಕ್ಕೆ ಬೇಕಾದರೂ ಬ್ರಹ್ಮನ ಅನುಗ್ರಹದಿಂದ ತಡೆಯಿಲ್ಲದೆ ಹೋಗುತ್ತಾ ಬರುತ್ತಾ ಇರುತ್ತಾನೆ.

ಬ್ರಹ್ಮಲೋಕಾಚ್ಚ್ಯುತಶ್ಚಾಪಿ ವಿಷ್ಣುಲೋಕಂ ಸ ಗಚ್ಛತಿ ।
ವಿಷ್ಣುಲೋಕಾತ್ಪರಿಭ್ರಷ್ಟೋ ರುದ್ರಲೋಕಂ ಚ ಗಚ್ಛತಿ ॥ ೨೨೯ ॥

ತಸ್ಮಾದಪಿ ಚ್ಯುತಃ ಸ್ಥಾನಾದ್ದ್ವೀಪೇಷು ಸ ಹ ಜಾಯತೇ ।
ಸ್ವರ್ಗೇಷು ಚ ತಥಾನ್ಯೇಷು ಭುಕ್ತ್ವಾ ಭೋಗಾನ್ಯಥೇಪ್ಸಿತಾನ್ ॥ ೨೩೦ ॥

ಭುಕ್ತ್ವೈಶ್ವರ್ಯಂ ನರಸ್ತೇಷು ಪುನರ್ಮರ್ತ್ಯೇಷು ಜಾಯತೇ ।
ರಾಜಾ ವಾ ರಾಜಪುತ್ರೋ ವಾ ಜಾಯತೇ ಧನವಾನ್ಸುಖೀ ॥ ೨೩೧ ॥

ಸುರೂಪಃ ಸುಭಗಃ ಕಾಂತಃ ಕೀರ್ತಿಮಾನ್ಭಕ್ತಿಭಾವಿತಃ ।
ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾ ವಾ ಕ್ಷೇತ್ರವಾಸಿನಃ ॥ ೨೩೨ ॥

ಸ್ವಧರ್ಮನಿರತಾ ರಾಜನ್ ಸ್ವವೃತ್ತ್ಯಾಚಾರಜೀವಿನಃ ।
ಸರ್ವಾತ್ಮನಾ ಬ್ರಹ್ಮಭಕ್ತಾ ಭೂತಾನುಗ್ರಹಕಾರಿಣಃ ॥ ೨೩೩ ॥

ಪುಷ್ಕರೇ ತು ಮಹಾಕ್ಷೇತ್ರೇ ಯೇ ವಸಂತಿ ಮುಮುಕ್ಷವಃ ।
ಮೃತಾಸ್ತೇ ಬ್ರಹ್ಮಭವನಂ ವಿಮಾನೈರ್ಯಾಂತಿ ಶೋಭನೈಃ ॥ ೨೩೪ ॥

---

೨೨೯. ಬ್ರಹ್ಮಲೋಕದ ಸುಖಾನುಭವವಾದ ಮೇಲೆ ವಿಷ್ಣುಲೋಕಕ್ಕೆ ಬರುತ್ತಾನೆ. ಅಲ್ಲಿ ಸುಖಾನುಭವವಾದ ಮೇಲೆ ರುದ್ರಲೋಕಕ್ಕೆ ಬರುತ್ತಾನೆ. ಅಲ್ಲಿನ ಸುಖಾನುಭವವಾದ ಮೇಲೆ ದ್ವೀಪಗಳಲ್ಲಿ ಹುಟ್ಟುತ್ತಾನೆ.

೨೩೦-೨೩೧. ಸ್ವರ್ಗ ಮುಂತಾದುವುಗಳಲ್ಲಿ ಇಷ್ಟವಾದ ಭೋಗಗಳನ್ನು ಅನುಭವಿಸಿ ಮತ್ತೆ ಮನುಷ್ಯರಲ್ಲಿ ರಾಜನಾಗಿಯಾಗಲಿ ರಾಜಪುತ್ರನಾಗಿಯಾಗಲಿ ಧನವಂತನಾಗಿಯಾಗಲಿ ಹುಟ್ಟಿ ಸುಖಪಡುತ್ತಾನೆ.

೨೩೨-೨೩೪. ಹಾಗೆ ಹುಟ್ಟಿದವನು ಒಳ್ಳೆಯ ರೂಪವುಳ್ಳವನಾಗಿಯೂ, ಒಳ್ಳೆಯ ದೇಹವುಳ್ಳವನಾಗಿಯೂ, ಮನೋಹರವಾಗಿಯೂ, ಕೀರ್ತಿವಂತನಾಗಿಯೂ ಇದ್ದು ಭಕ್ತಿಯಿಂದ ಕೂಡಿರುತ್ತಾನೆ. ತನ್ನ ಧರ್ಮವಲ್ಲಿ ನಿರತನಾಗಿ ತನ್ನ ಆಚಾರದಿಂದ ಜೀವಿಸುತ್ತಾ ಬ್ರಹ್ಮಭಕ್ತನಾಗಿದ್ದು ಪ್ರಾಣಿಗಳಲ್ಲಿ ಅನುಗ್ರಹಮಾಡತಕ್ಕವರು ಮೋಕ್ಷವನ್ನಪೇಕ್ಷಿಸುತ್ತಾ ಪುಷ್ಕರದಲ್ಲಿ ವಾಸಮಾಡಿದರೆ ಸತ್ತನಂತರ ಬ್ರಹ್ಮಲೋಕವನ್ನು ವಿಮಾನದಿಂದ ಹೊಂದುತ್ತಾರೆ.

ಅಪ್ಸರೋಗಣಸಂಘುಷ್ಟೈಃ ಕಾಮಗೈಃ ಕಾಮರೂಪಿಭಿಃ ।
ಅಥವಾ ಸಂಪ್ರದೀಪ್ತೇಽಗ್ನೌ ಸ್ವಶರೀರಂ ಜುಹೋತಿ ಯಃ ॥ ೨೩೫ ॥

ಬ್ರಹ್ಮಧ್ಯಾಯೀ ಮಹಾಸತ್ತ್ವಃ ಸ ಬ್ರಹ್ಮಭವನಂ ವ್ರಜೇತ್ ।
ಬ್ರಹ್ಮಲೋಕೋಽಕ್ಷಯಸ್ತಸ್ಯ ಶಾಶ್ವತೋ ವಿಭವೈಃ ಸಹ ॥ ೨೩೬ ॥

ಸರ್ವಲೋಕೋತ್ತಮೋ ರಮ್ಯೋ ಭವತೀಷ್ಟಾರ್ಥಸಾಧಕಃ ।
ಪುಷ್ಕರೇ ತು ಮಹಾಪುಣ್ಯೇ ಯೋ ಪ್ರಾಣಾನ್ಸಲಿಲೇಽತ್ಯಜತ್ ॥ ೨೩೭ ॥

ತೇಷಾಮಪ್ಯಕ್ಷಯೋ ಭೀಷ್ಮ ಬ್ರಹ್ಮಲೋಕೋ ಮಹಾತ್ಮನಾಂ ।
ಸಾಕ್ಷಾತ್ಪಶ್ಯಂತಿ ತೇ ದೇವಂ ಸರ್ವದುಃಖವಿನಾಶನಂ ॥ ೨೩೮ ॥

ಸರ್ವಾಮರನುತಂ ದೇವಂ ರುದ್ರವಿಷ್ಣುಗಣೈರ್ಯುತಂ ।
ಅನಾಶಕೇ ಮೃತಾಃ ಶೂದ್ರಾಃ ಪುಷ್ಕರೇ ತು ಚ ಯೇ ನರಾಃ ॥ ೨೩೯ ॥

ಹಂಸಯುಕ್ತೈಸ್ತತೋ ಯಾಂತಿ ವಿಮಾನೈರರ್ಕಸಂನಿಭೈಃ ।
ನಾನಾರತ್ನಸುವರ್ಣಾಢ್ಯೈರ್ದಿವ್ಯೈರ್ಗಂಧಾಧಿವಾಸಿತೈಃ ॥ ೨೪೦ ॥

---

೨೩೫-೨೩೬. ಆ ವಿಮಾನದಲ್ಲಿ ಅಪ್ಸರಸ್ತ್ರೀಯರ ಗುಂಪಿನಿಂದ ಕೂಡಿ ಮನೋಹರವಾದ ರೂಪುಳ್ಳ, ಇಚ್ಛೆಬಂದಂತೆ ಹೋಗತಕ್ಕವರಿಂದಲೂ ಕೂಡಿರುತ್ತದೆ. ಹಾಗಿಲ್ಲದಿದ್ದರೆ ಆ ಪುಷ್ಕರದಲ್ಲಿ ಬೆಂಕಿಯನ್ನು ಹತ್ತಿಸಿ ಅದರಲ್ಲಿ ಬ್ರಹ್ಮನನ್ನು ಧ್ಯಾನಿಸುತ್ತಾ ಧೀರನಾಗಿ ಬಿದ್ದು ಪ್ರಾಣವನ್ನು ಬಿಟ್ಟರೆ ಅವನು ಬ್ರಹ್ಮಲೋಕಕ್ಕೆ ಹೋಗುತ್ತಾನೆ. ಅವನಿಗೆ ಬ್ರಹ್ಮಲೋಕವು ವಿಭವಗಳೊಡನೆ ಶಾಶ್ವತವಾದುದು.

೨೩೭. ಆ ಮನುಷ್ಯನು ಎಲ್ಲರಲ್ಲಿಯೂ ಉತ್ತಮನಾಗಿ ಎಲ್ಲರಿಗೂ ಇಷ್ಟವನ್ನು ಕೊಡುವವನಾಗುತ್ತಾನೆ. ಪುಷ್ಕರದಲ್ಲಿ ನೀರಿನಲ್ಲಿ ಬಿದ್ದು ಪ್ರಾಣಬಿಟ್ಟವರಿಗೆ ಅಕ್ಷಯವಾದ ಬ್ರಹ್ಮಲೋಕವು.

೨೩೮. ಅಂತಹವರು ಸರ್ವ ದುಃಖವನ್ನೂ ನಾಶಮಾಡುವ ಎಲ್ಲಾ ದೇವರಿಂದಲೂ ಸ್ತುತಿಸಲ್ಪಟ್ಟ ರುದ್ರ, ವಿಷ್ಣು, ಗಣಗಳಿಂದ ಕೂಡಿಕೊಂಡಿರುವ ಸ್ವಾಮಿಯನ್ನು ಪ್ರತ್ಯಕ್ಷವಾಗಿ ನೋಡುತ್ತಾನೆ.

೨೩೯-೨೪೨. ಅನಾಶಕದಲ್ಲಿ ಸತ್ತ ಶೂದ್ರರೂ, ಪುಷ್ಕರದಲ್ಲಿ ಸತ್ತ ಮನುಷ್ಯರೂ ಹಂಸದಿಂದ ಕೂಡಿರುವ ವಿಮಾನದಿಂದ ಬ್ರಹ್ಮಲೋಕಕ್ಕೆ ಹೋಗುತ್ತಾರೆ. ಆ

ಅನೌಪಮ್ಯಗುಣೈ ರಮ್ಯೈರಪ್ಸರೋಗೀತನಾದಿತೈಃ ।
ಪತಾಕಾಧ್ವಜವಿನ್ಯಸ್ತೈರ್ನಾನಾಘಂಟಾನಿನಾದಿತೈಃ ॥ ೨೪೧ ॥

ಬಹ್ವಾಶ್ಚರ್ಯಸಮೋಪೇತೈಃ ಕ್ರೀಡಾವಿಜ್ಞಾನಶಾಲಿಭಿಃ ।
ಸುಪ್ರಭೈರ್ಗುಣಸಂಪನ್ನೈರ್ಮಯೂರವರವಾಸಿಭಿಃ ॥ ೨೪೨ ॥

ಬ್ರಹ್ಮಲೋಕೇ ಗತಾ ವೀರಾ ರಮಂತೇಽನಾಶಕೇ ವ್ರತಾಃ ।
ತತ್ರ ಸ್ಥಿತ್ವಾ ಚಿರಂ ಕಾಲಂ ಭೋಗಾನ್ಭುಕ್ತ್ವಾ ಯಥೇಪ್ಸಿತಾನ್ ॥ ೨೪೩ ॥

ಧನೀ ವಿಪ್ರಕುಲೇ ಭೋಗೀ ಜಾಯತೇ ಮರ್ತ್ಯಮಾಗತಃ ।
ಕಾರೀಷೀಂ ಸಾಧಯೇದ್ಯಸ್ತು ಪುಷ್ಕರೇ ತು ವನೇ ನರಃ ॥ ೨೪೪ ॥

ಸರ್ವಲೋಕಾನ್ಪರಿತ್ಯಜ್ಯ ಬ್ರಹ್ಮಲೋಕಂ ಸ ಗಚ್ಛತಿ ।
ಬ್ರಹ್ಮಲೋಕೇ ವಸೇತ್ತಾವದ್ಯಾವತ್ಕಲ್ಪಕ್ಷಯೋ ಭವೇತ್ ॥ ೨೪೫ ॥

---

ವಿಮಾನವು ಸೂರ್ಯನಂತಿರುವುದು. ಉತ್ತಮವಾದ ಗುಣಗಳಿಂದ ಕೂಡಿದ ಅಪ್ಸರ ಸ್ತ್ರೀಯರು ಅದರಲ್ಲಿ ಗಾನಮಾಡುತ್ತಿರುತ್ತಾರೆ. ಬಾವುಟಗಳನ್ನೂ ಧ್ವಜಗಳನ್ನೂ ಕಟ್ಟಿರುತ್ತಾರೆ. ಘಂಟೆಗಳೂ, ಕಿರುಗೆಜ್ಜೆಗಳೂ ಅವರಲ್ಲಿ ಧ್ವನಿಮಾಡುತ್ತಿರುತ್ತವೆ. ಕ್ರೀಡೆಯ ವಿಜ್ಞಾನವನ್ನು ಬಲ್ಲವರು ಅನೇಕ ಆಶ್ಚರ್ಯಗಳನ್ನು ಮಾಡುತ್ತಿರುತ್ತಾರೆ. ಚೆನ್ನಾಗಿರುವ ಒಳ್ಳೆಯ ಗುಣಗಳಿಂದ ಕೂಡಿರುವ ನವಿಲುಗಳಿಂದಲೂ ಕೂಡಿ ಕೊಂಡಿರುತ್ತವೆ.

೨೪೩. ಈ ರೀತಿಯಾದ ವಿಮಾನದಿಂದ ಬ್ರಹ್ಮಲೋಕಕ್ಕೆ ಹೋಗಿಸುಖಿಸುತ್ತಾರೆ. ಅಲ್ಲಿ ಬಹುಕಾಲವಿದ್ದು ಇಷ್ಟವಾದ ಭೋಗಗಳನ್ನು ಅನುಭವಿಸಿ ಅಲ್ಲಿಂದ ಚ್ಯುತನಾಗಿ ಮನುಷ್ಯರಲ್ಲಿ ಬ್ರಾಹ್ಮಣರಲ್ಲಿ ಹುಟ್ಟಿ ಧನವಂತನೂ ಭೋಗವುಳ್ಳವನೂ ಆಗುತ್ತಾನೆ.

೨೪೪-೨೪೫. ಕಾಡುಬೆರಣಿಯನ್ನು ಕೂಡಿಸಿ ಅದಕ್ಕೆ ಬೆಂಕಿ ಹತ್ತಿಸಿ ಅದರಲ್ಲಿ ಬಿದ್ದು ಮೃತನಾದ ನರನು ಮತ್ತಾವ ಲೋಕಕ್ಕೂ ಹೋಗದೆ ಬ್ರಹ್ಮಲೋಕಕ್ಕೇ ಹೋಗುತ್ತಾನೆ. ಆ ಬ್ರಹ್ಮಲೋಕದಲ್ಲಿ ಕಲ್ಪವು ನಾಶವಾಗುವವರೆಗೂ ಇರುತ್ತಾನೆ.

ನೈವ ಪಶ್ಯತಿ ಮರ್ತ್ಯಂ ಹಿ ಕ್ಲಿಶ್ಯಮಾನಂ ಸ್ವಕರ್ಮಭಿಃ ।
ಗತಿಸ್ತಸ್ಯಾಪ್ರತಿಹತಾ ತಿರ್ಯಗೂರ್ಧ್ವಮಧಸ್ತಥಾ ॥ ೨೪೬ ॥

ಸಂಪೂಜ್ಯಃ ಸರ್ವಲೋಕೇಷು ಯಶೋ ವಿಸ್ತರಯನ್ನಪಿ ।
ಸದಾಚಾರವಿಧಿಜ್ಞಸ್ತು ಸರ್ವೇಂದ್ರಿಯಮನೋಹರಃ ॥ ೨೪೭

ನೃತ್ಯವಾದಿತ್ರಗೀತಜ್ಞಃ ಸುಭಗಃ ಪ್ರಿಯದರ್ಶನಃ ।
ನಿತ್ಯಮಮ್ಲಾನಕುಸುಮೋ ದಿವ್ಯಾಭರಣಭೂಷಿತಃ ॥ ೨೪೮ ॥

ನೀಲೋತ್ಪಲದಲಶ್ಯಾಮೋ ನೀಲಕುಂಚಿತಮೂರ್ಧಜಃ ।
ಅಜಘನ್ಯಾಃ ಸುಮಧ್ಯಾಶ್ಚ ಸರ್ವಸೌಭಾಗ್ಯಪೂರಿತಾಃ ॥ ೨೪೯

ಸರ್ವೈಶ್ವರ್ಯಗುಣೋಪೇತಾ ಯೌವನೇನಾತಿಗರ್ವಿತಾಃ ।
ಸ್ತ್ರಿಯಃ ಸೇವಂತಿ ತತ್ರಸ್ಥಾಃ ಶಯನೇ ರಮಯಂತಿ ಚ ॥ ೨೫೦ ॥

---

೨೪೬. ತನ್ನ ಕರ್ಮದಿಂದ ತೊಂದರೆಪಡುತ್ತಿರುವ ಮರ್ತ್ಯಲೋಕವನ್ನು ನೋಡುವುದೇ ಇಲ್ಲ. ಅವನು ಮೇಲಕ್ಕೆ ಕೆಳಕ್ಕೆ ಅಡ್ಡಲಾಗಿ ಹೇಗೆ ಬೇಕಾದರೂ ಹೋಗಬಹುದು.

೨೪೭-೨೫೦. ಆತನು ಎಲ್ಲಾ ಲೋಕದವರಿಗೂ ಪೂಜ್ಯನಾಗುತ್ತಾನೆ. ಯಶಸ್ಸನ್ನೇ ಹರಡುತ್ತಾನೆ. ಸದಾಚಾರವನ್ನು ಬಲ್ಲವನಾಗಿರುತ್ತಾನೆ. ಎಲ್ಲ ಇಂದ್ರಿಯಕ್ಕೂ ಮನೋಹರನಾಗಿರುತ್ತಾನೆ. ಕುಣಿತ, ವಾದ್ಯ, ಹಾಡುಗಳನ್ನು ತಿಳಿದವನಾಗಿರುತ್ತಾನೆ. ನೋಡಲು ಚೆನ್ನಾಗಿದ್ದು ಒಳ್ಳೆಯ ದೇಹವನ್ನು ಹೊಂದಿರುತ್ತಾನೆ ಯಾವಾಗಲೂ ಬಾಡದಿರುವ ಹೂವನ್ನು ಮುಡಿದುಕೊಂಡಿರುತ್ತಾನೆ. ಒಳ್ಳೆಯ ಒಡವೆಗಳಿಂದ ಅಲಂಕೃತನಾಗಿರುತ್ತಾನೆ. ನೀಲ್ಲೋತ್ಪಲದಂತೆ ಶ್ಯಾಮವರ್ಣದವನಾಗಿರುತ್ತಾನೆ. ಕಪ್ಪಾಗಿದ್ದು ಗುಂಗುರಾಗಿರುವ ಕೂದಲಿನಿಂದ ಕೂಡಿಕೊಂಡಿರುತ್ತಾನೆ. ಉತ್ತಮರಾದ, ಸೊಂಟವು ಸಣ್ಣನಾಗಿರುವ, ಎಲ್ಲಾ ಸೌಭಾಗ್ಯದಿಂದಲೂ ಕೂಡಿರುವ, ಎಲ್ಲಾ ಐಶ್ವರ್ಯದಿಂದ ಕೂಡಿರುವ, ಯೌವನದಿಂದ ಕೊಬ್ಬಿರುವ ಯುವತಿಯರು ಅಲ್ಲಿದ್ದುಕೊಂಡು ಅವನನ್ನು ಸೇವಿಸುತ್ತ ಹಾಸಿಗೆಯಲ್ಲೂ ರಮಿಸುತ್ತಾರೆ.

ವೀಣಾವೇಣುನಿನಾದ್ಯೈಶ್ಚ ಸುಪ್ತಃ ಸಂಪ್ರತಿಬುಧ್ಯತೇ ।
ಮಹೋತ್ಸವಸುಖಂ ಭುಂಕ್ತೇ ದುಷ್ಪ್ರಾಪ್ಯಮಕೃತಾತ್ಮಭಿಃ ।
ಪ್ರಸಾದಾದ್ದೇವದೇವಸ್ಯ ಬ್ರಹ್ಮಣಃ ಶುಭಕಾರಿಣಃ ॥ ೨೫೧ ॥

॥ ಭೀಷ್ಮ ಉವಾಚ ॥
ಆಚಾರಪರಮಾ ಯೇ ತು ಕ್ಷೇತ್ರಧರ್ಮಪರಾಯಣಾಃ ।
ಸ್ವಧರ್ಮಾಚಾರನಿರತಾ ಜಿತಕ್ರೋಧಾ ಜಿತೇಂದ್ರಿಯಾಃ ॥ ೨೫೨ ॥

ಬ್ರಹ್ಮಲೋಕಂ ವ್ರಜಂತೀತಿ ನೈತಚ್ಚಿತ್ರಂ ಮತಂ ಮಮ ।
ಅಸಂಶಯಂ ಚ ಗಚ್ಛಂತಿ ಲೋಕಾನನ್ಯಾನಪಿ ದ್ವಿಜಾಃ ॥ ೨೫೩ ॥

ವಿನಾ ಪದ್ಮೋಪವಾಸೇನ ತಥೈವ ನಿಯಮೇನ ಚ ।
ಸ್ತ್ರಿಯೋ ಮ್ಲೇಚ್ಛಾಶ್ಚ ಶೂದ್ರಾಶ್ಚ ಪಶವಃ ಪಕ್ಷಿಣೋ ಮೃಗಾಃ ॥ ೨೫೪ ॥

ಮೂಕಾ ಜಡಾಂಧಬಧಿರಾಸ್ತಪೋನಿಯಮವರ್ಜಿತಾಃ ।
ತೇಷಾಂ ವದ ಗತಿಂ ವಿಪ್ರ ಪುಷ್ಕರೇ ಯೇ ತ್ವವಸ್ಥಿತಾಃ ॥ ೨೫೫ ॥

---

೨೫೧. ವೀಣೆ, ಕೊಳಲು ಮುಂತಾದ ವಾದ್ಯಗಳ ಧ್ವನಿಯಿಂದ ಮಲಗಿದ್ದವನನ್ನು ಎಬ್ಬಿಸುತ್ತಾರೆ. ಅಯೋಗ್ಯರಿಗೆ ಅಲಭ್ಯವಾದ ಒಳ್ಳೆಯ ಸುಖಗಳನ್ನು ಅನುಭವಿಸುತ್ತಾನೆ. ಇದೆಲ್ಲವೂ ಆ ಶುಭಕಾರಿಯಾದ ದೇವದೇವನಾದ ಬ್ರಹ್ಮನ ಪ್ರಸಾದವು.

೨೫೨-೨೫೩. ಭೀಷ್ಮನು ಹೇಳಿದನು :—ಆಚಾರವಂತರೂ, ಕ್ಷೇತ್ರಧರ್ಮದಲ್ಲಿ ಆಸಕ್ತರಾದವರೂ, ತಮ್ಮ ಧರ್ಮದಲ್ಲಿ ಆಸಕ್ತರಾದವರೂ, ರಾಗಾದಿಗಳನ್ನು ಬಿಟ್ಟು ಜಿತೇಂದ್ರಿಯರಾದವರೂ ಬ್ರಹ್ಮಲೋಕಕ್ಕೆ ಹೋಗುವುದು ನನಗೆ ಆಶ್ಚರ್ಯವಾಗಿ ಕಾಣುವುದಿಲ್ಲ. ಇಂತಹ ಬ್ರಾಹ್ಮಣರು ಸಂಶಯವಿಲ್ಲದೆ ಯಾವ ಉತ್ತಮಲೋಕಕ್ಕೆ ಬೇಕಾದರೂ ಹೋಗುತ್ತಾರೆ.

೨೫೪-೨೫೫. ಪುಷ್ಕರವನದಲ್ಲಿ ಉಪವಾಸಮಾಡದಿರುವುದೇ ಮೊದಲಾದ ನಿಯಮಗಳನ್ನು ಮಾಡದಿರುವವರು, ಹೆಂಗಸರು, ಮ್ಲೇಚ್ಛರು, ಶೂದ್ರರು, ಪಶುಗಳು, ಪಕ್ಷಿಗಳು ಮೃಗಗಳು, ಮೂಗರು, ದಡ್ಡರು, ಕುರುಡರು, ಕಿವುಡರು, ತಪಸ್ಸು ಮಾಡದವರು,

॥ ಪುಲಸ್ತ್ಯ ಉವಾಚ ॥
ಸ್ತ್ರಿಯೋ ಮ್ಲೇಚ್ಛಾಶ್ಚ ಶೂದ್ರಾಶ್ಚ ಪಶವಃ ಪಕ್ಷಿಣೋ ಮೃಗಾಃ ।
ಪುಷ್ಕರೇ ತು ಮೃತಾ ಭೀಷ್ಮ ಬ್ರಹ್ಮಲೋಕಂ ವ್ರಜಂತಿ ತೇ ॥ ೨೫೬ ॥

ಶರೀರೈರ್ದಿವ್ಯರೂಪೈಶ್ಚ ವಿಮಾನೈರ್ಹೇಮಸುಪ್ರಭೈಃ ।
ದಿವ್ಯವ್ಯೂಹಸಮಾಯುಕ್ತೈರ್ಮಣಿಪ್ರವರವೇದಿಕೈಃ ॥ ೨೫೭ ॥

ಸುವರ್ಣವಜ್ರಸೋಪಾನಮಣಿಸ್ತಂಭವಿಭೂಷಿತೈಃ ।
ಸರ್ವಕಾಮೋಪಭೋಗಾಢ್ಯೈಃ ಕಾಮಗೈಃ ಕಾಮರೂಪಿಭಿಃ ॥ ೨೫೮ ॥

ನಭೋ ವಿಗಾಹ್ಯ ಗಚ್ಛಂತಿ ಸ್ತ್ರೀಸಹಸ್ರಸಮಾಕುಲಾಃ
ಬ್ರಹ್ಮಲೋಕಂ ಮಹಾತ್ಮಾನೋ ಲೋಕಾನನ್ಯಾನ್ಯಥೇಪ್ಸಿತಾನ್ ॥ ೨೫೯ ॥

ಬ್ರಹ್ಮಲೋಕಾಚ್ಚ್ಯುತಾಶ್ಚಾಪಿ ಕ್ರಮಾದ್ದ್ವೀಪೇಷು ಯಾಂತಿ ತೇ ।
ಕುಲೇ ಮಹತಿ ವಿಸ್ತೀರ್ಣೇ ಧನೀ ಭವತಿ ಸ ದ್ವಿಜಃ ॥ ೨೬೦ ॥

---

ಇಂಥವರು ಪುಷ್ಕರಕ್ಷೇತ್ರದಲ್ಲಿದ್ದರೆ ಅವರ ಗತಿ ಏನಾಗುವುದು ಎಂಬುವನ್ನು ಹೇಳು.

೨೫೬. ಪುಲಸ್ತ್ಯನು ಹೇಳಿದನು :—ಹೆಂಗಸರು, ಮ್ಲೇಚ್ಛರು, ಶೂದ್ರರು, ಪಶುಗಳು, ಪಕ್ಷಿಗಳು, ಮೃಗಗಳು, ಯಾರೇ ಆಗಲಿ ಪುಷ್ಕರದಲ್ಲಿ ಸತ್ತರೆ ಬ್ರಹ್ಮಲೋಕ ವನ್ನು ಹೊಂದುತ್ತಾರೆ

೨೫೭-೨೫೯. ಅಂತಹವರೂ ಕೂಡ ಉತ್ತಮವಾದ ಶರೀರದಿಂದ ಕೂಡಿ ಚಿನ್ನದ ಬಣ್ಣದಂತೆ ಚೆನ್ನಾಗಿರುವ ಉತ್ತಮವಾದ ಕೊಟ್ಟಡಿಗಳುಳ್ಳ, ಉತ್ತಮ ಮಣಿ ಗಳಿಂದ ಕೂಡಿದ ಜಗುಲಿಯುಳ್ಳ, ಚಿನ್ನ ಮತ್ತು ವಜ್ರದ ಸೋಪಾನವುಳ್ಳ, ಮಣಿಗಳ ಕಂಬಗಳಿಂದ ಕೂಡಿರುವ, ಎಲ್ಲಾ ಇಷ್ಟಾರ್ಥಗಳಿಂದಲೂ ತುಂಬಿದ, ಇಚ್ಛೆ ಬಂದ ರೂಪನ್ನು ಹೊಂದುವ, ಇಚ್ಛೆಬಂದಂತೆ ಹೋಗುವ ವಿಮಾನಗಳಲ್ಲಿ ಅನೇಕ ಸ್ತ್ರೀಯರೊಡನೆ ಕೂಡಿಕೊಂಡು ಇಷ್ಟಬಂದಂತೆ ಬ್ರಹ್ಮಲೋಕಕ್ಕೆ ಹೋಗುತ್ತಾರೆ. ಮತ್ತು ಇತರ ಲೋಕಗಳಿಗೂ ಹೋಗುತ್ತಾರೆ.

೨೬೦. ಬ್ರಹ್ಮಲೋಕದ ಅನುಭವವಾದ ನಂತರ ದ್ವೀಪಗಳಲ್ಲಿ ಉತ್ತಮವಾದ ಕುಲದಲ್ಲಿ ಹುಟ್ಟಿ ಬ್ರಾಹ್ಮಣನಾಗಿ ಧನವಂತನಾಗುತ್ತಾನೆ.

ತಿರ್ಯಗ್ಯೋನಿಗತಾ ಯೇ ಚ ಸರ್ವೇ ಕೀಟಪಿಪೀಲಿಕಾಃ ।
ಸ್ಥಲಜಾ ಜಲಜಾಶ್ಚೈವ ಸ್ವೇದಾಂಡೋದ್ಭಿಜ್ಜರಾಯುಜಾಃ ॥ ೨೬೧ ॥

ಸಕಾಮಾ ವಾಪ್ಯಕಾಮಾ ವಾ ಪುಷ್ಕರೈಕವನೇ ಮೃತಾಃ ।
ಸೂರ್ಯಪ್ರಭವಿಮಾನಸ್ಥಾ ಬ್ರಹ್ಮಲೋಕಂ ಪ್ರಯಾಂತಿ ತೇ ॥ ೨೬೨ ॥

ಕಲೌ ಯುಗೇ ಮಹಾಘೋರೇ ಪ್ರಜಾಃ ಪಾಪಸಮೀರಿತಾಃ ।
ನಾನ್ಯೇನಾಸ್ತಿ ಹ್ಯುಪಾಯೇನ ಧರ್ಮಃ ಸ್ವರ್ಗಶ್ಚ ಲಭ್ಯತೇ ॥ ೨೬೩ ॥

ವಸಂತಿ ಪುಷ್ಕರೇ ಯೇ ತು ಬ್ರಹ್ಮಾರ್ಚನರತಾ ನರಾಃ ।
ಕಲಿಕಾಲೇ ಕೃತಾರ್ಥಾಸ್ತೇ ಕ್ಲಿಶ್ಯಂತ್ಯನ್ಯೇ ನಿರರ್ಥಕಾಃ ॥ ೨೬೪ ॥

ರಾತ್ರೌ ಕರೋತಿ ಯತ್ಪಾಪಂ ನರಃ ಪಂಚಭಿರಿಂದ್ರಿಯೈಃ ।
ಕರ್ಮಣಾ ಮನಸಾ ವಾಚಾ ಕಾಮಕ್ರೋಧವಶಾನುಗಃ ॥ ೨೬೫ ॥

---

೨೬೧-೨೬೨. ಕೀಳುಜಾತಿಯಲ್ಲಿ ಹುಟ್ಟಿದ ಹುಳು, ಇರುವೆ, ಮಣ್ಣಿನಲ್ಲಿ ಹುಟ್ಟಿದುವು, ನೀರಿನಲ್ಲಿ ಹುಟ್ಟಿದುವು, ಬೆವರಿನಲ್ಲಿ ಹುಟ್ಟಿದುವು, ಮೊಟ್ಟೆಯಿಂದ ಹುಟ್ಟಿದುವು, ತಾಳಿನಿಂದ ಹುಟ್ಟಿದುವು, ಇವೆಲ್ಲವೂ ಇಚ್ಛೆಯಿರಲಿ, ಇಲ್ಲದಿರಲಿ, ಪುಷ್ಕರ ಕ್ಷೇತ್ರದಲ್ಲಿ ಸತ್ತರೆ ಸೂರ್ಯನಂತಿರುವ ವಿಮಾನದಲ್ಲಿ ಕುಳಿತು ಅವರು ಬ್ರಹ್ಮಲೋಕಕ್ಕೆ ಹೋಗುತ್ತಾರೆ.

೨೬೩-೨೬೪. ಮಹಾಘೋರವಾದ ಕಲಿಯುಗದಲ್ಲಿ ಪ್ರಜೆಗಳು ಪಾಪದಲ್ಲಿ ಆಸಕ್ತರಾಗಿರುತ್ತಾರೆ. ಬೇರೆಯ ಉಪಾಯಗಳಿಂದ ಧರ್ಮವಾಗಲಿ ಸ್ವರ್ಗವಾಗಲಿ ಅವರಿಗೆ ಸಿಕ್ಕುವುದಿಲ್ಲ. ಅಂತಹ ಕಲಿಕಾಲದಲ್ಲಿ ಪುಷ್ಕರಕ್ಷೇತ್ರದಲ್ಲಿ ವಾಸಮಾಡುತ್ತಾ ಬ್ರಹ್ಮನನ್ನು ಪೂಜಿಸುತ್ತಿದ್ದರೆ ಅವರು ಕೃತಾರ್ಥರು, ಮಿಕ್ಕವರು ಅಧನ್ಯರು, ಅವರು ಕಷ್ಟಪಡುತ್ತಾರೆ.

೨೬೫-೨೬೬. ಮನುಷ್ಯನು ರಾತ್ರಿಯಲ್ಲಿ ಮನೋವಾಕ್ಕಾಯ ಕರ್ಮಗಳಿಂದ ಕ್ರೋಧಾದಿಗಳಿಗೆ ವಶನಾಗಿ ಪಾಪಮಾಡಿದ್ದರೂ ಬೆಳಗ್ಗೆ ಆತನು ಆ ಪುಷ್ಕರವನವನ್ನು

**ಪ್ರಾತಃಸವನಮಾಸಾದ್ಯ ಪುಷ್ಕರೇ ತು ಪಿತಾಮಹಂ ।**
**ಅಭಿಗಮ್ಯ ಶುಚಿರ್ಭೂತ್ವಾ ತಸ್ಮಾತ್ಪಾಪಾತ್ಪ್ರಮುಚ್ಯತೇ ॥ ೨೬೬ ॥**

**ಉದಯಾದಾರಭ್ಯ ಯತ್ನೇನ ಯಾವದ್ದರ್ಶನಮೂರ್ಧ್ವಗಂ ।**
**ಮಾನಸಾಖ್ಯೇ ಪ್ರಸಂಚಿಂತ್ಯ ಬ್ರಹ್ಮಚರ್ಯಂ ಹರೇದಘಂ ॥ ೨೬೭ ॥**

**ದೃಷ್ಟ್ವಾ ವಿರಿಂಚಿಂ ಮಧ್ಯಾಹ್ನೇ ನರಃ ಪಾಪಾತ್ಪ್ರಮುಚ್ಯತೇ ।**
**ಮಧ್ಯಾಹ್ನಾಸ್ತಮಯಾಂತಂ ಯದಿಂದ್ರಿಯೈಃ ಪಾಪಮಾಚರೇತ್ ॥ ೨೬೮ ॥**

**ಪಿತಾಮಹಸ್ಯ ಸಂಧ್ಯಾಯಾಂ ದರ್ಶನಾದೇವ ಮುಚ್ಯತೇ ।**
**ಶಬ್ದಾದೀನ್ವಿಷಯಾನ್ಸರ್ವಾನ್ಭುಂಜಾನೋಽಪಿ ಸಕಾಮತಃ ॥ ೨೬೯ ॥**

**ಪುಷ್ಕರೇ ಬ್ರಹ್ಮಭಕ್ತೋ ಯೋ ನಿವಸೇತ್ತಪಸಿ ಸ್ಥಿತಃ ।**
**ಶೀರ್ಣಪರ್ಣಾಶನೋಪಾಯಃ ಫಲಮೂಲಾಂಬುಭೋಜನಃ ॥ ೨೭೦ ॥**

---

ಹೊಂದಿ ಬ್ರಹ್ಮನಿಗೆ ನಮಸ್ಕರಿಸಿದರೆ ಅವನು ಆ ಪಾಪದಿಂದ ಮುಕ್ತನಾಗುತ್ತಾನೆ.

೨೬೭. ಬೆಳಿಗ್ಗಿನಿಂದ ಸೂರ್ಯನು ನೆತ್ತಿಯ ಮೇಲೆ ಬರುವವರೆಗೂ ಬ್ರಹ್ಮಚರ್ಯವನ್ನು ಮನಸ್ಸಿನಲ್ಲಿ ಚಿಂತಿಸಿದರೆ ಪಾಪವು ನಾಶವಾಗುತ್ತದೆ.

೨೬೮. ಆ ಮಧ್ಯಾಹ್ನದಲ್ಲಿ ಬ್ರಹ್ಮನ ದರ್ಶನಮಾಡಿದರೆ ಪಾಪವು ನಾಶವಾಗುತ್ತದೆ. ಮಧ್ಯಾಹ್ನದಿಂದ ಅಸ್ತಮಾನದವರೆಗೂ ಯಾವ ಪಾಪಗಳನ್ನು ಮಾಡುತ್ತಾನೋ ಅದನ್ನು ಸಂಧ್ಯಾಕಾಲದಲ್ಲಿ ಬ್ರಹ್ಮನ ದರ್ಶನದಿಂದ ಕಳೆದುಕೊಳ್ಳುತ್ತಾನೆ.

೨೬೯-೨೭೧. ಶಬ್ದಾದಿ ಇಂದ್ರಿಯ ಸುಖಗಳನ್ನು ಇಷ್ಟಬಂದಂತೆ ಅನುಭವಿಸುತ್ತ ಪುಷ್ಕರದಲ್ಲಿ ಬ್ರಹ್ಮಭಕ್ತನಾಗಿ ವಾಸಮಾಡಿದರೆ ಅವನು ತಪಸ್ಸುಮಾಡುತ್ತಿದ್ದಂತೆ ತಿಳಿಯಬೇಕು. ಮತ್ತು ತರಗೆಲೆಗಳನ್ನು ತಿಂದು ಗೆಡ್ಡೆ ಗೆಣಸು ಹಣ್ಣು ಹಂಪಲುಗಳನ್ನೂ ನೀರನ್ನೂ ಆಹಾರವನ್ನಾಗಿ ಹೊಂದಿ, ಮರದ ಬುಡದಲ್ಲಿಯಾಗಲಿ ಕಲ್ಲುಗಳ ಗುಂಪಿನಲ್ಲಿಯಾಗಲಿ ಯಾವಾಗಲೂ ತಪಸ್ಸು ಮಾಡುತ್ತಿರುವನೆಂದು ತಿಳಿಯಬೇಕು. ಪುಷ್ಕರಾರಣ್ಯದಲ್ಲಿದ್ದುಕೊಂಡು ಇಂದ್ರಿಯಲೋಲುಪತೆಯಿಂದ ವೃಷ್ಟ್ಯಾನ್ನವನ್ನು

ವೃಕ್ಷಮೂಲೇಽಶ್ಮಕೂಟೇ ವಾ ಸರ್ವದಾ ತಪತೇ ತಪಃ ।
ಪುಷ್ಕರಾರಣ್ಯಸಂಸ್ಥೋ ಯೋ ಮಿಷ್ಟಾನ್ನಾಸ್ವಾದಭೋಜನಃ ॥ ೨೭೧ ॥

ತ್ರಿಕಾಲಮಪಿ ಭುಂಜಾನೋ ವಾಯುಭಕ್ಷಸಮೋ ಮತಃ ।
ವಸಂತಿ ಪುಷ್ಕರೇ ಯೇ ತು ನರಾಃ ಸುಕೃತಕರ್ಮಿಣಃ ॥ ೨೭೨ ॥

ತೇ ಲಭಂತೇ ಮಹಾಭೋಗಾನ್ ಕ್ಷೇತ್ರಸ್ಯಾಸ್ಯ ಪ್ರಭಾವತಃ ।
ಯಥಾ ಮಹೋದಧೇಸ್ತುಲ್ಯೋ ನ ಚಾನ್ಯೋಽಸ್ತಿ ಜಲಾಶಯಃ ॥

ತಥಾ ವೈ ಪುಷ್ಕರಸ್ಯಾಪಿ ಸಮಂ ತೀರ್ಥಂ ನ ವಿದ್ಯತೇ ।
ದೇವಾಧಿಕೋ ಯಥಾ ಬ್ರಹ್ಮಾ ಯಥಾ ನಾನ್ಯೋಽಧಿಕೋ ಭವೇತ್ ॥

ಪುಷ್ಕರಾರಣ್ಯಸದೃಶಂ ತೀರ್ಥಂ ನಾಸ್ತ್ಯಧಿಕಂ ಗುಣೈಃ ।
ಅಥ ತೇಽನ್ಯಾನ್ಪ್ರವಕ್ಷ್ಯಾಮಿ ಯೇಽಸ್ಮಿನ್ ಕ್ಷೇತ್ರೇ ವ್ಯವಸ್ಥಿತಾಃ ॥ ೨೭೫ ॥

---

ಮೂರು ಹೊತ್ತೂ ತಿನ್ನುತ್ತಿದ್ದರೂ ಅವನು ವಾಯುವನ್ನೇ ಭಕ್ಷಿಸಿಕೊಂಡಿರುವನೆಂದೂ ತಿಳಿಯಬೇಕು.

೨೭೨. ಪುಷ್ಕರಕ್ಷೇತ್ರದಲ್ಲಿ ಒಳ್ಳೆಯ ಕೆಲಸವನ್ನು ಮಾಡುತ್ತಿರುವ ಮನುಷ್ಯರು ಆ ಕ್ಷೇತ್ರದ ಮಹಿಮೆಯಿಂದ ಉತ್ತಮವಾದ ಭೋಗಗಳನ್ನು ಹೊಂದುತ್ತಾರೆ.

೨೭೩. ಸಮುದ್ರಕ್ಕೆ ಸಮವಾದ ನೀರು ನಿಲ್ಲುವ ಜಾಗವು ಪ್ರಪಂಚದಲ್ಲಿ ಹೇಗೆ ಬೇರೊಂದಿಲ್ಲವೋ ಅದರಂತೆ ಪುಷ್ಕರತೀರ್ಥಕ್ಕೆ ಸಮವಾದ ತೀರ್ಥವು ಬೇರೊಂದಿಲ್ಲ.

೨೭೪. ದೇವತೆಗಳಿಗೆಲ್ಲಾ ಉತ್ತಮನಾದ ಬ್ರಹ್ಮನಿಗಿಂತ ಹೆಚ್ಚಿನವನು ಹೇಗೆ ಬೇರೊಬ್ಬನಿಲ್ಲವೋ ಅದರಂತೆ ಪುಷ್ಕರಕ್ಷೇತ್ರಕ್ಕೆ ಗುಣಗಳಲ್ಲಿ ಸಮನಾದುದು ಬೇರೊಂದಿಲ್ಲ.

೨೭೫-೨೭೬. ಇದೂ ಅಲ್ಲದೆ ಈ ಕ್ಷೇತ್ರದಲ್ಲಿರುವ ಬೇರೆಯವರನ್ನೂ ಹೇಳುತ್ತೇನೆ, ಕೇಳು. ಇಂದ್ರಾದಿಗಳಾದ ದೇವತೆಗಳೂ ವಿಷ್ಣುವೂ ಇಲ್ಲಿದ್ದಾರೆ.

ವಿಷ್ಣುನಾ ಸಹಿತಾಃ ಸರ್ವ ಇಂದ್ರಾದ್ಯಾಶ್ಚ ದಿವೌಕಸಃ ।
ಗಜವಕ್ತ್ರಃ ಕುಮಾರಶ್ಚ ರೇವಂತಃ ಸದಿವಾಕರಃ　　॥ ೨೭೬ ॥

ಶಿವದೂತೀ ತಥಾ ದೇವೀ ಕನ್ಯಾ ಕ್ಷೇಮಂಕರೀ ವರಾ ।
ಸ್ಥಿತಾ ಹಿತಾರ್ಥಂ ಜಗತೋ ಬ್ರಹ್ಮಣೋ ನಿಲಯೇ ಸದಾ　　॥ ೨೭೭ ॥

ಅಲಂ ತಪೋಭಿರ್ನಿಯಮೈಃ ಸತ್ಕ್ರಿಯಾರ್ಜನಕಾರಿಣಾಂ ।
ವ್ರತೋಪವಾಸಕರ್ಮಾಣಿ ಕೃತ್ವಾನ್ಯತ್ರ ಮಹಾನ್ತ್ಯಪಿ　　॥ ೨೭೮ ॥

ಜ್ಯೇಷ್ಠೇ ತು ಪುಷ್ಕರಾರಣ್ಯೇ ಯಸ್ತಿಷ್ಠತಿ ನಿರುದ್ಯಮಃ ।
ಲಭತೇ ಸರ್ವಕಾಮಿತ್ವಂ ಯೋಽತ್ರೈವಾಸ್ತೇ ದ್ವಿಜಃ ಸದಾ　　॥ ೨೭೯ ॥

ಪಿತಾಮಹಸಮಂ ಯಾತಿ ಸ್ಥಾನಂ ಪರಮಮವ್ಯಯಂ ।
ಕೃತೇ ತು ದ್ವಾದಶೈರ್ವರ್ಷೈಸ್ತ್ರೇತಾಯಾಂ ಹಾಯನೇನ ತು　　॥ ೨೮೦ ॥

ಮಾಸೇನ ದ್ವಾಪರೇ ಭೀಷ್ಮ ಅಹೋರಾತ್ರೇಣ ತತ್ಕಲೌ ।
ಫಲಂ ಸಂಪ್ರಾಪ್ಯತೇ ಲೋಕೈಃ ಕ್ಷೇತ್ರೇಽಸ್ಮಿಂಸ್ತೀರ್ಥವಾಸಿಭಿಃ　　॥ ೨೮೧ ॥

---

೨೭೬-೨೭೭. ಗಣಪತಿ, ಕುಮಾರಸ್ವಾಮಿ, ರೇವಂತ, ಸೂರ್ಯ, ಶಿವದೂತೀ, ಕ್ಷೇಮಂಕರೀ ಇವರೆಲ್ಲರೂ ಜಗತ್ತಿನ ಕ್ಷೇಮಕ್ಕೋಸ್ಕರ ಈ ಕ್ಷೇತ್ರದಲ್ಲಿ ನೆಲೆಸಿದ್ದಾರೆ.

೨೭೮. ತಪಸ್ಸು, ನಿಯಮ, ಸತ್ಕಾರ್ಯಗಳು, ವ್ರತ, ಉಪವಾಸಗಳನ್ನು ಬೇರೆ ಕಡೆ ಮಾಡಿ ಕಷ್ಟಪಡುವುದು ಬೇಕಿಲ್ಲ.

೨೭೯. ಜ್ಯೇಷ್ಠಮಾಸದಲ್ಲಿ ಪುಷ್ಕರಕ್ಷೇತ್ರದಲ್ಲಿದ್ದರೆ ಅವನು ಏನನ್ನು ಮಾಡದಿದ್ದರೂ ಇಷ್ಟವಾದುವುಗಳೆಲ್ಲವನ್ನೂ ಹೊಂದಿ ಬ್ರಹ್ಮನ ಸಮವಾದ, ನಾಶ ರಹಿತವಾದ ಸ್ಥಾನವನ್ನು ಹೊಂದುತ್ತಾನೆ.

೨೮೦-೨೮೧. ಕೃತಯುಗದಲ್ಲಿ ಹನ್ನೆರಡು ವರ್ಷಗಳಲ್ಲಿ ಸಾಧಿಸಬೇಕಾದುದನ್ನು ತ್ರೇತಾಯುಗದಲ್ಲಿ ಒಂದು ವರ್ಷದಲ್ಲಿ ಮಾಡಿಕೊಳ್ಳಬಹುದು. ಆ ತ್ರೇತಾಯುಗದಲ್ಲಿ ಒಂದು ವರ್ಷದಲ್ಲಿ ಮಾಡಬಹುದಾದುದನ್ನು ದ್ವಾಪರದಲ್ಲಿ ಒಂದು ತಿಂಗಳಿನಲ್ಲಿ ಸಿದ್ಧಿಸಿಕೊಳ್ಳಬಹುದು. ಆ ದ್ವಾಪರದಲ್ಲಿ ಒಂದು ತಿಂಗಳಿನಲ್ಲಿ ಸಿದ್ಧಿಯಾಗತಕ್ಕದ್ದು ಕಲಿಯುಗದಲ್ಲಿ ಒಂದು ಅಹೋರಾತ್ರಿಯ ಕಾಲ ಈ ಕ್ಷೇತ್ರದಲ್ಲಿ ವಾಸಮಾಡಿದರೆ ಸಿದ್ಧಿಯಾಗಿ ಫಲವನ್ನು ಹೊಂದುತ್ತಾನೆ.

ಇತ್ಯೇವಂ ದೇವದೇವೇನ ಪುರೋಕ್ತಂ ಬ್ರಹ್ಮಣಾ ಮಮ ।
ನಾತಃ ಪರತರಂ ಕಿಂಚಿತ್ ಕ್ಷೇತ್ರಮಸ್ತೀಹ ಭೂತಲೇ ॥ ೨೮೨ ॥

ತಸ್ಮಾತ್ಸರ್ವಪ್ರಯತ್ನೇನಾರಣ್ಯಮೇತತ್ಸಮಾಶ್ರಯೇತ್ ।
ಗೃಹಸ್ಥೋ ಬ್ರಹ್ಮಚಾರೀ ಚ ವಾನಪ್ರಸ್ಥೋಽಥ ಭಿಕ್ಷುಕಃ ॥ ೨೮೩ ॥

ಯಥೋಕ್ತಕಾರಿಣಃ ಸರ್ವೇ ಗಚ್ಛಂತಿ ಪರಮಾಂ ಗತಿಂ ।
ಏಕೋಽಯಮಾಶ್ರಮೋ ಧರ್ಮಮನುತಿಷ್ಠೇದ್ಯಥಾವಿಧಿ ॥ ೨೮೪ ॥

ಅಕಾಮದ್ವೇಷಸಂಯುಕ್ತಃ ಸ ಪರತ್ರ ಮಹೀಯತೇ ।
ಚತುಷ್ಪದಾ ಹ ನಿಶ್ರೇಣೀ ಬ್ರಹ್ಮಣ್ಯೈಷಾ ಪ್ರತಿಷ್ಠಿತಾ ॥ ೨೮೫ ॥

ಏತಾಮಾಶ್ರಿತ್ಯ ನಿಶ್ರೇಣೀಂ ಬ್ರಹ್ಮಲೋಕೇ ಮಹೀಯತೇ ।
ಆಯುಷೋಽಪಿ ಚತುರ್ಭಾಗಂ ಬ್ರಹ್ಮಚರ್ಯಾನಸೂಯಕಃ ॥ ೨೮೬ ॥

ಗುರೌ ವಾ ಗುರುಪುತ್ರೇ ವಾ ವಸೇದ್ಧರ್ಮಾರ್ಥಕೋವಿದಃ ।
ಕರ್ಮಾತಿರೇಕೇಣ ಗುರೋರಧ್ಯೇತವ್ಯಂ ಬುಭೂಷತಾ ॥ ೨೮೭ ॥

---

೨೮೨. ಹೀಗೆಂದು ದೇವದೇವನಾದ ಬ್ರಹ್ಮನೇ ನನಗೆ ಪೂರ್ವದಲ್ಲಿ ಹೇಳಿದನು ಆದ್ದರಿಂದ ಈ ಭೂಮಿಯಲ್ಲಿ ಇದಕ್ಕಿಂತಲೂ ಬೇರೆ ಉತ್ತಮವಾದ ಕ್ಷೇತ್ರವಿರುವುದಿಲ್ಲ.

೨೮೩. ಆದ್ದರಿಂದ ಸರ್ವ ಪ್ರಯತ್ನದಿಂದಲೂ ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಭಿಕ್ಷುಕರು, ಸನ್ಯಾಸಿಗಳು ಈ ಕ್ಷೇತ್ರವನ್ನು ಆಶ್ರಯಿಸಿ ಅವರ ಆಶ್ರಮಕ್ಕೆ ತಕ್ಕಂತೆ ಇದ್ದರೆ ಉತ್ತಮಮಾದ ಗತಿಯನ್ನು ಹೊಂದುತ್ತಾರೆ.

೨೮೪. ಒಂದು ಆಶ್ರಮಧರ್ಮವನ್ನಾದರೂ ಇಲ್ಲಿ ವಿಧಿವತ್ತಾಗಿ ಕಾಮಕ್ರೋಧಾದಿಗಳನ್ನು ಬಿಟ್ಟು ಆಚರಿಸಿದರೆ ಪರಲೋಕದಲ್ಲಿ ಸುಖಿಸುತ್ತಾನೆ.

೨೮೫. ಇದನ್ನು ನಾಲ್ಕು ಕಾಲುಗಳುಳ್ಳ ಒಂದು ಶ್ರೇಣಿಯನ್ನಾಗಿ ಬ್ರಹ್ಮನು ಸೃಷ್ಟಿಸಿರುವನು. ಈ ಏಣಿಯನ್ನು ಆಶ್ರಯಿಸಿದರೆ ಬ್ರಹ್ಮಲೋಕದಲ್ಲಿ ಸುಖಿಸುತ್ತಾನೆ.

೨೮೬-೨೮೭. ತನ್ನ ಆಯುಸ್ಸಿನ ಕಾಲುಭಾಗ ಕಾಲವನ್ನು ಗುರುವಿನಲ್ಲಿಯಾಗಲಿ ಗುರುಪುತ್ರನಲ್ಲಿಯಾಗಲಿ ಇದ್ದು ಧರ್ಮವನ್ನಪೇಕ್ಷಿಸುತ್ತಾ ಕರ್ಮಗಳನ್ನು ಮಾಡುತ್ತಾ ಅಧ್ಯಯನ ಮಾಡುತ್ತಿರಬೇಕು.

ದಕ್ಷಿಣಾನಾಂ ಪ್ರವಾದೀ ಸ್ಯಾತ್ಪಾದೃತೋ ಗುರುಮಾಶ್ರಯೇತ್ ।
ಜಘನ್ಯಶಾಯೀ ಪೂರ್ವಂ ಸ್ಯಾದುತ್ಥಾಯೀ ಗುರುವೇಶ್ಮನಿ ॥ ೨೮೮ ॥

ಯಚ್ಚ ಶಿಷ್ಯೇಣ ಕರ್ತವ್ಯಂ ಕಾರ್ಯಮಾಸೇವನಾದಿಕಂ ।
ಕೃತಮಿತ್ಯೇವ ತತ್ಸರ್ವಂ ಕೃತ್ವಾ ತಿಷ್ಠೇತ ಪಾರ್ಶ್ವತಃ ॥ ೨೮೯ ॥

ಕಿಂಕರಃ ಸರ್ವಕಾರೀ ಚ ಸರ್ವಕರ್ಮಸು ಕೋವಿದಃ ।
ಶುಚಿರ್ದಕ್ಷೋ ಗುಣೋಪೇತೋ ಬ್ರೂಯೊದಿಷ್ಟಮಥೋತ್ತರಂ ॥ ೨೯೦ ॥

ಚಕ್ಷುಷಾ ಗುರುಮವ್ಯಗ್ರೋ ನಿರೀಕ್ಷೇತ ಜಿತೇಂದ್ರಿಯಃ ।
ನಾಭುಕ್ತವತಿ ಚಾಶ್ನೀಯಾದಪೀತವತಿ ನೋ ಪಿಬೇತ್ ॥ ೨೯೧ ॥

ನ ತಿಷ್ಠತಿ ತಥಾಸೀತ ಸುಪ್ತೇ ನೈವ ತು ಸಂವಿಶೇತ್ ।
ಉತ್ತಾನಾಭ್ಯಾಂ ಚ ಪಾಣಿಭ್ಯಾಂ ಪಾದಾವಸ್ಯ ತು ಸಂಸ್ಪೃಶೇತ್ ॥ ೨೯೨ ॥

---

೨೮೮-೨೮೯. ಯಾವನು ಪ್ರೀತಿಯಿಂದ ಗುರುವನ್ನು ಆಶ್ರಯಿಸುತ್ತಾನೆಯೋ ಅವನು ದಕ್ಷಿಣದೇಶದವರಿಗೂ ಉತ್ತಮನಾಗುವನು. ಗುರುವು ಮಲಗಿದ ಮೇಲೆ ತಾನು ಮಲಗಿ ಗುರುವಿಗೆ ಮುಂಚೆಯೇ ಏಳಬೇಕು. ಶಿಷ್ಯ ಮಾಡಬೇಕಾದ ಸೇವೆ ಎಲ್ಲವನ್ನು ಮಾಡಬೇಕು. ಅವೆಲ್ಲವನ್ನೂ ಮಾಡಿದನಂತರ ಪಕ್ಕದಲ್ಲಿ ನಿಂತಿರಬೇಕು.

೨೯೦. ಆಳಿನಂತೆ ಎಲ್ಲ ಕೆಲಸವನ್ನೂ ಮಾಡುತ್ತ ಎಲ್ಲದರಲ್ಲೂ ಚತುರನಾಗಿ ಶುಚಿಯಾಗಿ ಬುದ್ಧಿವಂತನಾಗಿ ಗುಣಿಯಾಗಿದ್ದುಕೊಂಡು, ಕೊನೆಯಲ್ಲಿ ತನ್ನ ಇಷ್ಟವನ್ನು ಗುರುವಿಗೆ ತಿಳಿಸಬೇಕು.

೨೯೧-೨೯೨. ಕಣ್ಣಿನಿಂದ ಗುರುಗಳನ್ನು ಉದಾಸೀನವಿಲ್ಲದೆ ನೋಡುತ್ತಿರಬೇಕು. ಆ ಗುರುವು ಊಟಮಾಡುವುದಕ್ಕೆ ಮುಂಚೆ ಊಟಮಾಡಬಾರದು. ಅವರು ಕುಡಿಯುವುದಕ್ಕೆ ಮುಂಚೆ ಕುಡಿಯಬಾರದು. ಅವರು ನಿಂತಿರುವಾಗ ಈತನು ಕೂತಿರಬಾರದು. ಅವರು ಮಲಗಿದರೆ ಇವನು ಕುಳಿತುಕೊಳ್ಳಬೇಕು. ಮೇಲುಮುಖವಾದ ಕೈಗಳಿಂದ ಇವನ ಕಾಲನ್ನು ಒತ್ತುತ್ತಿರಬೇಕು.

ದಕ್ಷಿಣಂ ದಕ್ಷಿಣೇನೈವ ಸವ್ಯಂ ಸವ್ಯೇನ ಪೀಡಯೇತ್ ।
ಅಭಿವಾದ್ಯ ಗುರುಂ ಬ್ರೂಯಾದಧೀಷ್ವ ಭಗವನ್ನಿತಿ ॥ ೨೯೩ ॥

ಇದಂ ಕರಿಷ್ಯೇ ಭಗವನ್ನಿದಂ ಚಾಪಿ ಮಯಾ ಕೃತಂ ।
ಇತಿ ಸರ್ವಂ ಚ ವಿಜ್ಞಾಪ್ಯ ನಿವೇದ್ಯ ಗುರವೇ ಧನಂ ॥ ೨೯೪ ॥

ಕುರ್ಯಾತ್ಕೃತಂ ಚ ತತ್ಸರ್ವಮಾಖ್ಯೇಯಂ ಗುರವೇ ಪುನಃ ।
ಯಾಂಸ್ತು ಗಂಧಾನ್ರಸಾನ್ವಾ ಬ್ರಹ್ಮಚಾರೀ ನ ಸೇವತೇ ॥ ೨೯೫ ॥

ಸೇವೇತ ತಾನ್ಸಮಾವೃತ್ತ ಇತಿ ಧರ್ಮೇಷು ನಿಶ್ಚಯಃ ।
ವಿಸ್ತರೇಣ ಮಯೋಕ್ತಾ ಹಿ ನಿಯಮಾ ಬ್ರಹ್ಮಚಾರಿಣಃ ॥ ೨೯೬ ॥

ತಾನ್ಸರ್ವಾನನುಗೃಹ್ಣೀಯಾದ್ಭಕ್ತಃ ಶಿಷ್ಯಶ್ಚ ವೈ ಗುರೋಃ ।
ಸ ಏವಂ ಗುರವೇ ಪ್ರೀತಿಮುಪಹೃತ್ಯ ಯಥಾಬಲಂ ॥ ೨೯೭ ॥

---

೨೯೩. ಬಲಗಾಲನ್ನು ಬಲಗೈಯಿಂದಲೂ ಎಡಗಾಲನ್ನು ಎಡಗೈಯಿಂದಲೂ ಮುಟ್ಟಿ ನಮಸ್ಕರಿಸಿ ಅಧ್ಯಯನವನ್ನು ಹೇಳಿಕೊಡೆಂದು ಕೇಳಬೇಕು.

೨೯೪. ಎಲೈ ಗುರುವೆ, ಇದನ್ನು ಮಾಡುತ್ತೇನೆ, ಇದನ್ನು ಮಾಡಿದೆನು ಎಂದು ಎಲ್ಲವನ್ನೂ ಗುರುವಿಗೆ ಒಪ್ಪಿಸಬೇಕು, ಮತ್ತು ತನ್ನ ಹಣವನ್ನು ಗುರುವಿಗೆ ಒಪ್ಪಿಸಬೇಕು. ಮಾಡತಕ್ಕದ್ದು, ಮಾಡುವುದು, ಎಲ್ಲವನ್ನೂ ಗುರುವಿಗೆ ಹೇಳುತ್ತಿರಬೇಕು.

೨೯೫. ಗಂಧಗಳು, ರಸಗಳನ್ನು ಇವುಗಳಾವುದನ್ನೂ ಬ್ರಹ್ಮಚಾರಿಯಾಗಿರುವಾಗ ಅನುಭವಿಸುವುದಿಲ್ಲವೋ ಅವೆಲ್ಲವನ್ನೂ ಬ್ರಹ್ಮಚಾರಿಯು ಸಮಾವರ್ತನೆಯಾದ ನಂತರ ಸೇವಿಸಬಹುದು.

೨೯೬-೨೯೭. ಬ್ರಹ್ಮಚಾರಿಯ ನಿಯಮಗಳನ್ನು ವಿಸ್ತಾರವಾಗಿ ಹೇಳಿದ್ದೇನೆ. ಅದೆಲ್ಲವನ್ನೂ ಶಿಷ್ಯನಿಗೆ ಅನುಗ್ರಹಿಸಬೇಕು. ಗುರುವಿಗೆ ಶಿಷ್ಯನು ಭಕ್ತನಷ್ಟೆ? ಶಿಷ್ಯನು ಗುರುವಿಗೆ ಶಕ್ತ್ಯನುಸಾರ ಬೇಕಾದುದನ್ನು ತಂದುಕೊಟ್ಟು ಸಮಾವರ್ತನನಾಗಬೇಕು.

**ಅಗ್ರಾಮ್ಯೇಷ್ವಾಶ್ರಮೇಷ್ವೇವಂ ಶಿಷ್ಯೋ ವರ್ತೇತ ಕರ್ಮಣಾ ।**
**ವೇದಂ ವೇದೌ ತಥಾ ವೇದಾನ್ವೇವಾರ್ಥಾಂಶ್ಚ ತಥಾ ದ್ವಿಜಃ　　॥ ೨೯೮ ॥**

**ಭಿಕ್ಷಾಭುಗಪ್ಯಧಃಶಾಯೀ ಸಮಧೀತ್ಯ ಗುರೋರ್ಮುಖಾತ್ ।**
**ವೇದವ್ರತೋಪಯೋಗೀ ಚ ಚತುರ್ಥಾಂಶೇನ ಯೋಗತಃ　　॥ ೨೯೯ ॥**

**ಗುರವೇ ದಕ್ಷಿಣಾಂ ದತ್ವಾ ಸಮಾವರ್ತೇದ್ಯಥಾವಿಧಿ ।**
**ಧರ್ಮಲಬ್ಧೈರ್ಯುತೋ ದಾರೈರಗ್ನೀನಾಧಾಯ ಪೂಜಯೇತ್ ॥ ೩೦೦ ॥**

**ದ್ವಿತೀಯಮಾಯುಷೋ ಭಾಗಂ ಗೃಹಮೇಧೀ ಸದಾ ವಸೇತ್ ।**
**ಗೃಹಸ್ಥವೃತ್ತಯಃ ಪೂರ್ವಂ ಚತಸ್ರೋ ಮುನಿಭಿಃ ಕೃತಾಃ　　॥ ೩೦೧ ॥**

**ಕುಶೂಲಧಾನ್ಯಾ ಪ್ರಥಮಾ ಕುಂಭಿಧಾನ್ಯಾ ದ್ವಿತೀಯಕಾ ।**
**ಅಶ್ವಸ್ತನೀ ತೃತೀಯೋಕ್ತಾ ಕಾಪೋತ್ಯಥ ಚತುರ್ಥಿಕಾ　　॥ ೩೦೨ ॥**

---

೨೯೮. ಗ್ರಾಮವಲ್ಲಿಲ್ಲದ ಆಶ್ರಮಗಳಲ್ಲಿ ಎಂದರೆ ಬ್ರಹ್ಮಚಾರಿ, ವಾನಪ್ರಸ್ಥ, ಸನ್ಯಾಸಾಶ್ರಮಗಳಲ್ಲಿ ಈ ರೀತಿ ಮಾಡಬೇಕು. ಒಂದು ವೇದ, ಎರಡು ವೇದ, ಮೂರು ವೇದ ಇವುಗಳಲ್ಲಿ ಕೈಲಾದಷ್ಟನ್ನು ಓದಬೇಕು.

೨೯೯. ಅದಿಲ್ಲದಿದ್ದರೆ ವೇದವ್ರತಗಳಿಗೆ ಬೇಕಾದಷ್ಟನ್ನಾದರೂ ತನ್ನ ವೇದದಲ್ಲಿ ಅಧ್ಯಯನಮಾಡಿಕೊಳ್ಳಬೇಕು.

೩೦೦. ಗುರುವಿಗೆ ದಕ್ಷಿಣೆಯನ್ನು ಕೊಟ್ಟು ವ್ರತಸಮಾವರ್ತನೆಯನ್ನು ಮಾಡಿಕೊಳ್ಳಬೇಕು. ಧರ್ಮದಿಂದ ಹೊಂದಿದ ಹೆಂಡತಿಯೊಡನೆ ಅಗ್ನಿಯನ್ನಿಟ್ಟುಕೊಂಡು ಔಪಾಸನಾದಿಗಳನ್ನು ಮಾಡಿಕೊಳ್ಳಬೇಕು.

೩೦೧. ಆಯುಸ್ಸಿನ ಎರಡನೆಯ ಭಾಗದಲ್ಲಿ ಗೃಹಸ್ಥನಾಗಿ ಯಾವಾಗಲೂ ಇರಬೇಕು. ಗೃಹಸ್ಥನ ಕೆಲಸಗಳನ್ನು ಮುನಿಗಳು ನಾಲ್ಕು ಭಾಗವಾಗಿ ಮಾಡಿದ್ದಾರೆ.

೩೦೨-೩೦೪. ಒಂದನೆಯದು ಕುಶೂಲಧಾನ್ಯ, ಎರಡನೆಯದು ಕುಂಭಿಧಾನ್ಯ, ಮೂರನೆಯದು ಅಶ್ವಸ್ತನೀ, ನಾಲ್ಕನೆಯದು ಕಾಪೋತಿ ಎಂದು ನಾಲ್ಕು ಬಗೆ ವೃತ್ತಿಗಳು. ಇವುಗಳಲ್ಲಿ ಮುಂದುಮುಂದಕ್ಕೆ ಒಂದಕ್ಕಿಂತ ಮತ್ತೊಂದು ಶ್ರೇಷ್ಠವು. ಧರ್ಮದಿಂದಲೂ ಲೋಕದಲ್ಲಿ ಪೂಜಿತವಾಗಿವೆ. ಇವರಲ್ಲಿ ಷಟ್ಕರ್ಮನಿರತರಾದವರು

ಆಸಾಂ ಪರಾ ಪರಾ ಶ್ರೇಷ್ಠಾ ಧರ್ಮತೋ ಲೋಕಪೂಜಿತಾ
ಷಟ್ಕರ್ಮವರ್ತಕಸ್ತ್ವೇಕಸ್ತ್ರಿಭಿರನ್ಯಃ ಪ್ರವರ್ತತೇ ॥ ೩೦೩ ॥

ದ್ವಾಭ್ಯಾಂ ಚೈವ ಚತುರ್ಥಸ್ತು ದ್ವಿಜಃ ಸ ಬ್ರಹ್ಮಣಿ ಸ್ಥಿತಃ ।
ಗೃಹಮೇಧಿವ್ರತಾದನ್ಯನ್ಮಹತ್ತೀರ್ಥಂ ನ ಚಕ್ಷತೇ ॥ ೩೦೪ ॥

ನಾತ್ಮಾರ್ಥಂ ಪಾಚಯೇದನ್ನಂ ನ ವೃಥಾ ಘಾತಯೇತ್ಪಶೂನ್ ।
ಪ್ರಾಣೀ ವಾ ಯದಿ ವಾಪ್ರಾಣೀ ಸಂಸ್ಕಾರಾದ್ಯಜ್ಞಮರ್ಹತಿ ॥ ೩೦೫ ॥

ನ ದಿವಾ ಪ್ರಸ್ವಪೇಜ್ಜಾತು ನ ಪೂರ್ವಾಪರರಾತ್ರಯೋಃ ।
ನ ಭುಂಜೀತಾಂತರಾ ಕಾಲೇ ನಾನೃತಂ ತು ವದೇತ ಹ ॥ ೩೦೬ ॥

ನಾಸ್ಯಾನಶ್ನನ್ವಸೇದ್ವಿಪ್ರೋ ಗೃಹೇ ಕಶ್ಚಿದಪೂಜಿತಃ ।
ತಥಾಸ್ಯಾತಿಥಯಃ ಪೂಜ್ಯಾ ಹವ್ಯಕವ್ಯವಹಾಃ ಸದಾ ॥ ೩೦೭ ॥

---

ಒಂದು ಗುಂಪು. ಅಧ್ಯಯನ, ಅಧ್ಯಾಪನ, ದಾನ, ಪ್ರತಿಗ್ರಹ, ಯಜನ, ಯಾಜನ. ಇವುಗಳಲ್ಲಿ ಇವರು ನಿರತರಾಗಿರುತ್ತಾರೆ. ಮತ್ತೊಂದು ಬಗೆಯವರು ಅಧ್ಯಯನ. ದಾನ, ಯಜನ ಮೂರರಲ್ಲಿ ಆಸಕ್ತರಾಗಿರುತ್ತಾರೆ. ಅಧ್ಯಯನ, ದಾನವೆರಡರಲ್ಲಿ ನಿರತ ವಾಗಿರುವವರು ಮೂರನೆ ಪಂಗಡದವರು, ಬ್ರಹ್ಮ ಅಥವಾ ವೇದವೊಂದರಲ್ಲಿಯೇ ಆಸಕ್ತನಾದವನು ನಾಲ್ಕನೆಯ ಪಂಗಡಕ್ಕೆ ಸೇರಿದವನು. ಗೃಹಸ್ಥಾಶ್ರಮಕ್ಕಿಂತ ಉತ್ತಮ. ವಾದ ಮತ್ತೊಂದು ತೀರ್ಥವು ಪ್ರಪಂಚದಲ್ಲಿಲ್ಲವೇ ಇಲ್ಲ.

೩೦೫. ತನ್ನ ಒಬ್ಬನಿಗೋಸ್ಕರ ಅನ್ನವನ್ನು ಮಾಡಿಕೊಳ್ಳಬಾರದು. ವ್ಯರ್ಥ ವಾಗಿ ಪಶುವನ್ನು ಕೊಲ್ಲಕೂಡದು. ಜೀವವಿರುವುದಾಗಲಿ ಇಲ್ಲದುದಾಗಲಿ ಸಂಸ್ಕಾರ ದಿಂದ ಯಜ್ಞದಲ್ಲಿ ಅರ್ಹತೆಯನ್ನು ಪಡೆಯುತ್ತದೆ.

೩೦೬ ಹಗಲುಹೊತ್ತಿನಲ್ಲಿ ಮಲಗಬಾರದು. ರಾತ್ರಿಯ ಮೊದಲಿನಲ್ಲಿಯೂ ಕೊನೆಯಲ್ಲಿಯೂ ಮಲಗಬಾರದು. ಎಂದರೆ ಆಗ ಸಾಯಂಸಂಧ್ಯೆಯೂ ಪ್ರಾತಃ ಸಂಧ್ಯೆಯೂ ಇರುತ್ತದೆ. ಸಂಧ್ಯಾಕಾಲಗಳಲ್ಲಿ ಊಟಮಾಡಬಾರದು. ಸುಳ್ಳನ್ನು ಹೇಳಬಾರದು.

೩೦೭. ಬ್ರಾಹ್ಮಣನು ಯಾವನ ಮನೆಯಲ್ಲಿಯೇ ಆಗಲಿ ಗೌರವವನ್ನು ಹೊಂದದೆ ಊಟಮಾಡಬಾರದು. ಗೃಹಸ್ಥನು ಹವ್ಯಕವ್ಯಗಳನ್ನು ಧರಿಸತಕ್ಕ ಅತಿಥಿ ಯನ್ನು ಪೂಜಿಸಬೇಕು.

ವೇದವಿದ್ಯಾವ್ರತಸ್ನಾತಾಃ ಶ್ರೋತ್ರಿಯಾ ವೇದಪಾರಗಾಃ ।
ಸ್ವಕರ್ಮಜೀವಿನೋ ದಾಂತಾಃ ಕ್ರಿಯಾವಂತಸ್ತಪಸ್ವಿನಃ ॥ ೩೦೮ ॥

ತೇಷಾಂ ಹವ್ಯಂ ಚ ವಾ ಕವ್ಯಮರ್ಹಣಾರ್ಥಂ ವಿಧೀಯತೇ ।
ನಶ್ವರೈಃ ಸಂಪ್ರಯಾತಸ್ಯ ಸ್ವಕರ್ಮಾಪಗತಸ್ಯ ಚ ॥ ೩೦೯ ॥

ಅಪವಿದ್ಧಾಗ್ನಿಹೋತ್ರಸ್ಯ ಗುರೋರ್ವಾಲೀಕಕಾರಿಣಃ ।
ಅಸತ್ಯಾಭಿನಿವೇಶಸ್ಯ ನಾಧಿಕಾರೋಽಸ್ತಿ ಕವ್ಯಯೋಃ ॥ ೩೧೦ ॥

ಸಂವಿಭಾಗೋಽತ್ರ ಭೂತಾನಾಂ ಸರ್ವೇಷಾಮೇವ ಶಿಷ್ಯತೇ ।
ತಥೈವಾಪಚಮಾನೇಭ್ಯಃ ಪ್ರದೇಯಂ ಗೃಹಮೇಧಿನಾ ॥ ೩೧೧ ॥

ವಿಘಸಾಶೀ ಭವೇನ್ನಿತ್ಯಂ ನಿತ್ಯಂ ಚಾಮೃತಭೋಜನಃ ।
ಅಮೃತಂ ಯಜ್ಞಶೇಷಃ ಸ್ಯಾದ್ಭೋಜನಂ ಹವಿಷಾ ಸಮಂ ॥ ೩೧೨ ॥

ಸಂಹೃತ್ಯ ಶೇಷಂ ಯೋಽಶ್ನಾತಿ ತಮಾಹುರ್ವಿಘಸಾಶಿನಂ ।
ಸ್ವದಾರನಿರತೋ ದಾಂತೋ ಹ್ಯನಸೂಯುರ್ಜಿತೇಂದ್ರಿಯಃ ॥ ೩೧೩ ॥

---

೩೦೮. ವೇದವಿದ್ಯೆಯಲ್ಲಿ ಕೊನೆಗೊಂಡವರು, ಶ್ರೋತ್ರಿಯರು, ತಪಸ್ವಿಗಳು ಆಗಿ ತಮ್ಮ ಕರ್ಮಗಳಲ್ಲಿ ನಡೆಯುತ್ತ ಶಾಂತರಾಗಿ ಕ್ರಿಯೆಯುಳ್ಳವರನ್ನು ಯಾಗಗಳಿಗೆ (ಹವ್ಯಕವ್ಯಗಳಿಗೆ) ಕರೆದು ಪೂಜಿಸಬೇಕು.

೩೦೯-೩೧೦. ಶಾಶ್ವತವಲ್ಲದ ಕೆಲಸಗಳಲ್ಲಿ ಅಭಿರುಚಿಯಿರುವ, ತನ್ನ ಗೃಹದ ಕರ್ಮಗಳನ್ನು ಬಿಟ್ಟಿರುವ, ಅಗ್ನಿಹೋತ್ರವನ್ನು ಮಾಡದ, ಗುರುವಿಗೆ ಕೇಡುಕನ್ನು ಮಾಡುವ, ಸುಳ್ಳಾಡತಕ್ಕ ಮನುಷ್ಯನು ಹವ್ಯಕವ್ಯಗಳಿಗೆ ಯೋಗ್ಯನಲ್ಲ.

೩೧೧. ಗೃಹಸ್ಥನಾದವನು ತಾನು ಮಾಡಿದ ಅಡಿಗೆಯಲ್ಲಿ ಭೂತಗಳಿಗೆ ಭಾಗಕೊಡಬೇಕು. ಅಂತೆಯೇ ಅಡಿಗೆಮಾಡದ ಭಿಕ್ಷುಗಳಿಗೂ ಕೊಡಬೇಕು.

೩೧೨. ಹಾಗೆ ಊಟಮಾಡಿದವನು ಪಾಪವಿಲ್ಲದ ಊಟವನ್ನು ಮಾಡಿದವಂತಾಗುವುದು. ನಿತ್ಯವೂ ಅಮೃತವನ್ನೇ ಊಟಮಾಡಿದಂತಾಗುವುದು. ಯಜ್ಞದ ಶೇಷವು ಅಮೃತವೆನ್ನಿಸಿಕೊಳ್ಳುತ್ತದೆ. ಅಂತಹ ಭೋಜನವು ಹವಿಸ್ಸನ್ನು ತಿಂದಂತೆ ಆಗಿರುತ್ತದೆ.

೩೧೩. ಎಲ್ಲರನ್ನೂ ಕೂಡಿಸಿ ಅವರು ಊಟಮಾಡಿದನಂತರ ಆ ಶೇಷವನ್ನು ಊಟಮಾಡಿದರೆ ಅದೇ ಪವಿತ್ರಾನ್ನವು. ಅದನ್ನು ಊಟಮಾಡಬೇಕು. ಗೃಹಸ್ಥನು ತನ್ನ ಹೆಂಡತಿಯಲ್ಲಿ ಆಸಕ್ತನಾಗಿ ಅಸೂಯೆಪಡದೆ ಜಿತೇಂದ್ರಿಯನಾಗಿರಬೇಕು.

ಋತ್ವಿಕ್ಪುರೋಹಿತಾಚಾರ್ಯಮಾತುಲಾತಿಥಿಸಂಹತೈಃ ।
ವೃದ್ಧಬಾಲಾತುರೈರ್ವೈದ್ಯೈರ್ಜ್ಞಾತಿಸಂಬಂಧಿಬಾಂಧವೈಃ ॥ ೩೧೪ ॥

ಮಾತಾಪಿತೃಭ್ಯಾಂ ಜಾಮಾತ್ರಾ ಭ್ರಾತ್ರಾ ಪುತ್ರೇಣ ಭಾರ್ಯಯಾ ।
ದುಹಿತ್ರಾ ದಾಸವರ್ಗೇಣ ವಿವಾದಂ ನ ಸಮಾಚರೇತ್ ॥ ೩೧೫ ॥

ಏತಾನ್ವಿಮುಚ್ಯ ಸಂವಾದಾನ್ ಸರ್ವಪಾಪೈಃ ಪ್ರಮುಚ್ಯತೇ ।
ಏತೈರ್ಜಿತೈಸ್ತು ಜಯತಿ ಸರ್ವಲೋಕಾನ್ನ ಸಂಶಯಃ ॥ ೩೧೬ ॥

ಆಚಾರ್ಯೋ ಬ್ರಹ್ಮಲೋಕೇಶಃ ಪ್ರಾಜಾಪತ್ಯಃ ಪ್ರಭುಃ ಪಿತಾ ।
ಅತಿಥಿಃ ಸರ್ವಲೋಕೇಶ ಋತ್ವಿಗ್ವೇದಾಶ್ರಯಃ ಪ್ರಭುಃ ॥ ೩೧೭ ॥

ಜಾಮಾತಾಪ್ಸರಸಾಂ ಲೋಕೇ ಜ್ಞಾತಯೋ ವೈಶ್ವದೇವಿಕಾಃ ।
ಸಂಬಂಧಿಬಾಂಧವಾ ದಿಕ್ಷು ಪೃಥಿವ್ಯಾಂ ಮಾತೃಮಾತುಲೌ ॥ ೩೧೮ ॥

---

೩೧೪-೩೧೫. ಋತ್ವಿಕ್, ಪುರೋಹಿತ, ಆಚಾರ್ಯ, ಸೋದರಮಾವ, ಅತಿಥಿ, ಮುದುಕ, ಮಕ್ಕಳು, ರೋಗಿದಳು, ವೈದ್ಯರು, ಜ್ಞಾತಿಗಳು, ನೆಂಟರು, ಬೀಗರು, ತಾಯಿ, ತಂದೆ, ಅಳಿಯ, ಅಣ್ಣತಮ್ಮಂದಿರು, ಸುತರು, ಹೆಂಡತಿ, ಮಗಳು, ಆಳುಗಳು, ಇವರೊಡನೆ ಜಗಳಮಾಡಬಾರದು.

೩೧೬. ಇವರೊಡನೆ ಜಗಳಮಾಡದಿದ್ದರೆ ಪಾಪದಿಂದ ಪಾರಾಗುತ್ತಾನೆ. ಇವರ ವಿಷಯದಲ್ಲಿ ಜಗಳವಾಡದೆ ಸರಿಯಾಗಿದ್ದರೆ ಅವನು ಎಲ್ಲಾ ಜನರನ್ನೂ ಜಯಿಸಿದನೆಂತಲೇ ತಿಳಿಯಬಹುದು.

೩೧೭-೩೧೮. ಆಚಾರ್ಯನು ಬ್ರಹ್ಮಲೋಕಕ್ಕೆ ಒಡೆಯನು, ಪ್ರಜಾಪತಿಯು ಲೋಕಕ್ಕೆ ಒಡೆಯನು. ಅತಿಥಿಯು ಎಲ್ಲಾ ಲೋಕಕ್ಕೂ ಒಡೆಯನು. ಋತ್ವಿಕ್ಕು ವೇದಕ್ಕೆ ಆಶ್ರಯನಾದ ಪ್ರಭುವು. ಅಳಿಯನು ಅಪ್ಸರೋಲೋಕದ ಒಡೆಯ. ಜ್ಞಾತಿಗಳು ವಿಶ್ವೇದೇವರಿರುವ ಲೋಕಕ್ಕೆ ಅಧಿಪತಿಗಳು. ಸಂಬಂಧಿಗಳೂ, ಬಂಧುಗಳೂ ದಿಕ್ಕುಗಳಿಗೆ ಒಡೆಯರು. ತಾಯಿ, ಸೋದರಮಾವ ಇವರು ಭೂಲೋಕಕ್ಕೆ ಒಡೆಯರು.

ವೃದ್ಧಬಾಲಾತುರಾಶ್ಚೈವ ಆಕಾಶೇ ಪ್ರಭವಿಷ್ಣವಃ ।
ಪುರೋಧಾ ಋಷಿಲೋಕೇಶಃ ಸಂಭೃತಾಃ ಸಾಧ್ಯಲೋಕಪಾಃ ॥ ೩೧೯ ॥

ಅಶ್ವಿಲೋಕಪತಿರ್ವೈದ್ಯೋ ಭ್ರಾತಾ ತು ವಸುಲೋಕಪಃ ।
ಮರುಲ್ಲೋಕೇಶ್ವರೀ ಭಾರ್ಯಾ ದುಹಿತಾಪ್ಸರಸಾಂ ಗೃಹೇ ॥ ೩೨೦ ॥

ಭ್ರಾತಾ ಜ್ಯೇಷ್ಠಃ ಸಮಃ ಪಿತ್ರಾ ಭಾರ್ಯಾ ಪುತ್ರಃ ಸ್ವಕಾ ತನುಃ ।
ಭಾಯಾ ಚ ದಾಸವರ್ಗಶ್ಚ ದುಹಿತಾ ಕೃಪಣಂ ಪರಂ ॥ ೩೨೧ ॥

ತಸ್ಮಾದೇತೈರಧಿಕ್ಷಿಪ್ತಃ ಸಹೋನ್ನಿತ್ಯಮಸಜ್ವರಃ ।
ಗೃಹಧರ್ಮರತೋ ವಿದ್ವಾನ್ಧರ್ಮನಿಷ್ಠೋ ಜಿತಕ್ಲಮಃ ॥ ೩೨೨ ॥

ನಾರಭೇದ್ಬಹುಕಾರ್ಯಾಣಿ ಧರ್ಮವಾನ್ಕಿಂಚಿದಾಚರೇತ್ ।
ಗೃಹಸ್ಥವೃತ್ತಯಸ್ತಿಸ್ರಸ್ತಾಸಾಂ ನಿಃಶ್ರೇಯಸಂ ಪರಂ ॥ ೩೨೩ ॥

ಪರಸ್ಪರಂ ತಥೈವಾಹುಶ್ಚಾತುರಾಶ್ರಮಮೇವ ಚ ।
ಯೇ ಚೋಕ್ತಾ ನಿಯಮಾಸ್ತೇಷು ಸರ್ವಕಾರ್ಯಂ ಬುಭೂಷತಾ ॥

---

೩೧೯-೩೨೦. ಮುದುಕ, ಮಕ್ಕಳು, ರೋಗಿಗಳು, ಅಂತರಿಕ್ಷಕ್ಕೆ ಅಧಿಪತಿಗಳು. ಪುರೋಹಿತನು, ಋಷಿಲೋಕಕ್ಕೆ ಒಡೆಯನು. ಆಳುಗಳು ಸಾಧ್ಯರಲೋಕಕ್ಕೆ ಒಡೆಯರು. ವೈದ್ಯನು ಅಶ್ವಿನಿದೇವತೆಗಳ ಲೋಕಕ್ಕೆ ಒಡೆಯನು. ಸಹೋದರನು ವಸುಗಳ ಲೋಕಕ್ಕೆ ಒಡೆಯನು. ಹೆಂಡತಿಯು ಮರುತ್ತುಗಳ-ಲೋಕಕ್ಕೆ ಒಡೆಯಳು. ಮಗಳು ಅಪ್ಸರಸ್ಸುಗಳ ಮನೆಗೆ ಒಡೆಯಳು.

೩೨೧. ದೊಡ್ಡ ಅಣ್ಣನು ತಂದೆಗೆ ಸಮಾನನು. ಹೆಂಡತಿ ಮಕ್ಕಳು ತನ್ನ ಶರೀರವೇ. ಆಳುಗಳು ತನ್ನ ನೆರಳು. ಮಗಳು ತನ್ನಲ್ಲಿರುವ ಕೃಪೆಯು.

೩೨೨. ಇವರೊಡನೆ ಜಗಳವಾಡುತ್ತಿದ್ದರೆ ದೊಡ್ಡ ತೊಂದರೆಯನ್ನು ಅನುಭವಿಸುತ್ತಿರಬೇಕು. ಆದ್ದರಿಂದ ಗೃಹಸ್ಥನಾದವನು ಬುದ್ಧಿವಂತನಾಗಿ ಧರ್ಮವಲ್ಲಿದ್ದು ಕೊಂಡು ಕ್ಲೇಶಗಳನ್ನು ಸಹಿಸಿಕೊಂಡಿರಬೇಕು.

೩೨೩. ದೊಡ್ಡ ದೊಡ್ಡ ಕೆಲಸಗಳನ್ನು ಆರಂಭಿಸಬಾರದು. ಧರ್ಮವಲ್ಲಿದ್ದು ಕೊಂಡು ಸಣ್ಣ ಸಣ್ಣ ಕೆಲಸಗಳನ್ನು ಮಾಡುತ್ತಿರಬೇಕು. ಗೃಹಸ್ಥನಿಗಿರುವ ಜೀವನ ವೃತ್ತಿಗಳು ಕುಶೂಲಧಾನ್ಯ, ಕುಂಭೀಧಾನ್ಯ, ಕಾಪೋತಿಗಳೆಂಬ ಮೂರು. ಇವುಗಳಲ್ಲಿದ್ದರೆ ಮೋಕ್ಷವು ಲಭಿಸುತ್ತದೆ.

೩೨೪. ಗೃಹಸ್ಥನೂ ಭಿಕ್ಷುವೂ ಕೂಡ ಈ ಗೃಹಸ್ಥಧರ್ಮವನ್ನು ಸನ್ಯಾಸವೆಂದೇ ಹೇಳುತ್ತಾರೆ. ಈ ಗೃಹಸ್ಥಧರ್ಮದಲ್ಲಿ ಎಲ್ಲಾ ಕೆಲಸವನ್ನೂ ಮೇಲೆ ಹೇಳಿದ

ಕುಂಭಧಾನ್ಯೈರುಂಛಶಿಲೈಃ ಕಾಪೋತೀಂ ವೃತ್ತಿಮಾಸ್ಥಿತಾಃ ।
ಯಸ್ಮಿಂಶ್ಚೈತೇ ವಸಂತ್ಯಾರ್ಹಾಸ್ತದ್ರಾಷ್ಟ್ರಮಭಿವರ್ಧತೇ ॥ ೩೨೫ ॥

ಪೂರ್ವಾಪರಾನ್ದಶ ಪರಾನ್ಪುನಾತಿ ಚ ಪಿತಾಮಹಾನ್ ।
ಗೃಹಸ್ಥವೃತ್ತಿಮಾಸ್ಥಾಯ ವರ್ತತೇ ಯೋ ಗತವ್ಯಥಃ ॥ ೩೨೬ ॥

ಸ ಚಕ್ರಧರಲೋಕಾನಾಂ ಸಮಾನಾಂ ಪ್ರಾಪ್ನುಯಾದ್ಗತಿಂ ।
ಜಿತೇಂದ್ರಿಯಾಣಾಮಥವಾ ಗತಿರೇಷಾ ವಿಧೀಯತೇ ॥ ೩೨೭ ॥

ಸ್ವರ್ಗಲೋಕೋ ಗೃಹಸ್ಥಾನಾಂ ಪ್ರತಿಷ್ಠಾ ನಿಯತಾತ್ಮನಾಂ ।
ಬ್ರಹ್ಮಣಾಭಿಹಿತಾ ಶ್ರೇಣೀ ಹ್ಯೇಷಾ ಯಸ್ಯಾಃ ಪ್ರಮುಚ್ಯತೇ ॥ ೩೨೮ ॥

ದ್ವಿತೀಯಂ ಕ್ರಮಶಃ ಪ್ರಾಪ್ಯ ಸ್ವರ್ಗಲೋಕೇ ಮಹೀಯತೇ ।
ತೃತೀಯಮಪಿ ವಕ್ಷ್ಯಾಮಿ ವಾನಪ್ರಸ್ಥಾಶ್ರಮಂ ಶೃಣು ॥ ೩೨೯ ॥

---

ನಿಯಮಕ್ಕನುಸಾರವಾಗಿ ಮಾಡಿಕೊಂಡಿರಬೇಕು.

೩೨೫. ಕುಂಭಧಾನ್ಯ, ಉಂಛವೃತ್ತಿ, ಕಾಪೋತಿ ವೃತ್ತಿಗಳಲ್ಲಿದ್ದುಕೊಂಡಿರು ವವರಿರುವ ದೇಶವು ವೃದ್ಧಿಹೊಂದುತ್ತದೆ.

೩೨೬. ಗೃಹಸ್ಥವೃತ್ತಿಯಲ್ಲಿದ್ದುಕೊಂಡು ಈ ರೀತಿ ಧರ್ಮವನ್ನಾಚರಿಸು ವವನು ಹಿಂದಿನ ಏಳು, ಮುಂದಿನ ಏಳು, ತನ್ನೊಡನೆ ಏಳು ತಲೆಗಳನ್ನು ಸ್ವರ್ಗಕ್ಕೆ ಒಯ್ಯುತ್ತಾನೆ.

೩೨೭. ಇಂತಹವನು ವಿಷ್ಣುಲೋಕವನ್ನೂ, ಇದಕ್ಕೆ ಸಮನಾದ ಲೋಕ ವನ್ನೂ ಹೊಂದುತ್ತಾನೆ. ಜಿತೇಂದ್ರಿಯರಿಗೆ ಬರುವ ಗತಿ ಈತನಿಗೆ ಬರುತ್ತದೆ.

೩೨೮. ಇಂದ್ರಿಯನಿಗ್ರಹವುಳ್ಳ ಗೃಹಸ್ಥರಿಗೆ ಸ್ವರ್ಗಲೋಕವು ಲಭಿಸುತ್ತದೆ. ಈರೀತಿಯು ಬ್ರಹ್ಮನಿಂದಲೇ ಹೇಳಲ್ಪಟ್ಟಿದೆ. ಹೀಗೆ-ಮಾಡಿದವನು ಪಾಪದಿಂದ ಪಾರಾಗುತ್ತಾನೆ.

೩೨೯-೩೩೦. ಬ್ರಹ್ಮಚರ್ಯಾಶ್ರಮವಾದ ನಂತರ ಈ ರೀತಿಯಾದ ಗಾರ್ಹಸ್ಥ್ಯ ವನ್ನು ಹೊಂದಿ ಧರ್ಮವನ್ನಾಶ್ರಯಿಸಿದವನು ಸ್ವರ್ಗಲೋಕವನ್ನು ಹೊಂದುತ್ತಾನೆ.

ಗೃಹಸ್ಥಸ್ತು ಯದಾ ಪಶ್ಯೇದ್ವಲೀಪಲಿತಮಾತ್ಮನಃ ।
ಅಪತ್ಯಸ್ಯೈವ ಚಾಪತ್ಯಂ ತದಾರಣ್ಯಂ ಸಮಾಶ್ರಯೇತ್ ॥ ೩೩೦ ॥

ಗೃಹಸ್ಥವ್ರತಖಿನ್ನಾನಾಂ ವಾನಪ್ರಸ್ಥಾಶ್ರಮೌಕಸಾಂ ।
ಶ್ರೂಯತಾಂ ಭೀಷ್ಮ ಭದ್ರಂ ತೇ ಸರ್ವಲೋಕಾಶ್ರಯಾತ್ಮನಾಂ ॥ ೩೩೧ ॥

ದೀಕ್ಷಾಪೂರ್ವಂ ನಿವೃತ್ತಾನಾಂ ಪುಣ್ಯದೇಶನಿವಾಸಿನಾಂ ।
ಪ್ರಜ್ಞಾಬಲವತಾಂ ಪುಂಸಾಂ ಸತ್ಯಶೌಚಕ್ಷಮಾವತಾಂ ॥ ೩೩೨ ॥

ತೃತೀಯಮಾಯುಷೋ ಭಾಗಂ ವಾನಪ್ರಸ್ಥಾಶ್ರಮೇ ವಸೇತ್ ।
ತಾನೇವಾಗ್ನೀನ್ಪರಿಚರೇದ್ಯಜಮಾನೋ ದಿವೌಕಸಃ ॥ ೩೩೩ ॥

ನಿಯತೋ ನಿಯತಾಹಾರೋ ವಿಷ್ಣುಭಕ್ತಿಪ್ರಸಕ್ತಿಮಾನ್ ।
ತದಗ್ನಿಹೋತ್ರಮಾತ್ರಾಣಿ ಯಜ್ಞಾಂಗಾನಿ ಚ ಸರ್ವಶಃ ॥ ೩೩೪ ॥

---

ಅಲ್ಲಿ ಸುಖಿಸುತ್ತಾನೆ. ಮೂರನೆಯದು ವಾನಪ್ರಸ್ಥಾಶ್ರಮವು. ಅದರ ವಿಷಯವನ್ನು ಹೇಳುತ್ತೇನೆ, ಕೇಳು. ಗೃಹಸ್ಥನಾಗಿರುವವನು ಧರ್ಮಗಳನ್ನು ಆಚರಿಸುತ್ತಿದ್ದು ತಲೆ ನರೆಯೂ, ಮುಖದಲ್ಲಿ ಸುಕ್ಕೂ ಬಂದು, ಮಗನಿಗೆ ಮಗನಾದುದನ್ನು ಕಂಡು, ವಾನಪ್ರಸ್ಥಾಶ್ರಮವನ್ನು ಆಶ್ರಯಿಸಬೇಕು.

೩೩೧. ಗೃಹಸ್ಥವ್ರತದಲ್ಲಿ ಕಷ್ಟಪಟ್ಟು ವಾನಪ್ರಸ್ಥಾಶ್ರಮವನ್ನು ಹೊಂದಿ ಎಲ್ಲರಿಗೂ ಆಶ್ರಯವಾಗಿರುವವರ ವಿಷಯವನ್ನು ಹೇಳುತ್ತೇನೆ, ಕೇಳು.

೩೩೨-೩೩೩. ದೀಕ್ಷೆಯನ್ನು ಹೊಂದಿ ವಾನಪ್ರಸ್ಥಾಶ್ರಮಕ್ಕೆ ಇಳಿದ ಬುದ್ಧಿಬಲವುಳ್ಳ ಸತ್ಯ, ಶುಚಿ, ಕ್ಷಮೆಗಳುಳ್ಳವರು ವಾನಪ್ರಸ್ಥಾಶ್ರಮದಲ್ಲಿದ್ದು ತಮ್ಮ ಆಯುಸ್ಸಿನ ಮೂರನೆಯ ಭಾಗವನ್ನು ಕಳೆಯಬೇಕು. ಆಗ ಗೃಹಸ್ಥಾಶ್ರಮದಲ್ಲಿದ್ದ ಅಗ್ನಿಗಳನ್ನೇ ಇಟ್ಟುಕೊಂಡಿರಬೇಕು. ಹೋಮಾದಿಗಳನ್ನು ದೇವತೆಗಳಿಗೆ ಮಾಡುತ್ತಿರಬೇಕು.

೩೩೪. ಅದರಲ್ಲಿ ನಿಯಮದಿಂದಿದ್ದು ನಿಯತವಾದ ಆಹಾರವನ್ನು ತೆಗೆದುಕೊಳ್ಳುತ್ತಾ ವಿಷ್ಣುವಿನಲ್ಲಿ ಭಕ್ತಿಯಿಟ್ಟು ಆ ಅಗ್ನಿಯಲ್ಲಿ ಹೋಮಮಾಡುತ್ತಾ ಯಜ್ಞಾಂಗವಾದುವುಗಳೆಲ್ಲವನ್ನೂ ಮಾಡುತ್ತಲೇ ಇರಬೇಕು.

ಅಕೃಷ್ಟಂ ವೈ ವ್ರೀಹಿಯವಂ ನೀವಾರಂ ವಿಘಸಾನಿ ಚ ।
ಹವೀಂಷಿ ಸಂಪ್ರಯುಂಜೀತ ಮಾಸೇಷ್ವತ್ರಾಪಿ ಪಂಚಸು ॥ ೩೩೫ ॥

ವಾನಪ್ರಸ್ಥಾಶ್ರಮೇ ತೇಷಾಂ ಚತಸ್ರೋ ವೃತ್ತಯಃ ಸ್ಮೃತಾಃ ।
ಸದ್ಯಃ ಪ್ರಭಕ್ಷಕಾಃ ಕೇಚಿತ್ಕೇಚಿನ್ಮಾಸಿಕಸಂಚಯಾಃ ॥ ೩೩೬ ॥

ವಾರ್ಷಿಕಾಃ ಸಂಚಯಾಃ ಕೇಚಿತ್ಕೇಚಿದ್ದ್ವಾದಶವಾರ್ಷಿಕಾಃ ।
ಕುರ್ವಂತ್ಯತಿಥಿಪೂಜಾರ್ಥಂ ಯಜ್ಞತಂತ್ರಾರ್ಥಮೇವ ಚ ॥ ೩೩೭ ॥

ಅಭ್ರಾವಕಾಶಾ ವರ್ಷಾಸು ಹೇಮಂತೇ ಜಲಸಂಶ್ರಯಾಃ
ಗ್ರೀಷ್ಮೇ ಪಂಚಾಗ್ನಿತಪಸಃ ಶರದ್ಯಮೃತಭೋಜನಾಃ ॥ ೩೩೮ ॥

ಭೂಮೌ ವಿಪರಿವರ್ತಂತೇ ತಿಷ್ಠಂತಿ ಪ್ರಪದೈರಪಿ ।
ಸ್ಥಾನಾಸನೇ ಚ ವರ್ತಂತೇ ವಸನೇಷ್ವಪಿ ಸಂಸ್ಥಿತೇ ॥ ೩೩೯ ॥

---

೩೩೫. ಉತ್ತು ಬೆಳೆಯುವ ಭತ್ತ, ಯವಗಳನ್ನೂ, ನೀವಾರಧಾನ್ಯ (ಶೂಕ ಧಾನ್ಯ) ವನ್ನೂ ತಂದು ಯಜ್ಞಕ್ಕೆ ಉಪಯೋಗಿಸಿ ಹವಿಸ್ಸುಗಳನ್ನು ಐದು ತಿಂಗಳು ಗಳಲ್ಲಿಯೂ ಕೊಡುತ್ತಿರಬೇಕು.

೩೩೬-೩೩೭. ವಾನಪ್ರಸ್ಥಾಶ್ರಮದಲ್ಲಿರುವವರಿಗೆ ನಾಲ್ಕು ವಿಧವಾದ ಜೀವನ ವೃತ್ತಿಗಳಿವೆ. ಕೆಲವು ಆಹಾರಗಳು ಆಗಲೇ ತಿನ್ನತಕ್ಕವುಗಳು. ಮತ್ತೆ ಕೆಲವು ಒಂದು ತಿಂಗಳವರೆಗೂ ನಿಲ್ಲುತ್ತವೆ. ಇನ್ನು ಕೆಲವು ಒಂದು ವರ್ಷದವರೆಗೂ ಇರುತ್ತವೆ. ಮತ್ತು ಕೆಲವು ಹನ್ನೆರಡು ವರ್ಷಗಳವರೆಗೂ ಇರುತ್ತವೆ. ಅವೆಗಳೆಲ್ಲವನ್ನೂ ಕಾಲಾನುಗುಣವಾಗಿ ಅತಿಥಿಪೂಜೆಗೂ ಯಜ್ಞಕ್ಕೂ ಉಪಯೋಗಿಸಲು ಸಂಗ್ರಹಿಸಬೇಕು.

೩೩೮. ಮಳೆಗಾಲದಲ್ಲಿ ಹೊದ್ದಿಕೆಯಿಲ್ಲದೆಯೂ, ಹಿಮಂತಋತುವಿನಲ್ಲಿ ನೀರಿನಲ್ಲಿದ್ದು ತಪಸ್ಸುಮಾಡುತ್ತಲೂ, ಬೇಸಗೆಯಲ್ಲಿ ಪಂಚಾಗ್ನಿಗಳ ಮಧ್ಯದಲ್ಲಿ ತಪಸ್ಸು ಮಾಡುತ್ತಲೂ, ಶರತ್ಕಾಲದಲ್ಲಿ ನೀರನ್ನು ಕುಡಿಯುತ್ತಲೂ ವಿಶೇಷ ರೀತಿಯಿಂದಿರಬೇಕು.

೩೩೯. ಅವರು ಬೆಟ್ಟಬರೆಗಳಿದ್ದರೂ ಕೂಡ ನೆಲದ ಮೇಲೆ ಮಲಗಿ ಹೊರಳಾಡುತ್ತಾರೆ. ತುದಿಗಾಲಿನಲ್ಲಿ ನಿಂತುಕೊಂಡಿರುತ್ತಾರೆ. ಒಂದೇ ಸ್ಥಾನದಲ್ಲಿರುತ್ತ ಆಸನಗಳನ್ನು ಹಾಕುತ್ತಿರುತ್ತಾರೆ.

ದಂತೋಲೂಖಲಿನಃ ಕೇಚಿದಶ್ಮಕುಟ್ಟಾಸ್ತಥಾಪರೇ ।
ಶುಕ್ಲಪಕ್ಷೇ ಪಿಬಂತ್ಯೇಕೇ ಯವಾಗೂಂ ಕ್ವಥಿತಾಂ ಕ್ವಚಿತ್　॥ ೩೪೦ ॥

ಕೃಷ್ಣಪಕ್ಷೇ ಪಿಬಂತ್ಯೇಕೇ ಭುಂಜತೇ ಚ ಯಥಾಗಮಂ ।
ಮೂಲೈರೇಕೇ ಫಲೈರೇಕೇ ಪುಷ್ಪೈರೇಕೇ ಕೃತವ್ರತಾಃ　॥ ೩೪೧ ॥

ವರ್ತಯಂತೇ ಯಥಾನ್ಯಾಯಂ ವೈಖಾಸನ ಇವ ವ್ರತಾಃ ।
ಏತಾಶ್ಚಾನ್ಯಾಶ್ಚ ವಿವಿಧಾ ದೀಕ್ಷಾಸ್ತೇಷಾಂ ಮನೀಷಿಣಾಂ　॥ ೩೪೨ ॥

ಚತುರ್ಥಶ್ಚೌಪನಿಷದೋ ಧರ್ಮಃ ಸಾಧಾರಣೋ ಮತಃ ।
ವಾನಪ್ರಸ್ಥೋ ಗೃಹಸ್ಥಶ್ಚ ಸ ತತೋಽನ್ಯಃ ಪ್ರವರ್ತತೇ　॥ ೩೪೩ ॥

ತಸ್ಮಿನ್ನೇವ ಯುಗೇ ತಾತ ವಿಪ್ರೈಃ ಸರ್ವಾರ್ಥದರ್ಶಿಭಿಃ ।
ಅಗಸ್ತ್ಯಶ್ಚ ಸಪ್ತರ್ಷಯೋ ಮಧುಚ್ಛಂದಾ ಗವೇಷಣಃ　॥ ೩೪೪ ॥

---

೩೪೦-೩೪೧. ಕೆಲವರು ಕಾಳುಗಳನ್ನು ಹಲ್ಲುಗಳಿಂದಲೇ ಬಿಡಿಸುತ್ತಾರೆ ಕೆಲವರು ಕಲ್ಲಿನಲ್ಲಿ ಕುಟ್ಟಿ ಬಿಡಿಸುತ್ತಾರೆ. ಕೆಲವರು ಶುಕ್ಲಪಕ್ಷದಲ್ಲಿ ಗಂಜಿಯನ್ನು ಕುದಿಸಿ ಕುಡಿಯುತ್ತಾರೆ. ಮತ್ತೆ ಕೆಲವರು ಕೃಷ್ಣಪಕ್ಷದಲ್ಲಿ ಶಾಸ್ತ್ರದಲ್ಲಿ ಹೇಳಿರುವಂತೆ ಊಟಮಾಡುತ್ತಾರೆ. ಕೆಲವರು ಗೆಡ್ಡೆಗೆಣಸುಗಳನ್ನೂ, ಮತ್ತೆ ಕೆಲವರು ಹಣ್ಣುಗಳನ್ನೂ' ಮತ್ತೆ ಕೆಲವರು ಹೂಗಳನ್ನೂ ತಿಂದು ವ್ರತಸ್ಥರಾಗಿರುತ್ತಾರೆ.

೩೪೨. ಕೆಲವರು ವೈಖಾನಸರಂತೆ ವ್ರತವನ್ನು ಹೊಂದಿ ಇರುತ್ತಾರೆ. ಇವೂ, ಇನ್ನೂ ಕೆಲವು ವ್ರತಗಳನ್ನೂ ಇವರು ಹೊಂದಿ ದೀಕ್ಷಾವಂತರಾಗುತ್ತಾರೆ.

೩೪೩. ನಾಲ್ಕು ಆಶ್ರಮಗಳವರಿಗೂ ಉಪನಿಷತ್ತಿನ ಧರ್ಮವು ಸಾಧಾರಣವಾದುದು. ವಾನಪ್ರಸ್ಥನೂ, ಗೃಹಸ್ಥನೂ ಈ ಉಪನಿಷತ್ತನಂತೆ ನಡೆಯುತ್ತಾರೆ. ಅವರಿಗೆ ಬೇರೆ ಧರ್ಮಗಳೂ ಇವೆ. ವೈಖಾನಸರು ಉಪನಿಷತ್ತಿನ ರೀತಿಯಿಂದಲೇ ನಡೆಯುತ್ತಾರೆ. ಎಲ್ಲಾ ವಿಷಯವನ್ನೂ ಬಲ್ಲ ಬ್ರಾಹ್ಮಣರು ಆ ಯುಗದಲ್ಲಿಯೇ ಹೀಗೆ ನಿರ್ಣಯಿಸಿದ್ದಾರೆ.

೩೪೪-೩೪೬. ಅಗಸ್ತ್ಯ, ಸಪ್ತ ಋಷಿಗಳು, ಮದುಚ್ಛಂದ, ಗವೇಷಣ, ಸಾಂಕೃತಿ, ಸುದಿವ, ಭಾಂಡಿ, ಯವಪ್ರೋಥ, ಕೃತಶ್ರಮ, ಅಹೋವೀರ್ಯ, ಕಾಮ್ಯ, ಸ್ಥಾಣು,

ಸಾಂಕೃತಿಃ ಸುದಿನ್ನೋ ಭಾಂಡಿರ್ಯವಪ್ರೋಥಃ ಕೃತಶ್ರಮಃ ।
ಅಹೋವೀರ್ಯಸ್ತಥಾ ಕಾಮ್ಯಃ ಸ್ಥಾಣುರ್ಮೇಧಾತಿಥಿರ್ಬುಧಃ ॥ ೩೪೫ ॥

ಮನೋವಾಕಃ ಶಿನೀವಾಕಃ ಶೂನ್ಯಪಾಲೋಽಕೃತಶ್ರಮಃ ।
ಏತೇ ಧರ್ಮಸುವಿದ್ವಾಂಸಸ್ತತಃ ಸ್ವರ್ಗಮುಪಾಗಮನ್ ॥ ೩೪೬ ॥

ಏತೇ ಪ್ರತ್ಯಕ್ಷಧರ್ಮಾಣಸ್ತಥಾನ್ಯಾ ಯಾ ವರಾಂಗನಾಃ ।
ಋಷೀಣಾಮುಗ್ರತಪಸಾಂ ಧರ್ಮನೈಪುಣ್ಯದರ್ಶಿನಾಂ ॥ ೩೪೭ ॥

ಅಪಾಸ್ಯೋಪರತಾ ಮಾಯಾಂ ಬ್ರಾಹ್ಮಣಾ ವನಮಾಶ್ರಿತಾಃ ।
ಅನಕ್ಷತ್ರಾಸ್ತಥಾಧೃಷ್ಯಾ ದೃಶ್ಯಂತೇ ಜ್ಯೋತಿಷಾಂ ಗಣಾಃ ॥ ೩೪೮ ॥

ಜರಯಾ ತು ಪರಿದ್ಯೂನಾ ವ್ಯಾಧಿನಾ ಪರಿಪೀಡಿತಾಃ ।
ಚತುರ್ಥಂ ಸ್ವಾಶ್ರಮಂ ಶೇಷಂ ವಾನಪ್ರಸ್ಥಾಶ್ರಮಾದ್ಯಯುಃ । ॥ ೩೪೯ ॥

ಸದ್ವಪುಷ್ಕಾರಿ ನಿರ್ವಾಪ್ಯ ಸರ್ವಾನ್ದೇವಾನ್ಸದಕ್ಷಿಣಾಂ ।
ಆತ್ಮಯಾಜೀ ಸೋಽಪರತಿರಾತ್ಮಕ್ರೀಡಾರ್ಥಸಂಶ್ರಯಃ ॥ ೩೫೦ ॥

---

ಮೇಧಾತಿಥಿ, ಬುಧ, ಮನೋವಾಕ, ಶಿನೀವಾಕ, ಶೂನ್ಯಪಾಲ, ಅಕೃತಶ್ರಮ, ಇವ ರೆಲ್ಲರೂ ಧರ್ಮದಲ್ಲಿ ವಿದ್ವಾಂಸರು. ಅದರಿಂದಲೇ ಸ್ವರ್ಗವನ್ನು ಹೊಂದಿದರು.

೩೪೭-೩೪೮. ಉಗ್ರತಪಸ್ಸುಳ್ಳ ಧರ್ಮದಲ್ಲಿ ನಿಪುಣರಾದ ಋಷಿಗಳಲ್ಲಿ ಇವರೇ ಪ್ರತ್ಯಕ್ಷ ಧರ್ಮವನ್ನು ಅನುಸರಿಸುತ್ತಿದ್ದವರು. ಅಲ್ಲದೆ ಇವರಲ್ಲಿ ಅನೇಕ ಮಂದಿ ಸ್ತ್ರೀಯರೂ ಇದ್ದಾರೆ. ಈ ಬ್ರಾಹ್ಮಣರು ವೈರಾಗ್ಯವನ್ನು ಹೊಂದಿ ಕಾಡಿಗೆ ಹೋಗಿ ಮಾಯೆಯನ್ನು ಭೇದಿಸಿರುವರು. ಸತ್ತನಂತರ ನಕ್ಷತ್ರಕ್ಕಿಂತ ಬೇರೆಯಾದ ಉತ್ತಮ ವಾದ ಜ್ಯೋತಿರ್ಗಣಗಳಾಗಿ ಕಾಣುತ್ತಿದ್ದಾರೆ.

೩೪೯. ಅವರೆಲ್ಲರೂ ಮುಪ್ಪಿನಿಂದ ತಿರಸ್ಕರಿಸಲ್ಪಟ್ಟು ರೋಗದಿಂದ ಪೀಡಿತ ರಾಗಿ ವಾನಪ್ರಸ್ಥಾಶ್ರಮದಿಂದ ನಾಲ್ಕನೆಯದಾದ ಸನ್ಯಾಸಾಶ್ರಮವನ್ನು ಹೊಂದಿದರು.

೩೫೦-೩೫೧. ಮನುಷ್ಯನು ಒಳ್ಳೆಯ ದೇಹವನ್ನು ಕೊಡುವ ದೇವತೆಗಳನ್ನು ದಕ್ಷಿಣೆಯೊಡನೆ ಪೂಜಿಸಿ, ಆತ್ಮಯಜ್ಞವನ್ನು ಮಾಡುತ್ತ ಸೌಖ್ಯವನ್ನು ಹೊಂದಿ, ಆತ್ಮದ ಕ್ರೀಡೆಯಲ್ಲಿಯೇ ಇದ್ದುಕೊಂಡಿದ್ದು, ಆಹಿತಾಗ್ನಿಯಾಗಿ ಸರ್ವಸಂಗವನ್ನೂ

ಆತ್ಮನ್ಯಾಗ್ನಿಂ ಸಮಾಧಾಯ ತ್ಯಕ್ತ್ವಾ ಸರ್ವಪರಿಗ್ರಹಂ ।
ಸದ್ಯಶಾಂಶ್ಚ ಯಜೇದ್ಯಜ್ಞಾನಿಷ್ಟಿಂ ಚೈವೇಹ ಸರ್ವದಾ ॥ ೩೫೧ ॥

ಸದೈವ ಯಾಜಿನಾಂ ಯಜ್ಞಮಾತ್ಮನೀಜ್ಯಾ ಪ್ರವರ್ತತೇ ।
ತ್ರೀಂಶ್ಚೈವಾಗ್ನೀನ್ಯಜೇತ್ಸಮ್ಯಗಾತ್ಮನ್ಯೇವಾತ್ಮನಾ ಕ್ಷಣಾತ್ ॥ ೩೫೨ ॥

ಪ್ರಾಪ್ನುಯಾದ್ಯೇನ ವಾ ಯಚ್ಚ ತತ್ಪ್ರಾಶ್ನೀಯಾದಕುತ್ಸಯನ್ ।
ಕೇಶಲೋಮನಖಾನ್ಯಸ್ಯ ವಾನಪ್ರಸ್ಥೋ ಮುನಿಸ್ತತಃ ॥ ೩೫೩ ॥

ಆಶ್ರಮಾದಾಶ್ರಮಂ ಸದ್ಯಃ ಪೂತೋ ಗಚ್ಛತಿ ಕರ್ಮಭಿಃ ।
ಅಭಯಂ ಸರ್ವಭೂತೇಭ್ಯೋ ಯೋ ದತ್ತ್ವಾ ಪ್ರವ್ರಜೇದ್ದ್ವಿಜಃ ।
ಲೋಕಾಸ್ತೇಜೋಮಯಾಸ್ತಸ್ಯ ಪ್ರೇತ್ಯ ಚಾನನ್ತ್ಯಮಶ್ನುತೇ ॥ ೩೫೪ ॥

---

ಬಿಟ್ಟು, ತವಗೆ ಸರಿಯಾದ ಯಜ್ಞಗಳನ್ನೂ ಇಷ್ಟಿಗಳನ್ನೂ ಯಾವಾಗಲೂ ಮಾಡುತ್ತ ಬರಬೇಕು.

೩೫೨. ಯಾವಾಗಲೂ ಯಾಗಮಾಡುವವರ ಯಜ್ಞವನ್ನು ನಿರ್ವಹಿಸುತ್ತ ತಾನೂ ಯಾಗಮಾಡುತ್ತಿರಬೇಕು. ದಕ್ಷಿಣಾಗ್ನಿ, ಗಾರ್ಹಪತ್ಯ ಆಹವನೀಯಗಳು ಮೂರನ್ನೂ ಪೂಜಿಸುತ್ತಿರಬೇಕು. ಎಂದರೆ ಯಾಗಾದಿಗಳಲ್ಲಿ ಎಂದರ್ಥ. ಕ್ಷಣಕಾಲ ದಲ್ಲಿ ಆತ್ಮನಲ್ಲಿ ಅಗ್ನಿಗಳನ್ನು ಸೇರಿಸಿಕೊಂಡು ಆತ್ಮನಿಂದಲೇ ಪೂಜಿಸಬೇಕು.

೩೫೩. ತಿನ್ನುವುದಕ್ಕೆ ಯೋಗ್ಯವಾದುದನ್ನು ಯಾವನು ಏನು ಕೊಟ್ಟರೂ ಅದನ್ನು ನಿಂದಿಸದೆ ತಿನ್ನಬೇಕು. ಕೂದಲು, ರೋಮ, ಉಗುರುಗಳಿರಬೇಕು. ವಾನಪ್ರಸ್ಥಮುನಿಯು ಈ ರೀತಿ ಇರಬೇಕು.

೩೫೪. ಈರೀತಿ ಧರ್ಮವನ್ನು ಸಾಧಿಸುತ್ತ ವಾನಪ್ರಸ್ಥಾಶ್ರಮದಿಂದ ಸನ್ಯಾಸಕ್ಕೆ ಹೋಗುತ್ತಾನೆ. ಹೋಗುವಾಗ ಸರ್ವಭೂತಗಳಿಗೂ ಅಭಯವನ್ನು ಕೊಡು ತ್ತಾನೆ. ಅಂತಹ ಸನ್ಯಾಸಿಗೆ ತೇಜೋಮಯವಾದ ಲೋಕವು ಸಿಗುತ್ತದೆ. ಅಲ್ಲಿ ಅನಂತಸೌಖ್ಯವನ್ನು ಅನುಭವಿಸುತ್ತಾನೆ.

ಸುಶೀಲವೃತ್ತೋ ವ್ಯಪನೀತಕಲ್ಮಷೋ
ನ ಚೇಹ ನಾಮುತ್ರ ಚ ರಂತುಮೀಹತೇ ।
ಅರೋಷಮೋಹೋ ಗತಸಂಧಿವಿಗ್ರಹಃ
ಸ ಚೇಮುದಾಸೀನವದಾತ್ಮಚಿಂತಯಾ ॥ ೩೫೫ ॥

ಯಮೇಷು ಚೈವಾನ್ಯಗತೇಷು ಸರ್ವಥಾ
ಸ್ವಶಾಸ್ತ್ರಶೂನ್ಯೋ ಹೃದಿ ನಾತ್ರವಿಭ್ರಮಃ ।
ಭವೇದ್ಯಥೇಷ್ಟಾ ಗತಿರಾತ್ಮಯಾಜಿನಿ
ನಿಃಸಂಶಯಂ ಧರ್ಮಪರೇ ಜಿತೇಂದ್ರಿಯೇ ॥ ೩೫೬ ॥

ಅತಃ ಪರಂ ಶ್ರೇಷ್ಠಮತೀವ ಸದ್ಗುಣೈ-
ರಧಿಷ್ಠಿತಂ ತ್ರೀನತಿವರ್ತ್ಯ ಚಾಶ್ರಮಾನ್ ।
ಚತುರ್ಥಮುಕ್ತಂ ಪರಮಾಶ್ರಮಂ ಶೃಣು
ಪ್ರಸ್ತೂಯಮಾನಂ ಪರಮಂ ಪರಾಯಣಂ ॥ ೩೫೭ ॥

---

೩೫೫. ಅಂತಹ ಸನ್ಯಾಸಿಯು ಒಳ್ಳೆಯ ವೃತ್ತಿಯುಳ್ಳವನಾಗಿ ಪಾಪರಹಿತನಾಗಿ ಈ ಲೋಕದಲ್ಲಿಯಾಗಲಿ ಪರಲೋಕದಲ್ಲಿಯಾಗಲಿ ಸುಖಿಸಲು ಇಚ್ಛಿಸುವುದಿಲ್ಲ. ಕೋಪ ಮೋಹಗಳಿಲ್ಲದೆ, ಸ್ನೇಹ ಜಗಳಗಳಿಲ್ಲದೆ, ಯಾವಾಗಲೂ ಆತ್ಮಚಿಂತೆಯನ್ನು ಮಾಡುತ್ತ ಉದಾಸೀನನಾಗಿರುತ್ತಾನೆ.

೩೫೬. ಮತ್ತೊಬ್ಬನಿಗಾಗುವ ಸುಖದುಃಖ ದ್ವಂದ್ವಗಳಿಂದ ದುಃಖಪಡದೆ, ತನಗೂ ಶಾಸ್ತ್ರಕ್ಕೂ ಸಂಬಂಧವಲ್ಲದಂತಿದ್ದು, ತನ್ನಲ್ಲಿ ನಾನೆಂಬ ಅಹಂಕಾರವನ್ನು ಬಿಟ್ಟು ಇರುವನು. ಇಂತಹ ಧರ್ಮಾಸಕ್ತನಾದ, ಜಿತೇಂದ್ರಿಯನಾದ ಯತಿಗೆ, ಆತ್ಮವನ್ನು ಧ್ಯಾನಿಸಿ ಮುಕ್ತಿಹೊಂದುವವರಿಗೆ ಬರುವ ಇಷ್ಟವಾದ ಗತಿಯು ಬರುವುದು,

೩೫೭. ಈ ಮೂರು ಆಶ್ರಮಗಳನ್ನು ಕ್ರಮದಿಂದ ಅತಿಕ್ರಮಿಸಿ ಶ್ರೇಷ್ಠಗುಣದಿಂದ ಕೂಡಿದ ನಾಲ್ಕನೆಯದಾದ ಸನ್ಯಾಸವನ್ನು ಹೊಂದುತ್ತಾನೆ. ಆ ನಾಲ್ಕನೆಯದಾದ ನಾವು ಈಗ ಹೇಳುತ್ತಿರುವ ಉತ್ತಮವಾದ ಸನ್ಯಾಸಾಶ್ರಮದ ವಿಷಯವನ್ನು ಕೇಳು.

ಸ್ವಾಪ್ಯಸಂಸ್ಕಾರಮೇತಾಭ್ಯಾಮಾಶ್ರಮಾಭ್ಯಾಂ ತತಃ ಪರಂ ।
ಯತ್ಕಾರ್ಯಂ ಪರಮಂ ತೀರ್ಥಂ ತತ್ತ್ವಮೇಕಮನಾಃ ಶೃಣು ॥ ೩೫೮ ॥

ಕಾಷಾಯಂ ಧಾರಯಿತ್ವಾ ತು ಶ್ರೇಣಿಸ್ಥಾನೇಷು ಚ ತ್ರಿಷು ।
ಪ್ರವ್ರಜೇಚ್ಚ ಪರಂ ಸ್ಥಾನಂ ಪಾರಿವ್ರಾಜ್ಯಮನುತ್ತಮಂ ॥ ೩೫೯ ॥

ತದ್ಭಾವನೇನ ಸಂನ್ಯಸ್ಯ ವರ್ತನಂ ಶ್ರೂಯತಾಂ ತಥಾ ।
ಏಕ ಏವ ಚರೇದ್ಧರ್ಮಂ ಸಿದ್ಧ್ಯರ್ಥಮಸಹಾಯವಾನ್ ॥ ೩೬೦ ॥

ಏಕಶ್ಚರತಿ ಯಃ ಪಶ್ಯನ್ ಜಹಾತಿ ನ ಚ ಹೀಯತೇ ।
ಅನಗ್ನಿರನಿಕೇತಸ್ತು ಗ್ರಾಮಮನ್ನಾರ್ಥಮಾಶ್ರಯೇತ್ ॥ ೩೬೧ ॥

ಅಶ್ವಸ್ತನವಿಧಾನಃ ಸ್ಯಾನ್ಮುನಿರ್ಭಾವಸಮನ್ವಿತಃ ।
ಲಘ್ವಾಶೀ ನಿಯತಾಹಾರಃ ಸಕೃದನ್ನಂ ನಿಷೇವಯೇತ್ ॥ ೩೬೨ ॥

---

೩೫೮. ಬ್ರಹ್ಮಚಾರಿ, ಗೃಹಸ್ಥಾಶ್ರಮಗಳಿಂದ ಸಂಸ್ಕಾರವನ್ನು ಹೊಂದಿ ಅನಂತರ ಏನು ಮಾಡಬೇಕೆಂಬುದನ್ನು ಒಂದೇ ಮನಸ್ಸಿನಿಂದ ಕೇಳು.

೩೫೯. ಕಾಷಾಯ ಬಟ್ಟೆಯನ್ನು ಧರಿಸಿ ಮನೋವಾಕ್ಕಾಯಗಳಿಂದ ಬೇರೇ ಸ್ಥಾನವನ್ನು ಕುರಿತು ಯೋಚಿಸಿ ಸನ್ಯಸ್ತನಾಗಬೇಕು (ಹೋಗಬೇಕು) ಇದೇ ಉತ್ತಮವಾದ ಪಾರಿವ್ರಾಜಕವು.

೩೬೦. ವೈರಾಗ್ಯಭಾವದಿಂದ ಎಲ್ಲವನ್ನೂ ಬಿಟ್ಟು ನಡೆಯುವಿಕೆಯೇ ಸಂನ್ಯಾಸವು. ಸಿದ್ಧಿಹೊಂದಲು ಒಬ್ಬೊಂಟಿಗನಾಗಿ ಮತ್ತೊಬ್ಬರನ್ನು ಸೇರಿಸಿಕೊಳ್ಳದೆ ಧರ್ಮವನ್ನು ಆಚರಿಸಬೇಕು.

೩೬೧. ಎಲ್ಲವನ್ನೂ ಯೋಚಿಸುತ್ತ ಒಬ್ಬನೇ ಧರ್ಮವನ್ನಾಚರಿಸುತ್ತಿರಬೇಕು. ಅದರಿಂದ ಪತಿತನಾಗಬಾರದು. ಅಗ್ನಿಯನ್ನೂ ಮನೆಯನ್ನೂ ಬಿಟ್ಟುಬಿಡಬೇಕು. ಅನ್ನಕ್ಕೆ ಮಾತ್ರ ಬರಬೇಕು.

೩೬೨. ಇದಕ್ಕೆ ಅಶ್ವಸ್ತನ ವಿಧಾನವೆಂದು ಹೆಸರು. ಬೇಗ ಊಟಮಾಡಬೇಕು. ನಿಯತವಾದ ಆಹಾರವಿರಬೇಕು. ದಿನಕ್ಕೆ ಒಂದೇ ಬಾರಿ ಊಟ ಮಾಡಬೇಕು.

ಕಪಾಲಂ ವೃಕ್ಷಮೂಲಾನಿ ಕುಚೇಲಮಸಹಾಯತಾ ।
ಉಪೇಕ್ಷಾ ಸರ್ವಭೂತಾನಾಮೇತಾವದ್ಭಿಕ್ಷುಲಕ್ಷಣಂ ॥ ೩೬೩ ॥

ಯಸ್ಮಿನ್ವಾಚಃ ಪ್ರವಿಶಂತಿ ಕೂಪೇ ಪ್ರಾಪ್ತಾಃ ಸ್ತ್ರಿಯಾ ಇವ ।
ನ ವಕ್ತಾರಂ ಪುನರ್ಯಾಂತಿ ಸ ಕೈವಲ್ಯಾಶ್ರಮಂ ವಸೇತ್ ॥ ೩೬೪ ॥

ನೈವ ಪಶ್ಯೇನ್ನ ಶೃಣುಯಾನ್ನ ವಾಚ್ಯಂ ಜಾತು ಕಸ್ಯಚಿತ್ ।
ಬ್ರಾಹ್ಮಣಾನಾಂ ವಿಶೇಷಣ ನೈತದ್ಬ್ರೂಯಾತ್ಕಥಂಚನ ॥ ೩೬೫॥

ಯದ್ಬ್ರಾಹ್ಮಣಸ್ಯ ಕುಶಲಂ ತದೇವ ಸತತಂ ವದೇತ್ ।
ತೂಷ್ಣೀಮಾಸೀತ ನಿಂದಾಯಾಂ ಕುರ್ವನ್ಭೈಷಜ್ಯಮಾತ್ಮನಃ ॥ ೩೬೬ ॥

ಯೇನ ಪೂರ್ಣಮಿವಾಕಾಶಂ ಭವೇದೇಕೇನ ಸರ್ವದಾ ।
ಶೂನ್ಯಂ ಯೇನ ಸಮಾಕೀರ್ಣಂ ತಂ ದೇವಾ ಬ್ರಾಹ್ಮಣಂ ವಿದುಃ ॥ ೩೬೭ ॥

---

೩೬೩. ಕಪಾಲವನ್ನು ಹಿಡಿದಿರುವುದು, ಮರದ ಬುಡದಲ್ಲಿ ಇರುವುದು. ಕುಹರ ಬಟ್ಟೆಯನ್ನು ಹೊದೆದಿರುವುದು, ಒಬ್ಬನೇ ಇರುವುದು, ಎಲ್ಲಾ ಪ್ರಾಣಿಗಳಲ್ಲಿಯೂ ಪ್ರೀತಿಯಿಲ್ಲದೆ ಉದಾಸೀನನಾಗಿರುವುದು, ಇವು ಭಿಕ್ಷುಕನ ಲಕ್ಷಣಗಳು.

೩೬೪. ಭಾವಿಯಲ್ಲಿ ಬಿದ್ದ ಹೆಂಗಸು ಎಲ್ಲರಿಂದಲೂ ಬಯ್ಯಿಸಿಕೊಳ್ಳುತ್ತಾ ತಾನು ಒಂದು ಮಾತನ್ನಾಡಲೂ ಕೂಡ ಹೇಗೆ ಅಸಮರ್ಥಳಾಗಿರುವಳೋ, ಹಾಗೆ ಈತನು ತನ್ನನ್ನು ನಿಂದಿಸಿದರೂ ಹೊಗಳಿದರೂ ಆ ನಿಂದಿಸಿದವನಿಗೆ ಒಂದು ಮಾತನ್ನೂ ಆಡದಿರಬೇಕು. ಹೀಗಿದ್ದರೆ ಅವನು ಸನ್ಯಾಸಾಶ್ರಮದಲ್ಲಿರುವನು.

೩೬೫. ಒಂದನ್ನೂ ನೋಡಬಾರದು, ಕೇಳಲೂಬಾರದು, ಯಾವಾಗಲಾದರೂ ಕೂಡ ಬಯ್ಯಬಾರದು, ಬ್ರಾಹ್ಮಣರನ್ನು ಕಂಡರಂತೂ ಸ್ವಲ್ಪವೂ ಬಯ್ಯಲೇಬಾರದು ಹೇಳಲೂ ಬಾರದು.

೩೬೬. ಬ್ರಾಹ್ಮಣನಿಗೆ ಒಳ್ಳೆಯದನ್ನೇ ಯಾವಾಗಲೂ ಹೇಳುತ್ತಿರಬೇಕು. ಬಯ್ಯುತ್ತಿದ್ದರೆ ಅದು ತನ್ನ ಪಾಪಕ್ಕೆ ಶಿಕ್ಷೆಯೆಂದು ತಿಳಿದು ಸುಮ್ಮನೆ ಇರಬೇಕು.

೩೬೭. ಜನಗಳಿಲ್ಲದೆ ಇದ್ದರೂ ಯಾವನೊಬ್ಬನಿದ್ದರೆ ಆ ಜಾಗವು ಅನೇಕರಿದ್ದಂತೆ ಕಾಣುವುದೋ, ಬೇಕಾದಷ್ಟು ಜನರಿದ್ದರೂ ಯಾವನೊಬ್ಬನು ಇಲ್ಲದಿದ್ದರೆ ತುಂಬಿದಂತೆ ಕಾಣುವುದಿಲ್ಲವೋ ಅವನನ್ನು ಬ್ರಾಹ್ಮಣನೆಂದೆನ್ನುತ್ತಾರೆ.

ಯೇನ ಕೇನಚಿದಾಗಚ್ಛನ್ಯೇನ ಕೇನಚಿದಾಸಿತಃ ।
ಯತ್ರ ಕ್ವಚನ ಶಾಯೀ ಚ ತಂ ದೇವಾ ಬ್ರಾಹ್ಮಣಂ ವಿದುಃ ॥ ೩೬೮ ॥

ಅಹೇರಿವ ಗಣಾದ್ಭೀತಃ ಸೌಹೃದಾನ್ನರಕಾದಿವ ।
ಕೃಪಣಾದಿವ ನಾರೀಭ್ಯಸ್ತಂ ದೇವಾ ಬ್ರಾಹ್ಮಣಂ ವಿದುಃ ॥ ೩೬೯ ॥

ನ ಕ್ರುದ್ಧ್ಯೇನ್ನ ಪ್ರಹೃಷ್ಯೇತ ಮಾನಿತೋಽಮಾನಿತಃ ಸ್ವಯಂ ।
ಸರ್ವಭೂತೇಷ್ವಭಯದಸ್ತಂ ದೇವಾ ಬ್ರಾಹ್ಮಣಂ ವಿದುಃ ॥ ೩೭೦ ॥

ನಾಭಿನಂದೇತ ಮರಣಂ ನಾಭಿನಂದೇತ ಜೀವಿತಂ ।
ಕಾಲಮೇವ ಪ್ರತೀಕ್ಷೇತ ತಂ ದೇವಾ ಬ್ರಾಹ್ಮಣಂ ವಿದುಃ ॥ ೩೭೧ ॥

ಅನಭ್ಯಾಹತಚಿತ್ತಶ್ಚ ದಾಂತಶ್ಚಾಹತಧೀಸ್ತಥಾ ।
ನಿರ್ಮುಕ್ತಃ ಸರ್ವಪಾಪೇಭ್ಯೋ ನರೋ ಗಚ್ಛೇತ್ತತೋ ದಿವಂ ॥ ೩೭೨ ॥

---

೩೬೮. ಹೇಗೆ ಬೇಕಾದರೂ ಬರುವನು. ಹೇಗೆ ಬೇಕಾದರೂ ಯಾವುದ ಲ್ಲಾದರೂ ಕುಳಿತುಕೊಳ್ಳುವನು. ಎಲ್ಲಿ ಬೇಕಾದರೂ ಮಲಗುವನು. ಇಂತಹವನನ್ನು ದೇವತೆಗಳು ಬ್ರಾಹ್ಮಣನೆಂದು ತಿಳಿಯುತ್ತಾರೆ.

೩೬೯. ಗುಂಪನ್ನು ಕಂಡರೆ ಹಾವಿನಂತೆ ಹೆದರಬೇಕು. ಸ್ನೇಹಿತರನ್ನು ಕಂಡರೆ ನರಕದಂತೆ ಹೆದರಬೇಕು. ಹೆಂಗಸರನ್ನು ಕಂಡರೆ ಲೋಭಿಯಂತೆ ಹಿಂಜರಿಯ ಬೇಕು. ಅವನನ್ನು ದೇವತೆಗಳು ಬ್ರಾಹ್ಮಣನೆನ್ನುತ್ತಾರೆ.

೩೭೦. ಕೋಪಿಸಿಕೊಳ್ಳಬಾರದು, ಸಂತೋಷಪಡಬಾರದು, ಮಾನಾವಮಾನ ಗಳನ್ನು ಬಿಡಬೇಕು, ಯಾವ ಪ್ರಾಣಿಗೂ ಭೀತಿಯನ್ನುಂಟುಮಾಡಬಾರದು, ಅವನು ಬ್ರಾಹ್ಮಣನು.

೩೭೧. ಸಾವಿನಲ್ಲಾಗಲಿ ಬದುಕುವಿಕೆಯಲ್ಲಾಗಲಿ ಆಸೆಪಡಬಾರದು. ಕಾಲ ವನ್ನು ಕಾಯುತ್ತಿರಬೇಕು, ಅವನನ್ನು ಬ್ರಾಹ್ಮಣನೆಂದು ತಿಳಿಯುತ್ತಾರೆ.

೩೭೨. ಮನಸ್ಸು ಚಲಿಸದಿರಬೇಕು, ಶಾಂತನಾಗಿರಬೇಕು, ಮನಸ್ಸು ಎಲ್ಲವ ರಲ್ಲೂ ನೊಂದಿರಬೇಕು, ಹೀಗಿದ್ದರೆ ಪಾಪದಿಂದ ಬಿಡಲ್ಪಟ್ಟು ಸ್ವರ್ಗವನ್ನು ಹೊಂದು ತ್ತಾನೆ.

ಅಭಯಂ ಸರ್ವಭೂತೇಭ್ಯೋ ಭೂತಾನಾಮಭಯಂ ಯತಃ ।
ತಸ್ಯ ದೇಹವಿಮುಕ್ತಸ್ಯ ಭಯಂ ನಾಸ್ತಿ ಚ ಕುತ್ರಚಿತ್ ॥ ೩೭೩ ॥

ಯಥಾ ನಾಗಪದೇಽನ್ಯಾನಿ ಪದಾನಿ ಪದಗಾಮಿನಾಂ ।
ಸರ್ವಾಣ್ಯೇವಾವಲೀಯಂತೇ ತಥಾ ಜ್ಞಾನಾನಿ ಚೇತಸಿ ॥ ೩೭೪ ॥

ಏವಂ ಸರ್ವಮಹಿಂಸಾಯಾಂ ಧರ್ಮೋಽರ್ಥಶ್ಚ ಮಹೀಪತೇ ।
ಮೃತಃ ಸ ನಿತ್ಯಂ ಭವತಿ ಯೋ ಹಿಂಸಾಂ ಪ್ರತಿಪದ್ಯತೇ ॥ ೩೭೫ ॥

ಏವಂ ಸರ್ವಸಮಃ ಸಮ್ಯಗ್ಧೃತಿಮಾನ್ನಿಯತೇಂದ್ರಿಯಃ ।
ಶರಣ್ಯಃ ಸರ್ವಭೂತಾನಾಂ ಗತಿಮಾಪ್ನೋತ್ಯನುತ್ತಮಾಂ ॥ ೩೭೬ ॥

ಏವಂ ಪ್ರಜ್ಞಾನತೃಪ್ತಸ್ಯ ನಿರ್ಮಮಸ್ಯ ಮನೀಷಿಣಃ ।
ಸ ಮೃತ್ಯುರಧಿಕೋ ಭಾವಃ ಸೋಽಮೃತತ್ವಂ ಚ ಗಚ್ಛತಿ ॥ ೩೭೭ ॥

---

೩೭೩. ಯಾವ ಪ್ರಾಣಿಯಿಂದಲೂ ತಾನೂ ಹೆದರದೆ, ಯಾವ ಪ್ರಾಣಿಯನ್ನೂ ತಾನೂ ಹೆದರಿಸದೆ ಇದ್ದು ಮುಕ್ತನಾದವನಿಗೆ ಎಲ್ಲೂ ಭಯವೆಂಬುದೇ ಇಲ್ಲ.

೩೭೪. ಆನೆಯು ಹೋಗುತ್ತಿರುವಾಗ ಬೇರೆ ಪ್ರಾಣಿಗಳ ಹೆಜ್ಜೆಯು ಆ ಆನೆಯ ಹೆಜ್ಜೆಯಲ್ಲಿ ಹೇಗೆ ಮುಳುಗಿಹೋಗುತ್ತದೆಯೋ, ಹಾಗೆ ಎಲ್ಲಾ ಜ್ಞಾನವೂ ಮನಸ್ಸಿನಲ್ಲಿ ಅಡಗಿರಬೇಕು.

೩೭೫. ಎಲೈ ದೊರೆಯೇ, ಹೀಗೆ ಧರ್ಮವೂ, ಅರ್ಥವೂ ಅಹಿಂಸೆಯಲ್ಲಿ ಅಡಕವಾಗಿವೆ, ಯಾವನು ಹಿಂಸೆಯನ್ನು ಆಶ್ರಯಿಸುತ್ತಾನೋ ಅವನು ಸತ್ತವನೇ ಸರಿ.

೩೭೬. ಈರೀತಿ ಸರ್ವಸಮನಾಗಿ, ಧೈರ್ಯವಂತನಾಗಿ ಜಿತೇಂದ್ರಿಯನಾಗಿ ಸರ್ವ ಪ್ರಾಣಿಗಳಿಗೂ ರಕ್ಷಕನಾಗಿರುವವನು ಉತ್ತಮಗತಿಯನ್ನು ಹೊಂದುವನು.

೩೭೭. ಈ ರೀತಿ ಜ್ಞಾನದಿಂದ ತೃಪ್ತನಾಗಿ ಅಹಂಕಾರವಿಲ್ಲದೆ ಬುದ್ಧಿವಂತನಾಗಿರುವವನಿಗೆ ಮೃತ್ಯುವು ದೊಡ್ಡದಲ್ಲ. ಸತ್ತನಂತರ ಉತ್ತಮಗತಿಯನ್ನು ಹೊಂದುತ್ತಾನೆ

**ವಿಮುಕ್ತಃ ಸರ್ವಸಂಗೇಭ್ಯೋ ಮುನಿರಾಕಾಶವತ್‌ಸ್ಥಿತಃ ।**
**ವಿಷ್ಣುಮೇಧಕರಂ ಶಾಂತಂ ತಂ ದೇವಾ ಬ್ರಾಹ್ಮಣಂ ವಿದುಃ ॥ ೩೭೮ ॥**

**ಜೀವಿತಂ ಯಸ್ಯ ಧರ್ಮಾರ್ಥೇ ಧರ್ಮೋ ರತ್ಯರ್ಥಮೇವ ಚ ।**
**ಅಹೋರಾತ್ರಾಣಿ ಪುಣ್ಯಾರ್ಥಂ ತಂ ದೇವಾ ಬ್ರಾಹ್ಮಣಂ ವಿದುಃ ॥ ೩೭೯ ॥**

**ನಿರಾಶಿಷಮನಾರಂಭಂ ನಿರ್ನಮಸ್ಕಾರಮಸ್ತುತಿಂ ।**
**ಯೋಗೇನ ಕ್ಷೀಣಕರ್ಮಾಣಂ ತಂ ದೇವಾ ಬ್ರಾಹ್ಮಣಂ ವಿದುಃ ॥ ೩೮೦ ॥**

**ಸರ್ವಾಣಿ ಭೂತಾನಿ ಸುಖಂ ರಮಂತೇ**
**ಸರ್ವಾಣಿ ದುಃಖಾನಿ ಭೃಶಂ ಭವಂತಿ ।**
**ತೇಷಾಂ ಭಯೋತ್ಪಾದನಜಾತಖೇದಃ**
**ಕುರ್ಯಾಚ್ಚ ಕರ್ಮಾಣಿ ಹಿ ಶ್ರದ್ಧಧಾನಃ ॥ ೩೮೧ ॥**

---

೩೭೮. ಸರ್ವಸಂಗವನ್ನೂ ಬಿಟ್ಟು ಮುನಿಯಾಗಿ, ಆಕಾಶವಂತೆ ನಿರ್ಲಿಪ್ತನಾಗಿ, ವಿಷ್ಣುವನ್ನು ಪೂಜಿಸುತ್ತ ಶಾಂತನಾಗಿರುವವನನ್ನು ಬ್ರಾಹ್ಮಣನೆಂದು ದೇವತೆಗಳು ತಿಳಿಯುತ್ತಾರೆ.

೩೭೯. ಯಾವನ ಬದುಕಿರುವಿಕೆಯು ಧರ್ಮಕ್ಕೋಸ್ಕರವೋ, ಆ ಧರ್ಮವು ಸುಖಕ್ಕೋಸ್ಕರವೋ, ಮತ್ತು ಹಗಲು ರಾತ್ರಿಗಳು ಧರ್ಮಕ್ಕೆ ವಿನಿಯೋಗವಾಗುತ್ತವೆಯೋ, ಆತನನ್ನು ದೇವತೆಗಳು ಬ್ರಾಹ್ಮಣನೆನ್ನುತ್ತಾರೆ.

೩೮೦. ಆಶೀರ್ವಾದಕೂಡದು, ಯಾವುದನ್ನೂ ಪ್ರಾರಂಭಿಸಬಾರದು. ನಮಸ್ಕಾರಮಾಡಬಾರದು, ಸ್ತೋತ್ರಮಾಡಬಾರದು, ಯೋಗಾಭ್ಯಾಸದಿಂದ ಪಾಪವನ್ನು ಕಳೆದುಕೊಳ್ಳಬೇಕು, ಅವನನ್ನು ಬ್ರಾಹ್ಮಣನೆಂದೆನ್ನುತ್ತಾರೆ.

೩೮೧. ಈ ಸನ್ಯಾಸಿಯನ್ನು ಕಂಡರೆ ಎಲ್ಲಾ ಪ್ರಾಣಿಗಳೂ ಸುಖವಾಗಿರುತ್ತವೆ. ಇವನಿಗೆ ಎಲ್ಲಾ ಬಗೆಯ ಕಷ್ಟಗಳೂ ಒದಗುತ್ತವೆ. ಅವುಗಳಿಗೆ ಭಯವನ್ನು ಉಂಟುಮಾಡಬೇಕಲ್ಲಾ ಎಂಬ ದುಃಖವು ಈತನಿಗೆ ಯಾವಾಗಲೂ ಇರುತ್ತದೆ. ಈ ರೀತಿಯಿದ್ದು ಶ್ರದ್ಧೆಯಿಂದ ಕರ್ಮಗಳನ್ನಾಚರಿಸುತ್ತಾನೆ.

ದಾನಂ ಚ ಭೂತಾಭಯದಕ್ಷಿಣಾಯಾಃ
ಸರ್ವಾಣಿ ದಾನಾನ್ಯಧಿತಿಷ್ಠತೀಹ ।
ತೀಕ್ಷ್ಣಂ ತನುಂ ಯಃ ಪ್ರಥಮಂ ಜುಹೋತಿ
ಸೋಽನಂತ್ಯಮಾಪ್ನೋತ್ಯಭಯಂ ಪ್ರಜಾಭ್ಯಃ ॥ ೩೮೨ ॥

ಉತ್ತಾನಮಾಸ್ಯೇನ ಹವಿರ್ಜುಹೋತಿ
ಲೋಕಸ್ಯ ತಸ್ಯೈವ ಜಗತ್ಪ್ರತಿಷ್ಠಾ ।
ತಸ್ಯಾಂಗಸಂಗಾದಭಿನಿಷ್ಕೃತಂ ಚ
ವೈಶ್ವಾನರಂ ಸರ್ವಮಿದಂ ಪ್ರಪೇದೇ ॥ ೩೮೩ ॥

ಪ್ರಾದೇಶಮಾತ್ರೇ ಹೃದಿ ನಿಃಸೃತೋ ಯ-
ಸ್ತಸ್ಮಿನ್ಪ್ರಾಣೇನಾತ್ಮಯಾಜೀ ಜುಹೋತಿ ।
ತಸ್ಯಾಗ್ನಿಹೋತ್ರಂ ಕೃತಮಾತ್ಮಸಂಸ್ಥಂ
ಸರ್ವೇಷು ಲೋಕೇಷು ಸದೈವತೇಷು ॥ ೩೮೪ ॥

---

೩೮೨. ಪ್ರಾಣಿಗಳಿಗೆ ಅಭಯದಕ್ಷಿಣೆಯ ದಾನವು ಇವನಲ್ಲಿರುವುದರಿಂದ ಎಲ್ಲಾ ದಾನಗಳೂ ಇವನಲ್ಲಿದ್ದಂತಾಯಿತು. ಇದಕ್ಕೋಸ್ಕರ ಶರೀರವನ್ನು ಯಾವನು ಹೆಚ್ಚಾಗಿ ಶೋಷಿಸಿ ಪ್ರಜೆಗಳಿಗೆ ಅಭಯವನ್ನು ಕೊಡುತ್ತಾನೋ ಅವನಿಗೆ ಉತ್ತಮ ಲೋಕವು ಅನಂತವಾಗಿ ಆಗುತ್ತದೆ.

೩೮೩. ಆ ಸನ್ಯಾಸಿಯು ತಲೆಯನ್ನು ಮೇಲಕ್ಕೆ ಎತ್ತಿಕೊಂಡು, ಜನಗಳ ಕೊಟ್ಟ ಹವಿಸ್ಸನ್ನು ಹೋಮಮಾಡುತ್ತಾನೆ (ತಿನ್ನುತ್ತಾನೆ-) ಅದರಿಂದಲೇ ಜಗತ್ತು ನಿಂತಿರುವುದು. ಆ ಸನ್ಯಾಸಿಯ ಅವಯವದ ಸಹವಾಸದಿಂದಲೇ ಅಗ್ನಿಪುರುಷನು ತಾನು ಹೊಂದಿರುವ ವೈಭವಗಳೆಲ್ಲವನ್ನೂ ಪಡೆದಿರುವನು.

೩೮೪. ಆತ್ಮಯಜ್ಞಮಾಡತಕ್ಕವನು ಚೋಟುದ್ದವಿರುವ ಹೃದಯದಲ್ಲಿ ಪ್ರಾಣಗಳಿಂದ ಹೋಮಮಾಡುವನೋ (ಪ್ರಾಣಾಯಾಮ ಮಾಡುವನೋ) ಅವನು ತಾನು ಅಗ್ನಿಹೋತ್ರವನ್ನು ಮಾಡಿದಂತೆಯೇ ಆಗುತ್ತದೆ. ಸರ್ವಲೋಕಕ್ಕೆ ಹವಿಸ್ಸನ್ನು ಕೊಟ್ಟಂತಾಗುತ್ತದೆ.

ದೇವಂ ವಿಧಾತುಂ ತ್ರಿವೃತಂ ಸುವರ್ಣಂ
ಯೇ ವೈ ವಿದುಸ್ತ್ವಂ ಪರಮಾರ್ಥಭೂತಂ ।
ತೇ ಸರ್ವಲೋಕೇಷು ಮಹೀಯಮಾನಾ
ದೇವಾಃ ಸಮರ್ಥಾ ಅಮೃತಂ ಭಜಂತಿ　　॥ ೩೮೫ ॥

ವೇದಾನುವೇದ್ಯಂ ಚ ವಿಧಿಂ ಚ ಕೃತ್ಸ್ನ-
ಮಥೋ ನಿರುಕ್ತಂ ಪರಮಾರ್ಥತಾಂ ಚ ।
ಸರ್ವಂ ಶರೀರಾತ್ಮನಿ ಯಃ ಪ್ರವೇದ
ತಸ್ಮೈ ಸದೇವಾಃ ಸ್ಪೃಹಯಂತಿ ನಿತ್ಯಂ　　॥ ೩೮೬ ॥

ಭೂಮೌ ಪ್ರಸಕ್ತಂ ದಿವಿ ಚಾಪ್ರಮೇಯಂ
ಹಿರಣ್ಮಯಂ ಚಂಚಲಮಂಡಲಾಂತೇ ।
ಪ್ರದಕ್ಷಿಣಂ ದಕ್ಷಿಣಮಂತರಿಕ್ಷೇ
ಯೋ ವೇದ ದೀಪ್ತಾತ್ಮನಿ ಮಂದರಶ್ಮಿಃ　　॥ ೩೮೭ ॥

---

೩೮೫. ಒಳ್ಳೆಯ ಬಣ್ಣವುಳ್ಳ, ಮೂರು ದೇಹದಿಂದ ಕೂಡಿದ, ಸ್ವಾಮಿಯಾದ, ಪರಮಾರ್ಥಸ್ವರೂಪನಾದ ಅಗ್ನಿಯನ್ನು ಯಾರು ತಿಳಿಯುತ್ತಾರೋ ಅವರು ಎಲ್ಲಾ ಲೋಕಗಳಲ್ಲಿಯೂ ಸುಖಿಸುತ್ತಾರೆ. ಸಮರ್ಥರಾಗಿ ಅಮೃತವನ್ನೂ ಹೊಂದುತ್ತಾರೆ.

೩೮೬. ವೇದದಿಂದ ತಿಳಿಯಲು ಸಾಧ್ಯವಾದ ಎಲ್ಲದಕ್ಕೂ ವಿಧಿಯೆಂದು ಹೇಳಲ್ಪಟ್ಟಿರುವ ಪರಮಾರ್ಥಸ್ವರೂಪನಾದ ಶರೀರಸ್ಥನಾದ ಆತ್ಮದಲ್ಲಿ ಪ್ರಪಂಚವೆಲ್ಲವನ್ನೂ ಯಾವನು ತಿಳಿಯುತ್ತಾನೋ ಅವನಲ್ಲಿ ದೇವತೆಗಳು ಆಸೆಯುಳ್ಳವರಾಗಿರುತ್ತಾರೆ.

೩೮೭. ಅಲ್ಲಾಡುತ್ತಿರುವ ಮಂಡಲದ ಮಧ್ಯದಲ್ಲಿರುವ ದೇವನಾದ ಅಗ್ನಿಯು ಭೂಮಿಗೂ ಸಂಬಂಧಿಸಿದ್ದಾನೆ. ಅಂತರಿಕ್ಷದಲ್ಲಿ ಬೆಳಗುತ್ತಾನೆ ದೇವಲೋಕದಲ್ಲಿ ನೆಲೆಯನೆಯುವನಾಗಿದ್ದಾನೆ. ಅಂತರಿಕ್ಷದಲ್ಲಿ ಪ್ರದಕ್ಷಿಣಾಕಾರವಾಗಿ ಸುತ್ತುತ್ತಿರುತ್ತಾನೆ. ಇಂತಹವನನ್ನು ತಿಳಿದವನು ಸುಖವನ್ನು ಹೊಂದುತ್ತಾನೆ.

ಆವರ್ತಮಾನಮವಿವರ್ತಮಾನಂ
ಷಣ್ಣೇಮಿನಂ ದ್ವಾದಶಾರಂ ಸುಪರ್ವ ।
ಯಸ್ಯೇದಮಾಸ್ಯಂ ಪರಿಪಾತಿ ವಿಶ್ವಂ
ತತ್ಕಾಲಚಕ್ರಂ ನಿಹಿತಂ ಗುಹಾಯಾಂ ॥ ೩೮೮ ॥

ಯತಃ ಪ್ರಸಾದಾಜ್ಜಗತಃ ಶರೀರಂ
ಸರ್ವಾನ್ಸ ಲೋಕಾನಧಿಗಚ್ಛತೀಹ ।
ತಸ್ಮಿಂಶ್ಚ ಸಂತರ್ಪಯತೀಹ ದೇವಾಂ-
ಸ್ತೇ ವೈ ತೃಪ್ತಾಸ್ತರ್ಪಯಂತಿ ಸ್ಮ ಸಮ್ಯಕ್ ॥ ೩೮೯ ॥

ತೇಜೋಮಯೋ ನಿತ್ಯಮತಃ ಪುರಾಣೋ
ಲೋಕೇ ಭಯೇಽತ್ಯರ್ಥಭಯಾದುಪೈತಿ ।
ಭೂತಾನಿ ಯಸ್ಮಾನ್ನ ಭಯಂ ವ್ರಜಂತಿ
ಭೂತೇಭ್ಯೋ ಯೋ ನೋದ್ವಿಜತೇ ಕದಾಚಿತ್ ॥ ೩೯೦ ॥

---

೩೮೮. ಬಾರಿಬಾರಿಗೂ ಸುತ್ತುತ್ತಿರುವ, ಕೊಂಚವೂ ವ್ಯತ್ಯಾಸವಾಗದ, ಆರು ಚಕ್ರದ ತುದಿಯುಳ್ಳ, ಹನ್ನೆರಡು ಹಾರೆ ಕಾಲುಗಳುಳ್ಳ, ಒಳ್ಳೆಯ ಗುಂಬವುಳ್ಳ ಕಾಲ ಚಕ್ರವು ಯಾವನ ಹೃದಯದಲ್ಲಿದೆಯೋ, ಯಾವನ ಮುಖವು ಪ್ರಪಂಚವನ್ನು ಕಾಪಾಡುತ್ತದೆಯೋ ಅಂತಹ ಅಗ್ನಿಗೆ ನಮಸ್ಕಾರವು.

೩೮೯. ಯಾವನ ಅನುಗ್ರಹವೇ ಈ ಜಗತ್ತಿನ ಶರೀರವೋ, ಯಾವನು ಎಲ್ಲಾ ಲೋಕಗಳನ್ನೂ ಕಾಪಾಡುತ್ತಾನೆಯೋ, ಯಾವ ಅಗ್ನಿಯಲ್ಲಿ ಹೋಮಮಾಡಿದರೆ ದೇವತೆಗಳೆಲ್ಲರೂ ತೃಪ್ತರಾಗುತ್ತಾರೆಯೋ ಅಂತಹ ಅಗ್ನಿಯನ್ನು ನಮಸ್ಕರಿಸುತ್ತೇನೆ.

೩೯೦. ತೇಜೋರೂಪನಾದ, ನಿತ್ಯನಾದ, ಪುರಾತನನಾದ ಯಾವನನ್ನು ಪ್ರಾಣಿಗಳು ಹೆದರಡೆ ಹೊಂದುತ್ತವೆಯೋ ಮತ್ತು ಯಾವನಿಂದ ಹೆದರಿಕೆಯೂ ಇಲ್ಲವೋ ಅಂತಹವನು ಬ್ರಾಹ್ಮಣನು.

ಅಗರ್ಹಣೀಯೋ ನ ಚ ಗರ್ಹತೇಽನ್ಯಾನ್
ಸ ವೈ ವಿಪ್ರಃ ಪರಮಾತ್ಮಾನಮೀಕ್ಷೇತ್ ।
ವ್ಯತೀತಮೋಹೋ ವ್ಯಪನೀತಕಲ್ಮಷೋ
ನೈವೇಹ ನಾಮುತ್ರ ಚ ಯೋಽರ್ಥಮರ್ಹತಿ　　॥ ೩೯೧ ॥

ಅಶೇಷಮೋಹಃ ಸಮಲೋಷ್ಟಕಾಂಚನಃ
ಪ್ರಹೀಣರೋಷೋ ಗತಸಂಧಿವಿಗ್ರಹಃ ।
ವ್ಯಪೇತನಿಂದಾಸ್ತುತಿರಪ್ರಿಯಾಪ್ರಿಯ-
ಶ್ಚರನ್ನುದಾಸೀನವದೇವ ಭಿಕ್ಷುಃ　　॥ ೩೯೨ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ
ಕ್ಷೇತ್ರವಾಸಮಾಹಾತ್ಮ್ಯ ಕಥನಂ ನಾಮ
ಪಂಚದಶೋಽಧ್ಯಾಯಃ.

---

೩೯೧. ತಾನು ಬೈಯಿಸಿಕೊಳ್ಳುವುದಿಲ್ಲ, ಮತ್ತೊಬ್ಬರನ್ನು ಬಯ್ಯುವುದಿಲ್ಲ. ಅಂತಹ ಬ್ರಾಹ್ಮಣನು ಪರಮಾತ್ಮನನ್ನು ನೋಡುತ್ತಾನೆ. ಕಾಮಕ್ರೋಧಗಳನ್ನು ಕಳೆದುಕೊಂಡು ಪಾಪದಿಂದ ವಿಮುಕ್ತನಾದವನು ಇಹಪರಗಳಲ್ಲಿ ಯಾವ ಪ್ರಯೋಜನವನ್ನೂ ಅಪೇಕ್ಷಿಸುವುದಿಲ್ಲ.

೩೯೨. ಸ್ವಲ್ಪವೂ ಮೋಹವನ್ನು ಹೊಂದದೆ ಹೆಣ್ಣು, ಹೊನ್ನು, ಮಣ್ಣುಗಳನ್ನು ಒಂದಾಗಿ ಕಾಣುತ್ತ, ಕೋಪವನ್ನು ಬಿಟ್ಟು, ಸ್ನೇಹ ಜಗಳಗಳನ್ನು ಬಿಟ್ಟು, ನಿಂದಾಸ್ತುತಿಗಳನ್ನು ಲಕ್ಷಿಸದೆ, ಪ್ರಿಯಾಪ್ರಿಯಗಳನ್ನು ಲಕ್ಷಿಸದೆ ಉದಾಸೀನನಾಗಿ ಸಂಚರಿಸುವವನೇ ಭಿಕ್ಷುವು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ಕ್ಷೇತ್ರವಾಸ ಮಹಿಮೆಯೆಂಬ ಹದಿನೈದನೆಯ ಅಧ್ಯಾಯವುಮುಗಿದುದು.

ಮಂಗಳಂ

